ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಭಾಗ—೪

ರುದ್ರಸಂಹಿತಾ—ಪಾರ್ವತೀಖಂಡ



ಅನುವಾದಕ:

ಹಾಸನದ ಪಂಡಿತ ವೆಂಕಟರಾವ್

ಆಸ್ಥಾನ ವಿದ್ವಾನ್



ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೫

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ




(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಭಾಗ—೮

ರುದ್ರಸಂಹಿತಾ—ಪಾರ್ವತೀಖಂಡ



ಅನುವಾದಕ:

ಹಾಸನದ ಪಂಡಿತ ವೆಂಕಟರಾವ್
ಆಸ್ಥಾನ ವಿದ್ವಾನ್

ಮೈಸೂರು
ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್
೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




## ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ತವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೀಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್ ಬ್ರಾಂಚ್,
ಮೈಸೂರು.

# ಮುನ್ನುಡಿ

---

ರುದ್ರಸಂಹಿತೆಯ ಮೂರನೆಯ ಭಾಗವಾದ ಈ ಖಂಡದಲ್ಲಿ ಸತೀದೇವಿಯು ಹಿಮವಂತನ ಪುತ್ರಿಯಾಗಿ ಪಾರ್ವತಿಯೆಂಬ ಹೆಸರಿನಿಂದ ಅವತರಿಸಿ ಜಗತ್ಕಲ್ಯಾಣಕ್ಕಾಗಿ ಶಿವನನ್ನು ವಿವಾಹವಾದ ಸಂಗತಿಯು ವಿಸ್ತಾರವಾಗಿ ವಿವರಿಸಲ್ಪಟ್ಟಿರುವುದರಿಂದ ಈ ಖಂಡಕ್ಕೆ ಪಾರ್ವತೀಖಂಡವೆಂದು ಹೆಸರು ಪ್ರಸಿದ್ಧವಾಗಿರುವುದು. ಈ ಖಂಡದಲ್ಲಿ ವಿವರಿಸಿರುವ ಪಾರ್ವತಿಯ ತಪಸ್ಸು, ಶಿವನು ಪಾರ್ವತಿಯ ಮನೋನಿಶ್ಚಯವನ್ನು ಪರೀಕ್ಷಿಸುವುದು, ಲೋಕಾಚಾರದಂತೆ ನಡೆದ ಶಿವಪಾರ್ವತಿಯರ ವಿವಾಹವು ಇವುಗಳೆಲ್ಲವೂ ಭಕ್ತಾನುಗ್ರಹಕ್ಕಾಗಿ ಪರಮೇಶ್ವರನು ಆಚರಿಸಿದ ಲೀಲೆಗಳಲ್ಲದೆ ಬೇರೆಯಲ್ಲ. ಲೋಕಾಚಾರವನ್ನನುಸರಿಸಿ ಮಹಾವಿಜೃಂಭಣೆಯಿಂದ ನಡೆದ ಶಿವಪಾರ್ವತಿಯರ ವಿವಾಹಮಹೋತ್ಸವವನ್ನು ಭಕ್ತರಾದ ಜನಗಳು ಈಗಲೂ ಗಿರಿಜಾಕಲ್ಯಾಣವೆಂಬ ಹೆಸರಿನಿಂದ ಪ್ರತಿವರ್ಷವೂ ಆಚರಿಸುತ್ತಾ ಈಶ್ವರಾನುಗ್ರಹಕ್ಕೆ ಪಾತ್ರರಾಗುತ್ತಿರುವುದು ಸಕಲರಿಗೂ ತಿಳಿದ ವಿಷಯವೇ ಆಗಿದೆ. ಈ ಗಿರಿಜಾಕಲ್ಯಾಣದ ಕಥೆಯು ಇತರ ಪುರಾಣಗಳಲ್ಲಿ ಸಂಕ್ಷೇಪವಾಗಿ ಹೇಳಿದ್ದರೂ ಈ ಪುರಾಣದಲ್ಲಿ ವಿಸ್ತಾರವಾಗಿ ಸರ್ವರಿಗೂ ಮನರಂಜನೆಯಾಗುವಂತೆ ವರ್ಣಿಸಲ್ಪಟ್ಟಿರುವುದು. ಇದರ ಶ್ರವಣ ಪಠನಾದಿಗಳಿಂದ ಸಕಲ ಜನರ ಮನೋಭೀಷ್ಟಗಳು ಸಿದ್ಧಿಸಿ, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಶ್ರೇಯಃಪ್ರಾಪ್ತಿಯುಂಟಾಗುವುದರಲ್ಲಿ ಸಂದೇಹವಿಲ್ಲ.

ಈ ಸದ್ಗ್ರಂಥವನ್ನು ಪಠನಮಾಡಿ ಸಕಲರೂ ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಸಮುದ್ದೇಶದಿಂದ, ಲೋಕಹಿತಾಸಕ್ತರೂ, ಈಶ್ವರಪೂಜಾನಿರತರೂ ಆದ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ.,** ಪ್ರಭುಗಳವರು ಈ ಗ್ರಂಥಪ್ರಕಾಶನಕ್ಕೆ ಅವಕಾಶವಿತ್ತು ಭಕ್ತವೃಂದಕ್ಕೆ ಮಹೋಪಕಾರವನ್ನು ಮಾಡಿರುವರು. ಪಾರ್ವತೀಸಮೇತನಾದ ಪರಮೇಶ್ವರನು ಈ ನಮ್ಮ ಪ್ರಭುವರ್ಯರವರಿಗೂ, ಅವರ ಪ್ರಜೆಗಳಿಗೂ, ಇತ್ಯೋಪ್ಯತಿಶಯವಾಗಿ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತುಗಳನ್ನೂ ಅನುಗ್ರಹಿಸಲೆಂದು ವಿನಯದಿಂದ ಪ್ರಾರ್ಥಿಸುವೆನು

ಮೈಸೂರು
ಪಾರ್ಥಿವ ಸಂ|| ಶ್ರಾವಣ ಬ. ದಶಮಿ
ತಾ|| 1-9-45.

ಅನುವಾದಕ,
**ಹಾಸನದ ಪಂಡಿತ ವೆಂಕಟರಾವ್.**

### ಶಿವಮಹಾಪುರಾಣದಲ್ಲಿ ಪಾರ್ವತೀಖಂಡದ

# ವಿಷಯಾನುಕ್ರಮಣಿಕೆ.

---

ಪುಟ ಸಂಖ್ಯೆ

ಪುಟ ಸಂಖ್ಯೆ





॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಪ್ರಥಮೋಽಧ್ಯಾಯಃ

---

॥ ನಾರದ ಉವಾಚ ॥

ದಾಕ್ಷಾಯಣೀ ಸತೀದೇವೀ ತ್ಯಕ್ತದೇಹಾ ಪಿತುರ್ಮಖೇ ।
ಕಥಂ ಗಿರಿಸುತಾ ಬ್ರಹ್ಮನ್ ಬಭೂವ ಜಗದಂಬಿಕಾ ॥ ೧ ॥

ಕಥಂ ಕೃತ್ವಾ ತಪೋಽತ್ಯುಗ್ರಂ ಪತಿಮಾಪ ಶಿವಂ ಚ ಸಾ ।
ಏತನ್ಮೇ ಪೃಚ್ಛತೇ ಸಮ್ಯಕ್ಕಥಯ ತ್ವಂ ವಿಶೇಷತಃ ॥ ೨ ॥

॥ ಬ್ರಹ್ಮೋವಾಚ ॥

ಶೃಣು ತ್ವಂ ಮುನಿಶಾರ್ದೂಲ ಶಿವಾಚರಿತಮುತ್ತಮಂ ।
ಪಾವನಂ ಪರಮಂ ದಿವ್ಯಂ ಸರ್ವಪಾಪಹರಂ ಶುಭಂ ॥ ೩ ॥

---

### ಒಂದನೆಯ ಅಧ್ಯಾಯವು

೧-೨. ನಾರದಮುನಿಯು ಬ್ರಹ್ಮನನ್ನು ಪ್ರಶ್ನೆ ಮಾಡುವನು :—ಓ ಬ್ರಹ್ಮನೇ, ದಕ್ಷಯಜ್ಞದಲ್ಲಿ ಶರೀರವನ್ನು ತ್ಯಜಿಸಿದ ಸತೀದೇವಿಯು ಹೇಗೆ ಪರ್ವತಪುತ್ರಿಯಾದಳು ? ಮುಂದೆ ಉಗ್ರವಾದ ತಪವನ್ನಾಶ್ರಯಿಸಿ ಶಿವನನ್ನು ಪತಿಯಾಗಿ ಹೇಗೆ ವರಿಸಿದಳು ? ಇದನ್ನು ಕೇಳಬೇಕೆಂದಿರುವೆನು. ವಿಸ್ತಾರವಾಗಿ ಹೇಳು ಎನ್ನಲು,

೩. ಬ್ರಹ್ಮನು ಹೇಳಿದನು :—ಎಲೈ ಮುನಿಶ್ರೇಷ್ಠನಾದ ನಾರದನೆ, ಪರಮ ಪವಿತ್ರವೂ, ಪಾಪನಾಶಕವೂ, ಮಂಗಳವೂ, ದಿವ್ಯವೂ ಆದ ದೇವೀಚರಿತ್ರವನ್ನು ಹೇಳುವೆನು ಸಾವಧಾನವಾಗಿ ಕೇಳು.

ಯದಾ ದಾಕ್ಷಾಯಣೀ ದೇವೀ ಹರೇಣ ಸಹಿತಾ ಮುದಾ ।
ಹಿಮಾಚಲೇ ಸುಚಿಕ್ರೀಡೇ ಲೀಲಯಾ ಪರಮೇಶ್ವರೀ ॥ ೪ ॥

ಮತ್ಸುತೇಯಮಿತಿ ಜ್ಞಾತ್ವಾ ಸಿಷೇವೇ ಮಾತೃವರ್ಚಸಾ ।
ಹಿಮಾಚಲಪ್ರಿಯಾ ಮೇನಾ ಸರ್ವರ್ಧಿಭಿರನಿರ್ಭರಾ ॥ ೫ ॥

ಯದಾ ದಾಕ್ಷಾಯಣೀ ರುಷ್ಟಾ ನಾದೃತಾ ಸ್ವತನುಂ ಜಹೌ ।
ಪಿತ್ರಾ ದಕ್ಷೇಣ ತದ್ಯಜ್ಞೇ ಸಂಗತಾ ಪರಮೇಶ್ವರೀ ॥ ೬ ॥

ತದೈವ ಮೇನಕಾ ತಾಂ ಸಾ ಹಿಮಾಚಲಪ್ರಿಯಾ ಮುನೇ ।
ಶಿವಲೋಕಸ್ಥಿತಾಂ ದೇವೀಮಾರಿರಾಧಯಿಷುಸ್ತದಾ ॥ ೭ ॥

ತಸ್ಯಾಮಹಂ ಸುತಾ ಸ್ಯಾಮಿತ್ಯವಧಾರ್ಯ ಸತೀ ಹೃದಾ ।
ತ್ಯಕ್ತದೇಹಾ ಮನೋ ದಧ್ರೇ ಭವಿತುಂ ಹಿಮವತ್ಸುತಾ ॥ ೮ ॥

ಸಮಯಂ ಪ್ರಾಪ್ಯ ಸಾ ದೇವೀ ಸರ್ವದೇವಸುತಾ ಪುನಃ ।
ಸತೀ ತ್ಯಕ್ತತನುಃ ಪ್ರೀತ್ಯಾ ಮೇನಕಾತನಯಾಭವತ್ ॥ ೯ ॥

ನಾಮ್ನಾ ಸಾ ಪಾರ್ವತೀ ದೇವೀ ತಪಃ ಕೃತ್ವಾ ಸುದುಸ್ಸಹಂ ।
ನಾರದಸ್ಯೋಪದೇಶಾದ್ವೈ ಪತಿಂ ಪ್ರಾಪ ಶಿವಂ ಪುನಃ ॥ ೧೦ ॥

---

೪-೫. ಹಿಂದೆ ಸತೀದೇವಿಯು ಹಿಮಾಲಯದಲ್ಲಿ ಹರನೊಂದಿಗೆ ವಿಹರಿಸುತ್ತಲಿರುವಾಗ ಹಿಮವಂತನ ಪ್ರಿಯೆಯಾದ ಮೇನಾದೇವಿಯು ಸತೀದೇವಿಯನ್ನು ತನ್ನ ಮಗಳಂತೆ ಉಪಚರಿಸಿದಳು.

೬-೭. ತಂದೆಯ ಅವಮಾನದಿಂದ ಸತೀದೇವಿಯು ಕೋಪಕೊಂಡು ಯಾವಾಗ ಶರೀರವನ್ನು ಬಿಟ್ಟಳೋ ಆಗಲೇ ಮೇನಾದೇವಿಯನ್ನು ಭಕ್ತಿಯಿಂದ ಆರಾಧಿಸುತ್ತಿದ್ದಳು.

೮-೧೦. ಆ ಮೇನಾದೇವಿಯಲ್ಲಿ ಪುತ್ರಿಯಾಗಿ ಜನಿಸುವೆನು ಎಂದು ನಿಶ್ಚಯಿಸಿ ಸತೀದೇವಿಯು ಯುಕ್ತವಾದ ಸಮಯದಲ್ಲಿ ಶರೀರವನ್ನು ತ್ಯಜಿಸಿ, ಆ ಮೇನಾದೇವಿಯ ಮಗಳಾಗಿ ಜನಿಸಿದಳು. "ಪಾರ್ವತೀ" ಎಂದು ಹೆಸರುಳ್ಳವಳಾಗಿ ನಾರದನ ಉಪದೇಶದಿಂದ ಘೋರವಾದ ತಪವನ್ನಾಚರಿಸಿ ತಿರುಗಿ ಶಿವನನ್ನು ಪತಿಯಾಗಿ ಪಡೆದಳು ಎಂದನು.

॥ ನಾರದ ಉವಾಚ ॥

ಬ್ರಹ್ಮನ್ ವಿಧೇ ಮಹಾಪ್ರಾಜ್ಞ ವದ ಮೇ ವದತಾಂ ವರ ।
ಮೇನಕಾಯಾಸ್ಸಮುತ್ಪತ್ತಿಂ ವಿವಾಹಂ ಚರಿತಂ ತಥಾ ॥ ೧೧ ॥

ಧನ್ಯಾ ಹಿ ಮೇನಕಾ ದೇವೀ ಯಸ್ಯಾಂ ಜಾತಾ ಸುತಾ ಸತೀ ।
ಅತೋ ಮಾನ್ಯಾ ಚ ಧನ್ಯಾ ಚ ಸರ್ವೇಷಾಂ ಸಾ ಪತಿವ್ರತಾ ॥ ೧೨ ॥

॥ ಬ್ರಹ್ಮೋವಾಚ ॥

ಶೃಣು ತ್ವಂ ನಾರದ ಮುನೇ ಪಾರ್ವತೀಮಾತುರುದ್ಭವಂ ।
ವಿವಾಹಂ ಚರಿತಂ ಚೈವ ಪಾವನಂ ಭಕ್ತಿವರ್ಧನಂ ॥ ೧೩ ॥

ಅಸ್ತ್ಯುತ್ತರಸ್ಯಾಂ ದಿಶಿ ವೈ ಗಿರೀಶೋ ಹಿಮವಾನ್ ಮಹಾನ್ ।
ಪರ್ವತೋ ಹಿ ಮುನಿಶ್ರೇಷ್ಠ ಮಹಾತೇಜಾಃ ಸಮೃದ್ಧಿಭಾಕ್ ॥ ೧೪ ॥

ದ್ವೈರೂಪ್ಯಂ ತಸ್ಯ ವಿಖ್ಯಾತಂ ಜಂಗಮಸ್ಥಿರಭೇದತಃ ।
ವರ್ಣಯಾಮಿ ಸಮಾಸೇನ ತಸ್ಯ ಸೂಕ್ಷ್ಮಸ್ವರೂಪಕಂ ॥ ೧೫ ॥

---

೧೧-೧೨. ನಾರದಮುನಿಯು ಮತ್ತೆ ಕೇಳಿದನು:—ಸರ್ವಜ್ಞನಾದ ಓ ಬ್ರಹ್ಮನೆ, ಆ ಮೇನಾದೇವಿಯ ಉತ್ಪತ್ತಿಯನ್ನೂ ವಿವಾಹವನ್ನೂ ನನಗೆ ವಿಸ್ತಾರವಾಗಿ ಹೇಳು. ಅವಳಲ್ಲಿ ಸತೀದೇವಿಯು ಪುತ್ರಿಯಾಗಿ ಜನಿಸಿದಳು. ಆದಕಾರಣ ಆ ಮೇನಾದೇವಿಯು ಮಹಾ ಧನ್ಯಳು, ಪರಮ ಪೂಜ್ಯಳು. ಇಂತಹ ಮೇನಾದೇವಿಯ ಚರಿತ್ರವನ್ನು ಹೇಳು ಎಂದನು.

೧೩. ಬ್ರಹ್ಮನು ಹೇಳಿದನು:—ಎಲೈ ನಾರದಮುನಿ, ಮೇನಾದೇವಿಯ ಉತ್ಪತ್ತಿಯನ್ನೂ ವಿವಾಹವನ್ನೂ ಚರಿತ್ರವನ್ನೂ ಹೇಳುವೆನು, ಕೇಳು. ಆ ಚರಿತ್ರವು ಪವಿತ್ರವಾದುದು, ಭಕ್ತಿಪ್ರದವಾದುದು.

೧೪-೧೫. ಉತ್ತರದಿಕ್ಕಿನಲ್ಲಿ ಹಿಮಾಲಯವೆಂಬ ಪರ್ವತರಾಜನಿರುವನು. ಅವನು ಮಹಾ ತೇಜಸ್ವಿಯು, ಸರ್ವಸಮೃದ್ಧಿಯುಳ್ಳವನು. ಆ ಹಿಮಾಲಯನಿಗೆ ಸ್ಥಿರವಾದುದೊಂದು ಮಹಾರೂಪ, ಚರ (ಚಲಿಸುವುದಾದ) ವೆಂಬ ಸೂಕ್ಷ್ಮರೂಪ ಹೀಗೆ ಎರಡು ಸ್ವರೂಪಗಳಿರುವುವು. ಆ ಹಿಮವಂತಸ್ವರೂಪವನ್ನು ಸಂಕ್ಷೇಪವಾಗಿ ವರ್ಣಿಸುವೆನು.

ಪೂರ್ವಾಪರೌ ತೋಯನಿಧೀ ಸುವಿಗಾಹ್ಯ ಸ್ಥಿತೋ ಹಿ ಯಃ ।
ನಾನಾರತ್ನಾಕರೋ ರಮ್ಯೋ ಮಾನದಂಡ ಇವ ಕ್ಷಿತೇಃ ॥ ೧೬ ॥

ನಾನಾವೃಕ್ಷಸಮಾಕೀರ್ಣೋ ನಾನಾಶೃಂಗಸುಚಿತ್ರಿತಃ ।
ಸಿಂಹವ್ಯಾಘ್ರಾದಿಪಶುಭಿಸ್ಸೇವಿತಃ ಸುಖಿಭಿಸ್ಸದಾ ॥ ೧೭ ॥

ತುಷಾರನಿಧಿರತ್ಯುಗ್ರೋ ನಾನಾಶ್ಚರ್ಯವಿಚಿತ್ರಿತಃ ।
ದೇವರ್ಷಿಸಿದ್ಧಮುನಿಭಿಸ್ಸಂಶ್ರಿತಶ್ಚ ಶಿವಪ್ರಿಯಃ ॥ ೧೮ ॥

ತಪಸ್ಥಾನೋಽತಿಪೂತಾತ್ಮಾ ಪಾವನಶ್ಚ ಮಹಾತ್ಮನಾಂ ।
ತಪಸ್ಸಿದ್ಧಿಪ್ರದೋಽತ್ಯಂತಂ ನಾನಾಧಾತ್ವಾಕರಃ ಶುಭಃ ॥ ೧೯ ॥

ಸ ಏವ ದಿವ್ಯರೂಪೋ ಹಿ ರಮ್ಯಃ ಸರ್ವಾಂಗಸುಂದರಃ ।
ವಿಷ್ಣ್ವಂಶೋಽವಿಕೃತಃ ಶೈಲರಾಜರಾಜಸ್ಸತಾಂ ಪ್ರಿಯಃ ॥ ೨೦ ॥

---

೧೬-೧೮. ಆ ಪರ್ವತವು ಪೂರ್ವಪಶ್ಚಿಮ ಸಮುದ್ರಗಳೆರಡನ್ನೂ ವ್ಯಾಪಿಸಿರುವುದು. ಅದರಲ್ಲಿ ಅನೇಕ ರತ್ನಗಳು ಇರುವುವು. ಭೂಮಿಯನ್ನು ಅಳೆಯುವ ಕೋಲಿನಂತೆ ಇರುವುದು. ಅನೇಕ ವೃಕ್ಷಗಳಿರುವುವು. ಅನೇಕ ಬಗೆಯ ಶಿಖರಗಳಿಂದ ವಿಚಿತ್ರವಾಗಿರುವುದು. ಸಿಂಹ ಹುಲಿ ಮುಂತಾದ ಪಶುಗಳು ಸುಖವಾಗಿ ಅಲ್ಲಿ ವಾಸವಾಗಿರುವುವು. ಹಿಮಕ್ಕೆ ಆ ಗಿರಿಯು ಮನೆಯಾಗಿರುವುದು. ಆದುದರಿಂದಲೇ ಅದಕ್ಕೆ ಹಿಮಾಲಯನೆಂದು ಹೆಸರು ಪ್ರಸಿದ್ಧವಾಗಿರುವುದು. ಅನೇಕ ಆಶ್ಚರ್ಯಗಳಿಂದ ಕೂಡಿರುವುದು. ದೇವತೆಗಳು, ಮುನಿಗಳು, ಸಿದ್ಧರು ಮೊದಲಾದವರು ಆ ಗಿರಿಯನ್ನಾಶ್ರಯಿಸುವರು. ಶಿವನಿಗೆ ಆ ಗಿರಿಯು ಪ್ರಿಯವಾದುದು.

೧೯-೨೦. ಆ ಗಿರಿಯು ತಪಸ್ಸಿಗೆ ಯೋಗ್ಯವಾದ ಸ್ಥಾನವಾಗಿರುವುದು. ಮಹಾ ಪವಿತ್ರವಾದುದು. ಮಹಾತ್ಮರಿಗೆ ತಪಸ್ಸಿದ್ಧಿಯನ್ನುಂಟುಮಾಡಿಕೊಡುವುದು. ಅನೇಕ ಧಾತು (ವರ್ಣ) ಗಳು ಅಲ್ಲಿರುವುವು. ಆ ಗಿರಿಯ ಸೂಕ್ಷ್ಮರೂಪವು ಸರ್ವಾಂಗ ಸುಂದರವಾಗಿರುವುದು. ವಿಷ್ಣುವಿನ ಅಂಶವೇ ಅವನು. ಆ ಪರ್ವತರಾಜನು ಸಾಧುಗಳಿಗೆ ಪ್ರಿಯನಾದವನು.

ಕುಲಸ್ಥಿತ್ಯೈ ಚ ಸ ಗಿರಿರ್ಧರ್ಮವರ್ಧನಹೇತವೇ ।
ಸ್ವವಿವಾಹಂ ಕರ್ತುಮೈಚ್ಛತ್ಪಿತೃದೇವಹಿತೇಚ್ಛಯಾ ॥ ೨೦ ॥

ತಸ್ಮಿನ್ನವಸರೇ ದೇವಾಃ ಸ್ವಾರ್ಥಮಾಚಿಂತ್ಯ ಕೃತ್ಸ್ನಶಃ ।
ಊಚುಃ ಪಿತೄನ್ ಸಮಾಗತ್ಯ ದಿವ್ಯಾನ್ ಪ್ರೀತ್ಯಾ ಮುನೀಶ್ವರ ॥ ೨೨ ॥

॥ ದೇವಾ ಊಚುಃ ॥

ಸರ್ವೇ ಶೃಣುತ ನೋ ವಾಕ್ಯಂ ಪಿತರಃ ಪ್ರೀತಮಾನಸಾಃ ।
ಕರ್ತವ್ಯಂ ತತ್ತಥೈವಾಶು ದೇವಕಾರ್ಯೇಪ್ಸವೋ ಯದಿ ॥ ೨೩ ॥

ಮೇನಾ ನಾಮ ಸುತಾ ಜ್ಯೇಷ್ಠಾ ಯಾ ವೋ ಮಂಗಲರೂಪಿಣೀ ।
ತಾಂ ವಿವಾಹ್ಯ ಚ ಸುಪ್ರೀತ್ಯಾ ಹಿಮಾಖ್ಯೇನ ಮಹೀಭೃತಾ ॥ ೨೪ ॥

ಏವಂ ಸರ್ವಮಹಾಲಾಭಃ ಸರ್ವೇಷಾಂ ಚ ಭವಿಷ್ಯತಿ ।
ಯುಷ್ಮಾಕಮಮರಾಣಾಂ ಚ ದುಃಖಹಾನಿಃ ಪದೇ ಪದೇ ॥ ೨೫ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಸುರವಚಃ ಪಿತರಸ್ತೇ ವಿಮೃಶ್ಯ ಚ ।
ಸ್ಮೃತ್ವಾ ಶಾಪಂ ಸುತಾನಾಂ ಚ ಪ್ರೋಚುರೋಮಿತಿ ತದ್ವಚಃ ॥ ೨೬ ॥

---

೨೧-೨೨. ಆ ಹಿಮವಂತನು, ತನ್ನ ವಂಶವು ವಿಚ್ಛೇದವಿಲ್ಲದೆ ನಡೆಯುವುದಕ್ಕಾಗಿಯೂ, ಧರ್ಮಕ್ಕಾಗಿಯೂ, ಪಿತೃದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿಯೂ, ತಾನು ವಿವಾಹವಾಗಲು ಇಚ್ಛಿಸಿದನು. ಆಗ ದೇವತೆಗಳು ಪಿತೃದೇವತೆಗಳನ್ನು ಸಂಧಿಸಿ ತಮ್ಮ ಕಾರ್ಯಸಾಧನೆಗಾಗಿ ಹೀಗೆ ಹೇಳಿದರು.

೨೩-೨೫. ದೇವತೆಗಳು ಹೇಳಿದರು :— ಓ ಪಿತೃದೇವತೆಗಳೇ, ನಮ್ಮ ಮಾತುಗಳನ್ನು ಸಾವಧಾನವಾಗಿ ಕೇಳಿ ದೇವಹಿತಕ್ಕಾಗಿ ಅದರಂತೆ ಮಾಡಿರಿ. ನಿಮ್ಮ ಜ್ಯೇಷ್ಠ ಕುಮರಿಯಾದ ಮೇನಾದೇವಿಯನ್ನು ಹಿಮವಂತನಿಗೆ ಮದುವೆಮಾಡಿಕೊಡಿರಿ. ಹಾಗೆ ಮಾಡಿದರೆ ಕ್ಷೇಮವಾಗುವುದು. ನಿಮಗೂ ದೇವತೆಗಳಿಗೂ ಪದೇ ಪದೇ ಬರುವ ದುಃಖವು ನಾಶವಾಗುವುದು ಎಂದರು.

೨೬-೨೮. ಬ್ರಹ್ಮನು ಹೇಳಿದನು:—ಹೀಗೆ ದೇವತೆಗಳ ಮಾತನ್ನು ಕೇಳಿ ಪಿತೃದೇವತೆಗಳು ವಿಮರ್ಶೆಮಾಡಿ ಮಕ್ಕಳ ಶಾಪವನ್ನೂ ಯೋಚಿಸಿ “ಹಾಗೆಯೇ

ದದುರ್ಮೇನಾಂ ಸುವಿಧಿನಾ ಹಿಮಾಗಾಯ ನಿಜಾತ್ಮಜಾಂ ।
ಸಮುತ್ಸವೋ ಮಹಾನಾಸೀತ್ತದ್ವಿವಾಹೇ ಸುಮಂಗಲೇ ॥ ೨೭ ॥

ಹರ್ಯಾದಯೋಽಪಿ ತೇ ದೇವಾ ಮುನಯಶ್ಚಾಪರೇಽಖಿಲಾಃ ।
ಆಜಗ್ಮುಸ್ತತ್ರ ಸಂಸ್ಮೃತ್ಯ ವಾಮದೇವಂ ಭವಂ ಧಿಯಾ ॥ ೨೮ ॥

ಉತ್ಸವಂ ಕಾರಯಾಮಾಸುರ್ದತ್ವಾ ದಾನಾನ್ಯನೇಕಶಃ ।
ಸುಪ್ರಶಸ್ಯ ಪಿತೄಂಶ್ಚ ದಿವ್ಯಾನ್ ಪ್ರಶಶಂಸುರ್ಹಿಮಾಚಲಂ ॥ ೨೯ ॥

ಮಹಾಮೋದಾನ್ವಿತಾ ದೇವಾಸ್ತೇ ಸರ್ವೇ ಸಮುನೀಶ್ವರಾಃ ।
ಸಂಜಗ್ಮುಃ ಸ್ವಸ್ವಧಾಮಾನಿ ಸಂಸ್ಮರಂತಃ ಶಿವಾಶಿವೌ ॥ ೩೦ ॥

ಕೌತುಕಂ ಬಹು ಸಂಪ್ರಾಪ್ಯ ಸುವಿವಾಹ್ಯ ಪ್ರಿಯಾಂ ಚ ತಾಂ ।
ಆಜಗಾಮ ಸ್ವಭವನಂ ಮುದಮಾಪ ಗಿರೀಶ್ವರಃ ॥ ೩೧ ॥

---

ಆಗಲಿ" ಎಂದು ಅಂಗೀಕರಿಸಿದರು. ಮುಂದೆ ಆ ಪಿತೃದೇವತೆಗಳು ಶುಭಮುಹೂರ್ತವೊಂದರಲ್ಲಿ ತಮ್ಮ ಪುತ್ರಿ ಮೇನಾದೇವಿಯನ್ನು ಹಿಮವಂತನಿಗೆ ಮದುವೆಮಾಡಿಕೊಟ್ಟರು. ಆಗ ಮಹಾ ಉತ್ಸವವಾಯಿತು.

೨೮-೩೦ ಆ ಮದುವೆಗೆ ಹರಿಯೇ ಮೊದಲಾದ ದೇವತೆಗಳೂ ಮುನಿಗಳೂ ಸಹ ಶಂಕರನನ್ನು ಧ್ಯಾನಿಸುತ್ತಾ ಬಂದರು. ಅವರು ಅನೇಕ ಉತ್ಸವಗಳನ್ನು ಮಾಡಿದರು. ದಾನಗಳನ್ನು ಕೊಡಿಸಿದರು. ಬಳಿಕ ಪಿತೃದೇವತೆಗಳನ್ನು ಅಭಿನಂದಿಸಿ, ಹಿಮವಂತನನ್ನು ಗೌರವಿಸಿ, ಸಂತೋಷದಿಂದ ಶಿವನನ್ನು ಸ್ಮರಿಸುತ್ತಾ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

೩೧. ಹಿಮವಂತನು ಮೇನಾದೇವಿಯನ್ನು ಮದುವೆಯಾಗಿ ಅನೇಕ ಉತ್ಸವಗಳನ್ನನುಭವಿಸಿ, ಬಳುವಳಿಯನ್ನು ಪಡೆದು ಸಂತೋಷದಿಂದ ಮೇನೆಯೊಡನೆ ತನ್ನ ಮನೆಗೆ ಬಂದನು.

॥ ಬ್ರಹ್ಮೋವಾಚ ॥

ಮೇನಯಾ ಹಿ ಹಿಮಾಗಸ್ಯ ಸುವಿವಾಹೋ ಮುನೀಶ್ವರ ।
ಪ್ರೋಕ್ತೋ ಮೇ ಸುಖದಃ ಪ್ರೀತ್ಯಾ ಕಿಂ ಭೂಯಃ ಶ್ರೋತುಮಿಚ್ಛಸಿ
॥ ೩೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಹಿಮಾಚಲವಿವಾಹವರ್ಣನಂ
ನಾಮ ಪ್ರಥಮೋಽಧ್ಯಾಯಃ



---

೩೨. ಬ್ರಹ್ಮನು ಹೇಳಿದನು:—ಎಲೈ ನಾರದನೆ, ಮೇನಾದೇವಿಯೊಡನೆ ಹಿಮವಂತನ ಮದುವೆಯನ್ನು ಹೇಳಿರುವೆನು. ಇನ್ನೇನು ಕೇಳಬೇಕೆಂದಿರುವೆ? ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹಿಮವತ್ಪರ್ವತರಾಜನ ವಿವಾಹವರ್ಣನವೆಂಬ
ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ದ್ವಿತೀಯೋಽಧ್ಯಾಯಃ

॥ ನಾರದ ಉವಾಚ ॥

ವಿಧೇ ಪ್ರಾಜ್ಞ ವದೇದಾನೀಂ ಮೇನೋತ್ಪತ್ತಿಂ ಸಮಾದರಾತ್ ।
ಅಪಿ ಶಾಪಂ ಸಮಾಚಕ್ಷ್ವ ಕುರು ಸಂದೇಹಭಂಜನಂ ॥ ೧ ॥

॥ ಬ್ರಹ್ಮೋವಾಚ ॥

ಶೃಣು ನಾರದ ಸುಪ್ರೀತ್ಯಾ ಮೇನೋತ್ಪತ್ತಿಂ ವಿವೇಕತಃ ।
ಮುನಿಭಿಸ್ಸಹ ವಕ್ಷ್ಯೇಽಹಂ ಸುತವರ್ಯ ಮಹಾಬುಧ ॥ ೨ ॥

---

### ಎರಡನೆಯ ಅಧ್ಯಾಯವು

೧. ನಾರದನು ಕೇಳಿದನು:—ಸರ್ವಜ್ಞನಾದ ಓ ವಿಧಿಯೇ, ಈಗ ಮೇನಾದೇವಿಯ ಉತ್ಪತ್ತಿಯನ್ನೂ ಶಾಪವನ್ನೂ ಹೇಳಿ ನನ್ನ ಸಂಶಯವನ್ನು ಹೋಗಲಾಡಿಸು ಎನ್ನಲು,

೨. ಬ್ರಹ್ಮನು ಹೇಳಿದನು:—ಮಹಾಪಂಡಿತನಾದ ಎಲೈ ನಾರದನೆ, ಮೇನಾದೇವಿಯ ಉತ್ಪತ್ತಿಯನ್ನು ವಿಸ್ತಾರವಾಗಿ ಹೇಳುವೆನು. ಸಾವಧಾನದಿಂದ ಕೇಳು.

ದಕ್ಷನಾಮಾ ಮಮ ಸುತೋ ಪುರಾ ಯಃ ಕಥಿತೋ ಮುನೇ ।
ತಸ್ಯ ಜಾತಾಸ್ಸುತಾಃ ಷಷ್ಟಿಪ್ರಮಿತಾಃ ಸೃಷ್ಟಿಕಾರಣಾಃ ॥ ೩ ॥

ತಾಸಾಂ ವಿವಾಹಮಕರೋತ್ಸವರ್ಯೈಃ ಕಶ್ಯಪಾದಿಭಿಃ ।
ವಿದಿತಂ ತೇ ಸಮಸ್ತಂ ತತ್ಪ್ರಸ್ತುತಂ ಶೃಣು ನಾರದ ॥ ೪ ॥

ತಾಸಾಂ ಮಧ್ಯೇ ಸ್ವಧಾನಾಮ್ನೀಂ ಪಿತೃಭ್ಯೋ ದತ್ತವಾನ್ ಸುತಾಂ ।
ತಿಸ್ರೋಽಭವನ್ ಸುತಾಸ್ತಸ್ಯಾಸ್ಸುಭಗಾ ಧರ್ಮಮೂರ್ತಯಃ ॥ ೫ ॥

ತಾಸಾಂ ನಾಮಾನಿ ಶೃಣು ಮೇ ಪಾವನಾನಿ ಮುನೀಶ್ವರ ।
ಸದಾ ವಿಘ್ನಹರಾಣ್ಯೇವ ಮಹಾಮಂಗಲದಾನಿ ಚ ॥ ೬ ॥

ಮೇನಾನಾಮ್ನೀ ಸುತಾ ಜ್ಯೇಷ್ಠಾ ಮಧ್ಯಾ ಧನ್ಯಾ ಕಲಾವತೀ ।
ಅಂತ್ಯಾ ಏತಾಸ್ಸುತಾಸ್ಸರ್ವಾಃ ಪಿತೄಣಾಂ ಮಾನಸೋದ್ಭವಾಃ ॥ ೭ ॥

ಅಯೋನಿಜಾಃ ಸ್ವಧಾಯಾಶ್ಚ ಲೋಕತಸ್ತತ್ಸುತಾ ಮತಾಃ ।
ಆಸಾಂ ಪ್ರೋಚ್ಯ ಸುನಾಮಾನಿ ಸರ್ವಾನ್ ಕಾಮಾನ್ ಜನೋ ಲಭೇತ್ ॥ ೮ ॥

---

೩-೪. ನನ್ನ ಪುತ್ರನಾದ ದಕ್ಷನಿಗೆ ಅರವತ್ತು ಜನ ಪುತ್ರಿಯರು ಜನಿಸಿದರೆಂದು ಹಿಂದೆಯೇ ಹೇಳಿರುವೆನಷ್ಟೆ? ಅವರಿಂದ ಮುಂದೆ ಸೃಷ್ಟಿಯು ಬೆಳೆಯಿತು. ಆ ಪುತ್ರಿಯರನ್ನು ಕಶ್ಯಪ, ಬ್ರಹ್ಮ ಮೊದಲಾದವರೊಡನೆ ಮದುವೆಮಾಡಿಕೊಟ್ಟನು. ಈ ವಿಷಯವೆಲ್ಲವೂ ನಿನಗೆ ತಿಳಿದೇ ಇರುತ್ತದೆ. ಪ್ರಕೃತವಾದುದನ್ನು ಹೇಳುವೆನು, ಕೇಳು.

೫-೭. ಆ ಪುತ್ರಿಯರಲ್ಲಿ ಸ್ವಧಾದೇವಿಯನ್ನು ಪಿತೃಗಳಿಗೆ ದಕ್ಷನು ಮದುವೆ ಮಾಡಿಕೊಟ್ಟನು. ಆ ಸ್ವಧೆಯಿಂದ ಪವಿತ್ರವಾದ ಹೆಸರುಳ್ಳ ಮೂರುಜನ ಕನ್ಯೆಯರು ಜನಿಸಿದರು. ಮೊದಲನೆಯವಳೇ ಮೇನಾದೇವಿಯು, ಧನ್ಯಾ ಎಂಬುವಳು ಎರಡನೆಯವಳು. ಕಲಾವತಿಯೆಂಬುವಳು ಮೂರನೆಯವಳು. ಈ ಕನ್ಯೆಯರು ಪಿತೃದೇವತೆಗಳ ಮಾನಸಪುತ್ರಿಯರು.

೮-೯. ಆ ಕನ್ಯೆಯರು ಯೋನಿಯಿಂದ ಜನಿಸಿದವರಲ್ಲ. ಆದರೂ ಲೋಕದಲ್ಲಿ ಸ್ವಧಾದೇವಿಯ ಪುತ್ರಿಯರು ಎಂದು ಪ್ರಸಿದ್ಧಿಯಾಯಿತು. ಆ ಕನ್ಯೆಯರ

ಜಗದ್ವಂದ್ಯಾಃ ಸದಾಲೋಕಮಾತರಃ ಪರಮೋದದಾಃ ।
ಯೋಗಿನ್ಯಃ ಪರಮಾ ಜ್ಞಾನವಿಧಾನಾಸ್ತಾಸ್ತ್ರಿಲೋಕಗಾಃ ॥ ೯ ॥

ಏಕಸ್ಮಿನ್ ಸಮಯೇ ತಿಸ್ರೋ ಭಗಿನ್ಯಸ್ತಾ ಮುನೀಶ್ವರ ।
ಶ್ವೇತದ್ವೀಪಂ ವಿಷ್ಣುಲೋಕಂ ಜಗ್ಮುರ್ದರ್ಶನಹೇತವೇ ॥ ೧೦ ॥

ಕೃತ್ವಾ ಪ್ರಣಾಮಂ ವಿಷ್ಣೋಶ್ಚ ಸಂಸ್ತುತಿಂ ಭಕ್ತಿಸಂಯುತಾಃ ।
ತಸ್ಥುಸ್ತದಾಜ್ಞಯಾ ತತ್ರ ಸುಸಮಾಜೋ ಮಹಾನಭೂತ್ ॥ ೧೧ ॥

ತದೈವ ಸನಕಾದ್ಯಾಸ್ತು ಸಿದ್ಧಾ ಬ್ರಹ್ಮಸುತಾ ಮುನೇ ।
ಗತಾಸ್ತತ್ರ ಹರಿಂ ನತ್ವಾ ಸ್ತುತ್ವಾ ತಸ್ಥುಸ್ತದಾಜ್ಞಯಾ ॥ ೧೨ ॥

ಸನಕಾದ್ಯಾನ್ ಮುನೀನ್ ದೃಷ್ಟ್ವಾ ತ್ರಸ್ಥುಸ್ತಾನ್ ಸಕಲಾ ದ್ರುತಂ ।
ತತ್ರಸ್ಥಾನ್ ಸಂಸ್ಥಿತಾನ್ನತ್ವಾ ದೇವಾದ್ಯಾಂಲ್ಲೋಕವಂದಿತಾನ್ ॥ ೧೩ ॥

---

ಪವಿತ್ರ ಹೆಸರುಗಳನ್ನುಚ್ಚರಿಸಿದವನು ಬೇಕಾದ ಇಷ್ಟಾರ್ಥಗಳನ್ನು ಪಡೆಯುವನು. ಅವರು ಜಗತ್ಪೂಜ್ಯರು, ಲೋಕಮಾತೆಯರು, ಸುಖವನ್ನುಂಟುಮಾಡುವವರು, ಮಹಾಯೋಗಿನಿಯರು, ಜ್ಞಾನಿಗಳು. ಮೂರುಲೋಕಗಳನ್ನೂ ಸಂಚರಿಸಬಲ್ಲ ವರು.

೧೦-೧೨. ಒಂದಾನೊಂದು ಸಮಯದಲ್ಲಿ ಆ ಪಿತೃಕನ್ಯೆಯರು ವಿಷ್ಣುವಿನ ದರ್ಶನಕ್ಕಾಗಿ ಶ್ವೇತದ್ವೀಪದಲ್ಲಿರುವ ವಿಷ್ಣುಲೋಕಕ್ಕೆ ತೆರಳಿದರು. ಅಲ್ಲಿ ಹರಿಯನ್ನು ಭಕ್ತಿಯಿಂದ ನಮಸ್ಕರಿಸಿ ಸ್ತುತಿಸಿ ಅವನಪ್ಪಣೆಯಂತೆ ಅಲ್ಲಿಯೇ ನಿಂತರು. ಆಗ ಅಲ್ಲಿ ಮಹಾಜನ ಸಮಾಜವು ಸೇರಿತು. ಆಗಲೇ ಬ್ರಹ್ಮಪುತ್ರರಾದ ಸನಕಾದಿ ಮುನಿ ಗಳು ಅಲ್ಲಿಗೆ ಬಂದರು. ಅವರು ಹರಿಯನ್ನು ನಮಸ್ಕರಿಸಿ, ಸ್ತುತಿಸಿ ಅವನಪ್ಪಣೆಯಂತೆ ಅಲ್ಲಿದ್ದರು.

೧೩-೧೮. ಲೋಕಪೂಜ್ಯರಾದ ಸನಕಾದಿಮುನಿಗಳು ಬಂದುದನ್ನು ನೋಡಿ ಅಲ್ಲಿದ್ದ ದೇವತೆಗಳು ಮೊದಲಾದವರೆಲ್ಲರೂ ಎದ್ದು ಗೌರವಿಸಿದರು. ಆದರೆ ಆ ಮೂವರು ಪಿತೃಕನ್ಯೆಯರು ಅಜ್ಞಾನದಿಂದ ಏಳಲೇ ಇಲ್ಲ. ಶಂಕರನ ಮಾಯೆಯಿಂದ ಮೋಹಿತರಾಗಿ ಆ ಕನ್ಯೆಯರು ಸನಕಾದಿಗಳನ್ನು ಗೌರವಿಸಲಿಲ್ಲ. ಶಿವಮಾಯೆಯು

ತ್ರಿಸೋ ಭಗಿನ್ಯಸ್ತಾಂಸ್ತತ್ರ ನೋತ್ತಸ್ಥುರ್ಮೋಹಿತಾ ಮುನೇ ।
ಮಾಯಯಾ ದೈವವಿವಶಾಶ್ಶಂಕರಸ್ಯ ಪರಾತ್ಮನಃ ॥ ೧೪ ॥

ಮೋಹಿನೀ ಸರ್ವಲೋಕಾನಾಂ ಶಿವಮಾಯಾ ಗರೀಯಸೀ ।
ತದಧೀನಂ ಜಗತ್ಸರ್ವಂ ಶಿವೇಚ್ಛಾ ಸಾ ಪ್ರಕೀರ್ತ್ಯತೇ ॥ ೧೫ ॥

ಪ್ರಾರಬ್ಧಂ ಪ್ರೋಚ್ಯತೇ ಸೈವ ತನ್ನಾಮಾನಿ ಹ್ಯನೇಕಶಃ ।
ಶಿವೇಚ್ಛಯಾ ಭವತ್ಯೇವ ನಾತ್ರ ಕಾರ್ಯಾ ವಿಚಾರಣಾ ॥ ೧೬ ॥

ಭೂತ್ವಾ ತದ್ವಶಗಾಸ್ತಾ ವೈ ನ ಚಕ್ರುರಪಿ ತನ್ನತಿಂ ।
ವಿಸ್ಮಿತಾಸ್ಸಂಪ್ರದೃಶ್ಯೈವ ಸಂಸ್ಥಿತಾಸ್ತತ್ರ ಕೇವಲಂ ॥ ೧೭ ॥

ತಾದೃಶೀಂ ತದ್ಗತಿಂ ದೃಷ್ಟ್ವಾ ಸನಕಾದ್ಯಾ ಮುನೀಶ್ವರಾಃ ।
ಜ್ಞಾನಿನೋಽಪಿ ಪರಂ ಚಕ್ರುಃ ಕ್ರೋಧಂ ದುರ್ವಿಷಹಂ ಚ ತೇ ॥ ೧೮ ॥

ಶಿವೇಚ್ಛಾಮೋಹಿತಸ್ತತ್ರ ಸಕ್ರೋಧಸ್ತಾ ಉವಾಚ ಹ ।
ಸನತ್ಕುಮಾರೋ ಯೋಗೀಶಶ್ಶಾಪಂ ದಂಡಕರಂ ದದತ್ ॥ ೧೯ ॥

---

ಎಲ್ಲರನ್ನೂ ಮೋಹಗೊಳಿಸುವುದಷ್ಟೆ. ಅದರಧೀನವಾಗಿ ಈ ಜಗತ್ತೆಲ್ಲವೂ ಇರುವುದು. ಅದು ಶಿವೇಚ್ಛೆಯು. ಅದನ್ನು ಯಾರೂ ಮೀರಲಾರರು.

೧೬-೧೭. ಆ ಮಾಯೆಗೇ ಪ್ರಾರಬ್ಧವೆಂದು ಹೆಸರು. ಹೀಗೆ ಆ ಮಾಯೆಗೆ ಅನೇಕ ಹೆಸರುಗಳಿರುವುವು. ಶಿವೇಚ್ಛೆಯಿಂದಲೇ ಆ ಹೆಸರುಗಳಾಗಿರುವುವು. ಇದರಲ್ಲಿ ವಿಮರ್ಶೆಯಿಲ್ಲ. ಇಂತಹ ಶಿವಮಾಯೆಗೆ ಅಧೀನರಾಗಿ ಆ ಪಿತೃಕನ್ಯೆಯರು ಸನಕಾದಿಗಳನ್ನು ನೋಡಿದರೂ ಆಸನವನ್ನು ಬಿಟ್ಟೇಳಲಿಲ್ಲ.

೧೮-೧೯. ಪಿತೃಕನ್ಯೆಯರು ಆಸನವನ್ನು ಬಿಟ್ಟೇಳದಿರುವುದನ್ನು ನೋಡಿ ಜ್ಞಾನಿಗಳಾದರೂ ಸನಕಾದಿಗಳು ತುಂಬಾ ಕೋಪಗೊಂಡರು. ಶಿವಮಾಯಾಮೋಹಿತನಾಗಿ ಸನತ್ಕುಮಾರನು ಹೀಗೆ ಆ ಕನ್ಯೆಯರಿಗೆ ಮಹಾ ಶಾಪವನ್ನಿತ್ತನು.

॥ ಸನತ್ಕುಮಾರ ಉವಾಚ ॥
ಯೂಯಂ ತಿಸ್ರೋ ಭಗಿನ್ಯಶ್ಚ ಮೂಢಾಃ ಸದ್ವಯುನೋಜ್ಝಿತಾಃ ।
ಅಜ್ಞಾತಶ್ರುತಿತತ್ತ್ವಾ ಹಿ ಪಿತೃಕನ್ಯಾ ಅಪಿ ಧ್ರುವಂ ॥ ೨೦ ॥

ಅಭ್ಯುತ್ಥಾನಂ ಕೃತಂ ನೋ ಯೋ ನಮಸ್ಕಾರೋಽಪಿ ಗರ್ವಿತಃ ।
ಮೋಹಿತಾ ನರಭಾವತ್ವಾತ್ಸ್ವರ್ಗಾದ್ದೂರಾ ಭವಂತು ಹಿ ॥ ೨೧ ॥

ನರಸ್ತ್ರಿಯಃ ಸಂಭವಂತು ತಿಸ್ರೋಽಪ್ಯಜ್ಞಾನಮೋಹಿತಾಃ ।
ಸ್ವಕರ್ಮಣಃ ಪ್ರಭಾವೇನ ಲಭಧ್ವಂ ಫಲಮೀದೃಶಂ ॥ ೨೨ ॥

॥ ಬ್ರಹ್ಮೋವಾಚ ॥
ಇತ್ಯಾಕರ್ಣ್ಯ ಚ ಸಾಧ್ವ್ಯಸ್ತಾಸ್ತಿಸ್ರೋಽಪಿ ಚಕಿತಾ ಭೃಶಂ ।
ಪತಿತ್ವಾ ಪಾದಯೋಸ್ತಸ್ಯ ಸಮೂಚುರ್ನತಮಸ್ತಕಾಃ ॥ ೨೩ ॥

॥ ಪಿತೃತನಯಾ ಊಚುಃ ।
ಮುನಿವರ್ಯ ದಯಾಸಿಂಧೋ ಪ್ರಸನ್ನೋ ಭವ ಚಾಧುನಾ ।
ತ್ವತ್ಪ್ರಣಾಮಂ ವಯಂ ಮೂಢಾಃ ಕುರ್ಮಹೇ ಸ್ಮ ನ ಭಾವತಃ ॥ ೨೪ ॥

---

೨೦-೨೨. ಸನತ್ಕುಮಾರನು ಹೇಳಿದನು:—ಎಲೌ ಪಿತೃಕನ್ಯೆಯರೇ, ನೀವು ಪಿತೃದೇವತೆಗಳ ಕುಮಾರಿಯರಾದರೂ ವೇದತತ್ವವು ತಿಳಿಯದುದರಿಂದ ಮೂಢರಾಗಿರುವಿರಿ; ಮನುಷ್ಯರಂತೆ ಅಜ್ಞಾನಕ್ಕೆ ವಳಪಟ್ಟು ನಮಗೆ ನಮಸ್ಕಾರವನ್ನೂ ಮಾಡಲಿಲ್ಲ. ಆಸನವನ್ನು ಬಿಟ್ಟು ಏಳಲೂ ಇಲ್ಲ. ಆದಕಾರಣ ನೀವು ಸ್ವರ್ಗದಿಂದ ಚ್ಯುತರಾಗಿ ಮನುಷ್ಯಸ್ತ್ರೀಯರಾಗಿ ಜನಿಸಿರಿ. ಇದು ನಿಮ್ಮ ಕರ್ಮಕ್ಕೆ ತಕ್ಕ ಫಲವು ಎಂದು ಶಾಪವನ್ನಿತ್ತನು.

೨೩. ಬ್ರಹ್ಮನು ಹೇಳಿದನು:—ಹೀಗೆ ಸನತ್ಕುಮಾರನ ಶಾಪವನ್ನು ಕೇಳಿ ಆ ಪಿತೃಕನ್ಯೆಯರು ತುಂಬಾ ಭಯಗೊಂಡರು ಮತ್ತು ಅವನ ಕಾಲುಗಳಿಗೆ ಬಿದ್ದು ಹೀಗೆ ಪ್ರಾರ್ಥಿಸಿಕೊಂಡರು.

೨೪-೨೫. ಪಿತೃಕನ್ಯೆಯರು ಹೇಳಿದರು:—ದಯಾಮಯನಾದ ಓ ಮುನಿಶ್ರೇಷ್ಠನೆ, ಪ್ರಸನ್ನನಾಗು. ನಾವು ತಿಳಿವಳಿಕೆಯಿಲ್ಲದವರು. ಆದಕಾರಣ ನಿಮ್ಮನ್ನು ಗೌರವಿಸಲಿಲ್ಲ. ಇಗೋ, ನಿನಗೆ ನಮಸ್ಕರಿಸುವೆವು. ನಾವು ಮಾಡಿದ ಪಾಪಕ್ಕೆ

ಪ್ರಾಪ್ತಂ ಚ ತತ್ಫಲಂ ವಿಪ್ರ ನ ತೇ ದೋಷೋ ಮಹಾಮುನೇ ।
ಅನುಗ್ರಹಂ ಕುರ್ವಂಷ್ವಾತ್ರ ಲಭೇಮ ಸ್ವರ್ಗತಿಂ ಪುನಃ ॥ ೨೫ ॥

॥ ಬ್ರಹ್ಮೋವಾಚ ॥

ಶ್ರುತ್ವಾ ತದ್ವಚನಂ ತಾತ ಪ್ರೋವಾಚ ಸ ಮುನಿಸ್ತದಾ ।
ಶಾಪೋದ್ಧಾರಂ ಪ್ರಸನ್ನಾತ್ಮಾ ಪ್ರೇರಿತಃ ಶಿವಮಾಯಯಾ ॥ ೨೬ ॥

॥ ಸನತ್ಕುಮಾರ ಉವಾಚ ॥

ಪಿತೄಣಾಂ ತನಯಾಸ್ತಿಸ್ರಃ ಶೃಣುತ ಪ್ರೀತಮಾನಸಾಃ ।
ವಚನಂ ಮಮ ಶೋಕಘ್ನಂ ಸುಖದಂ ಸರ್ವದೈವ ವಃ ॥ ೨೭ ॥

ವಿಷ್ಣೋರಂಶಸ್ಯ ಶೈಲಸ್ಯ ಹಿಮಾಧಾರಸ್ಯ ಕಾಮಿನೀ ।
ಜ್ಯೇಷ್ಠಾ ಭವತು ತತ್ಕನ್ಯಾ ಭವಿಷ್ಯತ್ಯೇವ ಪಾರ್ವತೀ ॥ ೨೮ ॥

ಧನ್ಯಾ ಪ್ರಿಯಾ ದ್ವಿತೀಯಾ ತು ಯೋಗಿನೀ ಜನಕಸ್ಯ ಚ ।
ತಸ್ಯಾಃ ಕನ್ಯಾ ಮಹಾಲಕ್ಷ್ಮೀರ್ನಾಮ್ನಾ ಸೀತಾ ಭವಿಷ್ಯತಿ ॥ ೨೯ ॥

---

ಫಲವು ಲಭಿಸಿತು. ಓ ಮಹಾಮುನಿ, ತಿರುಗಿ ನಾವು ಸ್ವರ್ಗವನ್ನು ಪಡೆಯುವಂತೆ ಅನುಗ್ರಹಮಾಡು, ಎಂದು ಬೇಡಿಕೊಂಡರು.

೨೬. ಬ್ರಹ್ಮನು ಹೇಳಿದನು:—ಎಲೈ ನಾರದ, ಪಿತೃಕನ್ಯೆಯರ ಪ್ರಾರ್ಥನೆಯನ್ನು ಕೇಳಿ ಸನತ್ಕುಮಾರನು ಪ್ರಸನ್ನನಾದನು. ಮತ್ತು ಅವನು ಶಿವಮಾಯೆಯ ಪ್ರೇರಣೆಯಿಂದ ಶಾಪನಿವೃತ್ತಿಯನ್ನು ಹೇಳಿದನು.

೨೭-೩೦. ಸನತ್ಕುಮಾರನು ಹೇಳಿದನು:—ಎಲೌ ಪಿತೃಕನ್ಯೆಯರೇ, ಸುಖದಾಯಕವೂ ದುಃಖನಾಶಕವೂ ಆದ ನನ್ನ ಮಾತನ್ನು ಆದರದಿಂದ ಲಾಲಿಸಿ. ನಿಮ್ಮಲ್ಲಿ ಹಿರಿಯವಳಾದ ಮೇನಾದೇವಿಯು ವಿಷ್ಣುವಿನ ಅಂಶವಾದ ಪರ್ವತರಾಜ ಹಿಮವಂತನ ಪ್ರಿಯೆಯಾಗುವಳು. ಅವಳಲ್ಲಿ ಜಗನ್ಮಾತೆಯಾದ ಪಾರ್ವತಿಯು ಜನಿಸುವಳು. ಎರಡನೆಯವಳಾದ ಧನ್ಯಾದೇವಿಯು ಯೋಗಿಯಾದ ಜನಕರಾಜನ ಪ್ರಿಯಪತ್ನಿಯಾಗುವಳು. ಅವಳಿಗೆ ಮಹಾಲಕ್ಷ್ಮಿಯ ಅವತಾರಳಾದ ಸೀತಾ ಎಂಬ

ವೃಷಭಾನಸ್ಯ ವೈಶ್ಯಸ್ಯ ಕನಿಷ್ಠಾ ಚ ಕಲಾವತೀ ।
ಭವಿಷ್ಯತಿ ಪ್ರಿಯಾ ರಾಧಾ ತತ್ಸುತಾ ದ್ವಾಪರಾಂತತಃ ॥ ೩೦ ॥

ಮೇನಕಾ ಯೋಗಿನೀ ಪತ್ನ್ಯಾ ಪಾರ್ವತ್ಯಾಖ್ಯಶ್ಚ ವರೇಣ ಚ ।
ತೇನ ದೇಹೇನ ಕೈಲಾಸಂ ಗಮಿಷ್ಯತಿ ಪರಂ ಪದಂ ॥ ೩೧ ॥

ಧನ್ಯಾ ಚ ಸೀತಯಾ ಸೀರಧ್ವಜೋ ಜನಕವಂಶಜಃ ।
ಜೀವನ್ಮುಕ್ತೋ ಮಹಾಯೋಗೀ ವೈಕುಂಠ ಚ ಗಮಿಷ್ಯತಿ ॥ ೩೨ ॥

ಕಲಾವತೀ ವೃಷಭಾನಸ್ಯ ಕೌತುಕಾತ್ಕನ್ಯಯಾ ಸಹ ।
ಜೀವನ್ಮುಕ್ತಾ ಚ ಗೋಲೋಕಂ ಗಮಿಷ್ಯತಿ ನ ಸಂಶಯಃ ॥ ೩೩ ॥

ವಿನಾ ವಿಪತ್ತಿಂ ಮಹಿಮಾ ಕೇಷಾಂ ಕುತ್ರ ಭವಿಷ್ಯತಿ ।
ಸುಕರ್ಮಿಣಾಂ ಗತೈರ್ದುಃಖೇ ಪ್ರಭವೇ ದುರ್ಲಭಂ ಸುಖಂ ॥ ೩೪ ॥

ಯೂಯಂ ಪಿತೄಣಾಂ ತನಯಾಃ ಸರ್ವಾಃ ಸ್ವರ್ಗವಿಲಾಸಿಕಾಃ ।
ಕರ್ಮಕ್ಷಯಂ ಚ ಯುಷ್ಮಾಕಮಭವದ್ವಿಷ್ಣುದರ್ಶನಾತ್ ॥ ೩೫ ॥

---

ಕುವರಿಯು ಜನಿಸುವಳು. ಕೊನೆಯವಳಾದ ಕಲಾವತಿಯು ವೃಷಭಾನನೆಂಬ ವೈಶ್ಯನ ಪ್ರಿಯಮಡದಿಯಾಗುವಳು. ಅವಳಿಗೆ "ರಾಧಾ" ಎಂಬ ಮಗಳು ಜನಿಸುವಳು. ಇದು ದ್ವಾಪರಾಯುಗದ ಕೊನೆಯಲ್ಲಿ.

೩೧-೩೩. ಮೇನಾದೇವಿಯು ಯೋಗಿನಿಯಾಗಿದ್ದು ಜಗನ್ಮಾತೆಯಾದ ಪಾರ್ವತಿಯನ್ನು ಹಡೆದು ಅವಳನುಗ್ರಹದಿಂದ ಪತಿಯೊಡನೆ ಕೈಲಾಸವನ್ನು ಸಶರೀರವಾಗಿ ಪಡೆಯುವಳು. ಧನ್ಯಾದೇವಿಯೂ, ಜೀವನ್ಮುಕ್ತನೂ ಮಹಾಯೋಗಿಯೂ ಆದ ಸೀರಧ್ವಜನೂ ಸಹ ಸೀತೆಯೊಡನೆ ವೈಕುಂಠಕ್ಕೆ ತೆರಳುವರು. ಕಲಾವತಿಯು ಪತಿಯಾದ ವೃಷಭಾನನೊಡನೆಯೂ, ಕನ್ಯೆಯಾದ ರಾಧೆಯೊಡನೆಯೂ ಮುಕ್ತಳಾಗಿ ಗೋಲೋಕ (ಸ್ವರ್ಗ)ವನ್ನು ಪಡೆಯುವಳು.

೩೪-೩೬. ವಿಪತ್ತಿಲ್ಲದೆ ಯಾರ ಮಹಿಮೆಯೂ ಪ್ರಕಟವಾಗುವುದಿಲ್ಲ. ಕಷ್ಟವು ಬೇಗ ಬರುವುದು. ಸುಖವು ದುರ್ಲಭವು. ಎಲೌ ಸ್ತ್ರೀಯರೇ, ಪಿತೃಕನ್ಯೆಯರಾದ ನೀವು

ಇತ್ಯುಕ್ತ್ವಾ ಪುನರಪ್ಯಾಹ ಗತಕ್ರೋಧೋ ಮುನೀಶ್ವರಃ ।
ಶಿವಂ ಸಂಸ್ಮೃತ್ಯ ಮನಸಾ ಜ್ಞಾನದಂ ಭುಕ್ತಿಮುಕ್ತಿದಂ ॥ ೩೬ ॥

ಅಪರಂ ಶೃಣುತ ಪ್ರೀತ್ಯಾ ಮದ್ವಚಃ ಸುಖದಂ ಸದಾ ।
ಧನ್ಯಾ ಯೂಯಂ ಶಿವಪ್ರೀತಾ ಮಾನ್ಯಾಃ ಪೂಜ್ಯಾ ಹ್ಯಭೀಕ್ಷ್ಣಶಃ ॥ ೩೭ ॥

ಮೇನಾಯಾಸ್ತನಯಾ ದೇವೀ ಪಾರ್ವತೀ ಜಗದಂಬಿಕಾ ।
ಭವಿಷ್ಯತಿ ಪ್ರಿಯಾ ಶಂಭೋಸ್ತಪಃ ಕೃತ್ವಾ ಸುದುಸ್ಸಹಂ ॥ ೩೮ ॥

ಧನ್ಯಾ ಸುತಾ ಸ್ಮೃತಾ ಸೀತಾ ರಾಮಪತ್ನೀ ಭವಿಷ್ಯತಿ ।
ಲೌಕಿಕಾಚಾರಮಾಶ್ರಿತ್ಯ ರಾಮೇಣ ವಿಹರಿಷ್ಯತಿ ॥ ೩೯ ॥

ಕಲಾವತೀ ಸುತಾ ರಾಧಾ ಸಾಕ್ಷಾದ್ಗೋಲೋಕವಾಸಿನೀ ।
ಗುಪ್ತಸ್ನೇಹನಿಬದ್ಧಾ ಸಾ ಕೃಷ್ಣಪತ್ನೀ ಭವಿಷ್ಯತಿ ॥ ೪೦ ॥

---

ಸ್ವರ್ಗದಲ್ಲಿ ವಿಹರಿಸುವವರು. ಇಂತಹ ನಿಮ್ಮ ದುಷ್ಕರ್ಮವು ವಿಷ್ಣುದರ್ಶನದಿಂದ ನಷ್ಟವಾಯಿತು. ಹೀಗೆಂದು ಹೇಳಿ ಸನತ್ಕುಮಾರನು ಶಾಂತನಾಗಿ ಶಿವನನ್ನು ಸ್ಮರಿಸುತ್ತಾ ಮತ್ತೆ ಹೇಳಿದನು.

೩೭-೩೮. ಎಲೌ ಕನ್ಯೆಯರೇ, ಇನ್ನೊಂದು ಹಿತವಾದ ಮಾತನ್ನು ನಿಮಗೆ ಹೇಳುವೆನು ಕೇಳಿ. ಶಿವನ ಆದರಕ್ಕೆ ಪಾತ್ರರಾದ ನೀವು ಧನ್ಯರು. ಮಾನ್ಯರು, ಪೂಜ್ಯರು. ಈ ಮೇನಾದೇವಿಗೆ ಜನಿಸುವ ಪುತ್ರಿಯಾದ ಪಾರ್ವತಿಯು ಘೋರವಾದ ತಪವನ್ನಾಚರಿಸಿ ಶಿವನ ಪ್ರಿಯಮಡದಿಯಾಗುವಳು, ಜಗನ್ಮಾತೆಯಾಗುವಳು.

೩೯-೪೦. ಧನ್ಯಾದೇವಿಗೆ ಜನಿಸುವ ಸೀತೆಯೆಂಬ ಪುತ್ರಿಯು ರಾಮನ ಪ್ರಿಯಮಡದಿಯಾಗುವಳು. ಲೋಕರೀತಿಯಂತೆ ರಾಮನೊಡನೆ ವಿಹರಿಸುವಳು. ಕಲಾವತೀದೇವಿಯ ಪುತ್ರಿಯಾದ ರಾಧೆಯು ಕೃಷ್ಣನಲ್ಲಿ ರಹಸ್ಯವಾದ ಅನುರಾಗವುಳ್ಳವಳಾಗಿದ್ದು ಅವನ ಪ್ರಿಯೆಯಾಗುವಳು ಎಂದನು.

॥ ಬ್ರಹ್ಮೋವಾಚ ॥

ಇತ್ಥಮಾಭಾಷ್ಯ ಸ ಮುನಿರ್ಭ್ರಾತೃಭಿಸ್ಸಹ ಸಂಸ್ತುತಃ ।
ಸನತ್ಕುಮಾರೋ ಭಗವಾಂಸ್ತತ್ರೈವಾಂತರಧೀಯತ ॥ ೪೧ ॥

ತಿಸ್ರೋ ಭಗಿನ್ಯಸ್ತಾಸ್ತಾತ ಪಿತೄಣಾಂ ಮಾನಸೀಃ ಸುತಾಃ ।
ಗತಪಾಪಾಃ ಸುಖಂ ಪ್ರಾಪ್ಯ ಸ್ವಧಾಮ ಪ್ರಯಯುರ್ದ್ರುತಂ ॥ ೪೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಪೂರ್ವಗತಿವರ್ಣನಂ
ನಾಮ ದ್ವಿತೀಯೋಽಧ್ಯಾಯಃ



೪೧. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಪೂಜ್ಯನಾದ ಆ ಸನತ್ಕುಮಾರ ಮುನಿಯು ತನ್ನ ಸಹೋದರರೊಡನೆ ಅಲ್ಲಿಯೇ ಅಂತರ್ಧಾನನಾದನು.

೪೨. ಎಲೈ ನಾರದನೆ, ಬಳಿಕ ಆ ಮೂವರು ಪಿತೃಕನ್ಯೆಯರೂ ಪಾಪವನ್ನು ಕಳೆದುಕೊಂಡು ಸಂತೋಷದಿಂದ ತಮ್ಮ ಮನೆಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಪೂರ್ವಕಥಾನುವರ್ಣನವೆಂಬ ಎರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ತೃತೀಯೋಽಧ್ಯಾಯಃ

---

॥ ನಾರದ ಉವಾಚ ॥

ವಿಧೇ ಪ್ರಾಜ್ಞ ಮಹಾಧೀಮನ್ ವದ ಮೇ ವದತಾಂ ವರ ।
ತತಃ ಪರಂ ಕಿಮಭವಚ್ಚರಿತಂ ವಿಷ್ಣುಸದ್ಗುರೋಃ ॥ ೧ ॥

ಅದ್ಭುತೇಯಂ ಕಥಾ ಪ್ರೋಕ್ತಾ ಮೇನಾಪೂರ್ವಗತಿಃ ಶುಭಾ ।
ವಿವಾಹಶ್ಚ ಶ್ರುತಸ್ಸಮ್ಯಕ್ಪರಮಂ ಚರಿತಂ ವದ ॥ ೨ ॥

ಮೇನಾಂ ವಿವಾಹ್ಯ ಸ ಗಿರಿಃ ಕೃತವಾನ್ ಕಿಂ ತತಃ ಪರಂ ।
ಪಾರ್ವತೀ ಕಥಮುತ್ಪನ್ನಾ ತಸ್ಯಾಂ ವೈ ಜಗದಂಬಿಕಾ ॥ ೩ ॥

---

### ಮೂರನೆಯ ಅಧ್ಯಾಯವು

೧-೪. ನಾರದಮುನಿಯು ಕೇಳಿದನು :—ಸರ್ವಜ್ಞನೂ ಉತ್ತಮವಕ್ತೃವೂ ಆದ ಓ ಬ್ರಹ್ಮನೇ, ಶಿವಚರಿತ್ರೆಯ ಮುಂದಿನ ಕಥೆಯೇನು? ಮೇನಾದೇವಿಯ ಅದ್ಭುತವಾದ ಪೂರ್ವಕಥೆಯನ್ನು ಹೇಳಿರುವೆ. ಅವಳ ವಿವಾಹವನ್ನೂ ಹೇಳಿರುವೆ. ಮುಂದೆ ಮೇನಾದೇವಿಯುನ್ನು ಮದುವೆಯಾದನಂತರ ಹಿಮವಂತನು ಏನು ಮಾಡಿದನು? ಪಾರ್ವತಿಯು ಹೇಗೆ ಜನಿಸಿದಳು? ಮುಂದೆ ಆ ಪಾರ್ವತಿಯು ಘೋರ

ತಪಸ್ಸುದುಸ್ಸಹಂ ಕೃತ್ವಾ ಕಥಂ ಪ್ರಾಪ ಪತಿಂ ಹರಂ ।
ಏತತ್ಸರ್ವಂ ಸಮಾಚಕ್ಷ್ವ ವಿಸ್ತರಾಚ್ಛಾಂಕರಂ ಯಶಃ ॥ ೪ ॥

॥ ಬ್ರಹ್ಮೋವಾಚ ॥

ಮುನೇ ತ್ವಂ ಶೃಣು ಸುಪ್ರೀತ್ಯಾ ಶಾಂಕರಂ ಸುಯಶಶ್ಶುಭಂ ।
ಯಚ್ಛ್ರುತ್ವಾ ಬ್ರಹ್ಮಹಾ ಶುದ್ಧ್ಯೇತ್ಸರ್ವಾನ್ಕಾಮಾನವಾಪ್ನುಯಾತ್ ॥ ೫ ॥

ಯದಾ ಮೇನಾವಿವಾಹಂ ತು ಕೃತ್ವಾಗಚ್ಛದ್ಗಿರಿರ್ಗೃಹಂ ।
ತದಾ ಸಮುತ್ಸವೋ ಜಾತಸ್ತ್ರಿಷು ಲೋಕೇಷು ನಾರದ ॥ ೬ ॥

ಹಿಮಾಚಲೋಽಪಿ ಸುಪ್ರೀತಶ್ಚಕಾರ ಪರಮೋತ್ಸವಂ ।
ಭೂಸುರಾನ್ ಬಂಧುವರ್ಗಾಂಶ್ಚ ಪರಾನಾನರ್ಚ ಸದ್ಧಿಯಾ ॥ ೭ ॥

ಸರ್ವೇ ದ್ವಿಜಾಶ್ಚ ಸಂತುಷ್ಟಾ ದತ್ವಾಶೀರ್ವಚನಂ ಪರಂ ।
ಯಯುಸ್ತಸ್ಮೈ ಸ್ವಸ್ವಧಾಮ ಬಂಧುವರ್ಗಾಸ್ತಥಾ ಪರೇ ॥ ೮ ॥

---

ತಪಸ್ಸನ್ನು ಮಾಡಿ ಹರನನ್ನು ಹೇಗೆ ಮದುವೆಯಾದಳು? ಓ ಬ್ರಹ್ಮನೇ ಇದೆಲ್ಲವನ್ನೂ ವಿಸ್ತಾರವಾಗಿ ಹೇಳು ಎಂದನು.

೫. ಬ್ರಹ್ಮನು ಹೇಳಿದನು:—ಎಲೈ ನಾರದಮುನಿ, ಶಂಕರನ ಮಹಿಮೆಯನ್ನು ಹೇಳುವೆನು, ಆದರದಿಂದ ಕೇಳು. ಅದನ್ನು ಕೇಳಿದ ಮಾತ್ರದಿಂದ ಬ್ರಹ್ಮಹತ್ಯಾ ದೋಷವೂ ಹೋಗುವುದು. ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು

೬-೮. ಆ ಮೇನಾ ಮತ್ತು ಹಿಮವಂತರ ಮದುವೆಯ ಕಾಲದಲ್ಲಿ ಜಗತ್ತಿನಲ್ಲೆಲ್ಲಾ ಮಹಾ ಉತ್ಸವವಾಯಿತು. ಹಿಮವಂತನೂ ಸಹ ಪ್ರಿಯೆಯೊಡನೆ ತನ್ನರಮನೆಗೆ ತೆರಳಿ ಸಂತೋಷದಿಂದ ಮಹಾ ಉತ್ಸವವನ್ನು ನಡೆಸಿದನು. ಬ್ರಾಹ್ಮಣರು, ಬಂಧುಗಳು, ಮಿಕ್ಕವರು ಎಲ್ಲರನ್ನೂ ಯೋಗ್ಯತೆಯನ್ನರಿತು ಅರ್ಚಿಸಿದನು. ಬ್ರಾಹ್ಮಣರು ಸಂತುಷ್ಟರಾಗಿ ಆಶೀರ್ವಾದಗಳನ್ನು ಮಾಡಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಬಂಧುಗಳೂ ಹರಸಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಹಿಮಾಚಲೋಽಪಿ ಸುಪ್ರೀತೋ ಮೇನಯಾ ಸುಖದೇ ಗೃಹೇ ।
ರೇಮೇಽನ್ಯತ್ರ ಚ ಸುಸ್ಥಾನೇ ನಂದನಾದಿವನೇಷ್ವಪಿ ॥ ೯ ॥

ತಸ್ಮಿನ್ನವಸರೇ ದೇವಾ ಮುನೇ ವಿಷ್ಣ್ವಾದಯೋಽಖಿಲಾಃ ।
ಮುನಯಶ್ಚ ಮಹಾತ್ಮಾನಃ ಪ್ರಾಜಗ್ಮುರ್ಭೂಧರಾಂತಿಕೇ ॥ ೧೦ ॥

ದೃಷ್ಟ್ವಾ ತಾನಾಗತಾನ್ ದೇವಾನ್ ಪ್ರಣನಾಮ ಮುದಾ ಗಿರಿಃ ।
ಸಮ್ಮಾನಂ ಕೃತವಾನ್ ಭಕ್ತ್ಯಾ ಪ್ರಶಂಸನ್ ಸ್ವವಿಧಿಂ ಮಹಾನ್ ॥ ೧೧ ॥

ಸಾಂಜಲಿರ್ನತಶೀರ್ಷೋ ಹಿ ಸ ತುಷ್ಟಾವ ಸುಭಕ್ತಿತಃ ।
ರೋಮೋದ್ಗಮೋ ಮಹಾನಾಸೀದ್ಗಿರೇಃ ಪ್ರೇಮಾಶ್ರವೋಽಪತನ್ ॥ ೧೨ ॥

ತತಃ ಪ್ರಣಮ್ಯ ಸುಪ್ರೀತೋ ಹಿಮಶೈಲಃ ಪ್ರಸನ್ನಧೀಃ ।
ಉವಾಚ ಪ್ರಣತೋ ಭೂತ್ವಾ ಮುನೇ ವಿಷ್ಣ್ವಾದಿಕಾನ್ ಸುರಾನ್ ॥ ೧೩ ॥

॥ ಹಿಮಾಚಲ ಉವಾಚ ॥

ಅದ್ಯ ಮೇ ಸಫಲಂ ಜನ್ಮ ಸಫಲಂ ಸುಮಹತ್ತಪಃ ।
ಅದ್ಯ ಮೇ ಸಫಲಂ ಜ್ಞಾನಮದ್ಯ ಮೇ ಸಫಲಾಃ ಕ್ರಿಯಾಃ ॥ ೧೪ ॥

---

೯-೧೦. ಎಲೈ ನಾರದ, ಆಗ ಹಿಮವಂತನೂ ಸಹ ಸಂತೋಷಗೊಂಡು ಮೇನಾದೇವಿಯೊಡನೆ ತನ್ನ ವಿಲಾಸಗೃಹದಲ್ಲಿಯೂ ಮನೋಹರವಾದ ಮಿಕ್ಕ ವಿಹಾರ ಸ್ಥಾನಗಳಲ್ಲಿಯೂ ನಂದನವನ ಮುಂತಾದ ಉದ್ಯಾನವನಗಳಲ್ಲಿಯೂ ಪ್ರೀತಿಯಿಂದ ವಿಹರಿಸಿದನು. ಹೀಗಿರುವಲ್ಲಿ ಹರಿಯೇ ಮೊದಲಾದ ದೇವತೆಗಳೂ ಮಹಾತ್ಮರಾದ ಮುನಿಗಳೂ ಸಹ ಹಿಮವಂತನ ಮನೆಗೆ ಬಂದರು.

೧೧-೧೩. ತನ್ನ ಬಳಿಗೆ ಬಂದಿರತಕ್ಕ ದೇವತೆಗಳನ್ನೂ ಮುನಿಗಳನ್ನೂ ನೋಡಿ ಹಿಮವಂತನು ತನ್ನ ಅದೃಷ್ಟವನ್ನು ಹೊಗಳಿಕೊಳ್ಳುತ್ತಾ ಅವರೆಲ್ಲರನ್ನೂ ಸತ್ಕರಿಸಿದನು. ಅಂಜಲಿಬದ್ಧನಾಗಿ ವಿನಯದಿಂದ ಶಿರಸ್ಸನ್ನು ಬಗ್ಗಿಸಿ ಅವರನ್ನು ಸ್ತುತಿಸಿದನು. ಭಕ್ತಿಯ ಉದ್ರೇಕದಿಂದ ಆ ಹಿಮವಂತನ ಶರೀರದಲ್ಲಿ ರೋಮಾಂಚವುಂಟಾಯಿತು. ಆನಂದಬಾಷ್ಪಗಳುದುರಿದುವು. ಬಳಿಕ ಆ ಪರ್ವತರಾಜನು ಅವರೆಲ್ಲರನ್ನೂ ನಮಸ್ಕರಿಸಿ ಹೀಗೆ ಹೇಳಿದನು.

೧೪-೧೬. ಹಿಮವಂತನು ಹೇಳಿದನು :—ಓ ದೇವತೆಗಳೇ ಮತ್ತು ಮುನಿಗಳೇ, ಇಂದು ನನ್ನ ಜನ್ಮವು ಸಫಲವಾಯಿತು. ತಪಸ್ಸು ಸಾರ್ಥಕವಾಯಿತು.

ಧನ್ಯೋऽಹಮದ್ಯ ಸಂಜಾತೋ ಧನ್ಯಾ ಮೇ ಸಕಲಾ ಕ್ಷಿತಿಃ ।
ಧನ್ಯಂ ಕುಲಂ ತಥಾ ದಾರಾಸ್ಸರ್ವಂ ಧನ್ಯಂ ನ ಸಂಶಯಃ ॥ ೧೫ ॥

ಯತಃ ಸಮಾಗತಾ ಯೂಯಂ ಮಿಲಿತ್ವಾ ಸರ್ವ ಏಕದಾ ।
ಮಾಂ ನಿದೇಶಯತ ಪ್ರೀತ್ಯೋಚಿತಂ ಮತ್ವಾ ಸುಸೇವಕಂ ॥ ೧೬ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ಮಹೀಧ್ರಸ್ಯ ವಚನಂ ತೇ ಸುರಾಸ್ತದಾ ।
ಊಚುರ್ಹರ್ಯಾದಯಃ ಪ್ರೀತಾಃ ಸಿದ್ಧಿಂ ಮತ್ವಾ ಸ್ವಕಾರ್ಯತಃ ॥ ೧೭ ॥

॥ ದೇವಾ ಊಚುಃ ॥

ಹಿಮಾಚಲ ಮಹಾಪ್ರಾಜ್ಞ ಶೃಣ್ವಸ್ಮದ್ವಚನಂ ಹಿತಂ ।
ಯದರ್ಥಮಾಗತಾಸ್ಸರ್ವೇ ತದ್ಬ್ರೂಮಃ ಪ್ರೀತಿತೋ ವಯಂ ॥ ೧೮ ॥

ಯಾರಾ ಪುರಾ ಜಗದಂಬೋಮಾ ದಕ್ಷಕನ್ಯಾಭವದ್ಗಿರೇ ।
ರುದ್ರಪತ್ನೀ ಹಿ ಸಾ ಭೂತ್ವಾ ಚಿಕ್ರೀಡೇ ಸುಚಿರಂ ಭುವಿ ॥ ೧೯ ॥

---

ಜ್ಞಾನವು ಸಫಲವಾಯಿತು. ಕಾರ್ಯಗಳೆಲ್ಲವೂ ಸಾರ್ಥಕವಾದುವು. ನೀವೆಲ್ಲ ಮಹಾತ್ಮರೂ ಸೇರಿ ಏಕಕಾಲದಲ್ಲಿ ನನ್ನ ಮನೆಗೆ ಬಂದುದರಿಂದ ನಾನು ಧನ್ಯನಾದೆನು. ನನ್ನ ರಾಜ್ಯವೂ ಧನ್ಯವಾಯಿತು. ನನ್ನ ಕುಲ ಮತ್ತು ಪತ್ನಿಯರು ಎಲ್ಲರೂ ಧನ್ಯರಾದರು. ನನ್ನನ್ನು ಸೇವಕನೆಂದು ತಿಳಿದು ನನ್ನಿಂದ ನಿಮಗಾಗಬೇಕಾದ ಕಾರ್ಯವನ್ನು ಪ್ರೀತಿಯಿಂದ ಅಪ್ಪಣೆಮಾಡಿ ಎಂದು ಪ್ರಾರ್ಥಿಸಿದನು.

೧೭. ಬ್ರಹ್ಮನು ಹೇಳಿದನು:—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಹರಿಯೇ ಮೊದಲಾದ ದೇವತೆಗಳು ತಮ್ಮ ಕಾರ್ಯವು ಸಿದ್ಧಿಸಿತೆಂದು ತಿಳಿದು ಸಂತೋಷದಿಂದ,

೧೮-೨೦. ದೇವತೆಗಳು ಹೇಳಿದರು:—ಮಹಾಪ್ರಾಜ್ಞನಾದ ಎಲೈ ಹಿಮವಂತನೇ, ಹಿತವಾದ ನಮ್ಮ ಮಾತುಗಳನ್ನು ಕೇಳು. ನಾವು ಯಾವುದಕ್ಕಾಗಿ ಬಂದಿರುವೆವೋ ಅದನ್ನು ನಿನಗೆ ಈಗ ಹೇಳುವೆವು. ಹಿಂದೆ ಜಗನ್ಮಾತೆಯಾದ ದೇವಿಯು ದಕ್ಷನ ಪುತ್ರಿಯಾಗಿ (ಸತೀದೇವಿ) ಉಮಾ ಎಂಬ ಹೆಸರಿನಿಂದ ಜನಿಸಿ ರುದ್ರನನ್ನು ಮದುವೆಯಾಗಿ ಬಹುಕಾಲ ವಿಹರಿಸಿದಳು. ಆಮೇಲೆ ತಂದೆಯಿಂದಲೇ

ಪಿತೃತೋಽನಾದರಂ ಪ್ರಾಪ್ಯ ಸಂಸ್ಮೃತ್ಯ ಸ್ವಪಣಂ ಸತೀ ।
ಜಗಾಮ ಸ್ವಪದಂ ತ್ಯಕ್ತ್ವಾ ತಚ್ಛರೀರಂ ತದಂಬಿಕಾ ॥ ೨೦ ॥

ಸಾ ಕಥಾ ವಿದಿತಾ ಲೋಕೇ ತವಾಪಿ ಹಿಮಭೂಧರ ।
ಏವಂ ಸತಿ ಮಹಾಲಾಭೋ ಭವೇದ್ದೇವಗಣಸ್ಯ ಹಿ ॥ ೨೧ ॥

ಸರ್ವಸ್ಯ ಭವತಶ್ಚಾಪಿ ಸ್ಯುಸ್ಸರ್ವೇ ತೇ ವಶಾಸ್ಸುರಾಃ । ॥ ೨೨ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಹರ್ಯಾದೀನಾಂ ಗಿರೀಶ್ವರಃ ।
ತಥಾಸ್ತ್ವಿತಿ ಪ್ರಸನ್ನಾತ್ಮಾ ಪ್ರೋವಾಚ ನ ಚ ಆದರಾತ್ ॥ ೨೩ ॥

ಅಥ ತೇ ಚ ಸಮಾದಿಶ್ಯ ತದ್ವಿಧಿಂ ಪರಮಾದರಾತ್ ।
ಸ್ವಯಂ ಜಗ್ಮುಶ್ಚ ಶರಣಮುಮಾಯಾಃ ಶಂಕರಸ್ತ್ರಿಯಃ ॥ ೨೪ ॥

ಸುಸ್ಥಲೇ ಮನಸಾ ಸ್ಥಿತ್ವಾ ಸಸ್ಮರುರ್ಜಗದಂಬಿಕಾಂ ।
ಪ್ರಣಮ್ಯ ಬಹುಶಸ್ತತ್ರ ತುಷ್ಟುವುಃ ಶ್ರದ್ಧಯಾ ಸುರಾಃ ॥ ೨೫ ॥

---

ಅವಮಾನವನ್ನು ಹೊಂದಿ ಆ ದೇವಿಯು ತನ್ನ ಪ್ರತಿಜ್ಞೆಯಂತೆ ಶರೀರವನ್ನು ಬಿಟ್ಟು ತನ್ನ ಸ್ಥಾನವನ್ನು ಸೇರಿದಳು.

೨೧-೨೨. ಈ ಕಥೆಯು ನಿನಗೆ ತಿಳಿದೇ ಇರುತ್ತದೆ. ಈಗ ಆ ದೇವಿಯನ್ನು ಕುರಿತು ನೀನು ತಪಸ್ಸುಮಾಡಬೇಕು. ಹಾಗೆ ಮಾಡಿದರೆ ದೇವತೆಗಳಿಗೆ ಮಹಾ ಲಾಭವಾಗುತ್ತದೆ. ನಿನಗೂ ಎಲ್ಲರಿಗೂ ಕ್ಷೇಮವಾಗುವುದು. ದೇವತೆಗಳೆಲ್ಲರೂ ನಿನ್ನ ವಶರಾಗುವರು ಎಂದರು.

೨೩—೨೫. ಬ್ರಹ್ಮನು ಹೇಳಿದನು:—ಹರಿ ಮೊದಲಾದವರ ಮಾತನ್ನು ಕೇಳಿ ಹಿಮವಂತನು ಸಂತೋಷದಿಂದ ಹಾಗೆಯೇ ಆಗಲಿ ಎಂದೊಪ್ಪಿದನು. ಬಳಿಕ ಆ ದೇವತೆಗಳು ಹಿಮವಂತನಿಗೆ ತಪಸ್ಸಿನ ವಿಧಿಯನ್ನು ಆದರದಿಂದ ಉಪದೇಶಿಸಿ, ತಾವೂ ಸಹ ಉಮಾದೇವಿಯನ್ನು ಮರೆಹೊಕ್ಕರು. ಶುದ್ಧವಾದ ಸ್ಥಳದಲ್ಲಿ ನಿಂತು ಆ ಜಗನ್ಮಾತೆಯನ್ನು ಧ್ಯಾನಿಸಿದರು. ಭಕ್ತಿಯಿಂದ ನಮಸ್ಕಾರಮಾಡಿ ಆ ದೇವಿಯನ್ನು ಅನೇಕ ಪ್ರಕಾರವಾಗಿ ಸ್ತುತಿಸಿದರು.

॥ ದೇವಾ ಊಚುಃ ॥

ದೇವ್ಯುಮೇ ಜಗತಾಮಂಬ ಶಿವಲೋಕನಿವಾಸಿನಿ ।
ಸದಾ ಶಿವಪ್ರಿಯೇ ದುರ್ಗೇ ತ್ವಾಂ ನಮಾಮಿ ಮಹೇಶ್ವರಿ ॥ ೨೬ ॥

ಶ್ರೀಶಕ್ತಿಂ ಪಾವನಾಂ ಶಾಂತಾಂ ಪುಷ್ಟಿಂ ಪರಮಪಾವನೀಂ ।
ವಯಂ ನಮಾಮಹೇ ಭಕ್ತ್ಯಾ ಮಹದವಕ್ತರೂಪಿಣೀಂ ॥ ೨೭ ॥

ಶಿವಾಂ ಶಿವಕರಾಂ ಶುದ್ಧಾಂ ಸ್ಥೂಲಾಂ ಸೂಕ್ಷ್ಮಾಂ ಪರಾಯಣಾಂ ।
ಅಂತರ್ವಿದ್ಯಾಸುವಿದ್ಯಾಭ್ಯಾಂ ಸುಪ್ರೀತಾಂ ತ್ವಾಂ ನಮಾಮಹೇ ॥ ೨೮ ॥

ತ್ವಂ ಶ್ರದ್ಧಾ ತ್ವಂ ಧೃತಿಸ್ತ್ವಂ ಶ್ರೀಸ್ತ್ವಮೇವ ಸರ್ವಗೋಚರಾ ।
ತ್ವಂ ದೀಧಿತಿಸ್ಸೂರ್ಯಗತಾ ಸ್ವಪ್ರಪಂಚಪ್ರಕಾಶಿನೀ ॥ ೨೯ ॥

ಯಾ ಚ ಬ್ರಹ್ಮಾಂಡಸಂಸ್ಥಾನೇ ಜಗಜ್ಜೀವೇಷು ಯಾ ಜಗತ್ ।
ಆಪ್ಯಾಯಯತಿ ಬ್ರಹ್ಮಾದಿತೃಣಾಂತಂ ತಾಂ ನಮಾಮಹೇ ॥ ೩೦ ॥

---

೨೬—೨೮. ದೇವತೆಗಳು ಹೇಳಿದರು :—ಜಗನ್ಮಾತೆಯಾದ ಓ ಉಮಾದೇವಿ, ನೀನು ಸದಾಶಿವನ ಪ್ರಿಯಭಾರ್ಯೆಯು. ಆ ಸದಾಶಿವನ ಲೋಕದಲ್ಲಿಯೇ ಇರುವವಳು. ಜನರ ದುರ್ಗತಿಯನ್ನು ಹೋಗಲಾಡಿಸುವವಳು. ಮಹೇಶ್ವರಿಯು. ಇಂತಹ ನಿನಗೆ ನಮಸ್ಕಾರವು. ಮತ್ತು ನೀನು ಲಕ್ಷ್ಮೀರೂಪಳು, ಶಕ್ತಿರೂಪಳು, ಶಾಂತಳು, ಪುಷ್ಟಿಯು, ಮಹಾಪವಿತ್ರಳು, ಮಹತ್ತತ್ವ, ಪ್ರಕೃತಿರೂಪಳು, ಇಂತಹ ನಿನಗೆ ನಮಸ್ಕಾರವು. ಅಲ್ಲದೇ ನೀನು ಸರ್ವಮಂಗಳೆಯು, ಮಂಗಳಕರಳು, ಶುದ್ಧಳು, ಸ್ಥೂಲ ಮತ್ತು ಸೂಕ್ಷ್ಮವಾದ ಜಗದ್ರೂಪಳು. ನೀನೇ ಸರ್ವರಿಗೂ ಸತಿಯು. ಅಂತರ್ವಿದ್ಯೆ (ಆತ್ಮವಿದ್ಯೆ) ಮತ್ತು ಅದರಂಗವಾದ ಸುವಿದ್ಯೆ ಈ ಎರಡು ವಿದ್ಯೆಯ ಸ್ವರೂಪಳು. ಇಂತಹ ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆವು.

೨೯—೩೧. ಓ ದೇವಿ, ನೀನು ಶ್ರದ್ಧೆಯು, ಧೈರ್ಯರೂಪಳು, ಎಲ್ಲೆಲ್ಲಿಯೂ ವ್ಯಾಪಿಸಿರುವವಳು, ಸೂರ್ಯನಲ್ಲಿರುವ ಕಿರಣಪ್ರಕಾಶವು ನೀನು. ಬ್ರಹ್ಮಾಂಡದಲ್ಲಿರುವ ಅಖಂಡಕೋಟಿ ಜೀವರನ್ನೂ ಬ್ರಹ್ಮ ಮೊದಲುಗೊಂಡು ಹುಲ್ಲಿನವರೆವಿಗೂ ಇರುವ ವಸ್ತುಗಳನ್ನೂ ನೀನು ಆನಂದಪಡಿಸಿ ಪೋಷಿಸುವೆ. ನೀನು ವೇದಮಾತೆಯಾದ ಗಾಯತ್ರಿಯು, ಸಾವಿತ್ರಿಯು ಮತ್ತು ಸರಸ್ವತಿಯು. ಜಗತ್ತಿನಲ್ಲಿ ನಡೆಯುವ ವೃತ್ತಾಂತ

ಗಾಯತ್ರೀ ತ್ವಂ ವೇದಮಾತಾ ತ್ವಂ ಸಾವಿತ್ರೀ ಸರಸ್ವತೀ ।
ತ್ವಂ ವಾರ್ತಾ ಸರ್ವಜಗತಾಂ ತ್ವಂ ತ್ರಯೀ ಧರ್ಮರೂಪಿಣೀ ॥ ೩೧ ॥

ನಿದ್ರಾ ತ್ವಂ ಸರ್ವಭೂತೇಷು ಕ್ಷುಧಾ ತೃಪ್ತಿಸ್ತ್ವಮೇವ ಹಿ ।
ತೃಷ್ಣಾ ಕಾಂತಿಶ್ಛವಿಸ್ತುಷ್ಟಿಸ್ಸರ್ವಾನಂದಕರೀ ಸದಾ ॥ ೩೨ ॥

ತ್ವಂ ಲಕ್ಷ್ಮೀಃ ಪುಣ್ಯಕರ್ತೄಣಾಂ ತ್ವಂ ಜ್ಯೇಷ್ಠಾ ಪಾಪಿನಾಂ ಸದಾ ।
ತ್ವಂ ಶಾಂತಿಃ ಸರ್ವಜಗತಾಂ ಧಾತ್ರೀ ಪ್ರಾಣಪ್ರಪೋಷಿಣೀ ॥ ೩೩ ॥

ತ್ವಂ ತತ್ತ್ವರೂಪಾ ಭೂತಾನಾಂ ಪಂಚಾನಾಮಪಿ ಸಾರಕೃತ್ ।
ತ್ವಂ ಹಿ ನೀತಿಭೃತಾಂ ನೀತಿರ್ವ್ಯವಸಾಯಸ್ವರೂಪಿಣೀ ॥ ೩೪ ॥

ಗೀತಿಸ್ತ್ವಂ ಸಾಮವೇದಸ್ಯ ಗ್ರಂಥಿಸ್ತ್ವಂ ಯಜುಷಾಂ ಹುತಿಃ ।
ಋಗ್ವೇದಸ್ಯ ತಥಾ ಮಾತ್ರಾಥರ್ವಣಸ್ಯ ಪರಾ ಗತಿಃ ॥ ೩೫ ॥

ಸಮಸ್ತಗೀರ್ವಾಣಗಣಸ್ಯ ಶಕ್ತಿ-
ಸ್ತಮೋಮಯೀ ಸರ್ವಗುಣೈಕದೃಶ್ಯಾ ।
ರಜಃ ಪ್ರಪಂಚಾತ್ತು ಭವೈಕರೂಪಾ
ಯಾ ನ ಶ್ರುತಾ ಭವ್ಯಕರೀ ಸ್ತುತೇಹ ॥ ೩೬ ॥

---

ಗಳ ಸ್ವರೂಪವೂ ನೀನೆ. ವೇದರೂಪಳೂ, ಅದರಲ್ಲಿ ಬೋಧಿಸುವ ಧರ್ಮದ ಸ್ವರೂಪಳೂ ನೀನೆ ಆಗಿರುವೆ. ಇಂತಹ ನಿನಗೆ ನಮಸ್ಕಾರವು.

೩೨—೩೫. ಎಲ್ಲ ಪ್ರಾಣಿಗಳಲ್ಲಿರುವ ನಿದ್ರೆ, ಹಸಿವು, ತೃಪ್ತಿ, ಆಸೆ, ಕಾಂತಿ, ಹೊಳಪು, ಸಂತೋಷ ಇವೆಲ್ಲವೂ ನೀನು. ನೀನು ಎಲ್ಲರನ್ನೂ ಆನಂದ ಗೊಳಿಸುವವಳು. ನೀನು ಪುಣ್ಯವಂತರಿಗೆ ಲಕ್ಷ್ಮೀರೂಪಳು. ಪಾಪಿಗಳಿಗೆ ಜ್ಯೇಷ್ಠಾ (ದರಿದ್ರ) ಲಕ್ಷ್ಮೀರೂಪಳು. ನೀನು ಶಾಂತಿರೂಪಳಾಗಿದ್ದು ಜಗತ್ತನ್ನು ಪಾಲಿಸುವೆ ಮತ್ತು ಪೋಷಿಸುವೆ. ನೀನು ತತ್ವರೂಪಳು, ಪಂಚಭೂತಗಳ ಸಾರವು, ನೀತಿವಂತರ ನೀತಿಯು, ವ್ಯವಸಾಯ ಸ್ವರೂಪಳು, ಸಾಮವೇದದ ಗಾನವು, ಯಜುರ್ವೇದದ ಗ್ರಂಥಿಯು, ಋಗ್ವೇದದ ಹುತಿ (ಹೋಮವು) ಯು, ಅಥರ್ವಣವೇದದ ಮಾತ್ರೆಯು ಇವೆಲ್ಲವೂ ನಿನ್ನ ಸ್ವರೂಪಗಳೇ ಆಗಿವೆ. ನೀನೆ ಎಲ್ಲರಿಗೂ ಗತಿಯು.

೩೬—೩೮. ಓ ದೇವಿ, ನೀನು ಎಲ್ಲ ದೇವಗಣಗಳ ಶಕ್ತಿಯು. ತಮಸ್ಸಿನ ಸ್ವರೂಪಳು. ರಜೋಗುಣರೂಪಳಾಗಿ ಸಂಸಾರರೂಪವನ್ನು ಹೊಂದುವೆ. ನೀನು

ಸಂಸಾರಸಾಗರಕರಾಲಭವಾಂಗದುಃಖ-
ನಿಸ್ತಾರಕಾರಿತರಣಿಶ್ಚ ನಿವೀತಹೀನಾಂ ।
ಅಷ್ಟಾಂಗಯೋಗಪರಿಪಾಲನಕೇಳಿದಕ್ಷಾಂ
ವಿಂಧ್ಯಾಗವಾಸನಿರತಾಂ ಪ್ರಣಮಾಮ ತಾಂ ವೈ ॥ ೩೭ ॥

ನಾಸಾಕ್ಷಿವಕ್ತ್ರಭುಜವಕ್ಷಸಿ ಮಾನಸೇ ಚ
ಧೃತ್ವಾ ಸುಖಾನಿ ವಿತನೋಷಿ ಸದೈವ ಜಂತೋಃ ।
ನಿದ್ರೇತಿ ಯಾತಿಸುಭಗಾ ಜಗತೀ ಭವಾನಾಂ
ಸಾ ನಃ ಪ್ರಸೀದತು ಭವಸ್ಥಿತಿಪಾಲನಾಯ ॥ ೩೮ ॥

॥ ಬ್ರಹ್ಮೋವಾಚ ॥

ಇತಿ ಸ್ತುತ್ವಾ ಮಹೇಶಾನೀಂ ಜಗದಂಬಾಮುಮಾಂ ಸತೀಂ ।
ಸುಪ್ರೇಮಮನಸಸ್ಸರ್ವೇ ತಸ್ಥುಸ್ತೇ ದರ್ಶನೇಪ್ಸವಃ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ದೇವಸ್ತುತಿರ್ನಾಮ ತೃತೀಯೋಽಧ್ಯಾಯಃ

---

ಸಂಸಾರವೆಂಬ ಭಯಂಕರವಾದ ಸಾಗರವನ್ನು ದಾಟಿಸುವ ಮಹಾನೌಕೆಯು. ನೀನು ಅಷ್ಟಾಂಗಗಳುಳ್ಳ ಯೋಗವನ್ನು ಸದಾ ರಕ್ಷಿಸುವ ಯೋಗಿನಿಯು. ಸದಾ ವಿಂಧ್ಯಗಿರಿಯಲ್ಲಿ ಪ್ರೀತಿಯಿಂದ ವಾಸಿಸುವ "ವಿಂಧ್ಯವಾಸಿನಿ" ಯು. ಎಲ್ಲ ಪ್ರಾಣಿಗಳ ಮೂಗು, ಕಣ್ಣು, ಭುಜ, ಎದೆ, ಮನಸ್ಸು ಮುಂತಾದ ಅಂಗಗಳಿಗೆ ಆಯಾಸವನ್ನು ಪರಿಹರಿಸಿ ಸುಖವನ್ನುಂಟುಮಾಡುವ ನಿದ್ರೆಯ ಸ್ವರೂಪವೂ ನೀನೇ. ಇಂತಹ ಸ್ವರೂಪಗಳುಳ್ಳ ಓ ದೇವಿಯೇ, ಜಗತ್ತನ್ನು ರಕ್ಷಿಸಲು ಈಗ ಪ್ರಸನ್ನಳಾಗು ಎಂದು ಸ್ತುತಿಸಿದರು.

೩೯. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಜಗನ್ಮಾತೆಯೂ, ಮಹೇಶ್ವರಿಯೂ ಆದ ಉಮಾದೇವಿಯನ್ನು ದೇವತೆಗಳು ಭಕ್ತಿಯಿಂದ ಸ್ತುತಿಸಿ ಅವಳ ದರ್ಶನವನ್ನು ಪಡೆಯಲಿಚ್ಛೆಯಿಂದ ಅಲ್ಲಿಯೇ ನಿಂತಿದ್ದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ದೇವತೆಗಳು ಮಾಡಿದ ಸ್ತುತಿವರ್ಣನೆಯೆಂಬ ಮೂರನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಚತುರ್ಥೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಇತ್ಥಂ ದೈವೈಃ ಸ್ತುತಾ ದೇವೀ ದುರ್ಗಾ ದುರ್ಗಾರ್ತಿನಾಶಿನೀ ।
ಆವಿರ್ಬಭೂವ ದೇವಾನಾಂ ಪುರತೋ ಜಗದಂಬಿಕಾ ॥ ೧ ॥

ರಥೇ ರತ್ನಮಯೇ ದಿವ್ಯೇ ಸಂಸ್ಥಿತಾ ಪರಮಾದ್ಭುತೇ ।
ಕಿಂಕಿಣೀಜಾಲಸಂಯುಕ್ತೇ ಮೃದುಸಂಸ್ತರಣೇ ವರೇ ॥ ೨ ॥

ಕೋಟಿಸೂರ್ಯಾಧಿಕಾಭಾಸರಮ್ಯಾವಯವಭಾಸಿನೀ ।
ಸ್ವತೇಜೋರಾಶಿಮಧ್ಯಸ್ಥಾ ವರರೂಪಾ ಸಮುಚ್ಛವಿಃ ॥ ೩ ॥

---

## ನಾಲ್ಕನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ದೇವತೆಗಳು ಸ್ತುತಿಸಲು ಆಪತ್ತನ್ನು ನಾಶಮಾಡುವ ದುರ್ಗಾಮಾತೆಯು ಆ ದೇವತೆಗಳೆದುರಿಗೆ ರತ್ನಮಯವೂ, ಮಹಾ ಅದ್ಭುತವೂ, ಕಿರುಗೆಜ್ಜೆಗಳ ಮಾಲೆಯಿಂದ ಸುಂದರವಾದುದೂ, ಮೃದುವಾದ ರತ್ನಗಂಬಳಿಯುಳ್ಳದುದೂ ಆದಂತಹ ರತ್ನಪೀಠದಲ್ಲಿ ಆವಿರ್ಭವಿಸಿ ಪ್ರತ್ಯಕ್ಷಳಾದಳು.

೩-೫. ಆ ದೇವಿಯ ಅವಯವಗಳೆಲ್ಲವೂ ಕೋಟಿಸೂರ್ಯರಂತೆ ಪ್ರಕಾಶಿಸುತ್ತಲಿದ್ದುವು. ತೇಜಸ್ಸು ಅವಳ ಸುತ್ತಲೂ ಹರಡಿತ್ತು. ಅದರ ಮಧ್ಯದಲ್ಲಿ ದೇವಿಯು

ಅನೂಪಮಾ ಮಹಾಮಾಯಾ ಸದಾಶಿವವಿಲಾಸಿನೀ ।
ತ್ರಿಗುಣಾ ನಿರ್ಗುಣಾ ನಿತ್ಯಾ ಶಿವಲೋಕನಿವಾಸಿನೀ ॥ ೪ ॥

ತ್ರಿದೇವಜನನೀ ಚಂಡೀ ಶಿವಾ ಸರ್ವಾರ್ತಿನಾಶಿನೀ ।
ಸರ್ವಮಾತಾ ಮಹಾನಿದ್ರಾ ಸರ್ವಸ್ವಜನತಾರಿಣೀ ॥ ೫ ॥

ತೇಜೋರಾಶೇಃ ಪ್ರಭಾವಾತ್ತು ಸಾ ತು ದೃಷ್ಟಾ ಸುರೈಶ್ಶಿವಾ ।
ತುಷ್ಟುವುಸ್ತಾಂ ಪುನಸ್ತೇ ವೈ ಸುರಾ ದರ್ಶನಕಾಂಕ್ಷಿಣಃ ॥ ೬ ॥

ಅಥ ದೇವಗಣಾಸ್ಸರ್ವೇ ವಿಷ್ಣ್ವಾದ್ಯಾ ದರ್ಶನೇಪ್ಸವಃ ।
ದದೃಶುರ್ಜಗದಂಬಾಂ ತಾಂ ತತ್ಕೃಪಾಂ ಪ್ರಾಪ್ಯ ತತ್ರ ಹಿ ॥ ೭ ॥

ಬಭೂವಾನಂದಸಂದೋಹಸ್ಸರ್ವೇಷಾಂ ತ್ರಿದಿವೌಕಸಾಂ ।
ಪುನಃ ಪುನಃ ಪ್ರಣೇಮುಸ್ತಾಂ ತುಷ್ಟುವುಶ್ಚ ವಿಶೇಷತಃ ॥ ೮ ॥

॥ ದೇವಾ ಊಚುಃ ॥

ಶಿವೇ ಶರ್ವಾಣಿ ಕಲ್ಯಾಣಿ ಜಗದಂಬ ಮಹೇಶ್ವರಿ ।
ತ್ವಾಂ ನತಾಸ್ಸರ್ವಥಾ ದೇವಾ ವಯಂ ಸರ್ವಾರ್ತಿನಾಶಿನೀಂ ॥ ೯ ॥

---

ರಾರಾಜಿಸುತ್ತಲಿದ್ದಳು. ಅವಳ ಸೌಂದರ್ಯಕ್ಕೆ ಉಪಮೆಯೇ ಇಲ್ಲ. ಅವಳು ಮಹಾಮಾಯೆಯು. ಸದಾಶಿವನ ಪ್ರಿಯಭಾರ್ಯೆಯು. ಸತ್ವರಜಸ್ತಮೋಗುಣವುಳ್ಳವಳು. ಆದರೆ ವಸ್ತುತಃ ಯಾವ ಗುಣಗಳೂ ಇಲ್ಲದವಳು. ನಿತ್ಯಳು, ನಿತ್ಯವಾದ ಶಿವಲೋಕದಲ್ಲಿ ವಾಸಿಸುವಳು. ತ್ರಿಮೂರ್ತಿಗಳಿಗೂ ಮಾತೆಯು, ಪಾಪಿಗಳಿಗೆ ಮಹಾಚಂಡಿಯು. ಸಜ್ಜನರಿಗೆ ಮಂಗಳರೂಪಳು, ಸಕಲ ಪೀಡೆಯನ್ನೂ ಹೋಗಲಾಡಿಸುವವಳು. ಎಲ್ಲರಿಗೂ ಮಾತೆಯು. ಎಲ್ಲರನ್ನೂ ಉದ್ಧರಿಸುವಳು

೬-೮. ಇಂತಹ ತೇಜೋರಾಶಿಯ ಪ್ರಭಾವದಿಂದ ಬೆಳಗುತ್ತಿರುವ ದೇವಿಯನ್ನು ದೇವತೆಗಳು ನೋಡಿದರು. ಬಳಿಕ ವಿಷ್ಣುಮೊದಲಾದ ದೇವತೆಗಳು ದೇವಿಯ ದರ್ಶನದಿಂದ ತುಂಬಾ ಆನಂದವನ್ನು ಹೊಂದಿ ಪುನಃ ಪುನಃ ಅವಳನ್ನು ನಮಸ್ಕರಿಸಿ ಹೀಗೆ ಸುತ್ತಿಸಿದರು.

೯-೧೦. ದೇವತೆಗಳು ಹೇಳಿತರು :—ಮಂಗಳರೂಪಳಾದ ಓ ದೇವಿ, ನೀನು ಜಗನ್ಮಾತೆಯು, ಮಹೇಶ್ವರಿಯು. ನಿನಗೆ ನಾವು ಶರಣುಬಂದಿರುವೆವು. ನೀನು ಎಲ್ಲರ

ನ ಹಿ ಜಾನಂತಿ ದೇವೇಶಿ ವೇದಾಶ್ಶಾಸ್ತ್ರಾಣಿ ಕೃತ್ಸ್ನಶಃ ।
ಅತೀತೋ ಮಹಿಮಾ ಧ್ಯಾನಂ ತವ ವಾಙ್ಮನಸೋಶ್ಶಿವೇ ॥ ೧೦ ॥

ಅತದ್ವ್ಯಾವೃತ್ತಿತಸ್ತ್ವಾಂ ವೈ ಚಕಿತಂ ಚಕಿತಂ ಸದಾ ।
ಅಭಿದತ್ತೇ ಶ್ರುತಿರಪಿ ಪರೇಷಾಂ ಕಾ ಕಥಾ ಮತಾ ॥ ೧೧ ॥

ಜಾನಂತಿ ಬಹವೋ ಭಕ್ತಾಸ್ತ್ವತ್ಕೃಪಾಂ ಪ್ರಾಪ್ಯ ಭಕ್ತಿತಃ ।
ಶರಣಾಗತಭಕ್ತಾನಾಂ ನ ಕುತ್ರಾಪಿ ಭಯಾದಿಕಂ ॥ ೧೨ ॥

ವಿಜ್ಞಪ್ತಿಂ ಶೃಣು ಸುಪ್ರೀತಾ ಯಸ್ಯಾ ದಾಸಾಸ್ಸದಾಂಬಿಕೇ ।
ತವ ದೇವಿ ಮಹಾದೇವಿ ಹೀನತೋ ವರ್ಣಯಾಮಹೇ ॥ ೧೩ ॥

ಪುರಾ ದಕ್ಷಸುತಾ ಭೂತ್ವಾ ಭೂತ್ವಾ ಸಂಜಾತಾ ಹರವಲ್ಲಭಾ ।
ಬ್ರಹ್ಮಣಶ್ಚ ಪರೇಷಾಂ ವಾನಾಶಯತ್ತ್ವಮುಕಂ ಮಹತ್ ॥ ೧೪ ॥

---

ದುಃಖವನ್ನೂ ಹೋಗಲಾಡಿಸುವವಳು. ಓ ದೇವಿ, ನಿನ್ನ ಮಹಿಮೆಯನ್ನು ವೇದಗಳು ಶಾಸ್ತ್ರಗಳು ಸಂಪೂರ್ಣವಾಗಿ ತಿಳಿಸಲಾರವು. ನಿನ್ನ ಮಹಿಮೆಯು ಧ್ಯಾನಕ್ಕೆ ಸಿಲುಕುವಂತಹುದಲ್ಲ.

೧೧-೧೩. ಓ ದೇವಿ, ಶ್ರುತಿಯೂ ಸಹ ನೀನು ಅಸತ್ಯವಾದ ಜಡವಸ್ತುವಿಗಿಂತಲೂ ಭಿನ್ನಳು ಎಂದು ಭೇದರೂಪವಾಗಿ ಹೇಳುತ್ತದೆ. ನಿನ್ನ ಸ್ವರೂಪವು ಇಂತಹುದೇ ಎಂದು ಪ್ರತ್ಯಕ್ಷವಾಗಿ ಹೇಳಲು ಆ ಶ್ರುತಿಯು ಅಶಕ್ತವಾಗಿದೆ. ಹೀಗಿರಲು ಸಾಮಾನ್ಯರು ನಿನ್ನ ಸ್ವರೂಪವನ್ನು ಹೇಳುವುದೆಂತು? ತಿಳಿಯುವುದೆಂತು? ಆದರೆ ನಿನ್ನ ಭಕ್ತರು ನಿನ್ನ ಅನುಗ್ರಹದಿಂದಲೇ ನಿನ್ನ ಸ್ವರೂಪವನ್ನು ತಿಳಿಯಬಲ್ಲರು. ನಿನ್ನನ್ನು ಮರೆಹೊಕ್ಕ ಭಕ್ತರಿಗೆ ಯಾವ ಭಯವೂ ಇಲ್ಲ. ಈಗ ನಿನ್ನ ದಾಸರಾದ ನಾವು ಒಂದು ವಿಷಯವನ್ನು ವಿಜ್ಞಾಪಿಸಿಕೊಳ್ಳುವೆವು. ನಿನ್ನ ಕಥೆಯನ್ನೇ ತಿಳಿದ ಮಟ್ಟಿಗೆ ವರ್ಣಿಸುವೆವು.

೧೪-೧೫. ಓ ದೇವಿ, ಹಿಂದೆ ನೀನು ದಕ್ಷಪುತ್ರಿ ಸತೀದೇವಿಯಾಗಿ ಜನಿಸಿ ಹರನ ಪ್ರಿಯಭಾರ್ಯೆಯಾದೆ ಬ್ರಹ್ಮ ಮೊದಲಾದ ದೇವತೆಗಳ ದುಃಖವನ್ನು ಪರಿಹರಿಸಿರುವೆ. ಬಳಿಕ ತಂದೆಯಾದ ದಕ್ಷನಿಂದ ಅವಮಾನವನ್ನು ಹೊಂದಿ ನಿನ್ನ ಪೂರ್ವ

ಪಿತೃತೋಽನಾದರಂ ಪ್ರಾಪ್ಯಾತ್ಯಜಃ ಪಣವಶಾತ್ತನುಂ ।
ಸ್ವಲೋಕಮಗಮಸ್ತ್ವಂ ವಾಲಭದ್ದುಃಖಂ ಹರೋಽಪಿ ಹಿ ॥ ೧೫ ॥

ನ ಹಿ ಜಾತಂ ಪ್ರಪೂರ್ಣಂ ತದ್ದೇವಕಾರ್ಯಂ ಮಹೇಶ್ವರಿ ।
ವ್ಯಾಕುಲಾ ಮುನಯೋ ದೇವಾಃ ಶರಣಂ ತ್ವಾಂ ಗತಾ ವಯಂ ॥ ೧೬ ॥

ಪೂರ್ಣಂ ಕುರು ಮಹೇಶಾನಿ ನಿರ್ಜರಾಣಾಂ ಮನೋರಥಂ ।
ಸನತ್ಕುಮಾರವಚಸಂ ಸಫಲಂ ಸ್ಯಾದ್ಯಥಾ ಶಿವೇ ॥ ೧೭ ॥

ಅವತೀರ್ಯ ಕ್ಷಿತೌ ದೇವಿ ರುದ್ರಪತ್ನೀ ಪುನರ್ಭವ ।
ಲೀಲಾಂ ಕುರು ಯಥಾಯೋಗ್ಯಂ ಪ್ರಾಪ್ನುಯುರ್ನಿರ್ಜರಾಸ್ಸುಖಂ ॥ ೧೮ ॥

ಸುಖೀ ಸ್ಯಾದ್ದೇವಿ ರುದ್ರೋಽಪಿ ಕೈಲಾಸಾಚಲಸಂಸ್ಥಿತಃ ।
ಸರ್ವೇ ಭವಂತು ಸುಖಿನೋ ದುಃಖಂ ನಶ್ಯತು ಕೃತ್ಸ್ನಶಃ ॥ ೧೯ ॥

॥ ಬ್ರಹ್ಮೋವಾಚ ॥

ಇತಿ ಪ್ರೋಚ್ಯಾಮರಾಸ್ಸರ್ವೇ ವಿಷ್ಣ್ವಾದ್ಯಾಃ ಪ್ರೇಮಸಂಕುಲಾಃ ।
ಮೌನಮಾಸ್ಥಾಯ ಸಂತಸ್ಥುರ್ಭಕ್ತಿನಮ್ರಾತ್ಮಮೂರ್ತಯಃ ॥ ೨೦ ॥

---

ಪ್ರತಿಜ್ಞೆಯಂತೆ ಶರೀರವನ್ನು ತ್ಯಜಿಸಿ ನಿನ್ನ ಲೋಕಕ್ಕೆ ತೆರಳಿರುವೆ. ಆಗ ನಿನ್ನ ವಿರಹದಿಂದ ಹರನು ತುಂಬಾ ದುಃಖಿತನಾದನು.

೧೬-೧೯. ಓ ಮಹಾದೇವಿ, ಆದರೆ ನಿನ್ನ ಅವತಾರದಿಂದಾಗಬೇಕಾದ ದೇವ ಕಾರ್ಯವು ಪೂರ್ಣವಾಗಿ ಆಗಲೇ ಇಲ್ಲ. ಮುನಿಗಳು, ದೇವತೆಗಳು ಎಲ್ಲರೂ ದುಃಖಿತರಾಗಿ ನಿನ್ನನ್ನು ಮರೆಹೊಕ್ಕಿರುವರು. ಓ ಮಹೇಶ್ವರಿ, ದೇವತೆಗಳ ಮನೋ ರಥವನ್ನು ಪೂರ್ಣಗೊಳಿಸು. ಸನತ್ಕುಮಾರನ ವಾಕ್ಯವು ಸಫಲವಾಗುವಂತೆ ಮಾಡು ಭೂಮಿಯಲ್ಲಿ ನೀನು ತಿರುಗಿ ಅವತರಿಸಿ ರುದ್ರನ ಪತ್ನಿಯಾಗು. ಯೋಗ್ಯವಾದ ಲೀಲೆಗಳನ್ನು ಆಚರಿಸು. ಅದರಿಂದ ದೇವತೆಗಳಿಗೆ ಸುಖವಾಗುವುದು. ರುದ್ರನೂ ಸುಖಿಯಾಗುವನು. ನಿನ್ನ ಅವತಾರದಿಂದ ಎಲ್ಲರೂ ಸುಖಿಗಳಾಗಲಿ. ದುಃಖವೆಲ್ಲವೂ ನಾಶವಾಗಲಿ ಎಂದು ಸ್ತೋತ್ರಮಾಡಿದರು.

೨೦-೨೨. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಹರಿಯೇ ಮೊದಲಾದ ದೇವತೆಗಳು ಭಕ್ತಿಯಿಂದ ವಿನೀತರಾಗಿ ಮೌನವನ್ನು ತಾಳಿದರು. ಆಗ ಮಹೇ

ಶಿವಾಪಿ ಸುಪ್ರಸನ್ನಾಭೂದಾಕರ್ಣ್ಯಾಮರಸಂಸ್ತುತಿಂ ।
ಆಕಲಯ್ಯಾಥ ತದ್ಧೇತುಂ ಸಂಸ್ಮೃತ್ಯ ಸ್ವಪ್ರಭುಂ ಶಿವಂ ॥ ೨೧ ॥

ಉವಾಚೋಮಾ ತದಾ ದೇವೀ ಸಂಬೋಧ್ಯ ವಿಬುಧಾಂಶ್ಚ ತಾನ್ ।
ವಿಶಸ್ಯ ಮಾಪತಿಮುಖಾನ್ ಸದಯಾ ಭಕ್ತವತ್ಸಲಾ ॥ ೨೨ ॥

॥ ಉಮೋವಾಚ ॥

ಹೇ ಹರೇ ಹೇ ವಿಧೇ ದೇವಾ ಮುನಯಶ್ಚ ಗತವ್ಯಥಾಃ ।
ಸರ್ವೇ ಶೃಣುತ ಮದ್ವಾಕ್ಯಂ ಪ್ರಸನ್ನಾಹಂ ನ ಸಂಶಯಃ ॥ ೨೩ ॥

ಚರಿತಂ ಮಮ ಸರ್ವತ್ರ ತ್ರೈಲೋಕ್ಯಸ್ಯ ಸುಖಾವಹಂ ।
ಕೃತಂ ಮಯೈವ ಸಕಲಂ ದಕ್ಷಮೋಹಾದಿಕಂ ಚ ಯತ್ ॥ ೨೪ ॥

ಅವತಾರಂ ಕರಿಷ್ಯಾಮಿ ಕ್ಷಿತೌ ಪೂರ್ಣಂ ನ ಸಂಶಯಃ ।
ಬಹವೋ ಹೇತವೋಽಪ್ಯತ್ರ ತದ್ವದಾಮಿ ಮುಹಾದರಾತ್ ॥ ೨೫ ॥

ಪುರಾ ಹಿಮಾಚಲೋ ದೇವಾ ಮೇನಾ ಚಾತಿಸುಭಕ್ತಿತಃ ।
ಸೇವಾಂ ಮೇ ಚಕ್ರತುಸ್ತಾತ ಜನನೀವತ್ಸತೀತನೋಃ ॥ ೨೬ ॥

---

ಶ್ವರಿಯು ದೇವತೆಗಳ ಸ್ತುತಿಯಿಂದ ಪ್ರಸನ್ನಳಾಗಿ, ನಡೆದಿರುವ ವೃತ್ತಾಂತವೆಲ್ಲವನ್ನೂ ಜ್ಞಾನದೃಷ್ಟಿಯಿಂದ ತಿಳಿದಳು. ಬಳಿಕ ತನ್ನ ಪ್ರಭುವಾದ ಶಿವನನ್ನು ಧ್ಯಾನಿಸಿ ದಯಾಮಯಳೂ ಭಕ್ತವತ್ಸಲಳೂ ಆದ ಆ ದೇವಿಯು ದೇವತೆಗಳನ್ನು ಕುರಿತು ಹೀಗೆ ಹೇಳಿದಳು.

೨೩-೨೫. ಉಮಾದೇವಿಯು ಹೇಳಿದಳು :—ಎಲೈ ಹರಿ, ಎಲೈ ದೇವತೆಗಳೇ ಮತ್ತು ಮುನಿಗಳೇ, ನಾನು ಪ್ರಸನ್ನಳಾಗಿರುವೆನು. ವ್ಯಥೆಯನ್ನು ಬಿಟ್ಟು ನನ್ನ ಮಾತನ್ನು ಕೇಳಿರಿ, ನನ್ನ ಪ್ರತಿಯೊಂದು ಕಾರ್ಯವೂ ಸಹ ಜಗತ್ತಿಗೆ ಸುಖವನ್ನುಂಟು ಮಾಡುವುದೇ ಆಗಿರುವುದು. ನಾನೇ ದಕ್ಷನು ಮೋಹಗೊಳ್ಳುವಂತೆ ಮಾಡಿದೆನು. ನೀವೀಗ ಹೇಳಿದಂತೆ ಭೂಮಿಯಲ್ಲಿ ತಿರುಗಿ ಅವತರಿಸುವೆನು. ಇದಕ್ಕೆ ಇನ್ನೂ ಅನೇಕ ಕಾರಣಗಳುಂಟು. ಅದನ್ನು ಹೇಳುವೆನು ಆದರದಿಂದ ಕೇಳಿ.

೨೬-೨೮. ಹಿಂದೆ ಸತೀದೇವಿಯಾದ ನನ್ನನ್ನು ಹಿಮವಂತನೂ ಮೇನಾ ದೇವಿಯೂ ಸಹ ತಂದೆತಾಯಿಗಳಂತೆ ಸೇವಿಸಿರುವರು. ಈಗಲೂ ಸಹ ನಿತ್ಯವೂ

ಇದಾನೀಂ ಕುರತಸ್ಸೇವಾಂ ಸುಭಕ್ತ್ಯಾ ಮಮ ನಿತ್ಯಶಃ ।
ಮೇನಾ ವಿಶೇಷತಸ್ತತ್ರ ಸುತಾತ್ವೇ ನಾತ್ರ ಸಂಶಯಃ ॥ ೨೭ ॥

ರುದ್ರೋಽಗಚ್ಛತು ಯೂಯಂ ಚಾವತಾರಂ ಹಿಮವದ್ಗೃಹೇ ।
ಅತಶ್ಚಾವತರಿಷ್ಯಾಮಿ ದುಃಖನಾಶೋ ಭವಿಷ್ಯತಿ ॥ ೨೮ ॥

ಸರ್ವೇ ಗಚ್ಛತ ಧಾಮ ಸ್ವಂ ಸ್ವಂ ಸುಖಂ ಲಭತಾಂ ಚಿರಂ ।
ಅವತೀರ್ಯ ಸುತಾ ಭೂತ್ವಾ ಮೇನಾಯಾ ದಾಸ್ಯ ಉತ್ಸವಂ ॥ ೨೯ ॥

ಹರಪತ್ನೀ ಭವಿಷ್ಯಾಮಿ ಸುಗುಪ್ತಂ ಮತಮಾತ್ಮನಃ ।
ಅದ್ಭುತಾ ಶಿವಲೀಲಾ ಹಿ ಜ್ಞಾನಿನಾಮಪಿ ಮೋಹಿನೀ ॥ ೩೦ ॥

ಯಾವತ್ಪ್ರಭೃತಿ ಮೇ ತ್ಯಕ್ತಾ ಸ್ವತನುರ್ದಕ್ಷಜಾ ಸುರಾಃ ।
ಪಿತೃತೋಽನಾದರಂ ದೃಷ್ಟ್ವಾ ಸ್ವಾಮಿನಸ್ತತ್ಕ್ರತೌ ಗತಾ ॥ ೩೧ ॥

ತದಾ ಪ್ರಭೃತಿ ಸ ಸ್ವಾಮೀ ರುದ್ರಃ ಕಾಲಾಗ್ನಿಸಂಜ್ಞಕಃ ।
ದಿಗಂಬರೋ ಬಭೂವಾಶು ಮಚ್ಚಿಂತನಪರಾಯಣಃ ॥ ೩೨ ॥

---

ಭಕ್ತಿಯಿಂದ ನನ್ನನ್ನು ಸೇವಿಸುತ್ತಲಿರುವರು. ಮೇನಾದೇವಿಯು, ನಾನು ತನ್ನ ಮಗಳಾಗಬೇಕೆಂದು ವಿಶೇಷವಾಗಿ ಅರ್ಚಿಸುತ್ತಲಿರುವಳು. ರುದ್ರನೂ ಹಿಮಾಲಯದಲ್ಲಿ ವಾಸಮಾಡುವನು. ಆ ಹಿಮವಂತನ ಮನೆಯಲ್ಲಿ ನಾನು ಅವತರಿಸುವೆನು. ನಿಮ್ಮೆಲ್ಲರ ದುಃಖವೂ ನಾಶವಾಗುವುದು.

೨೯-೩೦. ಎಲೈ ದೇವತೆಗಳಿರಾ, ಎಲ್ಲರೂ ನಿಮ್ಮ ನಿಮ್ಮ ಸ್ಥಾನಗಳಿಗೆ ತೆರಳಿರಿ. ಮೇನಾದೇವಿಗೆ ಪ್ರಿಯಪುತ್ರಿಯಾಗಿ ಜನಿಸಿ ನಾನು ಅವಳನ್ನು ಸಂತೋಷಗೊಳಿಸುವೆನು. ಮುಂದೆ ಹರನ ಮಡದಿಯಾಗುವೆನು. ಇದು ನನ್ನ ರಹಸ್ಯವಾದ ಅಭಿಪ್ರಾಯವು. ಶಿವನ ಲೀಲೆಯು ಅದ್ಭುತವಾದುದು. ಜ್ಞಾನಿಗಳನ್ನೂ ಮೋಹಗೊಳಿಸುವಂತಹುದು.

೩೧-೩೩. ಎಲೈ ದೇವತೆಗಳಿರಾ, ತಂದೆಯ ಅವಮಾನದಿಂದ ನಾನು (ಸತಿಯು) ಯಾವಾಗ ದೇಹವನ್ನು (ಯಜ್ಞದಲ್ಲಿ) ತ್ಯಜಿಸಿದೆನೋ ಆ ಮೊದಲುಗೊಂಡು "ಕಾಲಾಗ್ನಿ" ಯೆಂದು ಹೆಸರುಳ್ಳ ಆ ರುದ್ರನು ನನ್ನನ್ನೇ ಚಿಂತಿಸುತ್ತಾ ದಿಗಂಬರ

ಮಮ ರೋಷಂ ಕ್ರತೌ ದೃಷ್ಟ್ವಾ ಪಿತುಸ್ತತ್ರ ಗತಾ ಸತೀ ।
ಅತ್ಯಜತ್ಸ್ವತನುಂ ಪ್ರೀತ್ಯಾ ಧರ್ಮಜ್ಞೇತಿ ವಿಚಾರತಃ ॥ ೩೩ ॥

ಯೋಗ್ಯಭೂತ್ಸದನಂ ತ್ಯಕ್ತ್ವಾ ಕೃತ್ವಾ ವೇಷಮಲೌಕಿಕಂ ।
ನ ಸೇಹೇ ವಿರಹಂ ತಸ್ಯಾ ಮದ್ರೂಪಯಾ ಮಹೇಶ್ವರಃ ॥ ೩೪ ॥

ಮಮ ಹೇತೋರ್ಮಹಾದುಃಖೀ ಸ ಬಭೂವ ಕುವೇಷಭೃತ್ ।
ಅತ್ಯಜತ್ಸ ತದಾರಭ್ಯ ಕಾಮಜಂ ಸುಖಮುತ್ತಮಂ ॥ ೩೫ ॥

ಅನ್ಯಚ್ಛೃಣುತ ಹೇ ವಿಷ್ಣೋ ಹೇ ವಿಧೇ ಮುನಯಸ್ಸುರಾಃ ।
ಮಹಾಪ್ರಭೋರ್ಮಹೇಶಸ್ಯ ಲೀಲಾಂ ಭುವನಪಾಲನೀಂ ॥ ೩೬ ॥

ವಿಧಾಯ ಮಾಲಾಂ ಸುಪ್ರೀತ್ಯಾ ಮಮಾಸ್ಥ್ನಾಂ ವಿರಹಾಕುಲಃ ।
ನ ಶಾಂತಿಂ ಪ್ರಾಪ ಕುತ್ರಾಪಿ ಪ್ರಬುದ್ಧೋಽಪ್ಯೇಕ ಏವ ಸಃ ॥ ೩೭ ॥

ಇತಸ್ತತೋ ರುರೋದೋಚ್ಚೈರನೀಶ ಇವ ಸಪ್ರಭುಃ ।
ಯೋಗ್ಯಾಯೋಗ್ಯಂ ನ ಬುಬುಧೇ ಭ್ರಮನ್ ಸರ್ವತ್ರ ಸರ್ವದಾ ॥ ೩೮ ॥

---

ನಾದನು. ನನ್ನ ಕೋಪವನ್ನು ನೋಡಿ ತಂದೆ ಯಜ್ಞಕ್ಕೆ ಹೋದ ನನ್ನ ರೂಪಳಾದ ಸತೀದೇವಿಯು ವಿಚಾರದಿಂದ ಆ ಶರೀರವನ್ನು ತ್ಯಜಿಸಿದಳು.

೩೪-೩೫. ಅಲೌಕಿಕವಾದ ದಿಗಂಬರವೇಷವನ್ನು ಧರಿಸಿ ಆ ಶಿವನು ಯೋಗಿಯಾದನು. ಆದರೂ ಅವನು ನನ್ನ ರೂಪಳಾದ ಸತೀದೇವಿಯ ವಿರಹವನ್ನು ಸಹಿಸಲಾರದವನಾದನು. ನನಗೋಸ್ಕರವಾಗಿ ಮಹಾ ದುಃಖವನ್ನನುಭವಿಸುತ್ತಾ ಅಲೌಕಿಕ ವೇಷವನ್ನು ಧರಿಸಿದನು. ಆ ಮೊದಲುಗೊಂಡು ಕಾಮಸುಖವನ್ನೇ ಅವನು ತ್ಯಜಿಸಿದನು.

೩೬-೩೮. ಎಲೈ ವಿಷ್ಣು, ಎಲೈ ಬ್ರಹ್ಮ ಮತ್ತು ದೇವತೆಗಳೇ, ಮುನಿಗಳೇ, ಮಹೇಶ್ವರನ ಅದ್ಭುತವಾದ ಲೀಲೆಯನ್ನು ಇನ್ನೂ ಹೇಳುವೆನು ಕೇಳಿರಿ. ಆ ಪರ ಶಿವನು ವಿರಹದುಃಖಿತನಾಗಿ ನನ್ನ ಎಲುಬಿನಿಂದ ಮಾಲೆಯನ್ನು ರಚಿಸಿ ಪ್ರೀತಿಯಿಂದ ಧರಿಸಿಕೊಂಡನು. ಆದರೂ ಅವನಿಗೆ ಶಾಂತಿಯು ದೊರೆಯಲಿಲ್ಲ. ಜ್ಞಾನಿಯಾದರೂ ಅವನು ಹುಚ್ಚನಂತೆ ಅಲ್ಲಿ ಇಲ್ಲಿ ತಿರುಗುತ್ತಾ ರೋದಿಸಿದನು. ಯೋಗ್ಯವಾವುದು, ಅಯೋಗ್ಯವಾವುದು ಎಂಬುದನ್ನು ತಿಳಿಯಲಾರದವನಾದನು.

ಇತ್ಥಂ ಲೀಲಾಂ ಹರೋಽಕಾರ್ಷೀದ್ದರ್ಶಯನ್ ಕಾಮಿನಾಂ ಪ್ರಭುಃ ।
ಊಚೇ ಕಾಮುಕವದ್ವಾಣೀಂ ವಿರಹವ್ಯಾಕುಲಾಮಿವ ॥ ೩೯ ॥

ವಸ್ತುತೋಽವಿಕೃತೋಽದೀನೋಽಸ್ತ್ಯಜಿತಃ ಪರಮೇಶ್ವರಃ ।
ಪರಿಪೂರ್ಣಃ ಶಿವಃ ಸ್ವಾಮೀ ಮಾಯಾಧೀಶೋಽಖಿಲೇಶ್ವರಃ ॥ ೪೦ ॥

ಅನ್ಯಥಾ ಮೋಹತಸ್ತಸ್ಯ ಕಿಂ ಕಾಮಾಚ್ಚ ಪ್ರಯೋಜನಂ ।
ವಿಕಾರೇಣಾಪಿ ಕೇನಾಶು ಮಾಯಾಲಿಪ್ತೋ ನ ಸ ಪ್ರಭುಃ ॥ ೪೧ ॥

ರುದ್ರೋಽತೀವೇಚ್ಛತಿ ವಿಭುಸ್ಸ ಮೇ ಕರ್ತುಂ ಕರಗ್ರಹಂ ।
ಅವತಾರಂ ಕ್ಷಿತೌ ಮೇನಾಹಿಮಾಚಲಗೃಹೇ ಸುರಾಃ ॥ ೪೨ ॥

ಅತಶ್ಚಾವತರಿಷ್ಯಾಮಿ ರುದ್ರಸಂತೋಷಹೇತವೇ ।
ಹಿಮಾಗಪತ್ನ್ಯಾಂ ಮೇನಾಯಾಂ ಲೌಕಿಕೀಂ ಗತಿಮಾಶ್ರಿತಾ ॥ ೪೩ ॥

ಭಕ್ತಾ ರುದ್ರಪ್ರಿಯಾ ಭೂತ್ವಾ ತಪಃ ಕೃತ್ವಾ ಸುದುಸ್ಸಹಂ ।
ದೇವಕಾರ್ಯಂ ಕರಿಷ್ಯಾಮಿ ಸತ್ಯಂ ಸತ್ಯಂ ನ ಸಂಶಯಃ ॥ ೪೪ ॥

---

೩೯-೪೧. ಹೀಗೆ ಆ ಹರನು ಕಾಮಿಗಳ ಅವಸ್ಥೆಯನ್ನು ಪ್ರದರ್ಶಿಸುತ್ತಾ ಲೀಲೆಯನ್ನು ಪ್ರಕಟಮಾಡಿದನು. ಕಾಮುಕನಂತೆ ವಿರಹದುಃಖದಿಂದ ದೀನವಾಣಿಯನ್ನು ನುಡಿದನು. ಇದೆಲ್ಲವೂ ಮಾಯೆಯು (ಆಟವು) ವಸ್ತುತಃ ಆ ಶಿವನು ಯಾವ ವಿಕಾರಗಳೂ ಇಲ್ಲದವನು. ಉದಾರನು, ಜಿತೇಂದ್ರಿಯನು, ಪರಿಪೂರ್ಣನು, ಆಪ್ತಕಾಮನು, ಮಾಯೆಗಧೀಶನು. ಹೀಗಿರುವ ಆ ಪರಮೇಶ್ವರನಿಗೆ ಮೋಹ ಕಾಮ ಮತ್ತು ವಿಕಾರಗಳಿಂದೇನು ಪ್ರಯೋಜನ? ಅವನು ಮಾಯೆಗೊಳಪಡುವವನಲ್ಲ. ಮಾಯೆಯನ್ನೇ ಅವನಾಳುವನು.

೪೨-೪೪. ರುದ್ರನು ತಿರುಗಿ ನನ್ನನ್ನು ಮದುವೆಯಾಗಲಿಚ್ಛಿಸುವನು. ಆ ರುದ್ರನ ಸಂತೋಷಕ್ಕಾಗಿ ಹಿಮವಂತನ ಮನೆಯಲ್ಲಿ ಮೇನಾದೇವಿಯಲ್ಲಿ ಅವತರಿಸುವೆನು. ಭಕ್ತಳೂ ರುದ್ರಪ್ರಿಯಳೂ ಆಗಿ ಘೋರವಾದ ತಪವನ್ನಾಚರಿಸಿ ದೇವಕಾರ್ಯವನ್ನು ಮಾಡುವೆನು. ರುದ್ರನನ್ನು ಮದುವೆಯಾಗುವೆನು. ಇದು ಸತ್ಯವಾದ ಮಾತು. ಸಂಶಯವಿಲ್ಲ.

ಗಚ್ಛತ ಸ್ವಗೃಹಂ ಸರ್ವೇ ಭವಂ ಭಜತ ನಿತ್ಯಶಃ ।
ತತ್ಕೃಪಾತೋಽಖಿಲಂ ದುಃಖಂ ವಿನಶ್ಯತಿ ನ ಸಂಶಯಃ ॥ ೪೫ ॥

ಭವಿಷ್ಯತಿ ಕೃಪಾಲೋಸ್ತು ಕೃಪಯಾ ಮಂಗಲಂ ಸದಾ ।
ವಂದ್ಯಾ ಪೂಜ್ಯಾ ತ್ರಿಲೋಕೇಽಹಂ ತಜ್ಜಾಯೇತಿ ಚ ಹೇತುತಃ ॥ ೪೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಜಗದಂಬಾ ಸಾ ದೇವಾನಾಂ ಪಶ್ಯತಾಂ ತದಾ ।
ಅಂತರ್ದಧೇ ಶಿವಾ ತಾತ ಸ್ವಂ ಲೋಕಂ ಪ್ರಾಪ ವೈ ದ್ರುತಂ ॥ ೪೭ ॥

ವಿಷ್ಣ್ವಾದಯಸ್ಸುರಾಸ್ಸರ್ವೇ ಮುನಯಶ್ಚ ಮುದಾನ್ವಿತಾಃ ।
ಕೃತ್ವಾ ತದ್ದಿಶಿ ಸನ್ನಾಮಂ ಸ್ವಸ್ವಧಾಮಾನಿ ಸಂಯಯುಃ ॥ ೪೮ ॥

ಇತ್ಥಂ ದುರ್ಗಾಸುಚರಿತಂ ವರ್ಣಿತಂ ತೇ ಮುನೀಶ್ವರ ।
ಸರ್ವದಾ ಸುಖದಂ ನೃಣಾಂ ಭುಕ್ತಿಮುಕ್ತಿಪ್ರದಾಯಕಂ ॥ ೪೯ ॥

---

೪೫-೪೬. ಎಲೈ ದೇವತೆಗಳಿರಾ, ನಡೆಯಿರಿ, ಎಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ಹೋಗಿ ನಿತ್ಯವೂ ಶಂಕರನನ್ನು ಭಜಿಸಿರಿ. ದಯಾಮಯನಾದ ಆ ಶಿವನ ಅನುಗ್ರಹದಿಂದ ನಿತ್ಯವೂ ಮಂಗಳವಾಗುವುದು. ದುಃಖವೆಲ್ಲವೂ ನಾಶವಾಗುವುದು. ನಾನಾದರೂ ಸಹ ಆ ಪರಶಿವನ ಪತ್ನಿಯಾದುದರಿಂದಲೇ ಪೂಜ್ಯಳು ಮತ್ತೂ ವಂದ್ಯಳು ಎಂದಳು.

೪೭-೪೮. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಜಗನ್ಮಾತೆಯಾದ ಪರಮೇಶ್ವರಿಯು ದೇವತೆಗಳು ನೋಡುತ್ತಿದ್ದಂತೆ ಅಲ್ಲಿಯೇ ಅಂತರ್ಧಾನಳಾಗಿ ತನ್ನ ಲೋಕಕ್ಕೆ ತೆರಳಿದಳು. ಬಳಿಕ ಹರಿಯೇ ಮೊದಲಾದ ದೇವತೆಗಳೂ ಮುನಿಗಳೂ ಸಹ ಹರ್ಷಗೊಂಡವರಾಗಿ ದೇವಿಯು ಅಂತರ್ಧಾನಳಾದ ದಿಕ್ಕಿನಲ್ಲಿ ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

೪೯-೫೦. ಎಲೈ ನಾರದಮುನಿ, ಹೀಗೆ ನಿನಗೆ ಮನೋಹರವಾದ ದುರ್ಗಾಚರಿತವನ್ನು ವರ್ಣಿಸಿರುವೆನು. ಈ ಚರಿತವು ಮನುಷ್ಯರಿಗೆ ಸುಖನ್ನುಂಟುಮಾಡುವುದು. ಭೋಗ ಮತ್ತು ಮೋಕ್ಷಗಳನ್ನುಂಟುಮಾಡುವುದು. ಈ ಚರಿತವನ್ನು

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾ ಸಮಾಹಿತಃ ।
ಪಠೇದ್ವಾ ಪಾಠಯೇದ್ವಾಪಿ ಸರ್ವಾನ್ ಕಾಮಾನವಾಪ್ನುಯಾತ್ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಪೂರ್ವಗತಿವರ್ಣನಂ
ನಾಮ ಚತುರ್ಥೋಽಧ್ಯಾಯಃ



---

ಶ್ರದ್ಧೆಯಿಂದ ಕೇಳಬೇಕು. ಇತರರಿಗೆ ಓದಿಹೇಳಬೇಕು. ಪಾರಾಯಣಮಾಡಬೇಕು. ಪಾರಾಯಣವನ್ನು ತಿಳಿದವರಿಂದ ಮಾಡಿಸಲೂ ಬೇಕು. ಹಾಗೆ ಮಾಡಿದರೆ ಎಲ್ಲಾ ಇಷ್ಟಾರ್ಥಗಳೂ ಸಿದ್ಧಿಸುವುವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಪೂರ್ವಕಥಾನುವರ್ಣನವೆಂಬ ನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಪಂಚಮೋಽಧ್ಯಾಯಃ

---

॥ ನಾರದ ಉವಾಚ ॥

ಅಂತರ್ಹಿತಾಯಾಂ ದೇವ್ಯಾಂ ತು ದುರ್ಗಾಯಾಂ ಸ್ವಗೃಹೇಷು ಚ ।
ಗತೇಷ್ವಮರವೃಂದೇಷು ಕಿಮಭೂತ್ತದನಂತರಂ ॥ ೧ ॥

ಕಥಂ ಮೇನಾಗಿರೀಶೌ ಚ ತೇಪಾತೇ ಪರಮಂ ತಪಃ ।
ಕಥಂ ಸುತಾಭವತ್ತಸ್ಯ ಮೇನಾಯಾಂ ತಾತ ತದ್ವದ ॥ ೨ ॥

॥ ಬ್ರಹ್ಮೋವಾಚ ॥

ವಿಪ್ರವರ್ಯ ಸುತಶ್ರೇಷ್ಠ ಶೃಣು ತಚ್ಚರಿತಂ ಮಹತ್ ।
ಪ್ರಣಮ್ಯ ಶಂಕರಂ ಭಕ್ತ್ಯಾ ವಚ್ಮಿ ಚ್ಛಕ್ತಿವಿದರ್ಧನಂ ॥ ೩ ॥

---

## ಐದನೆಯ ಅಧ್ಯಾಯವು

೧-೨. ನಾರದಮುನಿಯು ಪ್ರಶ್ನಿಸಿದನು :—ಓ ಬ್ರಹ್ಮನೆ, ದುರ್ಗಾದೇವಿಯು ಅಂತರ್ಧಾನಳಾಗಿ ದೇವತೆಗಳೆಲ್ಲರೂ ತಮ್ಮ ಸ್ಥಾನಗಳಿಗೆ ತೆರಳಿದಮೇಲೆ. ಏನು ನಡೆಯಿತು? ಮೇನಾದೇವಿ ಹಿಮವಂತರು ಹೇಗೆ ತಪಸ್ಸನ್ನಾಚರಿಸಿದರು? ಆ ಮೇನಾದೇವಿಯಲ್ಲಿ ಪಾರ್ವತಿಯು ಹೇಗೆ ಜನಿಸಿದಳು? ಇದೆಲ್ಲವನ್ನೂ ಹೇಳೆನಲು,

೩-೫. ಬ್ರಹ್ಮನು ಹೇಳಿದನು:—ನನ್ನ ಪುತ್ರಶ್ರೇಷ್ಠನೂ ವಿಪ್ರೋತ್ತಮನೂ ಆದ ಓ ನಾರದನೇ, ಶಂಕರನನ್ನು ನಮಸ್ಕರಿಸಿ ನೀನು ಪ್ರಶ್ನಿಸಿದ ದೇವೀಚರಿತವನ್ನು

ಉಪದಿಶ್ಯ ಗತೇ ತಾತ ಸುರವೃಂದೇ ಗಿರೀಶ್ವರಃ ।
ಹಯರ್ಗಾದೌ ಮೇನಕಾ ಚಾಪಿ ಸೇಪಾತೇ ಪರಮಂ ತಪಃ ॥ ೪ ॥

ಅಹರ್ನಿಶಂ ಶಿವಾಂ ಶಂಭುಂ ಚಿಂತಯಂತೌ ಚ ದಂಪತೀ ।
ಸಮ್ಯಗಾರೇಧತುರ್ನಿತ್ಯಂ ಭಕ್ತಿಯುಕ್ತೇನ ಚೇತಸಾ ॥ ೫ ॥

ಗಿರಿಪ್ರಿಯಾತೀವ ಮುದಾನರ್ಚ ದೇವೀಂ ಶಿವೇನ ಸಾ ।
ದಾನಂ ದದೌ ದ್ವಿಜೇಭ್ಯಶ್ಚ ಸದಾ ತತ್ತೋಷಹೇತವೇ ॥ ೬ ॥

ಚೈತ್ರಮಾಸಂ ಸಮಾರಭ್ಯ ಸಪ್ತವಿಂಶತಿವತ್ಸರಾನ್ ।
ಶಿವಾಂ ಸಂಪೂಜಯಾಮಾಸಾಪತ್ಯಾರ್ಥಿನ್ಯನ್ವಹಂ ಸದಾ ॥ ೭ ॥

ಅಷ್ಟಮ್ಯಾಮುಪವಾಸಂ ತು ಕೃತ್ವಾದಾನ್ನವಮೀತಿಥೌ ।
ಮೋದಕೈರ್ಬಲಿಪಿಷ್ಟೈಶ್ಚ ಪಾಯಸೈರ್ಗಂಧಪುಷ್ಪಕೈಃ ॥ ೮ ॥

ಗಂಗಾಯಾಮೋಷಧಿಪ್ರಸ್ಥೇ ಕೃತ್ವಾ ಮೂರ್ತಿಂ ಮಹೀಯಸೀಂ ।
ಉಮಾಯಾಃ ಪೂಜಯಾಮಾಸ ನಾನಾವಸ್ತುಸಮರ್ಪಣೈಃ ॥ ೯ ॥

---

ಹೇಳುವೆನು, ಭಕ್ತಿಯಿಂದ ಕೇಳು. ಹಿಂದೆ ಹೇಳಿದಂತೆ ತಪಸ್ಸಿನ ವಿಧಿಯನ್ನುಪ ದೇಶಿಸಿ ಹರಿ ಮೊದಲಾದ ದೇವತೆಗಳು ತಮ್ಮ ಸ್ಥಾನಗಳಿಗೆ ತೆರಳಲು, ಮುಂದೆ ಹಿಮ ವಂತ ಮತ್ತು ಮೇನಾದೇವಿಯರು ತಪಸ್ಸನ್ನಾಚರಿಸಿದರು. ನಿತ್ಯವೂ ರಾತ್ರಿ ಹಗಲು ದುರ್ಗಾದೇವಿ ಮತ್ತು ಪರಮೇಶ್ವರರನ್ನು ಚಿಂತಿಸುತ್ತಾ ಭಕ್ತಿಯಿಂದ ಆರಾಧಿಸಿದರು.

೬-೮. ಮೇನಾದೇವಿಯು ದೇವಿಯನ್ನೂ, ಶಿವನನ್ನೂ ಸಹ ತುಂಬಾ ಭಕ್ತಿ ಯಿಂದ ಅರ್ಚಿಸಿದಳು. ಅವರ ಪ್ರೀತಿಗಾಗಿ ಬ್ರಾಹ್ಮಣರಿಗೆ ದಾನಮಾಡಿದಳು. ಚೈತ್ರ ಮಾಸದಲ್ಲಿ ಪ್ರಾರಂಭಿಸಿ ಇಪ್ಪತ್ತೇಳು ವರ್ಷಗಳವರೆಗೆ ದೇವಿಯನ್ನು ಪುತ್ರೇಚ್ಛೆಯಿಂದ ಅರ್ಚಿಸಿದಳು. ಅಷ್ಟಮಿಯದಿನ ಉಪವಾಸವಿದ್ದು ನವಮಿಯಲ್ಲಿ ಮೋದಕ, ತಂಬಿಟ್ಟು, ಪಾಯಸ, ಗಂಧ, ಪುಷ್ಪ ಮುಂತಾದುವುಗಳಿಂದ ದೇವಿಯನ್ನು ಅರ್ಚಿಸಿದಳು.

೯-೧೧. ಗಂಗಾನದಿಯ "ಓಷಧಿಪ್ರಸ್ಥ" ವೆಂಬ ದಡದಲ್ಲಿ ದೊಡ್ಡದಾದ ಉಮಾದೇವೀಮೂರ್ತಿಯನ್ನು ಮಾಡಿ ಬಗೆಬಗೆಯ ವಸ್ತುಗಳನ್ನು ಸಮರ್ಪಿಸಿ ಪೂಜಿಸಿದಳು. ಆ ಮೇನಾದೇವಿಯು ಒಮ್ಮೆ ಯಾವ ಆಹಾರವನ್ನೂ ಸೇವಿಸದೆ

ಕದಾಚಿತ್ಸಾ ನಿರಾಹಾರಾ ಕದಾಚಿತ್ಸಾ ಧೃತವ್ರತಾ ।
ಕದಾಚಿತ್ಪವನಾಹಾರಾ ಕದಾಚಿಜ್ಜಲಭುಘ್ಯಭೂತ್ . ॥ ೧೦ ॥

ಶಿವಾವಿನ್ಯಸ್ತಚೇತಸ್ಕಾ ಸಪ್ತವಿಂಶತಿವತ್ಸರಾ್ ।
ನಿನಾಯಾ ಮೇನಕಾ ಪ್ರೀತ್ಯಾ ಪರಂ ಸಾ ಮೃಷ್ಟವರ್ಚಸಾ ॥ ೧೧ ॥

ಸಪ್ತವಿಶಂತಿವರ್ಷಾಂತೇ ಜಗನ್ಮಾತಾ ಜಗನ್ಮಯಿಾ ।
ಸುಪ್ರೀತಾಭವದತ್ಯರ್ಥಮುಮಾ ಶಂಕರಕಾಮಿನೀ ॥ ೧೨ ॥

ಅನುಗ್ರಹಾಯ ಮೇನಾಯಾಃ ಪುರತಃ ಪರಮೇಶ್ವರೀ ।
ಆವಿರ್ಬಭೂವ ಸಾ ದೇವೀ ಸಂತುಷ್ಟಾ ತತ್ಸುಭಕ್ತಿತಃ ॥ ೧೩ ॥

ದಿವ್ಯಾವಯವಸಂಯುಕ್ತಾ ತೇಜೋಮಂಡಲಮಧ್ಯಗಾ ।
ಉವಾಚ ವಿಹಸಂತೀ ಸಾ ಮೇನಾಂ ಪ್ರತ್ಯಕ್ಷತಾಂ ಗತಾ ॥ ೧೪ ॥

॥ ದೇವ್ಯುವಾಚ ॥

ವರಂ ಬ್ರೂಹಿ ಮಹಾಸಾಧ್ವಿ ಯತ್ತೇ ಮನಸಿ ವರ್ತತೇ ।
ಸುಪ್ರಸನ್ನಾ ಚ ತಪಸಾ ತವಾಽಹಂ ಗಿರಿಕಾಮಿನಿ ॥ ೧೫ ॥

---

ದೇವಿಯನ್ನರ್ಚಿಸಿದಳು. ಒಮ್ಮೆ ವಾಯುವನ್ನು ಸೇವಿಸಿಯೂ ಒಮ್ಮೆ ನೀರನ್ನು ಸೇವಿಸಿಯೂ ದೇವಿಯನ್ನರ್ಚಿಸಿದಳು. ಉಮಾದೇವಿಯಲ್ಲೇ ಭಕ್ತಿಯಿಂದ ನಟ್ಟ ಮನಸ್ಸುಳ್ಳವಳಾಗಿ ಆರಾಧಿಸುತ್ತಾ ಇಪ್ಪತ್ತೇಳು ವರ್ಷಗಳನ್ನು ಕಳೆದಳು.

೧೨-೧೪. ಇಪ್ಪತ್ತೇಳು ವರ್ಷಗಳು ಕಳೆದಮೇಲೆ ಜಗನ್ಮಾತೆಯೂ, ಶಂಕರನ ಪ್ರಿಯಮಡದಿಯೂ ಆದ ಉಮಾದೇವಿಯು ಪ್ರಸನ್ನಳಾದಳು. ಮೇನಾದೇವಿಯ ಭಕ್ತಿಗೆ ಸಂತುಷ್ಟಳಾದ ದೇವಿಯು ಮೇನಾದೇವಿಯ ಅನುಗ್ರಹಕ್ಕಾಗಿ ಎದುರಿನಲ್ಲಿಯೇ ಪ್ರತ್ಯಕ್ಷಳಾದಳು. ಅವಳ ಸುತ್ತಲೂ ತೇಜಸ್ಸು ಹರಡಿದ್ದಿತು. ದೇವಿಯು ದಿವ್ಯವಾದ ಅವಯವಗಳಿಂದೊಪ್ಪುತ್ತಿದ್ದಳು. ಇಂತಹ ದೇವಿಯು ಮಂದಹಾಸನವನ್ನು ಬೀರುತ್ತಾ ಮೇನಾದೇವಿಯನ್ನು ಕುರಿತು ಹೀಗೆ ಹೇಳಿದಳು.

೧೫-೧೭. ದೇವಿಯು ಹೇಳಿದಳು:—ಮಹಾಪತಿವ್ರತೆಯಾದ ಎಲೌ ಮೇನಾದೇವಿ, ನಿನಗೆ ಬೇಕಾದವರನ್ನು ಕೇಳಿಕೋ, ನಿನ್ನ ತಪಸ್ಸಿಗೆ ನಾನು ಪ್ರಸನ್ನಳಾಗಿರು

ಯತ್ತ್ವಪ್ರಾರ್ಥಿತಂ ತ್ವಯಾ ಮೇನೇ ತಪೋವ್ರತಸಮಾಧಿನಾ ।
ದಾಸ್ಯೇ ತೇಽಹಂ ಚ ತತ್ಸರ್ವಂ ವಾಂಛಿತಂ ಯದ್ಯದಾ ಭವೇತ್ ॥ ೧೬ ॥

ತತಸ್ಸಾ ಮೇನಕಾ ದೇವೀ ಪ್ರತ್ಯಕ್ಷಾಂ ಕಾಲಿಕಾಂ ತದಾ ।
ದೃಷ್ಟ್ವಾ ಚ ಪ್ರಣನಾಮಾಥ ವಚನಂ ಚೇದಮಬ್ರವೀತ್ ॥ ೧೭ ॥

॥ ಮೇನೋವಾಚ ॥

ದೇವಿ ಪ್ರತ್ಯಕ್ಷತೋ ರೂಪಂ ದೃಷ್ಟಂ ತವ ಮಯಾಧುನಾ ।
ತ್ವಾಮಹಂ ಸ್ತೋತುಮಿಚ್ಛಾಮಿ ಪ್ರಸನ್ನಾ ಭವ ಕಾಲಿಕೇ ॥ ೧೮ ॥

॥ ಬ್ರಹ್ಮೋವಾಚ ॥

ಅಥ ಸಾ ಮೇನಯೇತ್ಯುಕ್ತಾ ಕಾಲಿಕಾ ಸರ್ವಮೋಹಿನೀ ।
ಬಾಹುಭ್ಯಾಂ ಸುಪ್ರಸನ್ನಾತ್ಮಾ ಮೇನಕಾಂ ಪರಿಷಸ್ವಜೇ ॥ ೧೯ ॥

ತತಃ ಪ್ರಾಪ್ತಮಹಾಜ್ಞಾನಾ ಮೇನಕಾ ಕಾಲಿಕಾಂ ಶಿವಾಂ ।
ತುಷ್ಟಾವ ವಾಗ್ಭಿರಿಷ್ಟಾಭಿರ್ಭಕ್ತ್ಯಾ ಪ್ರತ್ಯಕ್ಷತಾಂ ಗತಾಂ ॥ ೨೦ ॥

---

ವೆನು. ಎಲೌ ಮೇನಕೆ, ತಪೋವ್ರತಸಮಾಧಿಯಲ್ಲಿ ನೀನೇನನ್ನು ಪ್ರಾರ್ಥಿಸಿಕೊಂಡಿರುವೆಯೋ ಅದೆಲ್ಲವನ್ನೂ ಅನುಗ್ರಹಿಸುವೆನು. ಎನ್ನಲು, ಆ ಮೇನಾದೇವಿಯು ಪ್ರತ್ಯಕ್ಷಳಾದ ಉಮಾದೇವಿಯನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ,

೧೮. ಮೇನಾದೇವಿಯು ಹೇಳಿದಳು:—ಓ ದೇವಿ, ನಿನ್ನ ದಿವ್ಯರೂಪವನ್ನು ಪ್ರತ್ಯಕ್ಷವಾಗಿ ನಾನು ನೋಡಿದೆನು. ಈಗ ನಿನ್ನನ್ನು ಸ್ತುತಿಸಲಿಚ್ಛಿಸುವೆನು. ನೀನು ಪ್ರಸನ್ನಳಾಗು.

೧೯-೨೦. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಮೇನಾದೇವಿಯು ಹೇಳಿದ ಮಾತನ್ನು ಕೇಳಿ ಕಾಲಿಕಾದೇವಿಯು ಮತ್ತೂ ಪ್ರಸನ್ನಳಾಗಿ ಮೇನಾದೇವಿಯನ್ನು ಬಾಹುಗಳಿಂದ ಆಲಿಂಗಿಸಿದಳು. ಆಗ ಮೇನೆಯು ಮಹಾಜ್ಞಾನವುಳ್ಳವಳಾಗಿ ಪ್ರಿಯವಾದ ವಾಕ್ಯಗಳಿಂದ ದೇವಿಯನ್ನು ಹೀಗೆ ಸ್ತುತಿಸಿದಳು.

॥ ಮೇನೋವಾಚ ॥

ಮಹಾಮಾಯಾಂ ಜಗದ್ಧಾತ್ರೀಂ ಚಂಡಿಕಾಂ ಲೋಕಧಾರಿಣೀಂ ।
ಪ್ರಣಮಾಮಿ ಮಹಾದೇವೀಂ ಸರ್ವಕಾಮಾರ್ಥದಾಯಿನೀಂ ॥ ೨೧ ॥

ನಿತ್ಯಾನಂದಕರೀಂ ಮಾಯಾಂ ಯೋಗನಿದ್ರಾಂ ಜಗತ್ಪ್ರಸೂಂ ।
ಪ್ರಣಮಾಮಿ ಸದಾ ಸಿದ್ಧಾಂ ಶುಭಸಾರಸಮಾಲಿನೀಂ ॥ ೨೨ ॥

ಮಾತಾಮಹೀಂ ಸದಾನಂದಾಂ ಭಕ್ತಶೋಕವಿನಾಶಿನೀಂ ।
ಆಕಲ್ಪಂ ವನಿತಾನಾಂ ಚ ಪ್ರಾಣಿನಾಂ ಬುದ್ಧಿರೂಪಿಣೀಂ ॥ ೨೩ ॥

ಸಾ ತ್ವಂ ಬಂಧಚ್ಛೇದಹೇತುರ್ಯತೀನಾಂ
ಕಸ್ತೇ ಗೇಯೋ ಮಾದೃಶೀಭಿಃ ಪ್ರಭಾವಃ ।
ಹಿಂಸಾ ಯಾ ವಾಥರ್ವವೇದಸ್ಯ ಸಾ ತ್ವಂ
ನಿತ್ಯಂ ಕಾಮಂ ತ್ವಂ ಮಮೇಷ್ಟಂ ವಿಧೇಹಿ ॥ ೨೪ ॥

ನಿತ್ಯಾನಿತ್ಯೈರ್ಭಾವಹೀನೈಃ ಪರಾಸ್ತೈ
ಸ್ತತ್ತನ್ಮಾತ್ರೈರ್ಯೋಜ್ಯತೇ ಭೂತವರ್ಗಃ ।

---

೨೧-೨೩. ಮೇನಾದೇವಿಯು ಸ್ತುತಿಸಿದಳು :—ಓ ದೇವಿ, ನೀನು ಮಹಾಮಾಯೆಯು. ಜಗತ್ತನ್ನು ಸೃಷ್ಟಿಸುವಳು. ಪಾಪಿಗಳಿಗೆ ಭಯಂಕರಳು. ಲೋಕವನ್ನೆಲ್ಲಾ ರಕ್ಷಿಸುನವಳು. ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವವಳು. ನಿತ್ಯಾನಂದ (ಮುಕ್ತಿಯ) ವನ್ನುಂಟುಮಾಡುವಳು. ಯೋಗನಿದ್ರೆಯು, ಜಗನ್ಮಾತೆಯು, ಸಿದ್ಧಳು. ಜಗತ್ತಿನಲ್ಲಿ ಸ್ಥಿರವಾದ ವಸ್ತುವು ನೀನು. ನೀನೇ ಜಗತ್ತಿಗೆ ಮಾತಾಮಹಿ (ಅಜ್ಜಿ) ಯು. ನೀನು ಆನಂದಸ್ವರೂಪಳು. ಭಕ್ತರ ದುಃಖವನ್ನು ನಾಶಮಾಡುವವಳು. ಕಲ್ಪಾಂತದವರಿಗೂ ಸ್ತ್ರೀಪುರುಷರಿಗಿರುವ ಬುದ್ಧಿಸ್ವರೂಪಳು. ಇಂತಹ ನಿನ್ನನ್ನು ಭಕ್ತಿಯಿಂದ ನಮಸ್ಕರಿಸುವೆನು.

೨೪-೨೫. ಯತಿಗಳು ನಿನ್ನಿಂದ ಮುಕ್ತಿಯನ್ನು ಪಡೆಯುವರು. ಇಂತಹ ನೀನು ನಮ್ಮಂತಹವರ ಬಳಿಗೆ ಬರುವುದೆಂದರೇನು? ಆದರೂ ಇದು ನಿನ್ನ ಪ್ರಭಾವವು, ಅನುಗ್ರಹವು. ಅಥರ್ವವೇದದಲ್ಲಿ ಹೇಳುವ ಹಿಂಸೆಯು ನೀನು. ಇಂತಹ ನೀನು ನನ್ನ ಇಷ್ಟವು ಸಿದ್ಧಿಸುವಂತೆ ಮಾಡು. ನಿತ್ಯಾನಿತ್ಯರೂಪಗಳಾದ ಸೂಕ್ಷ್ಮ

ತೇಷಾಂ ಶಕ್ತಿಸ್ತ್ವಂ ಸದಾ ನಿತ್ಯರೂಪಾ
ಕಾಲೇ ಯೋಷಾ ಯೋಗಯುಕ್ತಾ ಸಮರ್ಥಾ ॥ ೨೫ ॥

ಯೋನಿರ್ಧರಿತ್ರೀ ಜಗತಾಂ ತ್ವಮೇವ
ತ್ವಮೇವ ನಿತ್ಯಾ ಪ್ರಕೃತಿಃ ಪರಸ್ತಾತ್ ।
ಯಥಾ ವಶಂ ಕ್ರಿಯತೇ ಬ್ರಹ್ಮರೂಪಂ
ಸಾ ತ್ವಂ ನಿತ್ಯಾ ಮೇ ಪ್ರಸೀದಾದ್ಯ ಮಾತಃ ॥ ೨೬ ॥

ತ್ವಂ ಜಾತವೇದೋಗತಶಕ್ತಿರುಗ್ರಾ
ತ್ವಂ ದಾಹಿಕಾ ಸೂರ್ಯಕರಸ್ಯ ಶಕ್ತಿ ।
ಆಹ್ಲಾದಿಕಾ ತ್ವಂ ಬಹು ಚಂದ್ರಿಕಾ ಯಾ
ತಾಂ ತ್ವಾಮಹಂ ಸ್ತೌಮಿ ನಮಾಮಿ ಚಂಡೀಂ ॥ ೨೭ ॥

ಯೋಷಾಣಾಂ ಸತ್ಪ್ರಿಯಾ ಚ ತ್ವಂ ನಿತ್ಯಾ ತ್ವಂ ಚೋರ್ಧ್ವರೇತಸಾಂ ।
ವಾಂಛಾ ತ್ವಂ ಸರ್ವಜಗತಾಂ ಮಾಯಾ ಚ ತ್ವಂ ಯಥಾ ಹರೇಃ ॥ ೨೮ ॥

ಯಾ ಚೇಷ್ಟರೂಪಾಣಿ ವಿಧಾಯ ದೇವೀ
ಸೃಷ್ಟಿಸ್ಥಿತೀನಾಶಮಯೀ ಚ ಕರ್ತ್ರೀ ।

---

ಭೂತಗಳಿಂದ ಸಕಲಮಹಾಭೂತಗಳೂ ಆಗುವುವು. ಆ ಸೂಕ್ಷ್ಮಭೂತಗಳು ಮಹಾಭೂತಗಳಾಗುವಂತೆ ಆಯಾಯ ಕಾಲಗಳಲ್ಲಿ ಸೇರಿಸುವ ಯೋಗಶಕ್ತಿಯು ನೀನು.

೨೬–೨೭. ಓ ದೇವಿ, ನೀನು ಜಗತ್ತಿಗೆ ಕಾರಣಳು, ಜಗತ್ತು ನಿನ್ನಲ್ಲಿಯೇ ನಿಂತಿರುವುದು. ಸಾಂಖ್ಯರು ಹೇಳುವ ಪ್ರಕೃತಿಯೂ ನೀನು, ಪುರುಷನೂ ನೀನು, ನೀನು ನಿತ್ಯಳು. ನೀನು ಬ್ರಹ್ಮವಸ್ತುವನ್ನು ದೊರಕಿಸಿಕೊಡುವೆ. ಇಂತಹ ಓ ಮಾತೆಯೇ, ಪ್ರಸನ್ನಳಾಗು. ಓ ದೇವಿ, ಅಗ್ನಿಯಲ್ಲಿರುವ ಜ್ವಲನಶಕ್ತಿಯೂ ಸೂರ್ಯನಲ್ಲಿರುವ ತಾಪನಶಕ್ತಿಯೂ, ಚಂದ್ರನಲ್ಲಿರುವ ಆಹ್ಲಾದನಶಕ್ತಿಯೂ ನೀನು. ಇಂತಹ ನಿನ್ನನ್ನು ಸ್ತುತಿಸುವೆನು.

೨೮. ಸ್ತ್ರೀಯರಲ್ಲಿ ಉತ್ತಮಪ್ರಿಯೆಯು (ಶಂಕರನಿಗೆ) ನೀನು. ಯತಿಗಳಿಗೆ ನೀನು ನಿತ್ಯಶಕ್ತಿಯು. ಎಲ್ಲಾ ಪ್ರಾಣಿಗಳ ಆಶೆಯು ನೀನು. ಹರಿಯನ್ನಾವರಿಸಿರುವ ಮಾಯೆಯು ನೀನು.

ಬ್ರಹ್ಮಾಚ್ಯುತಸ್ಥಾಣುಶರೀರಹೇತುಃ
ಸಾ ತ್ವಂ ಪ್ರಸೀದಾದ್ಯ ಪುನರ್ನಮಸ್ತೇ ॥ ೨೯ ॥

॥ ಬ್ರಹ್ಮೋವಾಚ ॥

ತತ ಇತ್ಥಂ ಸ್ತುತಾ ದುರ್ಗಾ ಕಾಲಿಕಾ ಪುನರೇವ ಹಿ ।
ಉವಾಚ ಮೇನಕಾಂ ದೇವೀಂ ವಾಂಛಿತಂ ವರಯೇತ್ಯುತ ॥ ೩೦ ॥

ಪ್ರಾಣಪ್ರಿಯಾ ಮಮ ತ್ವಂ ಹಿ ಹಿಮಾಚಲವಿಲಾಸಿನಿ ।
ಯದಿಚ್ಛಸಿ ಧ್ರುವಂ ದಾಸ್ಯೇ ನಾದೇಯಂ ವಿದ್ಯತೇ ಮಮ ॥ ೩೧ ॥

ಇತಿ ಶ್ರುತ್ವಾ ಮಹೇಶಾನ್ಯಾಃ ಪಿಯೂಷಸದೃಶಂ ವಚಃ ।
ಉವಾಚ ಪರಿತುಷ್ಟಾ ಸಾ ಮೇನಕಾ ಗಿರಿಕಾಮಿನೀ ॥ ೩೨ ॥

॥ ಮೇನೋವಾಚ ॥

ಶಿವೇ ಜಯ ಜಯ ಪ್ರಾಜ್ಞೇ ಮಹೇಶ್ವರಿ ಭವಾಂಬಿಕೇ ।
ವರಯೋಗ್ಯಾಸ್ಮ್ಯಹಂ ಚೇತ್ತೇ ವೃಣೇ ಭೂಯೋ ವರಂ ವರಂ ॥ ೩೩ ॥

---

೨೯. ಓ ದೇವಿ, ನೀನು ಆಯಾಯ ಕಾಲದಲ್ಲಿ ಬೇಕಾದ ರೂಪಗಳನ್ನು ಧರಿಸಿ ಸೃಷ್ಟಿ, ಸ್ಥಿತಿ (ಪಾಲನೆ) ಪ್ರಳಯಗಳನ್ನು ಮಾಡುವೆ. ಬ್ರಹ್ಮ, ವಿಷ್ಣು, ರುದ್ರ ಇವರ ಶರೀರಗಳಿಗೂ ನೀನೇ ಕಾರಣಳು. ಓ ದೇವಿ, ಪ್ರಸನ್ನಳಾಗು. ನಿನಗೆ ನಮಸ್ಕಾರವು, ಎಂದು ಸ್ತೋತ್ರಮಾಡಿದಳು.

೩೦-೩೨. ಬ್ರಹ್ಮನು ಹೇಳಿದನು:—ಹೀಗೆ ಮೇನಕೆಯು ಸ್ತುತಿಸಲು, ದುರ್ಗಾದೇವಿಯು ಪ್ರಸನ್ನಳಾಗಿ ಹೀಗೆ ಹೇಳಿದಳು:—"ಹಿಮವಂತನ ಪ್ರಿಯ ಮಡದಿಯಾದ ಎಲೌ ಮೇನಾದೇವಿ, ಬೇಕಾದ ವರವನ್ನು ಕೇಳು, ನೀನು ನನಗೆ ತುಂಬಾ ಪ್ರಿಯಳು. ನೀನು ಅಪೇಕ್ಷಿಸಿದುದನ್ನು ಕೊಡುವೆನು. ನಿನಗೆ ಕೊಡಬಾರದಂತಹ ವರವಾವುದೂ ಇಲ್ಲ" ಎನ್ನಲು, ಮಹೇಶ್ವರಿಯ ಅಮೃತಮಯವಾದ ಈ ಮಾತನ್ನು ಕೇಳಿ ಮೇನಾದೇವಿಯು ಸಂತುಷ್ಟಳಾಗಿ ಹೀಗೆ ಹೇಳಿದಳು.

೩೩-೩೬. ಮೇನಾದೇವಿಯು ಹೇಳಿದಳು:—ಸರ್ವಜ್ಞಳಾದ ಓ ಮಹೇಶ್ವರಿ, ನಿನಗೆ ಜಯವಾಗಲಿ, ಸರ್ವೋತ್ಕರ್ಷದಿಂದಿರು. ಓ ಮಾತೆ, ವರಗಳಿಗೆ ನಾನು

ಪ್ರಥಮಂ ಶತಪುತ್ರಾ ಮೇ ಭವಂತು ಜಗದಂಬಿಕೇ ।
ಬಹ್ವಾಯುಷೋ ವೀರ್ಯವಂತ ಋದ್ಧಿಸಿದ್ಧಿಸಮನ್ವಿತಾಃ ॥ ೩೪ ॥

ಪಶ್ಚಾತ್ತಥೈಕಾ ತನಯಾ ಸ್ವರೂಪಗುಣಶಾಲಿನೀ ।
ಕುಲದ್ವಯಾನಂದಕರೀ ಭುವನತ್ರಯಪೂಜಿತಾ ॥ ೩೫ ॥

ಸುತಾ ಭವ ಮಮ ಶಿವೇ ದೇವಕಾರ್ಯಾರ್ಥಮೇವ ಹಿ ।
ರುದ್ರಪತ್ನೀ ಭವ ತಥಾ ಲೀಲಾಂ ಕುರು ಭವಾಂಬಿಕೇ ॥ ೩೬ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ಮೇನಕೋಕ್ತಂ ಹಿ ಪ್ರಾಹ ದೇವೀ ಪ್ರಸನ್ನಧೀಃ ।
ಸ್ಮಿತಪೂರ್ವಂ ವಚಸ್ತಸ್ಯಾಃ ಪೂರಯಂತೀ ಮನೋರಥಂ ॥ ೩೭ ॥

॥ ದೇವ್ಯುವಾಚ ॥

ಶತಪುತ್ರಾಃ ಸಂಭವಂತು ಭವತ್ಯಾ ವೀರ್ಯಸಂಯುತಾಃ ।
ತತ್ರೈಕೋ ಬಲವಾನ್ ಮುಖ್ಯಃ ಪ್ರಥಮಂ ಸಂಭವಿಷ್ಯತಿ ॥ ೩೮ ॥

---

ಯೋಗ್ಯಳಾಗಿದ್ದರೆ ಈ ವರವನ್ನು ಕೇಳುವೆನು. ಮೊದಲು ನನಗೆ ನೂರುಜನ ಪುತ್ರರು ಜನಿಸಬೇಕು. ಅವರೆಲ್ಲರೂ ದೀರ್ಘಾಯುಷ್ಮಂತರೂ, ಬಲಶಾಲಿಗಳೂ, ಸರ್ವಸಮೃದ್ಧಿಯುಳ್ಳವರೂ ಆಗಿರಬೇಕು. ಆಮೇಲೆ ಓರ್ವ ಪುತ್ರಿಯು ಜನಿಸಬೇಕು. ಅವಳು ರೂಪಗುಣಗಳಿಂದ ಕೂಡಿ ಮಾತೃಕುಲ ಪಿತೃಕುಲಗಳೆಡರಕ್ಕೂ ಆನಂದ ವನ್ನುಂಟುಮಾಡುವವಳಾಗಿರಬೇಕು. ಮೂರು ಲೋಕಗಳೂ ಅವಳನ್ನು ಪೂಜಿಸ ಬೇಕು. ಓ ದೇವಿ, ದೇವತೆಗಳ ಕಾರ್ಯಕ್ಕಾಗಿ ನೀನೇ ನನ್ನ ಪುತ್ರಿಯಾಗಿ ಜನಿಸು. ಆಮೇಲೆ ರುದ್ರನ ಪ್ರಿಯಮಡದಿಯಾಗಿ ಬೇಕಾದಂತಹ ಲೀಲೆಯನ್ನಾಚರಿಸು, ಎಂದು ಪ್ರಾರ್ಥಿಸಿದಳು

೩೭. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಮೇನಕೆಯು ಹೇಳಿದ ಮಾತನ್ನು ಕೇಳಿ ದೇವಿಯು ಮಂದಹಾಸವನ್ನು ಬೀರಿ ಪ್ರಸನ್ನತೆಯಿಂದ ಹೀಗೆ ಹೇಳಿದಳು.

೩೮-೩೯. ದೇವಿಯು ಹೇಳಿದಳು:—ಎಲೌ ಮೇನಾದೇವಿ, ನೀನು ಕೇಳಿ ದಂತೆ ನಿನಗೆ ನೂರುಜನ ಬಲಿಷ್ಠರಾದ ಪುತ್ರರು ಜನಿಸುವರು. ಅವರಲ್ಲಿಯೂ

ಸುತಾಹಂ ಸಂಭವಿಷ್ಯಾಮಿ ಸಂತುಷ್ಟಾ ತವ ಭಕ್ತಿತಃ ।
ದೇವಕಾರ್ಯಂ ಕರಿಷ್ಯಾಮಿ ಸೇವಿತಾ ನಿಖಿಲೈಸ್ಸುರೈಃ ॥ ೩೯ ॥

॥ ಬ್ರಹ್ಮೋವಾಚ ॥

ಏವಮುಕ್ತ್ವಾ ಜಗದ್ಧಾತ್ರೀ ಕಾಲಿಕಾ ಪರಮೇಶ್ವರೀ ।
ಪಶ್ಯಂತ್ಯಾ ಮೇನಕಾಯಾಸ್ತು ತತ್ರೈವಾಂತರ್ದಧೇ ಶಿವಾ ॥ ೪೦ ॥

ಮೇನಕಾಪಿ ವರಂ ಲಬ್ಧ್ವಾ ಮಹೇಶಾನ್ಯಾ ಅಭೀಪ್ಸಿತಂ ।
ಮುದಂ ಪ್ರಾಪಾಮಿತಾಂ ತಾತ ತಪಃಕ್ಲೇಶೋಽಪ್ಯನಶ್ಯತ ॥ ೪೧ ॥

ದಿಶಿ ತಸ್ಯಾಂ ನಮಸ್ಕೃತ್ಯ ಸುಪ್ರಹೃಷ್ಟಮನಾಸ್ಸತೀ ।
ಜಯಶಬ್ದಂ ಪ್ರೋಚ್ಚರಂತೀ ಸ್ವಸ್ಥಾನಂ ಪ್ರವಿವೇಶ ಹ ॥ ೪೨ ॥

ಅಥ ತಸ್ಮೈ ಸ್ವಪತಯೇ ಶಶಂಸ ಸುವರಂ ಚ ತಂ ।
ಸ್ವಚಿಹ್ನಬದ್ಧಮಿವ ವೈ ಸುವಾಚಾ ಪುನರುಕ್ತಯಾ ॥ ೪೩ ॥

ಶ್ರುತ್ವಾ ಶೈಲಪತಿರ್ಹರ್ಷ್ಟೋಽಭವನ್ಮೇನಾವಚೋ ಹಿ ತತ್ ।
ಪ್ರಶಶಂಸ ಪ್ರಿಯಾಂ ಪ್ರೀತ್ಯಾ ಶಿವಾಭಕ್ತಿರತಾಂ ಚ ತಾಂ ॥ ೪೪ ॥

---

ಮೊದಲನೆಯವನು ತುಂಬಾ ಬಲವಂತನಾಗಿ ಜನಿಸುವನು. ನಿನ್ನ ಭಕ್ತಿಗೆ ಸಂತುಷ್ಟಳಾದ ನಾನು ನಿನ್ನ ಪುತ್ರಿಯಾಗಿ ಜನಿಸುವೆನು. ದೇವತೆಗಳಿಂದ ಸೇವಿಸಲ್ಪಟ್ಟು ಅವರ ಕಾರ್ಯವನ್ನು ನಿರ್ವಹಿಸುವೆನು ಎಂದಳು.

೪೦-೪೨. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಜಗನ್ಮಾತೆಯಾದ ಪರಮೇಶ್ವರಿಯು ಮೇನಾದೇವಿಯು ನೋಡುತ್ತಿರುವಂತೆ ಅಲ್ಲಿಯೇ ಅಂತರ್ಧಾನಳಾದಳು. ಮೇನಾದೇವಿಯೂ ಬೇಕಾದ ವರವು ಲಭಿಸಿದುದರಿಂದ ತುಂಬಾ ಹರ್ಷಗೊಂಡಳು. ಅವಳ ತಪಸ್ಸಿನ ಕ್ಲೇಶವು ಆಗಲೇ ಮಾಯವಾಯಿತು. ಮುಂದೆ ಆ ಮೇನಾದೇವಿಯು, ಮಹೇಶ್ವರಿಯು ಅಂತರ್ಧಾನಳಾದ ದಿಕ್ಕಿನಲ್ಲಿ ನಮಸ್ಕರಿಸಿ ಜಯಶಬ್ದವನ್ನುಚ್ಚರಿಸುತ್ತಾ ತನ್ನರಮನೆಗೆ ತೆರಳಿದಳು.

೪೩-೪೪. ಅಲ್ಲಿ ತನ್ನ ಪತಿಯಾದ ಹಿಮವಂತನಿಗೆ ದೇವಿಯಿಂದ ವರ ಪಡೆದುದನ್ನು ಆದರದಿಂದ ಪುನಃ ಪುನಃ ಹೇಳಿದಳು. ಆ ಮೇನಾದೇವಿಯು ಮಾತನ್ನು ಕೇಳಿ ಹಿಮವಂತನು ತುಂಬಾ ಹರ್ಷಗೊಂಡನು ದೇವೀಭಕ್ತಳಾದ ತನ್ನ ಪತ್ನಿ ಮೇನಾದೇವಿಯನ್ನು ತುಂಬಾ ಪ್ರಶಂಸಿಸಿದನು.

ಕಾಲಕ್ರಮೇಣಾಥ ತಯೋಃ ಪ್ರವೃತ್ತೇ ಸುರತೇ ಮುನೇ ।
ಗರ್ಭೋऽಭೂದ್ ಬಭೂವ ಮೇನಾಯಾ ವವೃಧೇ ಪ್ರತ್ಯಹಂ ತತಃ ॥ ೪೫ ॥

ಅಸೂತ ಸಾ ನಾಗವಧೂಪಭೋಗ್ಯಂ ಸುತಮುತ್ತಮಂ ।
ಸಮುದ್ರಬದ್ಧಸತ್ಸಖ್ಯಂ ಮೈನಾಕಾಭಿಧಮದ್ಭುತಂ ॥ ೪೬ ॥

ವೃತ್ರಶತ್ರಾವಪಿ ಕುದ್ಧೋऽವೇದ ನಾಜ್ಞಂ ಸಪಕ್ಷಕಂ ।
ಪವಿಕ್ಷತಾನಾಂ ದೇವರ್ಷೇ ಪಕ್ಷಚ್ಛಿದಿ ವರಾಂಗಕಂ ॥ ೪೭ ॥

ಪ್ರವರಂ ಶತಪುತ್ರಾಣಾಂ ಮಹಾಬಲಪರಾಕ್ರಮಂ ।
ಸ್ವೋದ್ಭವಾನಾಂ ಮಹೀಧ್ರಾಣಾಂ ಪರ್ವತೇಂದ್ರೈಕಧಿಷ್ಠಿತಂ ॥ ೪೮ ॥

ಆಸೀನ್ಮಹೋತ್ಸವಸ್ತತ್ರ ಹಿಮಾಚಲಪುರೇऽದ್ಭುತಃ ।
ದಂಪತ್ಯೋಃ ಪ್ರಮುದಾಧಿಕ್ಯಂ ಬಭೂವ ಕ್ಲೇಶಸಂಕ್ಷಯಃ ॥ ೪೯ ॥

---

೪೫-೪೮. ಹೀಗಿರಲು ಯೋಗ್ಯವಾದ ಕಾಲದಲ್ಲಿ ಆ ಹಿಮವಂತಮೇನಾದೇವಿಯರು ಸಂಭೋಗವನ್ನು ನಡೆಸಲು ಕೆಲವು ಕಾಲದಲ್ಲಯೇ ಮೇನಾದೇವಿಗೆ ಗರ್ಭೋತ್ಪತ್ತಿಯಾಗಿ ಬೆಳೆಯತೊಡಗಿತು. ಮುಂದೊಂದು ಶುಭದಿವಸದಲ್ಲಿ ಮೇನಾದೇವಿಯು ಪುತ್ರರತ್ನವೊಂದನ್ನು ಹಡೆದಳು. ಅವನ ಹೆಸರು "ಮೈನಾಕ" ನೆಂದು. ಮುಂದೆ ಆ ಮೈನಾಕನು ನಾಗಕನ್ಯೆಯರ ಭೋಗವನ್ನನುಭವಿಸುತ್ತಾ ಪಾತಾಳದಲ್ಲಿ ನೆಲಸಿದನು. ಸಮುದ್ರನಿಗೂ ಅವನಿಗೂ ದೃಢವಾದ ಸಖ್ಯವಾಯಿತು. ಇದರಿಂದ ಕೋಪಗೊಂಡು ಇಂದ್ರನು ವಜ್ರಾಯುಧವನ್ನು ಹಿಡಿದು ಪರ್ವತಗಳ ರೆಕ್ಕೆಗಳನ್ನು ಕತ್ತರಿಸತೊಡಗಿದರೂ ಈ ಮೈನಾಕನಿಗೆ ಆ ವಜ್ರಾಯುಧದ ಪ್ರಹಾರವೇ ತಾಕಲಿಲ್ಲ. ಇಂದೂ ಆ ಮೈನಾಕನು ರೆಕ್ಕೆಗಳುಳ್ಳವನಾಗಿಯೇ ಇರುವನು. ಇವನೇ ಮೇನಾದೇವಿಯ ನೂರು ಮಕ್ಕಳಲ್ಲಿ ಶ್ರೇಷ್ಠನು. ಮಹಾ ಬಲಿಷ್ಠನು. ಅನೇಕ ಪರ್ವತಗಳಿಗಾಶ್ರಯನಾಗಿರುವನು.

೪೯-೫೦. ಆಗ ಹಿಮವಂತನರಮನೆಯಲ್ಲಿ ಮಹಾ ಉತ್ಸವವಾಯಿತು. ಮೇನಾದೇವೀಹಿಮವಂತರು ತುಂಬಾ ಹರ್ಷಗೊಂಡರು. ಅವರೀರ್ವರಿಗೂ ಉಮಾ

ದಾನಂ ದದೌ ದ್ವಿಜಾತಿಭ್ಯೋऽನ್ಯೇಭ್ಯಶ್ಚ ಪ್ರದದೌ ಧನಂ ।
ಶಿವಾಶಿವಪದದ್ವಂದ್ವೇ ಸ್ನೇಹೋऽಭೂದಧಿಕಸ್ತಯೋಃ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಮೇನಾವರಲಾಭವರ್ಣನಂ
ನಾಮ ಪಂಚಮೋऽಧ್ಯಾಯಃ



---

ದೇವಿ ಮತ್ತು ಶಂಕರರಲ್ಲಿ ಭಕ್ತಿಯು ಹೆಚ್ಚಿತು. ಹಿಮವಂತನು ಬ್ರಾಹ್ಮಣರಿಗೂ ದರಿದ್ರರಿಗೂ ಯಥೇಚ್ಛವಾಗಿ ಧನವನ್ನು ದಾನಮಾಡಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಮೇನಾವರಲಾಭವರ್ಣನವೆಂಬ
ಐದನೆಯ ಅಧ್ಯಾಯುವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಷಷ್ಠೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥ ಸಂಸ್ಮರತುರ್ಭಕ್ತ್ಯಾ ದಂಪತೀ ತೌ ಭವಾಂಬಿಕಾಂ ।
ಪ್ರಸೂತಿಹೇತವೇ ತತ್ರ ದೇವಕಾರ್ಯಾರ್ಥಮಾದರಾತ್ ॥ ೧ ॥

ತತಸ್ಸಾ ಚಂಡಿಕಾ ಯೋಗಾತ್ತ್ಯಕ್ತ್ವದೇಹಾ ಪುರಾ ಪಿತುಃ ।
ಈಹಯಾ ಭವಿತುಂ ಭೂಯಸ್ಸಮೈಚ್ಛದ್ಗಿರಿದಾರತಃ ॥ ೨ ॥

ಸತ್ಯಂ ವಿಧಾತುಂ ಸ್ವವಚಃ ಪ್ರಸನ್ನಾಖಿಲಕಾಮದಾ ।
ಪೂರ್ಣಾಂಶಾಚ್ಛೈಲಚಿತ್ತೇ ಸಾ ವಿವೇಶಾಥ ಮಹೇಶ್ವರೀ ॥ ೩ ॥

---

## ಆರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದನೆ, ಅನಂತರ ಆ ಹಿಮವಂತ ಮತ್ತು ಮೇನಾದೇವಿಯರು, ಮಹೇಶ್ವರಿಯು ದೇವಕಾರ್ಯಕ್ಕಾಗಿ ತಮ್ಮ ಮಗಳಾಗಿ ಜನಿಸುವಂತೆ ಅವಳನ್ನು ಭಕ್ತಿಯಿಂಡ ಧ್ಯಾನಿಸಿದರು.

೨-೪. ಬಳಿಕ ತಂದೆಯಿಂದ ಅವಮಾನಿತಳಾಗಿ ಯೋಗಸಮಾಧಿಯಿಂದ ಶರೀರವನ್ನು ತ್ಯಜಿಸಿದ ಉಮಾದೇವಿಯು ತನ್ನ ಮಾತನ್ನು ಸತ್ಯವಾಗಿ ಮಾಡಲು ಹಿಮವಂತನ ಪತ್ನಿಯಲ್ಲಿ ಜನಿಸಲು ಸಂಕಲ್ಪಮಾಡಿದಳು, ಆ ಮೇನಾದೇವಿಯು ಹಿಮವಂತನ ಮನಸ್ಸಿನಲ್ಲಿ ಪೂರ್ಣಾಂಶದಿಂದ ನೆಲಸಿದಳು. ಆಗ ಹಿಮವಂತನು

ವಿರರಾಜ ತತಸ್ಸೋऽತಿ ಪ್ರಮುದೋऽಪೂರ್ವಸುದ್ಯುತಿಃ ।
ಹುತಾಶನ ಇವಾಧೃಷ್ಯಸ್ತೇಜೋರಾಶಿರ್ಮಹಾಮನಾಃ ॥ ೪ ॥

ತತೋ ಗಿರಿಃ ಸ್ವಪ್ರಿಯಾಯಾಂ ಪರಿಪೂರ್ಣಂ ಶಿವಾಂಶಕಂ ।
ಸಮಾಧಿಮತ್ತ್ವಾತ್ಸಮಯೇ ಸಮಧತ್ತ ಸುಶಂಕರೇ ॥ ೫ ॥

ಸಮಧತ್ತ ಗಿರೇಃ ಪತ್ನೀ ಗರ್ಭಂ ದೇವ್ಯಾಃ ಪ್ರಸಾದತಃ ।
ಚಿತ್ತೇ ಸ್ಥಿತಾಯಾಃ ಕರುಣಾಕರಾಯಾಃ ಸುಖದಂ ಗಿರೇಃ ॥ ೬ ॥

ಗಿರಿಪ್ರಿಯಾ ಸರ್ವಜಗನ್ನಿವಾಸಾಸಂಶ್ರಯಾಧಿಕಂ ।
ವಿರೇಜೇ ಸುತರಾಂ ಮೇನಾ ತೇಜೋಮಂಡಲಗಾ ಸದಾ ॥ ೭ ॥

ಉಪೋದಯಂ ಸ್ವಭರ್ತುಶ್ಚ ಮೇನಾ ದೌಹೃದಲಕ್ಷಣಂ ।
ದಧೌ ನಿದಾನಂ ದೇವಾನಾಮಾನಂದಸ್ಯೇಪ್ಸಿತಂ ಶುಭಂ ॥ ೮ ॥

ದೇಹಸಾದಾದಸಂಪೂರ್ಣಭೂಷಣಾ ಲೋಧ್ರಸಂಮುಖಾ ।
ಸ್ವಲ್ಪಭೇಂದುಕ್ಷಯೇಕಾಸೌ ವಿಚೇಷ್ಟ್ಯಕ್ಷ್ಯಾ ವಿಭಾವರೀ ॥ ೯ ॥

---

ತುಂಬಾ ಹರ್ಷವುಳ್ಳವನೂ, ಕಾಂತಿಮಂತನೂ, ಅಗ್ನಿಯಂತೆ ತೇಜಸ್ವಿಯೂ ಆಗಿ ಪ್ರಕಾಶಿಸಿದನು.

೫-೭. ಬಳಿಕ ಹಿಮವಂತನು ಒಂದು ಶುಭಮುಹೂರ್ತದಲ್ಲಿ ದೇವಿಯ ಅಂಶವುಳ್ಳ ವೀರ್ಯವನ್ನು ತನ್ನ ಪ್ರಿಯೆಯಾದ ಮೇನಾದೇವಿಯಲ್ಲಿ ನಿಷೇಕಿಸಿದನು. ದೇವಿಯ ಅನುಗ್ರಹದಿಂದ ಮೇನಾದೇವಿಯು ದೇವಿಯ ಅಂಶವುಳ್ಳ ಗರ್ಭವನ್ನು ಧರಿಸಿದಳು. ದೇವಿಯನ್ನು ಗರ್ಭದಲ್ಲಿ ಧರಿಸಿದ ಮೇನಕೆಯು ಆಗ ತೇಜಸ್ವಿನಿಯಾಗಿ ಪ್ರಕಾಶಿಸಿದಳು.

೮-೧೦. ದೇವತೆಗಳಿಗೆ ಆನಂದವನ್ನುಂಟುಮಾಡುವಂತಹ ಗರ್ಭವನ್ನು ಮೇನಾದೇವಿಯು ಧರಿಸಲು ಆಗ ಅವಳಲ್ಲಿ ಅನೇಕ ಗರ್ಭಲಕ್ಷಣಗಳು ತೋರಿದುವು. ಅವಳ ಶರೀರವು ಕೃಶವಾಯಿತು. ಆಭರಣಗಳನ್ನು ಹೊರಲಾರದೆ ತೆಗೆದುಹಾಕಿದಳು. ಶರೀರವು ಬಿಳುಪೇರಿತು. ಚಿಕ್ಕೆಗಳಡಗಿದ ಉಷಃಕಾಲದಂತೆ ಅವಳು ತೋರು

ತದಾನನಂ ಮೃತ್ಸುರಭಿ ನಾಯಮಂ ತೃಪ್ತಿಂ ಗಿರೀಶ್ವರಃ ।
ಮುನೇ ರಹಸ್ಯುಪಾಘ್ರಾಯ ಪ್ರೇಮಾಧಿಕ್ಯಂ ಬಭೂವ ತತ್ ॥ ೧೦ ॥

ಮೇನಾ ಸ್ಪೃಹಾವತೀ ಕೇಷು ನ ಮೇ ಶಂಸತಿ ವಸ್ತುಷು ।
ಕಿಂಚಿದಿಷ್ಟಂ ಹ್ರಿಯಾಪೃಚ್ಛದನುವೇಲಂ ಸಖೀರ್ಗಿರಿಃ ॥ ೧೧ ॥

ಉಪೇತ್ಯ ದೌಹದಂ ಶೈಲ್ಯಂ ಯದ್ವವ್ರೇಽಪಶ್ಯದಾಶು ತತ್ ।
ಆನೀತಂ ನೇಷ್ಟಮಸ್ಯಾದ್ಧಾ ನಾಸಾಧ್ಯಂ ತ್ರಿದಿವೇಽಪಿ ಹಿ ॥ ೧೨ ॥

ಗಿರಿಸ್ಸಗರ್ಭಾಂ ಮಹಿಷೀಮಮಂಸ್ತ ಧರಣೀಮಿವ ।
ನಿಧಾನಗರ್ಭಾಮಭ್ಯಂತರ್ಲೀನವಹ್ನಿ ಶಮೀಮಿವ ॥ ೧೩ ॥

ಪ್ರಚೀಯಮಾನಾವಯವಾ ನಿಸ್ತೀರ್ಯ ದೋಹದವ್ಯಥಾಂ ।
ರೇಜೇ ಮೇನಾ ಬಾಲಲತಾ ನದ್ಧಪತ್ರಾಧಿಕಾ ಯಥಾ ॥ ೧೪ ॥

ಪ್ರಿಯಾಪ್ರೀತೇಶ್ಚ ಮನಸಃ ಸ್ವಾರ್ಜಿತದ್ರವಿಣಸ್ಯ ಚ ।
ಸಮುನ್ನತೇಃ ಶ್ರುತೇಃ ಪ್ರಾಜ್ಞ ಕ್ರಿಯಾಶ್ಚಕ್ರೇ ಯಥೋಚಿತಾಃ ॥ ೧೫ ॥

---

ತ್ತಿದ್ದಳು. ಮಣ್ಣಿನ ವಾಸನೆಯುಳ್ಳ ಮೇನಾದೇವೀ ಮುಖವನ್ನು ಪ್ರೇಮದಿಂದ ಹಿಮವಂತನು ಮೂಸಿದನು.

೧೧-೧೩. "ಮೇನಾದೇವಿಯು ಲಜ್ಜೆಯಿಂದ ತನ್ನ ಬಯಕೆಯೇನೆಂಬುದನ್ನು ನನ್ನೊಡನೆ ಹೇಳುವುದಿಲ್ಲ. ಅವಳಿಗೆ ಯಾವ ವಸ್ತುವು ಇಷ್ಟವಾದುದು? ನೀವಾದರೂ ತಿಳಿದು ಹೇಳಿರಿ" ಎಂದು ಹಿಮವಂತನು ಮೇನಾದೇವಿಯ ಸಖಿಯರನ್ನು ಪ್ರಶ್ನಿಸಿ ಮೇನಾದೇವಿಯು ಬಯಸಿದುದೆಲ್ಲವನ್ನೂ ತರಿಸಿಕೊಟ್ಟನು. ಪರ್ವತ ರಾಜನಾದ ಅವನಿಗೆ ಅಸಾಧ್ಯವಾದುದು ಸ್ವರ್ಗದಲ್ಲಿಯೂ, ಇಲ್ಲ. ಗರ್ಭವತಿಯಾದ ಪತ್ನಿಯನ್ನು ಹಿಮವಂತನು ರತ್ನಗರ್ಭಳಾದ ಭೂಮಿಯಂತೆ ರಕ್ಷಣೀಯಳೂ, ಅಗ್ನಿಯುಡಗಿರುವ ಶಮಿಯಂತೆ ಪವಿತ್ರಳೂ ಎಂದು ತಿಳಿದನು.

೧೪. ಗರ್ಭವ್ಯಥೆಯನ್ನು ದಾಟಿ ಆ ಮೇನಾದೇವಿಯ ಉದರವು ಬೆಳೆದು ದೊಡ್ಡದಾಗುತ್ತಿರಲು ಬೆಳೆಯುತ್ತಿರುವ ಅವಯವಗಳೆಂಬ ಎಲೆಗಳಿಂದ ಮಧ್ಯದಲ್ಲಿ ತುಂಬಿದ ಬಾಲಲತೆಯಂತೆ ಅವಳು ಪ್ರಕಾಶಿಸಿದಳು.

೧೫-೧೬. ಆಗ ಪ್ರಾಜ್ಞನಾದ ಹಿಮವಂತನು ತನ್ನ ಪ್ರಿಯಮಡದಿಯ ಪ್ರೀತಿಗಾಗಿಯೂ, ಧನಸಮೃದ್ಧಿಗಾಗಿಯೂ, ಗರ್ಭಸಂಸ್ಕಾರಕ್ಕಾಗಿಯೂ ಅನೇಕ ಕರ್ಮ

ದದರ್ಶ ಕಾಲೇ ಮೇನಾಂ ಸ ಪ್ರತೀತಃ ಪ್ರಸವೋನ್ಮುಖೀಂ ।
ಅಭ್ರಿತಾಂ ಚ ದಿವಂ ಗರ್ಭಗೃಹೇ ಭಿಷಗಧಿಷ್ಠಿತೇ ॥ ೧೬ ॥

ದೃಷ್ಟ್ವಾ ಪ್ರಿಯಾಂ ಶುಭಾಂಗೀಂ ವೈ ಮುಮೋದಾತಿ ಗಿರೀಶ್ವರಃ ।
ಗರ್ಭಸ್ಥಜಗದಂಬಾಂ ಹಿ ಮಹಾತೇಜೋವತೀಂ ತದಾ ॥ ೧೭ ॥

ತಸ್ಮಿನ್ನವಸರೇ ದೇವಾ ಮುನೇ ವಿಷ್ಣ್ವಾದಯಸ್ತಥಾ ।
ಮುನಯಶ್ಚ ಸಮಾಗಮ್ಯ ಗರ್ಭಸ್ಥಾಂ ತುಷ್ಟುವುಶ್ಶಿವಾಂ ॥ ೧೮ ॥

॥ ದೇವಾ ಊಚುಃ ॥
ದುರ್ಗೇ ಜಯ ಜಯ ಪ್ರಾಜ್ಞೇ ಜಗದಂಬ ಮಹೇಶ್ವರಿ ।
ಸತ್ಯವ್ರತೇ ಸತ್ಯಪರೇ ತ್ರಿಸತ್ಯೇ ಸತ್ಯರೂಪಿಣಿ ॥ ೧೯ ॥

ಸತ್ಯಸ್ಥೇ ಸತ್ಯಸುಪ್ರೀತೇ ಸತ್ಯಯೋನೇ ಚ ಸತ್ಯತಃ ।
ಸತ್ಯಸತ್ಯೇ ಸತ್ಯನೇತ್ರೇ ಪ್ರಪನ್ನಾಃ ಶರಣಂ ಚ ತೇ ॥ ೨೦ ॥

---

ಗಳನ್ನು ಮಾಡಿದನು. ಒಂದು ಶುಭದಿವಸ ಹಿಮವಂತನು, ಮಳೆಗರೆಯಲು ಸಿದ್ಧವಾದ ಮೇಘವುಳ್ಳ ಆಕಾಶದಂತೆ, ಪ್ರಸವಕ್ಕೆ ಸಿದ್ಧಳಾದ ಮೇನಾದೇವಿಯನ್ನು ನೋಡಿದನು. ಎಂದರೆ ಮೇನಾದೇವಿಗೆ ಪ್ರಸವಕಾಲವು ಸಮಿಾಪಿಸಿತು.

೧೭-೧೮. ಗರ್ಭದಲ್ಲಿ ಜಗನ್ಮಾತೆಯನ್ನು ಧರಿಸಿದ್ದು ತುಂಬಾ ತೇಜಸ್ವಿಯಾದ ಮೇನಾದೇವಿಯನ್ನು ನೋಡಿ ಹಿಮವಂತನು ತುಂಬಾ ಹರ್ಷಗೊಂಡನು. ಆ ಸಮಯದಲ್ಲಿ ಹರಿಯೇ ಮೊದಲಾದ ದೇವತೆಗಳೂ ಮುನಿಗಳೂ ಸಹ ಹಿಮವಂತನ ಮನೆಗೆ ಬಂದು ಮೇನಾದೇವಿಯ ಗರ್ಭದಲ್ಲಿರುವ ಜಗನ್ಮಾತೆಯನ್ನು ಹೀಗೆ ಸ್ತುತಿಸಿದರು.

೧೯-೨೧. ದೇವತೆಗಳು ಹೇಳಿದರು:—ಜಗನ್ಮಾತೆಯಾದ ಓ ದುರ್ಗಾದೇವಿ, ನಿನಗೆ ಜಯವು, ಸರ್ವೋತ್ಕರ್ಷದಿಂದಿರು. ನೀನು ಸತ್ಯವ್ರತಳೂ, ಸತ್ಯಪರಳೂ, ಮನೋವಾಕ್ಕಾಯಗಳೆಂಬ ತ್ರಿಕರಣ ಶುದ್ಧಿಯುಳ್ಳವಳೂ ಆಗಿರುವೆ. ಅಲ್ಲದೆ ನೀನು ಸತ್ಯವನ್ನಾಚರಿಸುವವಳು, ಸತ್ಯಸ್ವರೂಪಳು, ಸತ್ಯನಿಷ್ಠಳು, ಸತ್ಯದಲ್ಲಿ ಪ್ರೀತಿಯುಳ್ಳವಳು, ಸತ್ಯಕಾರಣಳು. ನಿನಗಿಂತಲೂ ಸತ್ಯವಾದ ವಸ್ತುವಿಲ್ಲ. ಸತ್ಯವೇ ನಿನ್ನ ಕಣ್ಣುಗಳು. ನೀನು ಶಿವನ ಪ್ರಿಯಮಹಿಷಿಯೂ, ಮಹೇಶ್ವರಿಯೂ, ದೇವತೆಗಳ ದುಃಖವನ್ನು

ಶಿವಪ್ರಿಯೇ ಮಹೇಶಾನಿ ದೇವದುಃಖಕ್ಷಯಂಕರಿ ।
ತ್ರೈಲೋಕ್ಯಮಾತಾ ಶರ್ವಾಣೀ ವ್ಯಾಪಿನೀ ಭಕ್ತವತ್ಸಲಾ ॥ ೨೧ ॥

ಆವಿರ್ಭೂಯ ತ್ರಿಲೋಕೇಶಿ ದೇವಕಾರ್ಯಂ ಕುರುಷ್ವ ಹ ।
ಸನಾಥಾಃ ಕೃಪಯಾ ತೇ ಹಿ ವಯಂ ಸರ್ವೇ ಮಹೇಶ್ವರಿ ॥ ೨೨ ॥

ತ್ವತ್ತಃ ಸರ್ವೇ ಚ ಸುಖಿನೋ ಲಭಂತೇ ಸುಖಮುತ್ತಮಂ ।
ತ್ವಾಂ ವಿನಾ ನ ಹಿ ಕಿಂಚಿದ್ವೈ ಶೋಭತೇ ತ್ರಿಭವೇಷ್ವಪಿ ॥ ೨೩ ॥

॥ ಬ್ರಹ್ಮೋವಾಚ ॥

ಇತ್ಥಂ ಕೃತ್ವಾ ಮಹೇಶಾನ್ಯಾ ಗರ್ಭಸ್ಥಾಯಾ ಬಹುಸ್ತುತಿಂ ।
ಪ್ರಸನ್ನಮನಸೋ ದೇವಾಃ ಸ್ವಂ ಸ್ವಂ ಧಾಮ ಯಯುಸ್ತದಾ ॥ ೨೪ ॥

ವ್ಯತೀತೇ ನವಮೇ ಮಾಸೇ ದಶಮೇ ಮಾಸಿ ಪೂರ್ಣತಃ ।
ಗರ್ಭಸ್ಥಾಯಾ ಗತಿಂ ದಧ್ರೇ ಕಾಲಿಕಾ ಜಗದಂಬಿಕಾ ॥ ೨೫ ॥

ತದಾ ಸುಸಮಯಶ್ಚಾಸೀಚ್ಛಾಂತಭಗ್ರಹತಾರಕಃ ।
ನಭಃ ಪ್ರಸನ್ನತಾಂ ಯಾತಂ ಪ್ರಕಾಶಸ್ಸರ್ವದಿಕ್ಷು ಹಿ ॥ ೨೬ ॥

---

ನೀನೇ ಪರಿಹರಿಸುವವಳು, ಜಗನ್ಮಾತೆಯು, ಸರ್ವವ್ಯಾಪಕಳು, ಭಕ್ತವತ್ಸಲಳು, ಇಂತಹ ನಿನ್ನನ್ನು ನಾವು ಮರೆಹೊಕ್ಕಿರುವೆವು.

೨೨-೨೩. ಓ ಜಗದೀಶ್ವರಿ, ಈಗ ನೀನು ನಿಶ್ಚಯಿಸಿದಂತೆ ಅವತರಿಸಿ ದೇವತೆಗಳ ಕಾರ್ಯವನ್ನು ಮಾಡಬೇಕು. ನಿನ್ನ ಅನುಗ್ರಹದಿಂದ ನಾವು ಸನಾಥರಾಗಿರುವೆವು. ಪುಣ್ಯವಂತರೆಲ್ಲರೂ ನಿನ್ನಿಂದಲೇ ಸುಖವನ್ನು ಪಡೆಯುವರು. ನೀನಿಲ್ಲದೇ ಜಗತ್ತಿನಲ್ಲಿ ಯಾವುದೂ ಶೋಭಿಸಲಾರದು.

೨೪-೨೫. ಬ್ರಹ್ಮನು ಹೇಳಿದನು:—ಎಲೈ ನಾರದ ಹೀಗೆ ಗರ್ಭದಲ್ಲಿರುವ ದೇವಿಯನ್ನು ಬಹುವಾಗಿ ಸ್ತುತಿಸಿ ದೇವತೆಗಳು ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಮುಂದೆ ಒಂಭತ್ತುತಿಂಗಳು ತುಂಬಿ ಹತ್ತನೆಯ ತಿಂಗಳು ಬರಲು ಗರ್ಭದಲ್ಲಿದ್ದ ಕಾಲಿಕಾದೇವಿಯು ಆವಿರ್ಭವಿಸಲುದ್ಯುಕ್ತಳಾದಳು.

೨೬-೩೦. ಆಗ ಸಮಯವು ಶಾಂತವಾಗಿ ನಕ್ಷತ್ರಗಳು ಪ್ರಕಾಶಿಸುತ್ತಿದ್ದವು. ಮತ್ತು ಗ್ರಹಗಳು ಮಂಗಳಕರವಾಗಿದ್ದವು. ಗಾಳಿಯು ತಂಪಾಗಿ ಬೀಸಿತು. ಸತ್ಪು

ಮಹೀ ಮಂಗಲಭೂಯಿಷ್ಠಾ ಸವನಗ್ರಾಮಸಾಗರಾ ।
ಸರಃಸ್ರವಂತೀವಾಪೀಷು ಪುಪ್ಫುಲ್ಲುಃ ಪಂಕಜಾನಿ ವೈ ॥ ೨೭ ॥

ವವುಶ್ಚ ವಿವಿಧಾ ವಾತಾಃ ಸುಖಸ್ಪರ್ಶಾ ಮುನೀಶ್ವರ ।
ಮುಮುದುಸ್ಸಾಧವಸ್ಸರ್ವೇಽಸತಾಂ ದುಃಖಮಭೂದ್ದ್ರುತಂ ॥ ೨೮ ॥

ದುಂದುಭೀರ್ವಾದಯಾಮಾಸುರ್ನಭಸ್ಯಾಗತ್ಯ ನಿರ್ಜರಾಃ ।
ಪುಷ್ಪವೃಷ್ಟಿರಭೂತ್ತತ್ರ ಜಗುರ್ಗಂಧರ್ವಸತ್ತಮಾಃ ॥ ೨೯ ॥

ವಿದ್ಯಾಧರಸ್ತ್ರಿಯೋ ವ್ಯೋಮ್ನಿ ನನೃತುಶ್ಚಾಪ್ಸರಾಸ್ತಥಾ ।
ತದೋತ್ಸವೋ ಮಹಾನಾಸೀದ್ದೇವಾದೀನಾಂ ನಭಃಸ್ಥಲೇ ॥ ೩೦ ॥

ತಸ್ಮಿನ್ನವಸರೇ ದೇವೀ ಪೂರ್ವಶಕ್ತಿಶ್ಶಿವಾ ಸತೀ ।
ಆವಿರ್ಬಭೂವ ಪುರತೋ ಮೇನಾಯಾ ನಿಜರೂಪತಃ ॥ ೩೧ ॥

ವಸಂತರ್ತೌ ಮಧೌ ಮಾಸೇ ನವಮ್ಯಾಂ ಮೃಗಧಿಷ್ಣ್ಯಕೇ ।
ಅರ್ಧರಾತ್ರೇ ಸಮುತ್ಪನ್ನಾ ಗಂಗೇವ ಶಶಿಮಂಡಲಾತ್ ॥ ೩೨ ॥

ಸಮಯೇ ತತ್ಸ್ವರೂಪೇಣ ಮೇನಕಾಜಠರಾಚ್ಛಿವಾ ।
ಸಮುದ್ಭೂಯ ಸಮುತ್ಪನ್ನಾ ಸಾ ಲಕ್ಷ್ಮೀರಿವ ಸಾಗರಾತ್ ॥ ೩೩ ॥

---

ರುಷರು ಹರ್ಷಗೊಂಡರು. ಪಾಪಿಗಳು ದುಃಖಗೊಂಡರು. ಆಕಾಶವು ನಿರ್ಮಲ ವಾಗಿದ್ದಿತು. ಅರಣ್ಯ, ಗ್ರಾಮ, ಸಮುದ್ರ ಇವೆಲ್ಲವುಗಳೊಡನೆ ಭೂಮಿಯು ಮಂಗಳ ವಾಗಿದ್ದಿತು. ಸರಸ್ಸುಗಳಲ್ಲಿ ಕಮಲಗಳರಳಿದುವು. ಗಗನದಲ್ಲಿ ದೇವದುಂದುಭಿಯು ಮೊಳಗಿತು ಪುಷ್ಪವೃಷ್ಟಿಯು ಆಯಿತು. ಗಂಧರ್ವರು, ವಿದ್ಯಾಧರಸ್ತ್ರೀಯರು ಇಂಪಾಗಿ ಹಾಡಿದರು. ಅಪ್ಸರೆಯರು ನರ್ತನಮಾಡಿದರು. ಹೀಗೆ ದೇವತೆಗಳು ಸ್ವರ್ಗದಲ್ಲಿ ಮಹಾಉತ್ಸವವನ್ನಾಚರಿಸಿದರು.

೩೧-೩೩. ಅಂತಹ ಮಂಗಳಸಮಯದಲ್ಲಿ ಉಮಾದೇವಿಯು ಮೇನಾದೇವಿ ಯಿಂದ ಜನಿಸಿದಳು. ವಸಂತಋತುವಿನಲ್ಲಿ ವೈಶಾಖಮಾಸದಲ್ಲಿ ನವಮಿಯ ದಿವಸ ಅರ್ಧರಾತ್ರಿಯಲ್ಲಿ ಪುನರ್ವಸು ನಕ್ಷತ್ರದಲ್ಲಿ ಉಮಾದೇವಿಯು, ಚಂದ್ರಮಂಡಲದಿಂದ ಗಂಗೆಯಂತೆಯೂ, ಸಾಗರದಿಂದ ಲಕ್ಷ್ಮಿಯಂತೆಯೂ ಮೇನಾದೇವಿಯ ಗರ್ಭದಿಂದ ಜನಿಸಿದಳು.

ತತಸ್ತಸ್ಯಾಂ ತು ಜಾತಾಯಾಂ ಪ್ರಸನ್ನೋಽಭೂತ್ತದಾ ಭವಃ ।
ಅನುಕೂಲೋ ವವೌ ವಾಯುರ್ಗಂಭೀರೋ ಗಂಧಯುಕ್ಶುಭಃ ॥ ೩೪ ॥

ಬಭೂವ ಪುಷ್ಪವೃಷ್ಟಿಶ್ಚ ತೋಯವೃಷ್ಟಿಪುರಸ್ಸರಂ ।
ಜಜ್ವಲುಶ್ಚಾಗ್ನಯಃ ಶಾಂತಾ ಜಗರ್ಜುಶ್ಚ ತದಾ ಘನಾಃ ॥ ೩೫ ॥

ತಸ್ಯಾಂ ತು ಜಾಯಮಾನಾಯಾಂ ಸರ್ವಸ್ವಂ ಸಮುಪದ್ಯತ ।
ಹಿಮವನ್ನಗರೇ ತತ್ರ ಸರ್ವಂ ದುಃಖಂ ಕ್ಷಯಂ ಗತಂ ॥ ೩೬ ॥

ತಸ್ಮಿನ್ನವಸರೇ ತತ್ರ ವಿಷ್ಣ್ವಾದ್ಯಾಸ್ಸಕಲಾಸ್ಸುರಾಃ ।
ಆಜಗ್ಮುಃ ಸುಖಿನಃ ಪ್ರೀತ್ಯಾ ದದೃಶುರ್ಜಗದಂಬಿಕಾಂ ॥ ೩೭ ॥

ತುಷ್ಟುವುಸ್ತಾಂ ಶಿವಾಮಂಬಾಂ ಕಾಲಿಕಾಂ ಶಿವಕಾಮಿನೀಂ ।
ದಿವ್ಯರೂಪಾಂ ಮಹಾಮಾಯಾಂ ಶಿವಲೋಕನಿವಾಸಿನೀಂ ॥ ೩೮ ॥

॥ ದೇವಾ ಊಚುಃ ॥

ಜಗದಂಬ ಮಹಾದೇವಿ ಸರ್ವಸಿದ್ಧಿವಿಧಾಯಿನಿ ।
ದೇವಕಾರ್ಯಕರೀ ತ್ವಂ ಹಿ ಸದಾತಸ್ತ್ವಾಂ ನಮಾಮಹೇ ॥ ೩೯ ॥

---

೩೪-೩೬. ಹೀಗೆ ಉಮಾದೇವಿಯು ಜನಿಸಲು ಜಗತ್ತೆಲ್ಲವೂ ಪ್ರಸನ್ನವಾಯಿತು. ಸುವಾಸನೆಯುಳ್ಳ ಗಾಳಿಯು ಮಂದವಾಗಿ ಬೀಸಿತು. ತಂಪಾಗಿ ಮಳೆಯೂ ಪುಷ್ಪವೃಷ್ಟಿಯೂ ಆದುವು. ಅಗ್ನಿಗಳು ಶಾಂತವಾಗಿ ಜ್ವಲಿಸಿದುವು. ಮೇಘಗಳು ಗಂಭೀರವಾಗಿ ಗರ್ಜಿಸಿದುವು. ಎಲ್ಲವೂ ಸುಖಮಯವಾಯಿತು. ಹಿಮವಂತನ ನಗರಿಯಲ್ಲಿ ದುಃಖವೆಲ್ಲವೂ ಮಾಯವಾಯಿತು.

೩೭-೩೮. ಆ ಸಮಯದಲ್ಲಿ ವಿಷ್ಣು ಮೊದಲಾದ ದೇವತೆಗಳು ಹಿಮವಂತನ ಮನೆಗೆ ಬಂದು ಅವನ ಪುತ್ರಿಯಾಗಿ ಜನಿಸಿದ ಜಗದಂಬೆಯನ್ನು ನೋಡಿದರು. ಮಹಾಮಾಯೆಯೂ, ದಿವ್ಯರೂಪವುಳ್ಳವಳೂ ಆದ ಆ ಶಿವನ ಪ್ರಿಯಮಡದಿಯನ್ನು ಭಕ್ತಿಯಿಂದ ಹೀಗೆ ಸ್ತುತಿಸಿದರು.

೩೯-೪೦. ದೇವತೆಗಳು ಹೇಳಿದರು:—ಜಗನ್ಮಾತೆಯಾದ ಓ ಮಹಾದೇವಿ, ನೀನು ಸಕಲ ಇಷ್ಟಾರ್ಥಗಳನ್ನೂ ಕೊಡುವವಳು, ಸದಾ ದೇವತೆಗಳ ಕಾರ್ಯವನ್ನು ನಿರ್ವಹಿಸುವವಳು ಆದಕಾರಣ ನಿನ್ನನ್ನು ನಮಸ್ಕರಿಸುವೆವು. ಭಕ್ತವತ್ಸಲಳಾದ ಓ

ಸರ್ವಥಾ ಕುರು ಕಲ್ಯಾಣಂ ದೇವಾನಾಂ ಭಕ್ತವತ್ಸಲೇ ।
ಮೇನಾಮನೋರಥಃ ಪೂರ್ಣಃ ಕೃತಃ ಕುರು ಹರಸ್ಯ ಚ ॥ ೪೦ ॥

॥ ಬ್ರಹ್ಮೋವಾಚ ॥

ಇತ್ಥಂ ಸ್ತುತ್ವಾ ಶಿವಾಂ ದೇವಾ ವಿಷ್ಣ್ವಾದ್ಯಾಃ ಸುಪ್ರಣಮ್ಯ ತಾಂ ।
ಸ್ವಂ ಸ್ವಂ ಧಾಮ ಯಯುಃ ಪ್ರೀತಾಃ ಶಂಸಂತಸ್ತದ್ಗತಿಂ ಪರಾಂ ॥ ೪೧ ॥

ತಾಂ ತು ದೃಷ್ಟ್ವಾ ತಥಾ ಜಾತಾಂ ನೀಲೋತ್ಪಲದಲಪ್ರಭಾಂ ।
ಶ್ಯಾಮಾಂ ಸಾ ಮೇನಕಾ ದೇವೀಂ ಮುದಮಾಪಾತಿ ನಾರದ ॥ ೪೨ ॥

ದಿವ್ಯರೂಪಂ ವಿಲೋಕ್ಯಾಸು ಜ್ಞಾನಮಾಪ ಗಿರಿಪ್ರಿಯಾ ।
ವಿಜ್ಞಾಯ ಪರಮೇಶಾನೀಂ ತುಷ್ಟಾವಾತಿಪ್ರಹರ್ಷಿತಾ ॥ ೪೩ ॥

॥ ಮೆನೋವಾಚ ॥

ಜಗದಂಬ ಮಹೇಶಾನಿ ಮಮ ಧ್ಯಾನಸ್ಥಿತಾ ಭವ ।
ಏತದ್ರೂಪೇಣ ಪ್ರತ್ಯಕ್ಷಂ ರೂಪಂ ಧೇಹಿ ಸುತಾಸಮಂ ॥ ೪೪ ॥

---

ದೇವಿ, ನಿನ್ನ ಭಕ್ತರಾದ ದೇವತೆಗಳಿಗೆ ಕ್ಷೇಮವನ್ನುಂಟುಮಾಡು, ಮೇನಾದೇವಿಯ ಮನೋರಥವನ್ನು ಪೂರ್ಣಗೊಳಿಸಿರುವೆ, ಅದರಂತೆ ಶಿವನ ಮನೋರಥವನ್ನೂ ಪೂರ್ಣಮಾಡು.

೪೧-೪೩. ಬ್ರಹ್ಮನು ಹೇಳಿದನು:—ಹೀಗೆ ಸ್ತುತಿಸಿ ದೇವಿಯನ್ನು ನಮಸ್ಕರಿಸಿ ಹರಿಯೇ ಮೊದಲಾದ ದೇವತೆಗಳು ಅವಳ ಮಹಿಮೆಯನ್ನು ಹೊಗಳುತ್ತಾ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಮೇನಾದೇವಿಯು ತನಗೆ ಜನಿಸಿದ ಕನ್ನೈದಿಲೆಯಂತೆ ನೀಲವಾದ ಕಾಂತಿಯುಳ್ಳ ಪುತ್ರಿಯನ್ನು ನೋಡಿ ಅವಳು ಪರಮೇಶ್ವರಿಯೆಂದು ತಿಳಿದಳು. ಮತ್ತು ಅತಿಹರ್ಷದಿಂದ ಆ ದೇವಿಯನ್ನು ಹೀಗೆ ಸ್ತುತಿಸಿದಳು.

೪೪-೪೭. ಮೇನಾದೇವಿಯು ಹೇಳಿದಳು:—ಜಗನ್ಮಾತೆಯಾದ ಓ ಮಹೇಶ್ವರಿ, ನನ್ನಲ್ಲಿ ನೀನು ತುಂಬಾ ಅನುಗ್ರಹವನ್ನು ಮಾಡಿರುವೆ. ನನ್ನೆದುರಿಗೆ ಆವಿರ್ಭವಿಸಿ ರಾರಾಜಿಸುತ್ತಲಿರುವೆ. ಓ ದೇವಿ, ನೀನು ಎಲ್ಲ ಶಕ್ತಿಗಳಿಗೂ ಆದಿಶಕ್ತಿಯು ತ್ರಿಲೋಕಮಾತೆಯು, ಶಿವನ ಪ್ರಿಯಮಡದಿಯು. ದೇವತೆಗಳು ನಿನ್ನನ್ನು ಸ್ತುತಿಸು

ತ್ವಮಾದ್ಯಾ ಸರ್ವಶಕ್ತೀನಾಂ ತ್ರಿಲೋಕಜನನೀ ಶಿವೇ ।
ಶಿವಪ್ರಿಯಾ ಸದಾ ದೇವೀ ಸರ್ವದೇವಸ್ತುತಾ ಪರಾ ॥ ೪೫ ॥

ಕೃಪಾಂ ಕುರು ಮಹೇಶಾನಿ ಮಮ ಧ್ಯಾನಸ್ಥಿತಾ ಭವ ।
ಏತದ್ರೂಪೇಣ ಪ್ರತ್ಯಕ್ಷಂ ರೂಪಂ ಧೇಹಿ ಸುತಾಸಮಂ ॥ ೪೬ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾ ಮೇನಾಯಾ ಭೂಧರಸ್ತ್ರಿಯಾಃ ।
ಪ್ರತ್ಯುವಾಚ ಶಿವಾ ದೇವೀ ಸುಪ್ರಸನ್ನಾ ಗಿರಿಪ್ರಿಯಾಂ ॥ ೪೭ ॥

॥ ದೇವ್ಯುವಾಚ ॥

ಹೇ ಮೇನೇ ತ್ವಂ ಪುರಾ ಮಾಂ ಚ ಸುಸೇವಿತವತೀ ರತಾ ।
ತ್ವದ್ಭಕ್ತ್ಯಾ ಸುಪ್ರಸನ್ನಾಹಂ ವರಂ ದಾತುಂ ಗತಾಂತಿಕಂ ॥ ೪೮ ॥

ವರಂ ಬ್ರೂಹೀತಿ ಮದ್ವಾಣೀಂ ಶ್ರುತ್ವಾ ತೇ ತದ್ವರೋ ವೃತಃ ।
ಸುತಾ ಭವ ಮಹಾದೇವಿ ಸಾ ಮೇ ದೇವಹಿತಂ ಕುರು ॥ ೪೯ ॥

ತಥಾ ದತ್ವಾ ವರಂ ತೇಽಹಂ ಗತಾ ಸ್ವಂ ಪದಮಾದರಾತ್ ।
ಸಮಯಂ ಪ್ರಾಪ್ಯ ತನಯಾಭವಂ ತೇ ಗಿರಿಕಾಮಿನಿ ॥ ೫೦ ॥

---

ವರು. ಓ ಪರಮೇಶ್ವರಿ, ಅನುಗ್ರಹವನ್ನು ಮಾಡು. ಈ ನಿನ್ನ ರೂಪವನ್ನು ಬಿಟ್ಟು ನನ್ನ ಪುತ್ರಿಗನುಸಾರವಾದ ರೂಪವನ್ನು ಧರಿಸು ಎಂದಳು.

೪೭. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಹಿಮವಂತನ ಪತ್ನಿ ಮೇನಾದೇವಿಯ ಮಾತನ್ನು ಕೇಳಿ ಪರಮೇಶ್ವರಿಯು ಪ್ರಸನ್ನಳಾಗಿ ಮತ್ತೆ ಹೇಳಿದಳು.

೪೮-೫೦. ದೇವಿಯು ಹೇಳಿದಳು :—ಎಲೌ ಮೇನಾದೇವಿ, ಹಿಂದೆ ನೀನು ನನ್ನನ್ನು ಭಕ್ತಿಯಿಂದ ಆರಾಧಿಸಿದೆ. ಆಗ ನಾನು ಪ್ರಸನ್ನಳಾಗಿ ವರವನ್ನು ಕೊಡಲು ನಿನ್ನ ಬಳಿಗೆ ಬಂದೆನು ನೀನು " ಓ ದೇವಿ ನೀನು ನನ್ನ ಪುತ್ರಿಯಾಗಿ ಜನಿಸು. ದೇವ ಕಾರ್ಯವನ್ನು ನಿರ್ವಹಿಸು " ಎಂದು ವರವನ್ನು ಕೇಳಿದೆಯಷ್ಟೆ. ಅದರಂತೆ ವರವನ್ನನುಗ್ರಹಿಸಿ ನಾನು ತೆರಳಿದೆನು ಈಗ ಸರಿಯಾದ ಕಾಲದಲ್ಲಿ ನನ್ನ ಪ್ರತಿಜ್ಞೆಯಂತೆ ನಿನ್ನ ಪುತ್ರಿಯಾಗಿ ಜನಿಸಿರುವೆನು.

ದಿವ್ಯಂ ರೂಪಂ ಧೃತಂ ಮೇಽದ್ಯ ಯತ್ತೇ ಸುತ್ಸ್ಮರಣಂ ಭವೇತ್ ।
ಅನ್ಯಥಾ ಮರ್ತ್ಯಭಾವೇನ ತವಾಜ್ಞಾನಂ ಭವೇನ್ಮಯಿ ॥ ೫೧ ॥

ಯುವಾಂ ಮಾಂ ಪುತ್ರಿಭಾವೇನ ದಿವ್ಯಭಾವೇನ ವಾಸಕೃತ್ ।
ಚಿಂತಯಂತೌ ಕೃತಸ್ನೇಹೌ ಯಾತಾಸ್ಥೋ ಮದ್ಗತಿಂ ಪರಾಂ ॥ ೫೨ ॥

ದೇವಕಾರ್ಯಂ ಕರಿಷ್ಯಾಮಿ ಲೀಲಾಂ ಕೃತ್ವಾದ್ಭುತಾಂ ಕ್ಷಿತೌ ।
ಶಂಭುಪತ್ನೀ ಭವಿಷ್ಯಾಮಿ ತಾರಯಿಷ್ಯಾಮಿ ಸಜ್ಜನಾನ್ ॥ ೫೩ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾಸೀಚ್ಛಿವಾ ತೂಷ್ಣೀಮಂಬಿಕಾ ಸ್ವಾತ್ಮಮಾಯಯಾ ।
ಪಶ್ಯಂತ್ಯಾಂ ಮಾತರಿ ಪ್ರೀತ್ಯಾ ಸದ್ಯೋಽಭೂತ್ತನಯಾ ತನುಃ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಷಷ್ಠೋಽಧ್ಯಾಯಃ

---

೫೧-೫೩. ನಾನು "ಪರಮೇಶ್ವರಿ" ಎಂದು ತಿಳಿಸಲೋಸುಗ ಈ ದಿವ್ಯ ರೂಪವನ್ನು ಧರಿಸಿ ಪ್ರತ್ಯಕ್ಷಳಾಗಿರುವೆನು. ಇಲ್ಲದಿದ್ದರೆ ನಾನು "ಸಾಮಾನ್ಯ ಮನುಷ್ಯಳು ನಮ್ಮ ಮಗಳು" ಎಂಬ ಭ್ರಾಂತಿಯು ನಿಮಗುಂಟಾಗುತ್ತಲಿತ್ತು. ಮುಂದೆ ನೀವು ದಂಪತಿಗಳು ನನ್ನನ್ನು ಪುತ್ರಿಯೆಂಬ ವಾತ್ಸಲ್ಯದಿಂದಲೂ, ದೇವಿಯೆಂಬ ಭಕ್ತಿಯಿಂದಿಲೂ ಸೇವಿಸಿರಿ. ಕೊನೆಯಲ್ಲಿ ನಿಮಗೆ ನನ್ನ ದಿವ್ಯಲೋಕವು ಲಭಿಸುವುದು. ನಿಮ್ಮ ಪುತ್ರಿಯಾಗಿ ಜನಿಸಿದ ನಾನು ಅದ್ಭುತಲೀಲೆಯನ್ನು ಪ್ರದರ್ಶಿಸಿ ಶಿವನ ಅರ್ಧಾಂಗಿಯಾಗುವೆನು. ದೇವಕಾರ್ಯವನ್ನು ನಿರ್ವಹಿಸುವೆನು. ದುಷ್ಟರನ್ನು ಶಿಕ್ಷಿಸುವೆನು. ಶಿಷ್ಟರನ್ನುದ್ಧರಿಸುವೆನು ಎಂದಳು.

೫೪. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಮಹಾದೇವಿಯು ಸುಮ್ಮನಾದಳು. ತಾಯಿಯಾದ ಮೇನಾದೇವಿಯು ಪ್ರೀತಿಯಿಂದ ನೋಡುತ್ತಲಿರುವಂತೆಯೇ ಆ ದೇವಿಯು ತನ್ನ ಮಾಯೆಯಿಂದ ಚಿಕ್ಕ ಶಿಶುವಿನ ಸ್ವರೂಪವನ್ನುಳ್ಳವಳಾದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಆರನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಸಪ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ತತೋ ಮೇನಾ ಪುರಸ್ಸಾ ವೈ ಸುತಾ ಭೂತ್ವಾ ಮಹಾದ್ಯುತಿಃ ।
ಚಕಾರ ರೋದನಂ ತತ್ರ ಲೌಕಿಕೀಂ ಗತಿಮಾಶ್ರಿತಾ ॥ ೧ ॥

ಅರಿಷ್ಟಶಯ್ಯಾಂ ಪರಿತಸ್ಸದ್ವಿಸಾರಿಸುತೇಜಸಾ ।
ನಿಶೀಥದೀಪಾ ವಿಹತತ್ವಿಷ ಆಸನ್ನರಂ ಮುನೇ ॥ ೨ ॥

ಶ್ರುತ್ವಾ ತದ್ರೋದನಂ ರಮ್ಯಂ ಗೃಹಸ್ಥಾಃ ಸರ್ವಯೋಷಿತಃ ।
ಜಘ್ನುಷುಸ್ಸಂಭ್ರಮಾತ್ತತ್ರಾಗತಾಃ ಪ್ರೀತಿಪುರಸ್ಸರಾಃ ॥ ೩ ॥

---

### ಏಳನೆಯ ಅಧ್ಯಾಯವು

೧-೩. ಬ್ರಹ್ಮನು ಹೇಳಿದನು :—ಬಳಿಕ ಆ ದೇವಿಯು ಶಿಶುವಿನ ಸ್ವರೂಪವುಳ್ಳವಳಾಗಿ ಮೇನಾದೇವಿಯ ಎದುರಿನಲ್ಲಿ ಲೋಕಾಚಾರದಂತೆ ರೋದಿಸಿದಳು. ಆ ಶಿಶುವನ್ನು ಮಲಗಿಸಿದ ಹಾಸಿಗೆಯ ಸುತ್ತಲೂ ಪ್ರಭೆಯು ಹರಡಿದ್ದು ಅದರಿಂದ ರಾತ್ರಿಯ ದೀಪಗಳ ಪ್ರಕಾಶವೆಲ್ಲವೂ ಮಂದವಾಯಿತು. ಶಿಶುವಿನ ಆ ಅಳುವನ್ನು ಕೇಳಿ ಮನೆಯಲ್ಲಿದ್ದ ಸ್ತ್ರೀಯರೆಲ್ಲರೂ ಆದರದಿಂದ ಅಲ್ಲಿಗೆ ಬಂದರು.

ತಚ್ಛುದ್ಧಾಂತಚರಃ ಶೀಘ್ರಂ ಶಶಂಸ ಭೂಭೃತೇ ತದಾ ।
ಪಾರ್ವತೀಜನ್ಮ ಸುಖದಂ ದೇವಕಾರ್ಯಕರಂ ಶುಭಂ ॥ ೪ ॥

ತಚ್ಛುದ್ಧಾಂತಚರಾಯಾಶು ಪುತ್ರೀಜನ್ಮ ಪ್ರಶಂಸತೇ ।
ಸಿತಾತಪತ್ರಂ ನಾದೇಯಮಾಸೀತ್ತಸ್ಯ ಮಹೀಭೃತಃ ॥ ೫ ॥

ಗತಸ್ತತ್ರ ಗಿರಿಃ ಪ್ರೀತ್ಯಾ ಸಪುರೋಹಿತಸದ್ವಿಜಃ ।
ದದರ್ಶ ತನಯಾಂ ತಾಂ ತು ಶೋಭಮಾನಾಂ ಸುಭಾಸಸಾ ॥ ೬ ॥

ನೀಲೋತ್ಪಲದಲಶ್ಯಾಮಾಂ ಸದ್ಯುತಿಂ ಸುಮನೋಹರಾಂ ।
ದೃಷ್ಟ್ವಾ ಚ ತಾದೃಶೀಂ ಕನ್ಯಾಂ ಮುಮೋದಾತಿ ಗಿರೀಶ್ವರಃ ॥ ೭ ॥

ಸರ್ವೇ ಚ ಮುಮುದುಸ್ತತ್ರ ಪೌರಾಶ್ಚ ಪುರುಷಾಃ ಸ್ತ್ರಿಯಃ ।
ತದೋತ್ಸವೋ ಮಹಾನಾಸೀನ್ನೇದುರ್ವಾದ್ಯಾನಿ ಭೂರಿಶಃ ॥ ೮ ॥

ಬಭೂವ ಮಂಗಲಂ ಗಾನಂ ನನೃತುರ್ವಾರಯೋಷಿತಃ ।
ದಾನಂ ದದೌ ದ್ವಿಜಾತಿಭ್ಯೋ ಜಾತಕರ್ಮ ವಿಧಾಯ ಚ ॥ ೯ ॥

---

೪-೫. ಆ ಅಂತಃಪುರದಲ್ಲಿ ಸಂಚರಿಸುವ ಕಂಚುಕಿಯು ಹಿಮವಂತನಿಗೆ ದೇವ ಕಾರ್ಯವನ್ನು ನಿರ್ವಹಿಸುವ ಪಾರ್ವತಿಯ ಜನ್ಮವಾಯಿತೆಂದು ತ್ವರೆಯಿಂದ ನಿವೇದಿಸಿದನು. ಇಂತಹ ಶುಭಸಮಾಚಾರವನ್ನು ತಿಳಿಸಿದ ಆ ಕಂಚುಕಿಗೆ ಹಿಮವಂತನು ತನ್ನ ರಾಜಚಿಹ್ನವಾದ ಶ್ವೇತಛತ್ರಿಯೊಂದನ್ನು ಕೊಡದೆ ಮತ್ತೆಲ್ಲ ಬೇಕಾದ ವಸ್ತುಗಳನ್ನೂ ಬಹುಮಾನವಾಗಿ ಕೊಟ್ಟನು

೬-೭. ಬಳಿಕ ಹಿಮವಂತನು ಪುರೋಹಿತರು, ಬ್ರಾಹ್ಮಣರು, ಮಂತ್ರಿಮುಂತಾದವರೊಡನೆ ಆ ಹೆರಿಗೆ ಮನೆಗೆ ತೆರಳಿದನು. ಅಲ್ಲಿ ಕನ್ನೈದಿಲೆಯಂತೆ ನೀಲವರ್ಣದವಳಾಗಿಯೂ, ಮನೋಹರಳಾಗಿಯೂ, ಮಹಾ ತೇಜಸ್ವಿನಿಯಾಗಿಯೂ ಇರುವ ಪುತ್ರಿಯನ್ನು ನೋಡಿ ತುಂಬಾ ಸಂತಸಗೊಂಡನು.

೮-೧೦. ಪಾರ್ವತಿಯು ಜನಿಸಿದುದರಿಂದ ಪಟ್ಟಣಿಗರಾದ ಪುರುಷರೂ ಸ್ತ್ರೀಯರೂ ಎಲ್ಲರೂ ಹರ್ಷಗೊಂಡರು. ಆಗ ಮಹತ್ತಾದ ಉತ್ಸವವಾಯಿತು. ಮಂಗಳವಾದ್ಯಗಳಾದುವು, ಗಾನಗಳಾದುವು, ಸೂಳೆಯರು ನರ್ತನಮಾಡಿದರು. ಹಿಮವಂತನು ಶಿಶುವಿಗೆ ಜಾತಕರ್ಮವನ್ನು ಮಾಡಿ ಬ್ರಾಹ್ಮಣರಿಗೆ ಧನವನ್ನು ದಾನ

ಅಥ ದ್ವಾರಂ ಸಮಾಗತ್ಯ ಚಕಾರ ಸುಮಹೋತ್ಸವಂ ।
ಹಿಮಾಚಲಃ ಪ್ರಸನ್ನಾತ್ಮಾ ಭಿಕ್ಷುಭ್ಯೋ ದ್ರವಿಣಂ ದದೌ ॥ ೧೦ ॥

ಅಥೋ ಮುಹೂರ್ತೇ ಸುಮತೇ ಹಿಮವಾನ್ ಮುನಿಭಿಸ್ಸಹ ।
ನಾಮಾಕರೋತ್ಸುತಾಯಾಶು ಕಾಲೀತ್ಯಾದಿ ಸುಖಪ್ರದಂ ॥ ೧೧ ॥

ದಾನಂ ದದೌ ತದಾ ಪ್ರೀತ್ಯಾ ದ್ವಿಜೇಭ್ಯೋ ಬಹುಸಾದರಂ ।
ಉತ್ಸವಂ ಕಾರಯಾಮಾಸ ವಿವಿಧಂ ಗಾನಪೂರ್ವಕಂ ॥ ೧೨ ॥

ಇತ್ಥಂ ಕೃತ್ವೋತ್ಸವಂ ಭೂರಿ ಕಾಲೀಂ ಪಶ್ಯನ್ ಮುಹುರ್ಮುಹುಃ ।
ಲೇಭೇ ಮುದಂ ಸಪತ್ನೀಕೋ ಬಹುಪುತ್ರೋಽಪಿ ಭೂಧರಃ ॥ ೧೩ ॥

ತತ್ರ ಸಾ ವವೃಧೇ ದೇವೀ ಗಿರಿರಾಜಗೃಹೇ ಶಿವಾ ।
ಗಂಗೇವ ವರ್ಷಾಸಮಯೇ ಶರದೀವಾಥ ಚಂದ್ರಿಕಾ ॥ ೧೪ ॥

ಏವಂ ಸಾ ಕಾಲಿಕಾದೇವೀ ಚಾರ್ವಂಗೀ ಚಾರುದರ್ಶನಾ ।
ದಧ್ರೇ ಚಾನುದಿನಂ ರಮ್ಯಾಂ ಚಂದ್ರಬಿಂಬಕಲಾಮಿವ ॥ ೧೫ ॥

---

ಮಾಡಿದನು. ಬಳಿಕ ಮನೆಯ ಬಾಗಿಲಿಗೆ ಬಂದು ಅನೇಕ ಉತ್ಸವಗಳನ್ನು ಮಾಡಿಸಿ ಭಿಕ್ಷುಗಳಿಗೆ ಧನವನ್ನು ದಾನಮಾಡಿದನು.

೧೧-೧೩. ಶುಭವಾದೊಂದು ಮುಹೂರ್ತದಲ್ಲಿ ಹಿಮವಂತನು, ಆ ಶಿಶುವಿಗೆ ಕಾಲೀ, ತಾರಾ, ಮಹಾವಿದ್ಯಾ, ಷೋಡಶೀ, ಭುವನೇಶ್ವರೀ, ಭೈರವೀ, ಛಿನ್ನಮಸ್ತಾ, ಸದ್ಯಾ, ಧೂಮಾವತೀ, ಬಗಲಾಮುಖೀ, ಸಿದ್ಧವಿದ್ಯಾ, ಮಾತಂಗೀ, ಕಮಲಾತ್ಮಿಕಾ, ಇತ್ಯಾದಿ ಹೆಸರುಗಳಿನ್ನು ಇಟ್ಟು ನಾಮಕರಣವನ್ನು ಮಾಡಿದನು. ಬ್ರಾಹ್ಮಣರಿಗೆ ದಾನಮಾಡಿದನು. ಗಾನದೊಡನೆ ಅನೇಕ ಉತ್ಸವಗಳನ್ನು ಮಾಡಿಸಿದನು. ಹೀಗೆ ಅನೇಕ ಉತ್ಸವಗಳನ್ನು ಮಾಡಿಸಿ ಹಿಮವಂತನು ಪುತ್ರವಂತನಾಗಿದ್ದರೂ ಕಾಲಿಯನ್ನು ನೋಡುತ್ತಾ ತುಂಬಾ ಸಂತಸದಿಂದಿದ್ದನು.

೧೪-೧೫. ಆ ಹಿಮವಂತನ ಅರಮನೆಯಲ್ಲಿ ಸುಂದರಿಯಾದ ದೇವಿಯು, ಮಳೆಗಾಲದಲ್ಲಿ ಗಂಗೆಯಂತೆಯೂ ಶರದೃತುವಿನ ಶುಕ್ಲಪಕ್ಷದ ಚಂದ್ರಕಲೆಯಂತೆಯೂ ದಿನದಿನವೂ ಬೆಳೆಯುತೊಡಗಿದಳು.

ಕುಲೋಚಿತೇನ ನಾಮ್ನಾ ತಾಂ ಪಾರ್ವತೀತ್ಯಾಜುಹಾವ ಹ ।
ಬಂಧುಪ್ರಿಯಾಂ ಬಂಧುಜನಃ ಸೌಶೀಲ್ಯಗುಣಸಂಯುತಾಂ ॥ ೧೬ ॥

ಉಮೇತಿ ಮಾತ್ರಾ ತಪಸೇ ನಿಷಿದ್ಧಾ ಕಾಲಿಕಾ ಚ ಸಾ ।
ಪಶ್ಚಾದುಮಾಖ್ಯಾಂ ಸುಮುಖೀ ಜಗಾಮ ಭುವನೇ ಮುನೇ ॥ ೧೭ ॥

ದೃಷ್ಟಿಃ ಪುತ್ರವತೋಽಪ್ಯದ್ರೇಸ್ತಸ್ಮಿಂಸ್ತೃಪ್ತಿಂ ಜಗಾಮ ನ ।
ಅಪತ್ಯೇ ಪಾರ್ವತೀತ್ಯಾಖ್ಯೇ ಸರ್ವಸೌಭಾಗ್ಯಸಂಯುತೇ ॥ ೧೮ ॥

ಮಧೋರನಂತಪುಷ್ಪಸ್ಯ ಚೂತೇ ಹಿ ಭ್ರಮರಾವಳಿಃ ।
ವಿಶೇಷಸಂಗಾ ಭವತಿ ಸಹಕಾರೇ ಮುನೀಶ್ವರ ॥ ೧೯ ॥

ಪೂತೋ ವಿಭೂಷಿತಶ್ಚಾಪಿ ಸ ಬಭೂವ ತಯಾ ಗಿರಿಃ ।
ಸಂಸ್ಕಾರವತ್ಯೈವ ಗಿರಾ ಮನೀಷೀವ ಹಿಮಾಲಯಃ ॥ ೨೦ ॥

ಪ್ರಭಾಮಹತ್ಯಾ ಶಿಖಯೇವ ದೀಪೋ ಭವನಸ್ಯ ಚ ।
ತ್ರಿಮಾರ್ಗಯೇವ ಸನ್ಮಾರ್ಗಸ್ತದ್ವದ್ಗಿರಿಜಯಾ ಗಿರಿಃ ॥ ೨೧ ॥

---

೧೬-೧೭. ಪರ್ವತಕುಲಕ್ಕನುಸಾರವಾಗಿ ಕಾಲಿಯನ್ನು ಬಂಧುಜನಗಳು "ಪಾರ್ವತೀ" ಎಂದು ಕರೆದರು. ಅನಂತರ ಆ ಪಾರ್ವತಿಯು ಬಾಲ್ಯದಲ್ಲಿಯೇ ಶಿವನನ್ನು ಕುರಿತು ತಪಸ್ಸಿಗಾಗಿ ಹೊರಡುತ್ತಲಿದ್ದಳು. ಆಗ ಅವಳ ತಾಯಿಯು ತಡೆಯುತ್ತಿದ್ದಳು. ಆದಕಾರಣ ಅವಳಿಗೆ "ಉಮಾ" (ಉ-ಎಲೌ ಪಾರ್ವತಿ, ಮಾ-ತಪಸ್ಸು ಬೇಡ) ಎಂದು ಹೆಸರು ಆಮೇಲಾಯಿತು.

೧೮-೧೯. ಹಿಮವಂತನಿಗೆ ಅನೇಕಜನ ಮಕ್ಕಳಿದ್ದರೂ ಪಾರ್ವತಿಯನ್ನು ನೋಡಿದಷ್ಟು ಅವನಿಗೆ ತೃಪ್ತಿಯಿಲ್ಲವು. ಅದು ನ್ಯಾಯವು. ವಸಂತಋತುವಿನಲ್ಲಿ ಬೇಕಾದಷ್ಟು ಬೇರೆ ಹೂವುಗಳಿದ್ದರೂ ದುಂಬಿಗಳು ಮಾವಿನ ಹೂವಿನಲ್ಲಿಯೇ ಹೆಚ್ಚು ಆಸಕ್ತಿಯುಳ್ಳವಾಗಿರುತ್ತವೆ.

೨೦-೨೧. ಆ ಪಾರ್ವತಿಯಿಂದ ಹಿಮವಂತನು ಸಂಸ್ಕಾರವುಳ್ಳ ವಾಕ್ಕಿನಿಂದ ಪಂಡಿತನು ಶೋಭಿಸುವಂತೆಯೂ ಪೂತನಾಗುವಂತೆಯೂ, ತುಂಬಾ ಪ್ರಭೆಯುಳ್ಳ ಶಿಖೆಯಿಂದ ದೀಪವು ಶೋಭಿಸುವಂತೆಯೂ, ಆಕಾಶಗಂಗೆಯಿಂದ ಸ್ವರ್ಗವು ಶೋಭಿಸುವಂತೆಯೂ ಶೋಭಿಸಿದನು. ಮತ್ತು ಪವಿತ್ರನಾದನು.

ಕಂದುಕೈಃ ಕೃತ್ರಿಮೈಃ ಪುತ್ರೈಸ್ಸಖೀಮಧ್ಯಗತಾ ಚ ಸಾ ।
ಗಂಗಾಸೈಕತವೇದೀಷು ಬಾಲ್ಯೇ ರೆಮೇ ಮುಹುರ್ಮುಹುಃ ॥ ೨೨ ॥

ಅಥ ದೇವೀ ಶಿವಾ ಸಾಚೋಪದೇಶಸಮಯೇ ಮುನೇ ।
ಪಪಾಠ ವಿದ್ಯಾಸ್ಸುಪ್ರೀತ್ಯಾ ಯತಚಿತ್ತಾ ಚ ಸದ್ಗುರೋಃ ॥ ೨೩ ॥

ಪ್ರಾಕ್ತನಾ ಜನ್ಮವಿದ್ಯಾಸ್ತಾಂ ಶರದೀವ ಪ್ರಪೇದಿರೇ ।
ಹಂಸಾಲಿಃ ಸ್ವರ್ಣದೀ ನಕ್ತಮಾತ್ಮಭಾಸೋ ಮಹೌಷಧಿಂ ॥ ೨೪ ॥

ಇತ್ಥಂ ಸುವರ್ಣಿತಾ ಲೀಲಾ ಶಿವಾಯಾಃ ಕಾಚಿದೇವ ಹಿ ।
ಅನ್ಯಲೀಲಾಂ ಪ್ರವಕ್ಷ್ಯೇಽಹಂ ಶೃಣು ತ್ವಂ ಪ್ರೇಮತೋ ಮುನೇ ॥ ೨೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಸಪ್ತಮೋಽಧ್ಯಾಯಃ

---

೨೨-೨೪. ಚಂಡುಗಳಿಂದಲೂ, ಆಟದ ಗೊಂಬೆಗಳಿಂದಲೂ ಸಹ ಪಾರ್ವತಿಯು ಸಖಿಯರೊಡನೆ ಗಂಗಾನದಿಯ ಮರಳು ದಿಣ್ಣೆಗಳಲ್ಲಿ ವಿಹರಿಸಿದಳು. ಸಕಾಲದಲ್ಲಿ ಆ ದೇವಿಯು ಗುರುಗಳಿಂದ ವಿದ್ಯೆಯನ್ನು ಸಾವಧಾನತೆಯಿಂದ ಅಭ್ಯಾಸಮಾಡಿದಳು. ಶರತ್ಕಾಲದಲ್ಲಿ ಹಂಸಗಳು ಗಂಗಾನದಿಯನ್ನು ಪಡೆಯುವಂತೆಯೂ, ರಾತ್ರಿ ಔಷಧಿಗಳನ್ನು (ಜ್ಯೋತಿರ್ಲತೆಗಳನ್ನು) ಅವುಗಳ ಜ್ಯೋತಿಯು ಬಂದು ಸೇರುವಂತೆಯೂ. ಪಾರ್ವತಿಯನ್ನು ಅವಳ ಹಿಂದಿನ ಜನ್ಮದ ವಿದ್ಯೆಗಳೆಲ್ಲವೂ ಬಂದು ಸೇರಿದುವು.

೨೫. ಎಲೈ ನಾರದ, ಹೀಗೆ ಪಾರ್ವತಿಯ ಬಾಲಲೀಲೆಯನ್ನು ಸಾಮಾನ್ಯವಾಗಿ ನಿನಗೆ ವರ್ಣಿಸಿರುವೆನು. ಇನ್ನೂ ಮಿಕ್ಕ ಲೀಲೆಗಳನ್ನು ಹೇಳುವೆನು ಆದರದಿಂದ ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಅಷ್ಟಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಏಕದಾ ತ್ವಂ ಶಿವಜ್ಞಾನೀ ಶಿವಲೀಲಾವಿದಾಂ ವರಃ ।
ಹಿಮಾಚಲಗೃಹಂ ಪ್ರೀತ್ಯಾಗಮಸ್ತ್ವಂ ಶಿವಪ್ರೇರಿತಃ ॥ ೧ ॥

ದೃಷ್ಟ್ವಾ ಮುನೇ ಗಿರೀಶಸ್ತ್ವಾಂ ನತ್ವಾನರ್ಚ ಸ ನಾರದ ।
ಆಹೂಯ ಚ ಸ್ವತನಯಾಂ ತ್ವದಂಘ್ರ್ಯೋಸ್ತಾಮಪಾತಯತ್ ॥ ೨ ॥

ಪುನರ್ನತ್ವಾ ಮುನೀಶ ತ್ವಾಮುವಾಚ ಹಿಮಭೂಧರಃ ।
ಸಾಂಜಲಿಃ ಸ್ವವಿಧಿಂ ಮತ್ವಾ ಬಹುಸನ್ನತಮಸ್ತಕಃ ॥ ೩ ॥

---

## ಎಂಟನೆಯ ಅಧ್ಯಾಯವು

೧-೩. ಬ್ರಹ್ಮನು ಹೇಳಿದನು:—ಎಲೈ ನಾರದ, ಮುಂದೆ ಒಂದು ದಿವಸ ಶಿವತತ್ವವನ್ನು ಬಲ್ಲವನೂ, ಶಿವಭಕ್ತನೂ ಆದ ನೀನು, ಶಿವಪ್ರೇರಣೆಯಂತೆ ಆ ಹಿಮವಂತನ ಅರಮನೆಗೆ ಹೋಗಿರಲು, ನಿನ್ನನ್ನು ನೋಡಿ ಹಿಮವಂತನು ನಮಸ್ಕರಿಸಿ ಆದರದಿಂದ ಪೂಜಿಸಿದನು. ಮಗಳ (ಪಾರ್ವತಿಯ) ನ್ನು ಕರೆದುಕೊಂಡುಬಂದು ನಿನ್ನ ಪಾದಗಳಿಗೆ ಬೀಳಿಸಿದನು. ತಿರುಗಿ ನಮಸ್ಕರಿಸಿ ಆ ಪರ್ವತರಾಜನು ಅಂಜಲಿಯನ್ನು ಧರಿಸಿ ವಿನಯದಿಂದ ನಿಂತು,

॥ ಹಿಮಾಲಯ ಉವಾಚ ॥

ಹೇ ಮುನೇ ನಾರದ ಜ್ಞಾನಿನ್ ಬ್ರಹ್ಮಪುತ್ರವರ ಪ್ರಭೋ ।
ಸರ್ವಜ್ಞಸ್ತ್ವಂ ಸಕರುಣಃ ಪರೋಪಕರಣೇ ರತಃ ॥ ೪ ॥

ಮತ್ಸುತಾಜಾತಕಂ ಬ್ರೂಹಿ ಗುಣದೋಷಸಮುದ್ಭವಂ ।
ಕಸ್ಯ ಪ್ರಿಯಾ ಭಾಗ್ಯವತೀ ಭವಿಷ್ಯತಿ ಸುತಾ ಮಮ ॥ ೫ ॥

॥ ಬ್ರಹ್ಮೋವಾಚ ॥

ಇತ್ಯುಕ್ತೋ ಮುನಿವರ್ಯ ತ್ವಂ ಗಿರೀಶೇನ ಹಿಮಾದ್ರಿಣಾ ।
ವಿಲೋಕ್ಯ ಕಾಲಿಕಾಹಸ್ತಂ ಸರ್ವಾಂಗಂ ಚ ವಿಶೇಷತಃ ॥ ೬ ॥

ಅವೋಚಸ್ತ್ವಂ ಗಿರಿಂ ತಾತ ಕೌತುಕೀ ವಾಗ್ವಿಶಾರದಃ ।
ಜ್ಞಾನೀ ವಿದಿತವೃತ್ತಾಂತೋ ನಾರದಃ ಪ್ರೀತಮಾನಸಃ ॥ ೭ ॥

॥ ನಾರದ ಉವಾಚ ॥

ಏಷಾ ತೇ ತನಯಾ ಮೇನೇ ಸುಧಾಂಶೋರಿವ ವರ್ಧಿತಾ ।
ಆದ್ಯಾ ಕಲಾ ಶೈಲರಾಜ ಸರ್ವಲಕ್ಷಣಶಾಲಿನೀ ॥ ೮ ॥

---

೪-೫. ಹಿಮವಂತನು ಹೇಳಿದನು :—ಬ್ರಹ್ಮಪುತ್ರಶ್ರೇಷ್ಠನಾದ ಓ ನಾರದ ಮುನಿ, ನೀನು ಜ್ಞಾನಿಯು, ಸರ್ವಜ್ಞನು, (ಎಲ್ಲವನ್ನೂ ಬಲ್ಲವನು), ಈ ನನ್ನ ಪುತ್ರಿಯ ಜಾತಕಫಲವನ್ನು ಹೇಳು. ಇವಳು ಯಾರ ಪತ್ನಿಯಾಗುವಳು? ಎಂಬುದನ್ನು ಹೇಳು ಎಂದನು.

೬-೭. ಬ್ರಹ್ಮನು ಹೇಳಿದನು :--ಹೀಗೆ ಹಿಮವಂತನು ಹೇಳಿದ ಮಾತುಗಳನ್ನು ಕೇಳಿ ಜ್ಞಾನಿಯಾದ ನೀನು ಪಾರ್ವತಿಯ ಕೈಯನ್ನೂ ಮಿಕ್ಕೆಲ್ಲಾ ಅಂಗಗಳನ್ನೂ ನೋಡಿ ಅವಳ ಭವಿಷ್ಯವನ್ನು ತಿಳಿದವನಾಗಿ ಸಂತೋಷದಿಂದ ಹೀಗೆ ಹೇಳಿದೆ.

೮-೧೧. ನಾರದನು ಹೇಳಿದನು :—ಎಲೈ ಪರ್ವತರಾಜ, ಈ ನಿನ್ನ ಪುತ್ರಿಯು ಚಂದ್ರನ ಮೊದಲನೆಯ ಕಲೆಯಂತೆ ವೃದ್ಧಿಹೊಂದುತ್ತಾ ರಾರಾಜಿಸುತ್ತಲಿರುವಳು. ಸಕಲ ಲಕ್ಷಣಗಳಿಂದಲೂ ಕೂಡಿರುವಳು. ಇವಳು ತನ್ನ ಪತಿಗೆ ತುಂಬಾ ಸುಖ

ಸ್ವಪತೇಃ ಸುಖದಾತ್ಯಂತಂ ಪಿತ್ರೋಃ ಕೀರ್ತಿವಿವರ್ಧಿನೀ ।
ಮಹಾಸಾಧ್ವೀ ಚ ಸರ್ವಾಸು ಮಹಾನಂದಕರೀ ಸದಾ ॥ ೯ ॥

ಸುಲಕ್ಷಣಾನಿ ಸರ್ವಾಣಿ ತ್ವತ್ಸುತಾಯಾಃ ಕರೇ ಗಿರೇ ।
ಏಕಾ ವಿಲಕ್ಷಣಾ ರೇಖಾ ತತ್ಫಲಂ ಶೃಣು ತತ್ತ್ವತಃ ॥ ೧೦ ॥

ಯೋಗೀ ನಗ್ನೋಽಗುಣೋಽಕಾಮೋ ಮಾತೃತಾತವಿವರ್ಜಿತಃ ।
ಅಮಾನೋಽಶಿವವೇಷಶ್ಚ ಪತಿರಸ್ಯಾಃ ಕಿಲೇದೃಶಃ ॥ ೧೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇ ಹಿ ಸತ್ಯಂ ಮತ್ವಾ ಚ ದಂಪತೀ ।
ಮೇನಾ ಹಿಮಾಚಲಶ್ಚಾಪಿ ದುಃಖಿತೌ ತೌ ಬಭೂವತುಃ ॥ ೧೨ ॥

ಶಿವಾಕರ್ಣ್ಯ ವಚಸ್ತೇ ಹಿ ತಾದೃಶಂ ಜಗದಂಬಿಕಾ ।
ಲಕ್ಷಣೈಸ್ತಂ ಶಿವಂ ಮತ್ವಾ ಜಹರ್ಷಾತಿ ಮುನೇ ಹೃದಿ ॥ ೧೩ ॥

ನ ಮೃಷಾ ನಾರದವಚಸ್ತ್ವಿತಿ ಸಂಚಿಂತ್ಯ ಸಾ ಶಿವಾ ।
ಸ್ನೇಹಂ ಶಿವಪದದ್ವಂದ್ವೇ ಚಕಾರಾತಿ ಹೃದಾ ತದಾ ॥ ೧೪ ॥

---

ವನ್ನುಂಟುಮಾಡುವವಳೂ ತಂದೆತಾಯಿಗಳಿಗೆ ಕೀರ್ತಿಯನ್ನು ತರುವವಳೂ ಆಗುವಳು. ಇವಳ ಕೈಯಲ್ಲಿ ಎಲ್ಲಾ ಶುಭಲಕ್ಷಣಗಳೂ ಇರುವುವು. ಆದರೆ ಒಂದು ಗೆರೆಯು ವಿಲಕ್ಷಣವಾಗಿರುವುದು. ಅದರ ಫಲವೇನೆಂದರೆ ಇವಳ ಪತಿಯು ದಿಗಂಬರನು, ನಿರ್ಗುಣನು, ನಿಸ್ಪೃಹನು, ತಾಯಿತಂದೆಗಳಿಲ್ಲದವನು, ಅಮಂಗಳವಾದ ವೇಷವುಳ್ಳವನು. ಇಂತಹ ಪತಿಯು ಇವಳಿಗೆ ಲಭಿಸುವನು ಎಂದನು. ೪

೧೨-೧೪. ಬ್ರಹ್ಮನು ಹೇಳಿದನು:—ನಾರದ, ಹೀಗೆ ನೀನು ಹೇಳಿದ ಮಾತನ್ನು ಕೇಳಿ ಮೇನಾ ಮತ್ತು ಹಿಮವಂತರು ತುಂಬಾ ದುಃಖಗೊಂಡರು. ಪಾರ್ವತಿಯು, ನೀನು ಹೇಳಿದ ಲಕ್ಷಣಗಳಿಂದ ಶಿವನೇ ತನ್ನ ಪತಿಯೆಂದು ತಿಳಿದು ಮನಸ್ಸಿನಲ್ಲಿ ತುಂಬಾ ಸಂತಸಗೊಂಡಳು. ನಾರದಮುನಿಯ ಮಾತು ಎಂದಿಗೂ ಸಟೆಯಾಗುವುದಿಲ್ಲ. ಶಿವನೇ ನನ್ನ ಪತಿಯು ಎಂದು ತಿಳಿದು ಪಾರ್ವತಿಯು ಶಿವನಲ್ಲಿ ತುಂಬಾ ಸ್ನೇಹವುಳ್ಳವಳಾದಳು.

ಉವಾಚ ದುಃಖಿತಃ ಶೈಲಸ್ತ್ವಾಂ ತದಾ ಹೃದಿ ನಾರದ ।
ಕಮುಪಾಯಂ ಮುನೇ ಕುರ್ಯಾಮತಿದುಃಖಮಭೂದಿತಿ ॥ ೧೫ ॥

ತಚ್ಛ್ರುತ್ವಾ ತ್ವಂ ಮುನೇ ಪ್ರಾತ್ಥ ಮಹಾಕೌತುಕಕಾರಕಃ ।
ಹಿಮಾಚಲಂ ಶುಭೈರ್ವಾಕ್ಯೈರ್ಹರ್ಷಯರ್ನ್ವಾಗ್ವಿಶಾರದಃ ॥ ೧೬ ॥

॥ ನಾರದ ಉವಾಚ ॥

ಸ್ನೇಹಾಚ್ಛೃಣು ಗಿರೇ ವಾಕ್ಯಂ ಮಮ ಸತ್ಯಂ ಮೃಷಾ ನ ಹಿ ।
ಕರರೇಖಾ ಬ್ರಹ್ಮಲಿಪಿರ್ನ ಮೃಷಾ ಭವತಿ ಧ್ರುವಂ ॥ ೧೭ ॥

ತಾದೃಶೋಽಸ್ಯಾಃ ಪತಿಃ ಶೈಲ ಭವಿಷ್ಯತಿ ನ ಸಂಶಯಃ ।
ತತ್ರೋಪಾಯಂ ಶೃಣು ಪ್ರೀತ್ಯಾ ಯಂ ಕೃತ್ವಾ ಲಪ್ಸ್ಯಸೇ ಸುಖಂ ॥ ೧೮ ॥

ತಾದೃಶೋಽಸ್ತಿ ವರಃ ಶಂಭುರ್ಲೀಲಾರೂಪಧರಃ ಪ್ರಭುಃ ।
ಕುಲಕ್ಷಣಾನಿ ಸರ್ವಾಣಿ ತತ್ರ ತುಲ್ಯಾನಿ ಸುದ್ಗುಣೈಃ ॥ ೧೯ ॥

---

೧೫-೧೬. ಆಗ ಹಿಮವಂತನು ದುಃಖಿತನಾಗಿ ನಿನ್ನನ್ನು ಕುರಿತು ಓ ನಾರದ ಮುನಿ, ನಿನ್ನ ಮಾತನ್ನು ಕೇಳಿ ನನಗೆ ತುಂಬಾ ದುಃಖವಾಗಿದೆ. ಇದಕ್ಕಾಗಿ ಏನು ಉಪಾಯವನ್ನು ಮಾಡಲಿ? ಎಂದು ಕೇಳಿದನು—ಅದನ್ನು ಕೇಳಿ ಆಗ ನೀನು ಅವನನ್ನು ಹರ್ಷಗೊಳಿಸಲು ಶುಭವಾದ ಮಾತುಗಳಿಂದ ಹೀಗೆ ಹೇಳಿದೆ.

೧೭-೧೮. ನಾರದನು ಹೇಳಿದನು:—ಎಲೈ ಪರ್ವತರಾಜನೆ, ಸ್ನೇಹದಿಂದ ಹೇಳುವೆನು ಕೇಳು. ನನ್ನ ಮಾತು ಸತ್ಯವು, ಎಂದಿಗೂ ಸಟೆಯಾಗಲಾರದು. ಕೈಯ್ಯಲ್ಲಿನ ಗೆರೆಯು ಬ್ರಹ್ಮಲಿಪಿಯು. ಅದು ಸಟೆಯಾಗುವುದಿಲ್ಲ ನಾನು ಹೇಳಿದಂತಹವನೇ ಪಾರ್ವತಿಗೆ ಪತಿಯಾಗುವನು. ಅದಕ್ಕೊಂದು ಉಪಾಯವನ್ನು ಹೇಳುವೆನು ಅದರಿಂದ ಸುಖವಾಗುವುದು.

೧೯-೨೦. ನಾನು ಹೇಳಿದಂತಹ ವರನೋರ್ವನಿರುವನು. ಅವನು ಸಾಮಾನ್ಯನಲ್ಲ. ಜಗದೊಡೆಯನಾದ ಶಂಭುವು ಅನೇಕ ಲೀಲಾರೂಪಗಳನ್ನು ಧರಿಸುವನು. ಕೆಟ್ಟ ಲಕ್ಷಣಗಳೆಲ್ಲವೂ ಅವನಲ್ಲಿ ಸದ್ಗುಣಗಳೇ ಆಗಿರುವುವು. ಪರಮೇಶ್ವರನಲ್ಲಿನ ದೋಷವು ದುಃಖವನ್ನುಂಟುಮಾಡುವುದಿಲ್ಲ. ಸಾಮಾನ್ಯ ಮನುಷ್ಯನಲ್ಲಿ

ಪ್ರಭೌ ದೋಷೋ ನ ದುಃಖಾಯ ದುಃಖದೋಽತ್ಯಪ್ರಭೌ ಹಿ ಸಃ ।
ರವಿಪಾವಕಗಂಗಾನಾಂ ತತ್ರ ಜ್ಞೇಯಾ ನಿದರ್ಶನಾ ॥ ೨೦ ॥

ತಸ್ಮಾಚ್ಛಿವಾಯ ಕನ್ಯಾಂ ಸ್ವಾಂ ಶಿವಾಂ ದೇಹಿ ವಿವೇಕತಃ ।
ಶಿವಃ ಸರ್ವೇಶ್ವರಸ್ಸೇವ್ಯೋಽವಿಕಾರೀ ಪ್ರಭುರವ್ಯಯಃ ॥ ೨೧ ॥

ಶೀಘ್ರಪ್ರಸಾದಃ ಸ ಶಿವಸ್ತ್ವಾಂ ಗೃಹೀಷ್ಯತ್ಯಸಂಶಯಂ ।
ತಪಸ್ಸಾಧ್ಯೋ ವಿಶೇಷೇಣ ಯದಿ ಕುರ್ಯಾಚ್ಛಿವಾ ತಪಃ ॥ ೨೨ ॥

ಸರ್ವಥಾ ಸುಸಮರ್ಥೋ ಹಿ ಸ ಶಿವಃ ಸಕಲೇಶ್ವರಃ ।
ಕುಲಿಪೇರಪಿ ವಿಧ್ವಂಸೀ ಭಕ್ತಾಧೀನಸ್ಸುಖಪ್ರದಃ ॥ ೨೩ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತ್ವಂ ಪುನಸ್ತಾತ ಕೌತುಕೀ ಬ್ರಹ್ಮವಿನ್ಮುನೇ ।
ಶೈಲರಾಜಮುಪೋಚೋ ಹಿ ಹರ್ಷಯನ್ ವಚನೈಶ್ಶುಭೈಃ ॥ ೨೪ ॥

---

ದೋಷವಿದ್ದರೆ ಅದು ಕೆಡಕು. ದುಃಖವನ್ನುಂಟುಮಾಡುವಂತಹುದು. ಈ ವಿಷಯದಲ್ಲಿ ಸೂರ್ಯ, ಅಗ್ನಿ, ಗಂಗೆ ಇವರೇ ದೃಷ್ಟಾಂತವು.

೨೧-೨೩. ಆದುದರಿಂದ ಎಲೈ ಗಿರಿರಾಜ, ವಿವೇಕದಿಂದ ನಿನ್ನ ಮಗಳನ್ನು ಶಿವನಿಗೆ ಮದುವೆ ಮಾಡಿಕೊಡು. ಶಿವನು ಸರ್ವೇಶ್ವರನು, ಎಲ್ಲರೂ ಅವನನ್ನು ಸೇವಿಸಬೇಕು. ಜನ್ಮಮೊದಲಾದ ಯಾವ ವಿಕಾರಗಳೂ ಅವನಿಗಿಲ್ಲವು. ಅವನಿಗೆ ನಾಶವಿಲ್ಲ, ಬಹಳ ಜಾಗ್ರತೆ ಅವನು ಪ್ರಸನ್ನನಾಗುವನು. ಇಂತಹ ಶಿವನು ಸಂಶಯವಿಲ್ಲದೇ ಪಾರ್ವತಿಯನ್ನು ಮದುವೆಯಾಗುವನು. ಆದರೆ ಈ ಕಾರ್ಯವು ತಪಸ್ಸಿನಿಂದಲೇ ಆಗಬೇಕಾಗಿರುತ್ತೆ. ಪಾರ್ವತಿಯು ಶಿವನನನ್ನು ಕುರಿತು ತಪಸ್ಸು ಮಾಡಬೇಕು. ಪರಮೇಶ್ವರನಾದ ಆ ಶಿವನು ಏನುಬೇಕಾದರೂ ಮಾಡಬಲ್ಲನು. ಕೆಟ್ಟ ಬ್ರಹ್ಮಲಿಪಿಯನ್ನೂ ಅಳಿಸಬಲ್ಲನು. ಭಕ್ತಾಧೀನನು, ಸುಖವನ್ನು ಕೊಡುವನವನು.

೨೪-೨೫. ಬ್ರಹ್ಮನು ಹೇಳಿದನು:—ಎಲೈ ನಾರದ ನೀನು ಹೀಗೆ ಹೇಳಿ ಪುನಃ ಆ ಹಿಮವಂತನನ್ನು ಕುರಿತು ಹೀಗೆ ಹೇಳಿದೆ. ಎಲೈ ಗಿರಿರಾಜ, ಈ ನಿನ್ನ

ಭಾವಿನೀ ದಯಿತಾ ಶಂಭೋಸ್ಸಾನುಕೂಲಾ ಸದಾ ಗಿರೇ ।
ಮಹಾಸಾಧ್ವೀ ಸುವ್ರತಾ ಚ ಪಿತ್ರೋಸ್ಸುಖವಿವರ್ಧಿನೀ ॥ ೨೫ ॥

ಶಂಭೋಶ್ಚಿತ್ತಂ ವಶೇ ಚೈಷಾ ಕರಿಷ್ಯತಿ ತಪಸ್ವಿನೀ ।
ಸ ಚಾಪ್ಯೇನಾಮೃತೇ ಯೋಷಾಂ ನ ಹ್ಯನ್ಯಾಮುದ್ವಹಿಷ್ಯತಿ ॥ ೨೬ ॥

ಏತಯೋಸ್ಸದೃಶಂ ಪ್ರೇಮ ನ ಕಸ್ಯಾಪ್ಯೇವ ತಾದೃಶಂ ।
ಭೂತಂ ವಾ ಭವಿತಾ ವಾಪಿ ಸಾಧುನಾ ಚ ಪ್ರವರ್ತತೇ ॥ ೨೭ ॥

ಅನಯೋಸ್ಸುರಕಾರ್ಯಾಣಿ ಕರ್ತವ್ಯಾನಿ ಮೃತಾನಿ ಚ ।
ಯಾನಿ ಯಾನಿ ನಗಶ್ರೇಷ್ಠ ಜೀವಿತಾನಿ ಪುನಃ ಪುನಃ ॥ ೨೮ ॥

ಅನಯಾ ಕನ್ಯಯಾ ತೇಽದ್ರೇ ಅರ್ಧನಾರೀಶ್ವರೋ ಹರಃ ।
ಭವಿಷ್ಯತಿ ತಥಾ ಹರ್ಷದಿನಯೋರ್ಮಿಲಿತಂ ಪುನಃ ॥ ೨೯ ॥

ಶರೀರಾರ್ಧಂ ಹರಸ್ಯೈಷಾ ಹರಿಷ್ಯತಿ ಸುತಾ ತವ ।
ತಪಃಪ್ರಭಾವಾತ್ಸಂತೋಷ್ಯ ಮಹೇಶಂ ಸಕಲೇಶ್ವರಂ ॥ ೩೦ ॥

---

ಸುತೆಯು ಶಂಕರನಿಗೆ ಅನುಕೂಲಳಾಗಿದ್ದು ಅವನಿಗೆ ತುಂಬಾ ಪ್ರಿಯಳಾಗುವಳು. ಮಹಾಪತಿವ್ರತೆಯಾಗುವಳು. ತಂದೆತಾಯಿಗಳಿಗೆ ಸುಖವನ್ನುಂಟುಮಾಡುವಳು.

೨೬-೨೮. ಈ ಪಾರ್ವತಿಯು ಶಂಕರನ ಮನಸ್ಸನ್ನಪಹರಿಸುವಳು. ಆ ಶಂಕರನೂ ಸಹ ಇವಳನ್ನು ಹೊರತು ಇನ್ನಾವ ಸ್ತ್ರೀಯನ್ನೂ ಮದುವೆಯಾಗುವುದಿಲ್ಲ. ಈ ಪಾರ್ವತೀಪರಮೇಶ್ವರರಿಗೆ ಇರುವಂತೆ ಪ್ರೇಮವು ಇನ್ನಾರಿಗೂ ಇರಲಾರದು. ಹಿಂದೂ ಇರಲಿಲ್ಲ. ಮುಂದೂ ಇರಲಾರದು. ಇವರೀರ್ವರು ಅನೇಕ ದೇವಕಾರ್ಯಗಳನ್ನು ನಿರ್ವಹಿಸುವರು.

೨೯-೩೦. ಈ ಪಾರ್ವತಿಯಿಂದ ಹರನು ಅರ್ಧನಾರೀಶ್ವರನಾಗುವನು. ಇವಳು ತಪಸ್ಸಿನಿಂದ ಪರಮೇಶ್ವರನನ್ನು ಸಂತೋಷಗೊಳಿಸಿ ಅವನರ್ಧಶರೀರವನ್ನು ಅಪಹರಿಸುವಳು.

ಸ್ವರ್ಣಗೌರೀ ಸುವರ್ಣಾಭಾ ತಪಸಾ ತೋಷ್ಯ ತಂ ಹರಂ ।
ವಿದ್ಯುದ್ಗೌರತಮಾ ಚೇಯಂ ತವ ಪುತ್ರೀ ಭವಿಷ್ಯತಿ ॥ ೩೧ ॥

ಗೌರೀತಿ ನಾಮ್ನಾ ಕನ್ಯಾ ತು ಖ್ಯಾತಿಮೇಷಾ ಗಮಿಷ್ಯತಿ ।
ಸರ್ವದೇವಗಣೈಃ ಪೂಜ್ಯಾ ಹರಿಬ್ರಹ್ಮಾದಿಭಿಸ್ತಥಾ ॥ ೩೨ ॥

ನಾನ್ಯಸ್ಮೈ ತ್ವಮಿಮಾಂ ದಾತುಮಿಹಾರ್ಹಸಿ ನಗೋತ್ತಮ ।
ಇದಂ ಚೋಪಾಂಶು ದೇವಾನಾಂ ನ ಪ್ರಕಾಶ್ಯಂ ಕದಾಚನ ॥ ೩೩ ॥

॥ ಬ್ರಹ್ಮೋವಾಚ ॥

ಇತಿ ತಸ್ಯ ವಚಃ ಶ್ರುತ್ವಾ ದೇವರ್ಷೇ ತವ ನಾರದ ।
ಉವಾಚ ಹಿಮವಾನ್ ವಾಕ್ಯಂ ಮುನೇ ತ್ವಾಂ ವಾಗ್ವಿಶಾರದಃ ॥ ೩೪ ॥

॥ ಹಿಮಾಲಯ ಉವಾಚ ॥

ಹೇ ಮುನೇ ನಾರದ ಪ್ರಾಜ್ಞ ವಿಜ್ಞಪ್ತಿಂ ಕಾಂಚಿದೇವ ಹಿ ।
ಕರೋಮಿ ತಾಂ ಶೃಣು ಪ್ರೀತ್ಯಾತಸ್ತ್ವಂ ಪ್ರಮುದಮಾವಹ ॥ ೩೫ ॥

---

೩೧-೩೩. ಮತ್ತು ಈ ಪಾರ್ವತಿಯು ತಪಸ್ಸಿನಿಂದ ಶಂಕರನನ್ನು ಪ್ರಸನ್ನಗೊಳಿಸಿ, ಚಿನ್ನದಂತೆಯೂ, ವಿದ್ಯುತ್ತಿನಂತೆಯೂ ವರ್ಣವುಳ್ಳವಳಾಗುವಳು. ಆಗ ಇವಳಿಗೆ "ಗೌರೀ" ಎಂಬ ಹೆಸರು ಬರುವುದು. ಹರಿ ಬ್ರಹ್ಮ ಮೊದಲಾದ ಎಲ್ಲಾ ದೇವತೆಗಳಿಗೂ ಸಹ ಇವಳು ಪೂಜ್ಯಳಾಗುವಳು, ಆದಕಾರಣ ಎಲೈ ಪರ್ವತರಾಜ, ಈ ನಿನ್ನ ಪುತ್ರಿಯನ್ನು ಹರನಿಗೆ ಹೊರತು ಇನ್ನಾರಿಗೂ ಕೊಡಕೂಡದು. ಇದು ಅತಿ ರಹಸ್ಯವಾದ ವಿಷಯವು. ಯಾರಿಗೂ ಹೇಳಕೂಡದು.

೩೪. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ನೀನು ಹೇಳಿದ ಮಾತನ್ನು ಕೇಳಿ ಹಿಮವಂತನು ಮತ್ತೆ ಹೇಳಿದನು.

೩೫. ಹಿಮಾಲಯನು ಹೇಳಿದನು:—ಪ್ರಾಜ್ಞನಾದ ಓ ನಾರದಮುನಿ, ನಾನೊಂದು ವಿಷಯವನ್ನು ವಿಜ್ಞಾಪಿಸಿಕೊಳ್ಳುವೆನು, ಕೇಳು.

ಶ್ರೂಯತೇ ತ್ಯಕ್ತಸಂಗಸ್ಸ ಮಹಾದೇವೋ ಯತಾತ್ಮವಾನ್ ।
ತಪಶ್ಚರತಿ ಸನ್ನಿತ್ಯಂ ದೇವಾನಾಮಪ್ಯಗೋಚರಃ ॥ ೩೬ ॥

ಸ ಕಥಂ ಧ್ಯಾನಮಾರ್ಗಸ್ಥಃ ಪರಬ್ರಹ್ಮಾರ್ಪಿತಂ ಮನಃ ।
ಭ್ರಂಶಯಿಷ್ಯತಿ ದೇವರ್ಷೇ ತತ್ರ ಮೇ ಸಂಶಯೋ ಮಹಾನ್ ॥ ೩೭ ॥

ಅಕ್ಷರಂ ಪರಮಂ ಬ್ರಹ್ಮ ಪ್ರದೀಪಕಲಿಕೋಪಮಂ ।
ಸದಾಶಿವಾಖ್ಯಂ ಸ್ವಂ ರೂಪಂ ನಿರ್ವಿಕಾರಮಜಾಪರಂ ॥ ೩೮ ॥

ನಿರ್ಗುಣಂ ಸಗುಣಂ ತಚ್ಚ ನಿರ್ವಿಶೇಷಂ ನಿರೀಹಕಂ ।
ಅತಃ ಪಶ್ಯತಿ ಸರ್ವತ್ರ ನ ತು ಬಾಹ್ಯಂ ನಿರೀಕ್ಷತೇ ॥ ೩೯ ॥

ಇತಿ ಸ ಶ್ರೂಯತೇ ನಿತ್ಯಂ ಕಿನ್ನರಾಣಾಂ ಮುಖಾಸ್ಮುನೇ ।
ಇಹಾಗತಾನಾಂ ಸುಪ್ರೀತ್ಯಾ ಕಿಂ ತನ್ಮಿಥ್ಯಾವಚೋ ಧ್ರುವಂ ॥ ೪೦ ॥

ವಿಶೇಷತಃ ಶ್ರೂಯತೇ ಸ ಸಾಕ್ಷ್ಯಾನ್ನಾಮ್ನಾ ತಥಾ ಹರಃ ।
ಸಮಯಂ ಕೃತವಾನ್ ಪೂರ್ವಂ ತನ್ಮಯಾ ಗದಿತಂ ಶೃಣು ॥ ೪೧ ॥

---

೩೬-೩೭. ಆ ಮಹಾದೇವನು ವಿರಕ್ತನಾಗಿ ಜಿತೇಂದ್ರಿಯತೆಯಿಂದ ತಪಸ್ಸನ್ನಾಚರಿಸುತ್ತಲಿರುವನು. ದೇವತೆಗಳಿಗೂ ಅವನು ಗೋಚರಿಸುತ್ತಲಿಲ್ಲ ಎಂದು ಕೇಳಿರುತ್ತೇನೆ. ಇಂತಹ ಶಿವನು ಧ್ಯಾನಮಾರ್ಗದಿಂದ ಪರಬ್ರಹ್ಮನಲ್ಲಿಟ್ಟ ಮನಸ್ಸನ್ನು ಹೇಗೆ ಸಂಸಾರಮಾರ್ಗಕ್ಕೆ ತಿರುಗಿಸುವನು? ಈ ವಿಷಯದಲ್ಲಿ ನನಗೆ ತುಂಬಾ ಸಂಶಯವಿರುವುದು.

೩೮-೩೯. ಬ್ರಹ್ಮವಸ್ತುವು ಪ್ರದೀಪಶಿಖೆಯಂತೆ ಪ್ರಕಾಶಸ್ವರೂಪವಾದುದು, ವಿಕಾರವಿಲ್ಲದುದು, ಪ್ರಕೃತಿಗಿಂತಲೂ ಭಿನ್ನವಾದುದು, ನಿರ್ಗುಣವಾದುದು, ಅದೇ ಮಾಯೆಯಿಂದ ಸಗುಣವಾಗಿ ತೋರುವುದು. ನಿಜವಾಗಿ ಅದಕ್ಕೆ ಯಾವ ವಿಶೇಷವೂ ಇಲ್ಲ ಇಂತಹ ಬ್ರಹ್ಮವಸ್ತುವನ್ನೇ ಎಲ್ಲೆಲ್ಲಿಯೂ ನೋಡುವನು. ಹೊರಗಿನ ಮಿಕ್ಕಾವವಸ್ತುವನ್ನೂ ಅವನು ನೋಡುವುದಿಲ್ಲ.

೪೦. ಹೀಗೆಂದು ಕಿನ್ನರರ ಮುಖದಿಂದ ಕೇಳಿರುವೆನು. ಈ ಮಾತು ಸಟೆಯಾದುದೇನು? ಸತ್ಯವಲ್ಲವೆ?

೪೧-೪೨. ಇನ್ನೂ ಒಂದು ವಿಷಯವಿರುವುದು. ಆ ಶಿವನು ತನ್ನಮೇಲೆ ಆಣೆಯಿಟ್ಟು ಸತಿದೇವಿಯನ್ನು ಕುರಿತು ಹೀಗೆ ಪ್ರತಿಜ್ಞೆಮಾಡಿರುವನು. ಅದನ್ನು

ನ ತ್ವಾಮೃತೇಽನ್ಯಾಂ ವರಯೇ ದಾಕ್ಷಾಯಣಿ ಸತಿ ಪ್ರಿಯೇ ।
ಭಾರ್ಯಾರ್ಥಂ ನ ಗ್ರಹೀಷ್ಯಾಮಿ ಸತ್ಯಮೇತದ್ಬ್ರವೀಮಿ ತೇ ॥ ೪೨ ॥

ಇತಿ ಸತ್ಯಾ ಸಮಂ ತೇನ ಪುರೈವ ಸಮಯಃ ಕೃತಃ ।
ತಸ್ಯಾಂ ಮೃತಯಾಂ ಸ ಕಥಂ ಸ್ವಯಮನ್ಯಾಂ ಗ್ರಹೀಷ್ಯತಿ ॥ ೪೩ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸ ಗಿರಿಸ್ತೂಷ್ಣೀಮಾಸ ತಸ್ಯ ಪುರಸ್ತವ ।
ತದಾಕರ್ಣ್ಯಾರ್ಥ ದೇವರ್ಷೇ ತ್ವಂ ಪ್ರಾವೋಚಸ್ಸುತತ್ತ್ವತಃ ॥ ೪೪ ॥

॥ ನಾರದ ಉವಾಚ ॥

ನ ವೈ ಕಾರ್ಯಾ ತ್ವಯಾ ಚಿಂತಾ ಗಿರಿರಾಜ ಮಹಾಮತೇ ।
ಏಷಾ ತವ ಸುತಾ ಕಾಳೀ ದಕ್ಷಜಾ ಹ್ಯಭವತ್ಪುರಾ ॥ ೪೫ ॥

ಸತೀನಾಮಾಭವತ್ತಸ್ಯಾಸ್ಸರ್ವಮಂಗಲದಂ ಸದಾ ।
ಸತೀ ಸಾ ವೈ ದಕ್ಷಕನ್ಯಾ ಭೂತ್ವಾ ರುದ್ರಪ್ರಿಯಾಭವತ್ ॥ ೪೬ ॥

---

ಹೇಳುವೆನು ಕೇಳು. “ಎಲೌ ಪ್ರಿಯಳಾದ ದಾಕ್ಷಾಯಣಿ, ನಿನ್ನ ಹೊರತು ಇನ್ನಾರನ್ನೂ ನಾನು ಮದುವೆಯಾಗುವುದಿಲ್ಲ. ಇದು ಸತ್ಯವಾದ ಮಾತು.” ಹೀಗೆಂದು ಶಿವನು ಸತೀದೇವಿಗೆ ಪ್ರತಿಜ್ಞೆಮಾಡಿ ಹೇಳಿರುವನು. ಆ ಸತೀದೇವಿಯು ದಕ್ಷಯಾಗದಲ್ಲಿ ಮೃತಳಾದಳು. ಎಂದಮೇಲೆ ಆ ಶಿವನು ಈಗ ಬೇರೆ ಸ್ತ್ರೀಯನ್ನು ಮದುವೆಯಾಗುವನೇನು ?

೪೪. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ನಿನಗೆ ಹೇಳಿ ಹಿಮವಂತನು ಸುಮ್ಮನಾದನು. ಆಗ ನೀನು ಅವನಿಗೆ ನಿಜವಾದ ವಿಷಯವನ್ನು ಹೀಗೆ ಹೇಳಿದೆ.

೪೫-೪೭. ನಾರದನು ಹೇಳಿದನು :—ಬುದ್ಧಿಶಾಲಿಯಾದ ಎಲೈ ಗಿರಿರಾಜ, ಈ ವಿಷಯದಲ್ಲಿ ನೀನು ಚಿಂತಿಸಬೇಕಾದುದಿಲ್ಲ. ಈ ಪಾರ್ವತಿಯೇ ಹಿಂದಿನ ಜನ್ಮದಲ್ಲಿ ದಕ್ಷಪುತ್ರಿಯಾಗಿದ್ದಳು. “ಸತೀದೇವೀ” ಎಂಬ ಮಂಗಳವಾದ ಹೆಸರು ಅವಳಿ

ಪಿತುರ್ಯಜ್ಞೇ ತಥಾ ಪ್ರಾಪ್ಯಾನಾದರಂ ಶಂಕರಸ್ಯ ಚ ।
ತಂ ದೃಷ್ಟ್ವಾ ಕೋಪಮಾಧಾಯಾತ್ಯಾಕ್ಷೀದ್ದೇಹಂ ಚ ಸಾ ಸತೀ ॥ ೪೭ ॥

ಪುನಸ್ಸೈವ ಸಮುತ್ಪನ್ನಾ ತವ ಗೇಹೇಂಬಿಕಾ ಶಿವಾ ।
ಪಾರ್ವತೀ ಹರಪತ್ನೀಯಂ ಭವಿಷ್ಯತಿ ನ ಸಂಶಯಃ ॥ ೪೮ ॥

ಏತತ್ಸರ್ವಂ ವಿಸ್ತರಾತ್ತ್ವಂ ಪ್ರೋಕ್ತವಾನ್ ಭೂಭೃತೇ ಮುನೇ ।
ಪೂರ್ವರೂಪಂ ಚರಿತ್ರಂ ಚ ಪಾರ್ವತ್ಯಾಃ ಪ್ರೀತಿವರ್ಧನಂ ॥ ೪೯ ॥

ತಂ ಸರ್ವಂ ಪೂರ್ವವೃತ್ತಾಂತಂ ಕಾಲ್ಯಾ ಮುನಿಮುಖಾದ್ಗಿರಿಃ ।
ಶ್ರುತ್ವಾ ಸಪುತ್ರದಾರಸ್ಸ ತದಾ ನಿಸ್ಸಂಶಯೋಽಭವತ್ ॥ ೫೦ ॥

ತತಃ ಕಾಲೀ ಕಥಾಂ ಶ್ರುತ್ವಾ ನಾರದಸ್ಯ ಮುಖಾತ್ತದಾ ।
ಲಜ್ಜಯಾಧೋಮುಖೀ ಭೂತ್ವಾ ಸ್ಮಿತವಿಸ್ತಾರಿತಾಸನಾ ॥ ೫೧ ॥

ಕರೇಣ ತಾಂ ತು ಸಂಸ್ಪೃಶ್ಯ ಶ್ರುತ್ವಾ ತಚ್ಚರಿತಂ ಗಿರಿಃ ।
ಮೂರ್ಧ್ನಿ ಶಶ್ವತ್ತಥಾಘ್ರಾಯ ಸ್ವಾಸನಾಂತೇ ನ್ಯವೇಶಯತ್ ॥ ೫೨ ॥

---

ಗಿದ್ದಿತು. ಅವಳು ತಂದೆಯಿಂದ ಯಜ್ಞದಲ್ಲಿ ಅವಮಾನವನ್ನು ಹೊಂದಿ ಕೋಪದಿಂದ ಅಲ್ಲಿಯೇ ಶರೀರವನ್ನು ತ್ಯಜಿಸಿದಳು.

೪೮-೫೦. ಎಲೈ ಹಿಮವಂತನೆ, ಆ ಸತೀದೇವಿಯೇ ತಿರುಗಿ ನಿನ್ನ ಮನೆಯಲ್ಲಿ ಪಾರ್ವತಿಯಾಗಿ ಜನಿಸಿದಳು. ಇವಳು ಶಿವನ ಮಡದಿಯಾಗುವಳು. ಇದರಲ್ಲಿ ಸಂಶಯವಿಲ್ಲ. (ಬ್ರಹ್ಮನು ಹೇಳಿದನು) ಎಲೈ ನಾರದ, ಇದೆಲ್ಲ ಪಾರ್ವತಿಯ ಪೂರ್ವಜನ್ಮದ ಚರಿತ್ರೆಯನ್ನೂ ರೂಪವನ್ನೂ ಹಿಮವಂತನಿಗೆ ನೀನು ವಿಸ್ತಾರವಾಗಿ ಹೇಳಿದೆ. ನಿನ್ನಿಂದ ಈ ಪಾರ್ವತೀ ಪೂರ್ವ ವೃತ್ತಾಂತವನ್ನು ಕೇಳಿ ಹಿಮವಂತನು ಆಗ ಯಾವ ಸಂಶಯವೂ ಇಲ್ಲದವನಾದನು.

೫೧-೫೨. ಆಗ ಪಾರ್ವತಿಯು ನಾರದನು ಹೇಳಿದ ತನ್ನ ಪೂರ್ವ ಚರಿತ್ರೆಯನ್ನು ಕೇಳಿ ತುಂಬಾ ಲಜ್ಜೆಗೊಂಡು ಮುಗುಳುನಗೆಯೊಡನೆ ತಲೆಬಗ್ಗಿಸಿ ನಿಂತಳು. ಹಾಗೆ ನಿಂತಿರುವ ಪಾರ್ವತಿಯನ್ನು ಹಿಮವಂತನು ಕೈಯಿಂದ ನೇವರಿಸಿ ಮುಂದಲೆಯನ್ನು ಪ್ರೀತಿಯಿಂದ ಮೂಸಿ ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡನು.

ತತಸ್ತ್ವಂ ತಾಂ ಪುನರ್ದೃಷ್ಟ್ವಾವೋಚಸ್ತತ್ರ ಸ್ಥಿತಾಂ ಮುನೇ ।
ಹರ್ಷಯನ್ಗಿರಿರಾಜಂ ಚ ಮೇನಕಾಂ ತನಯೈಸ್ಸಹ ॥ ೩೩ ॥

ಸಿಂಹಾಸನಂ ತು ಕಿಂತ್ವಸ್ಯಾಶ್ಶೈಲರಾಜ ಭವೇದತಃ ।
ಶಂಭೋರೂರೌ ಸದೈತಸ್ಯಾ ಆಸನಂ ತು ಭವಿಷ್ಯತಿ ॥ ೩೪ ॥

ಹರೋರೂರ್ವಾಸನಂ ಪ್ರಾಪ್ಯ ತನಯಾ ತವ ಸಂತತಂ ।
ನ ಯತ್ರ ಕಸ್ಯಚಿದ್ದೃಷ್ಟಿರ್ಮಾನಸಂ ವಾ ಗಮಿಷ್ಯತಿ ॥ ೩೫ ॥

॥ ಬ್ರಹ್ಮೋವಾಚ ॥

ಇತಿ ವಚನಮುದಾರಂ ನಾರದ ತ್ವಂ ಗಿರೀಶಂ
ತ್ರಿದಿವಮಗಮ ಉಕ್ತ್ವಾ ತತ್ಕ್ಷಣಾದೇವ ಪ್ರೀತ್ಯಾ ।
ಗಿರಿಪತಿರಪಿ ಚಿತ್ತೇ ಚಾರುಸರ್ವೋಪಯುಕ್ತಃ
ಸ್ವಗೃಹಮಗಮದೇವಂ ಸರ್ವಸಂಪತ್ಸಮೃದ್ಧಂ ॥ ೩೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಅಷ್ಟಮೋಽಧ್ಯಾಯಃ

---

೩೩. ಬಳಿಕ ನೀನು ಆ ಪಾರ್ವತಿಯನ್ನು ನೋಡಿ ತಿರುಗಿ ಮೇನಾದೇವಿಯನ್ನೂ, ಹಿಮವಂತನನ್ನೂ ಕುರಿತು ಹೀಗೆ ಹೇಳಿದೆ,

೩೪-೩೫. ಎಲೈ ಗಿರಿರಾಜ, ಈ ಸಿಂಹಾಸನದ ಅಪೇಕ್ಷೆಯು ಪಾರ್ವತಿಗಿಲ್ಲ. ಇವಳಿಗೆ ಮುಂದೆ ಶಂಕರನ ಪರಮಪೂಜ್ಯವಾದ ತೊಡೆಗಳೇ ಆಸನವಾಗುವುವು. ಶಂಕರ ತೊಡೆಯನ್ನು ಆಸನವನ್ನಾಗಿ ಪಡೆದು ಇವಳು ಮುಂದೆ ಮಿಕ್ಕಾವ ಆಸನಗಳಲ್ಲಿಯೂ ದೃಷ್ಟಿಯನ್ನು ಸಹ ಇರಿಸುವುದಿಲ್ಲ.

೩೬. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಉದಾರವಾದ ಮಾತನ್ನು ಹಿಮವಂತನಿಗೆ ಹೇಳಿ ನೀನು ಆ ಕೂಡಲೇ ಸ್ವರ್ಗಕ್ಕೆ ತೆರಳಿದೆ. ಹಿಮವಂತನೂ ಸಹ ತುಂಬಾ ಸಂತಸಗೊಂಡು ಸಕಲ ಸಂಪತ್ತಿನಿಂದ ಕೂಡಿರುವ ತನ್ನ ಅಂತರ್ಗೃಹಕ್ಕೆ ತೆರಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ನವಮೋಽಧ್ಯಾಯಃ

॥ ನಾರದ ಉವಾಚ ॥

ವಿಧೇ ತಾತ ತ್ವಯಾ ಶೈವವರ ಪ್ರಾಜ್ಞಾದ್ಭುತಾ ಕಥಾ ।
ವರ್ಣಿತಾ ಕರುಣಾಂ ಕೃತ್ವಾ ಪ್ರೀತಿರ್ಮೇ ವರ್ಧಿತಾಧಿಕಾಂ ॥ ೧ ॥

ವಿಧೇ ಗತೇ ಸ್ವಕಂ ಧಾಮ ಮಯಿ ವೈ ದಿವ್ಯದರ್ಶನೇ ।
ತತಃ ಕಿಮಭವತ್ತಾತ ಕೃಪಯಾ ತದ್ವದಾಧುನಾ ॥ ೨ ॥

॥ ಬ್ರಹ್ಮೋವಾಚ ॥

ಗತೇ ತ್ವಯಿ ಮುನೇ ಸ್ವರ್ಗೇ ಕಿಯತ್ಕಾಲೇ ಗತೇ ಸತಿ ।
ಮೇನಾ ಪ್ರಾಪ್ಯೇಕದಾ ಶೈಲನಿಕಟಂ ಪ್ರಣನಾಮ ಸಾ ॥ ೩ ॥

---

### ಒಂಭತ್ತನೆಯ ಅಧ್ಯಾಯವು

೧-೨. ನಾರದನು ಹೇಳಿದನು:—ಶಿವಭಕ್ತೋತ್ತಮನೂ, ಸರ್ವಜ್ಞನೂ ಆದ ಓ ಬ್ರಹ್ಮನೇ, ನೀನು ನನ್ನಲ್ಲನುಗ್ರಹವಿಟ್ಟು ಅದ್ಭುತವಾದ ಕಥೆಯನ್ನು ಹೇಳಿರುವೆ. ಇದರಿಂದ ನನಗೆ ತುಂಬಾ ಹರ್ಷವಾಯಿತು. ಮುಂದೆ ನಾನು ಸ್ವರ್ಗಲೋಕಕ್ಕೆ ತೆರಳಿದಮೇಲೆ ಏನಾಯಿತು ? ಅದನ್ನು ಹೇಳೆನ್ನಲು,

೩-೪. ಬ್ರಹ್ಮನು ಹೇಳಿದನು:—ಎಲೈ ನಾರದ ನೀನು, ದೇವಲೋಕಕ್ಕೆ ಹೊರಟುಹೋದನಂತರ ಕೆಲವುಕಾಲದಮೇಲೆ ಮೇನಾದೇವಿಯು ತನ್ನ ಪತಿಯಾದ

ಸ್ಥಿತ್ವಾ ಸವಿನಯಂ ಪ್ರಾಹ ಸ್ವನಾಥಂ ಗಿರಿಕಾಮಿನೀ ।
ತತ್ರ ಶೈಲಾಧಿನಾಥಂ ಸಾ ಪ್ರಾಣಪ್ರಿಯಸುತಾ ಸತೀ ॥ ೪ ॥

॥ ಮೇನೋವಾಚ ॥

ಮುನಿವಾಕ್ಯಂ ನ ಬುದ್ಧಂ ಮೇ ಸಮ್ಯಕ್ಸ್ತ್ರೀಸ್ವಭಾವತಃ ।
ವಿವಾಹಂ ಕುರು ಕನ್ಯಾಯಾಃ ಸುಂದರೇಣ ವರೇಣ ಹ ॥ ೫ ॥

ಸರ್ವಥಾ ಹಿ ಭವೇತ್ತತ್ರೋದ್ವಾಹೋಽಪೂರ್ವಸುಖಾವಹಃ ।
ವರಶ್ಚ ಗಿರಿಜಾಯಾಸ್ತು ಸುಲಕ್ಷಣಕುಲೋದ್ಭವಃ ॥ ೬ ॥

ಪ್ರಾಣಪ್ರಿಯಾ ಸುತಾ ಮೇ ಹಿ ಸುಖಿತಾ ಸ್ಯಾದ್ಯಥಾ ಪ್ರಿಯ ।
ಸದ್ವರಂ ಪ್ರಾಪ್ಯ ಸುಪ್ರೀತಾ ತಥಾ ಕುರು ನಮೋಽಸ್ತು ತೇ ॥ ೭ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಶ್ರುಮುಖೀ ಮೇನಾ ಪತ್ಯಂಘ್ರ್ಯೋಃ ಪತಿತಾ ತದಾ ।
ತಾಮುತ್ಥಾಪ್ಯ ಗಿರಿಃ ಪ್ರಾಹ ಯಥಾವತ್ಪ್ರಾಜ್ಞಸತ್ತಮಃ ॥ ೮ ॥

---

ಹಿಮವಂತನ ಬಳಿಗೆ ಬಂದು ನಮಸ್ಕರಿಸಿ ವಿನಯದಿಂದ ನಿಂತು ಹೀಗೆ ಹೇಳಿದಳು.

೫-೭. ಮೇನಾದೇವಿಯು ಹೇಳಿದಳು :— ಓ ಗಿರಿರಾಜ, ಹೆಂಗಸಾದ ನನಗೆ ನಾರದನ ಅಭಿಪ್ರಾಯವು ಸರಿಯಾಗಿ ತಿಳಿಯಲಿಲ್ಲ. ಪಾರ್ವತಿಗೆ ಸುಂದರನಾದ ವರನೊಂದಿಗೆ ಮದುವೆಮಾಡು. ಹಾಗೆ ಮಾಡಿದರೆ ವಿವಾಹವು ಸುಖಕರವಾಗುವುದು. ಪಾರ್ವತಿಗೆ ವರನು ಲಕ್ಷಣವಂತನೂ ಸತ್ಕುಲಪ್ರಸೂತನೂ ಆಗಿರಬೇಕು. ಅಂತಹ ವರನನ್ನು ಪಡೆದು ನನ್ನ ಪುತ್ರಿಯು ಸುಖವನ್ನು ಹೊಂದುವಂತೆ ನೀನು ಮಾಡ ಬೇಕು ಎಂದಳು.

೮. ಬ್ರಹ್ಮನು ಹೇಳಿದನು :— ಹೀಗೆ ಹೇಳಿ ಮೇನಾದೇವಿಯು ಕಣ್ಣುಗಳಲ್ಲಿ ಕಂಬನಿ ತುಂಬಿ ಪತಿಯ ಕಾಲುಗಳ ಮೇಲೆ ಬಿದ್ದಳು. ಆಗ ಹಿಮವಂತನು ಅವಳನ್ನೆತ್ತಿ ಸಮಾಧಾನಗೊಳಿಸಿ,

॥ ಹಿಮಾಲಯ ಉವಾಚ ॥
ಶೃಣು ತ್ವಂ ಮೇನಕೇ ದೇವಿ ಯಥಾರ್ಥಂ ವಚ್ಮಿ ತತ್ತ್ವತಃ ।
ಭ್ರಮಂ ತ್ಯಜ ಮುನೇರ್ವಾಕ್ಯಂ ವಿತಥಂ ನ ಕದಾಚನ ॥ ೯ ॥

ಯದಿ ಸ್ನೇಹಃ ಸುತಾಯಾಸ್ತೇ ಸುತಾಂ ಶಿಕ್ಷಯ ಸಾದರಂ ।
ತಪಃ ಕುರ್ಯಾಚ್ಛಂಕರಸ್ಯ ಸಾ ಭಕ್ತ್ಯಾ ಸ್ಥಿರಚೇತಸಾ ॥ ೧೦ ॥

ಚೇತ್ಪ್ರಸನ್ನಃ ಶಿವಃ ಕಾಲ್ಯಾಃ ಪಾಣಿಂ ಗೃಹ್ಣಾತಿ ಮೇನಕೇ ।
ಸರ್ವಂ ಭೂಯಾಚ್ಛುಭಂ ನಶ್ಯೇನ್ನಾರದೋಕ್ತಮಮಂಗಲಂ ॥ ೧೧ ॥

ಅಮಂಗಲಾನಿ ಸರ್ವಾಣಿ ಮಂಗಲಾನಿ ಸದಾ ಶಿವೇ ।
ತಸ್ಮಾತ್ಸುತಾಂ ಶಿವಪ್ರಾಪ್ತ್ಯೈ ತಪಸೇ ಶಿಕ್ಷಯ ಪ್ರುತಂ ॥ ೧೨ ॥

॥ ಬ್ರಹ್ಮೋವಾಚ ॥
ಇತ್ಯಾಕರ್ಣ್ಯ ಗಿರೇರ್ವಾಕ್ಯಂ ಮೇ ಮೇನಾ ಪ್ರೀತತರಾಭವತ್ ।
ಸುತೋಪಕಂಠಮಗಮದುಪದೇಷ್ಟುಂ ತಪೋವಿಧಿಂ ॥ ೧೩ ॥

---

೯-೧೨. ಹಿಮವಂತನು ಹೇಳಿದನು:—ಎಲೌ ಮೇನಕೆ, ನಿಜವಾದ ವಿಷಯವನ್ನು ನಿನಗೆ ಹೇಳುವೆನು. ನಾರದಮುನಿಯ ಮಾತು ಎಂದಿಗೂ ಸುಳ್ಳಾಗುವುದಿಲ್ಲ. ಭ್ರಾಂತಿಯನ್ನು ತ್ಯಜಿಸು. ಪುತ್ರಿಯಲ್ಲಿ ನಿನಗೆ ಸ್ನೇಹವಿರುವುದಾದರೆ ಅವಳನ್ನು ಶಿಕ್ಷಿಸು. ಶಂಕರನನ್ನು ಕುರಿತು ಪಾರ್ವತಿಯು ಭಕ್ತಿಯಿಂದ ಸ್ಥಿರಮನಸ್ಸುಳ್ಳವಳಾಗಿ ತಪಸ್ಸುಮಾಡಲಿ, ತಪಸ್ಸಿಗೆ ಶಂಕರನು ಪ್ರಸನ್ನನಾದರೆ ಅವನೇ ಪಾರ್ವತಿಯನ್ನು ಮದುವೆಯಾಗುವನು. ಎಲ್ಲವೂ ಶುಭವಾಗುವುದು. ನಾರದನು ಹೇಳಿದ ಅಮಂಗಲವು ನಾಶವಾಗುವುದು. ಸದಾ ಮಂಗಳಮೂರ್ತಿಯಾದ ಆ ಶಿವನಲ್ಲಿ ಅಮಂಗಲಗಳೆಲ್ಲವೂ ಮಂಗಳವೇ ಆಗುವುವು. ಆದುದರಿಂದ ಎಲೌ ಮೇನಕೆ, ಪಾರ್ವತಿಯು ಶಿವನನ್ನು ಪಡೆಯುವುದಕ್ಕೆ ತಪಸ್ಸುಮಾಡುವಂತೆ ಅವಳನ್ನು ಶಿಕ್ಷಿಸು ಎಂದನು.

೧೩-೧೫. ಬ್ರಹ್ಮನು ಹೇಳಿದನು :—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಮೇನಾದೇವಿಯು ತುಂಬಾ ಹರ್ಷಗೊಂಡಳು. ಮುಂದೆ ಅವಳು ತನ್ನ ಪುತ್ರಿ ಪಾರ್ವತಿಗೆ ತಪಸ್ಸಿನ ವಿಧಿಯನ್ನುಪದೇಶಿಸಲು ಅವಳ ಬಳಿಗೆ ತೆರಳಿದಳು. ಅಲ್ಲಿ ಅತಿ ಸುಕುಮಾರವಾದ ತನ್ನ ಮಗಳ ಅಂಗಗಳನ್ನು ನೋಡಿ ಮೇನಾದೇವಿಯು

ಸುತಾಂಗಂ ಸುಕುಮಾರಂ ಹಿ ದೃಷ್ಟ್ವಾತೀವಾಥ ಮೇನಕಾ ।
ವಿವ್ಯಥೇ ನೇತ್ರಯುಗ್ಮೇ ಚಾಶ್ರುಪೂರ್ಣೇಭವತಾಂ ದ್ರುತಂ ॥ ೧೪ ॥

ಸುತಾಂ ಸಮುಪದೇಷ್ಟುಂ ತನ್ನ ಶಶಾಕ ಗಿರಿಪ್ರಿಯಾ ।
ಬುಬುಧೇ ಪಾರ್ವತೀ ತದ್ವೈ ಜನನೀಂಗಿತಮಾಶು ಸಾ ॥ ೧೫ ॥

ಅಥ ಸಾ ಕಾಲಿಕಾ ದೇವೀ ಸರ್ವಜ್ಞಾ ಪರಮೇಶ್ವರೀ ।
ಉವಾಚ ಜನನೀಂ ಸದ್ಯಃ ಸಮಾಶ್ವಸ್ಯ ಪುನಃ ಪುನಃ ॥ ೧೬ ॥

॥ ಪಾರ್ವತ್ಯುವಾಚ ॥

ಮಾತಃ ಶೃಣು ಮಹಾಪ್ರಾಜ್ಞೇಽದ್ಯತನೇಽಜಮುಹೂರ್ತಕೇ ।
ರಾತ್ರೌ ದೃಷ್ಟೋ ಮಯಾ ಸ್ವಪ್ನಸ್ತಂ ವದಾಮಿ ಕೃಪಾಂ ಕುರು ॥ ೧೭ ॥

ವಿಪ್ರಶ್ಚೈವ ತಪಸ್ವೀ ಮಾಂ ಸದಯಃ ಪ್ರೀತಿಪೂರ್ವಕಂ ।
ಉಪಾದಿದೇಶ ಸುತಪಃ ಕರ್ತುಂ ಮಾತಶ್ಶಿವಸ್ಯ ವೈ ॥ ೧೮ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ಮೇನಕಾ ಶೀಘ್ರಂ ಪತಿಮಾಹೂಯ ತತ್ರ ಚ ।
ತತ್ಸ್ವಪ್ನಂ ಕಥಯಾಮಾಸ ಸುತಾದೃಷ್ಟಮಶೇಷತಃ ॥ ೧೯ ॥

---

ತುಂಬಾ ವ್ಯಥೆಪಟ್ಟಳು. ಅವಳ ನಯನವು ಕಣ್ಣೀರಿನಿಂದ ತುಂಬಿತು. ಆದ್ದರಿಂದ ಅವಳು ಪಾರ್ವತಿಗೆ ತಪೋವಿಧಿಯನ್ನುಪದೇಶಮಾಡಲಾರದೇ ಹೋದಳು. ತಾಯಿಯ ಈ ಅಭಿಪ್ರಾಯವನ್ನು ಪಾರ್ವತಿಯು ಆ ಕೂಡಲೇ ತಿಳಿದಳು.

೧೬. ಬಳಿಕ ಸರ್ವಜ್ಞಳೂ ಪರಮೇಶ್ವರಿಯೂ ಆದ ಪಾರ್ವತಿಯು ತನ್ನ ತಾಯಿಯನ್ನು ಪುನಃ ಪುನಃ ಸಮಾಧಾನಗೊಳಿಸಿ ಹೀಗೆ ಹೇಳಿದಳು.

೧೭-೧೮. ಪಾರ್ವತಿಯು ಹೇಳಿದಳು:—ಪ್ರಾಜ್ಞಳಾದ ಮಾತೆಯೆ, ಇಂದು ರಾತ್ರೆ ಬ್ರಾಹ್ಮಮುಹೂರ್ತ (ಬೆಳಗಿನಜಾವ) ದಲ್ಲಿ ಒಂದು ಸ್ವಪ್ನವನ್ನು ಕಂಡೆನು. ಅದನ್ನು ಹೇಳುವೆನು, ಓರ್ವ ತಪಸ್ವಿಯಾದ ಬ್ರಾಹ್ಮಣನು ಬಂದು ಪ್ರೀತಿಯಿಂದ ಶಿವನನ್ನು ಕುರಿತು ತಪಸ್ಸುಮಾಡೆಂದು ಉಪದೇಶಿಸಿದನು ಎಂದಳು.

೧೯-೨೦. ಬ್ರಹನು ಹೇಳಿದನು:—ಪಾರ್ವತಿಯು ಸ್ವಪ್ನವನ್ನು ಕೇಳಿ ಮೇನಕೆಯು ಆಕೂಡಲೇ ತನ್ನ ಪತಿ ಹಿಮವಂತನನ್ನು ಕರೆದು ಆ ಸ್ವಪ್ನವನ್ನು ಹೇಳಿದಳು.

ಸುತಾಸ್ವಪ್ನಮಥಾಕರ್ಣ್ಯ ಮೇನಕಾಕೋ ಗಿರೀಶ್ವರಃ ।
ಉವಾಚ ಪರಮಪ್ರೀತಃ ಪ್ರಿಯಾಂ ಸಂಬೋಧಯನ್ ಗಿರಾ ॥ ೨೦ ॥

॥ ಗಿರೀಶ್ವರ ಉವಾಚ ॥

ಹೇ ಪ್ರಿಯೇಽಪರರಾತ್ರಾಂತೇ ಸ್ವಪ್ನೋ ದೃಷ್ಟೋ ಮಯಾಪಿ ಹಿ ।
ತ್ವಂ ಶೃಣು ತ್ವಂ ಮಹಾಪ್ರೀತ್ಯಾ ವಚ್ಮ್ಯಹಂ ತಂ ಸಮಾದರಾತ್ ॥ ೨೧ ॥

ಏಕಸ್ತಪಸ್ವೀ ಪರಮೋ ನಾರದೋಕ್ತವರಾಂಗಧೃಕ್ ।
ಪುರೋಪಕಂಠಂ ಸುಪ್ರೀತ್ಯಾ ತಪಃ ಕರ್ತುಂ ಸಮಾಗತಃ ॥ ೨೨ ॥

ಗೃಹೀತ್ವಾ ಸ್ವಸುತಾಂ ತತ್ರಾಗಮಂ ಪ್ರೀತತರೋಽಪ್ಯಹಂ ।
ಮಯಾ ಜ್ಞಾತಸ್ಸ ವೈ ಶಂಭುರ್ನಾರದೋಕ್ತವರಃ ಪ್ರಭುಃ ॥ ೨೩ ॥

ಸೇವಾರ್ಥಂ ತಸ್ಯ ತನಯಾಮುಪದಿಶ್ಯ ತಪಸ್ವಿನಃ ।
ತಂ ವೈ ಪ್ರಾರ್ಥಿತವಾಂಸ್ತಸ್ಯಾಂ ನ ತದಾಂಗೀಚಕಾರ ಸಃ ॥ ೨೪ ॥

---

ಅದನ್ನು ಕೇಳಿ ಹಿಮವಂತನು ತುಂಬಾ ಹರ್ಷಗೊಂಡು ಮೇನೆಯನ್ನು ಕುರಿತು ಹೀಗೆ ಹೇಳಿದನು.

೨೧-೨೩. ಹಿಮವಂತನು ಹೇಳಿದನು:—ಎಲೌ ಪ್ರಿಯೇ, ನಾನು ಬೆಳಗಿನ ಜಾವದಲ್ಲಿ ಸ್ವಪ್ನವೊಂದನ್ನು ಕಂಡೆನು. ಅದನ್ನು ನಿನಗೆ ಹೇಳುವೆನು. ಆದರದಿಂದ ಕೇಳು, ನಾರದನು ಹೇಳಿದಂತೆ ಲಕ್ಷಣಗಳುಳ್ಳ ಓರ್ವ ಮಹಾತಪಸ್ವಿಯು ತಪವನ್ನಾಚರಿಸಲು ನಮ್ಮ ನಗರದ ಸಮೀಪಕ್ಕೆ ಬಂದನು. ಅವನ ಬಳಿಗೆ ನಾನು ಪಾರ್ವತಿಯನ್ನು ಕರೆದುಕೊಂಡು ಪ್ರೀತಿಯಿಂದ ಹೋಗಿ ನೋಡಲು ಅವನು, ನಾರದನು ಪಾರ್ವತಿಗಾಗಿ ಹೇಳಿದ ವರನು ಶಂಕರನಾಗಿದ್ದನು.

೨೪-೨೭. ಆಗ ನಾನು ಪುತ್ರಿ ಪಾರ್ವತಿಯನ್ನು ಆ ತಪಸ್ವಿಯಾದ ಶಂಕರನ ಸೇವೆಗೆ ನಿಯಮಿಸಿದೆನು. ಪಾರ್ವತಿಯ ಸೇವೆಯನ್ನು ಸ್ವೀಕರಿಸುವಂತೆ ಶಿವನನ್ನು ಪ್ರಾರ್ಥಿಸಿದೆನು. ಆದರೆ ಅವನು ಅಂಗೀಕರಿಸಲಿಲ್ಲ. ಆಗ ಅಲ್ಲಿ ಸಾಂಖ್ಯ ಮತ್ತು ವೇದಾಂತಶಾಸ್ತ್ರಗಳಲ್ಲಿ ಮಹಾ ವಾಕ್ಯಾರ್ಥವಾಯಿತು. ಬಳಿಕ ಶಂಕರನ ಆಜ್ಞೆಯಿಂದಲೇ ಪಾರ್ವತಿಯು ಅವನನ್ನು ಪತಿಯಾಗಿ ಪಡೆಯಲೋಸುಗ ಭಕ್ತಿಯಿಂದ

ಅಭೂದ್ವಿವಾದಸ್ಸುಮಹಾನ್ ಸಾಂಖ್ಯವೇದಾಂತಸಮ್ಮತಃ ।
ತತಸ್ತದಾಜ್ಞಯಾ ತತ್ರ ಸಂಸ್ಥಿತಾಸೀತ್ಸುತಾ ಮಮ ॥ ೨೫ ॥

ನಿಧಾಯ ಹೃದಿ ತಂ ಕಾಮಂ ಸಿಷೇವೇ ಭಕ್ತಿತಶ್ಚ ಸಾ ।
ಇತಿ ದೃಷ್ಟಂ ಮಯಾ ಸ್ವಪ್ನಂ ಪ್ರೋಕ್ತವಾಂಸ್ತೇ ವರಾನನೇ ॥ ೨೬ ॥

ತತೋ ಮೇನೇ ಕಿಯತ್ಕಾಲಂ ಪರೀಕ್ಷ್ಯಂ ತತ್ಫಲಂ ಪ್ರಿಯೇ ।
ಯೋಗ್ಯಮಸ್ತೀದಮೇವೇಹ ಬುಧ್ಯಸ್ವ ತ್ವಂ ಮಮ ಧ್ರುವಂ ॥ ೨೭ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಗಿರಿರಾಜಶ್ಚ ಮೇನಕಾ ವೈ ಮುನೀಶ್ವರ ।
ಸಂತಸ್ಥತುಃ ಪರೀಕ್ಷಂತೌ ತತ್ಫಲಂ ಶುದ್ಧಚೇತಸೌ ॥ ೨೮ ॥

ಇತ್ಥಂ ವ್ಯತೀತೇಽಲ್ಪದಿನೇ ಪರಮೇಶಃ ಸತಾಂ ಗತಿಃ ।
ಸತೀವಿರಹಸುವ್ಯಗ್ರೋ ಭ್ರಮನ್ ಸರ್ವತ್ರ ಸೂತಿಕೃತ್ ॥ ೨೯ ॥

ತತ್ರಾಜಗಾಮ ಸುಪ್ರೀತ್ಯಾ ಕಿಯದ್ಗಣಯುತಃ ಪ್ರಭುಃ ।
ತಪಃ ಕರ್ತುಂ ಸತೀಪ್ರೇಮವಿರಹಾಕುಲಮಾನಸಃ ॥ ೩೦ ॥

---

ಸೇವಿಸಿದಳು. ಎಲೌ ಮೇನೆ, ಹೀಗೆ ಸ್ವಪ್ನವನ್ನು ನಾನು ಕಂಡೆನು. ಈ ಸ್ವಪ್ನದ ಫಲವೇನೆಂದು ಸ್ವಲ್ಪಕಾಲ ಯೋಚಿಸಿನೋಡು. ಪಾರ್ವತಿಯು ಶಿವನನ್ನು ಕುರಿತು ತಪಸ್ಸು ಮಾಡುವುದೇ ಈಗ ಯೋಗ್ಯವಾಗಿದೆ ಎಂದನು.

೨೮-೩೦. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಹಿಮವಂತನೂ ಮೇನಾದೇವಿಯೂ ಸಹ ಆ ಸ್ವಪ್ನದ ಫಲವನ್ನು ನಿರೀಕ್ಷಿಸುತ್ತಾ ಕೆಲವು ಕಾಲವನ್ನು ಕಳೆದರು. ಹೀಗೆ ಸ್ವಲ್ಪಕಾಲ ಕಳೆದಮೇಲೊಂದುದಿನ ಸತ್ಪುರುಷರಿಗೆ ಸದ್ಗತಿಯನ್ನು ಕೊಡುವವನೂ, ಜಗತ್ತನ್ನು ಸೃಷ್ಟಿಸುವವನೂ ಆದ ಪರಮೇಶ್ವರನು ಸತೀದೇವಿಯ ವಿರಹದಿಂದ ದುಃಖಿತನಾಗಿ ಅಲ್ಲಲ್ಲಿ ತಿರುಗುತ್ತಾ ತಪಸ್ಸನ್ನು ಮಾಡಲು ತನ್ನ ಕೆಲವು ಗಣಗಳೊಡನೆ ಆ ಹಿಮಾಲಯಕ್ಕೆ ಬಂದನು.

ತಪಶ್ಚಕಾರ ಸ್ವಂ ತತ್ರ ಪಾರ್ವತೀ ಸೇವನೇ ರತಾ ।
ಸಖೀಭ್ಯಾಂ ಸಹಿತಾ ನಿತ್ಯಂ ಪ್ರಸನ್ನಾರ್ಥಮಭೂತ್ತದಾ ॥ ೩೧ ॥

ವಿದ್ಧೋಽಪಿ ಮಾರ್ಗಣೈಶ್ಶಂಭುರ್ವಿಕೃತಿಂ ನಾಪ ಸ ಪ್ರಭುಃ ।
ಪ್ರೇಷಿತೇನ ಸುರೈಃ ಸ್ವಾತ್ಮಮೋಹನಾರ್ಥಂ ಸ್ಮರೇಣ ಹಿ ॥ ೩೨ ॥

ದಗ್ಧ್ವಾ ಸ್ಮರಂ ಚ ತತ್ರೈವ ಸ್ವವಹ್ನಿನಯನೇನ ಸಃ ।
ಸ್ಮೃತ್ವಾ ಮಮ ವಚಃ ಕ್ರುದ್ಧೋ ಮಹ್ಯಮಂತರ್ದಧೇ ತತಃ ॥ ೩೩ ॥

ತತಃ ಕಾಲೇನ ಕಿಯತಾ ವಿನಾಶ್ಯ ಗಿರಿಜಾಮದಂ ।
ಪ್ರಸಾದಿತಸ್ಸುತಪಸಾ ಪ್ರಸನ್ನೋಽಭೂನ್ಮಹೇಶ್ವರಃ ॥ ೩೪ ॥

ಲೌಕಿಕಾಚಾರಮಾಶ್ರಿತ್ಯ ರುದ್ರೋ ವಿಷ್ಣುಪ್ರಸಾದಿತಃ ।
ಕಾಲೀಂ ವಿವಾಹಯಾಮಾಸ ತತೋಽಭೂದ್ಬಹುಮಂಗಲಂ ॥ ೩೫ ॥

---

೩೧-೩೩. ಆ ಹಿಮಾಲಯದಲ್ಲಿ ಶಿವನು ತಪಸ್ಸನ್ನಾಚರಿಸತೊಡಗಿದನು. ಪಾರ್ವತಿಯು ಸಖಿಯರಿರ್ವರೊಡನೆ ಆ ಶಂಕರನನ್ನು ಭಕ್ತಿಯಿಂದ ಸೇವಿಸತೊಡಗಿದಳು. ಈ ಮಧ್ಯದಲ್ಲಿ ದೇವತೆಗಳು ಶಂಕರನ ತಪಸ್ಸನ್ನು ಭಂಗಗೊಳಿಸಲು ಮನ್ಮಥನನ್ನು ಕಳುಹಿಸಿದರು. ಅವನು ತನ್ನ ಬಾಣಗಳನ್ನು ಶಿವನಮೇಲೆ ಪ್ರಯೋಗಿಸಿದನು. ಆದರೂ ಆ ಪರಮೇಶ್ವರನು ಸ್ವಲ್ಪವೂ ವಿಕಾರಗೊಳ್ಳಲಿಲ್ಲ. ತನ್ನ ಮೂರನೆಯ ಕಣ್ಣಿನ್ನು ತೆರೆದು ಆ ಶಿವನು ಮನ್ಮಥನನ್ನು ಭಸ್ಮಮಾಡಿದನು. ಮತ್ತು ಹಿಂದೆ ನಾನು ಹೇಳಿದ ಮಾತನ್ನು ಯೋಚಿಸಿಕೊಂಡು ನನ್ನಮೇಲೆ ತುಂಬಾ ಕೋಪಗೊಂಡು ಅಲ್ಲಿಯೇ ಅಂತರ್ಧಾನನಾದನು.

೩೪-೩೫. ಬಳಿಕ ಕೆಲವು ಕಾಲದಮೇಲೆ ಗಿರಿಜೆಯು ಇಂದ್ರಿಯಗಳನ್ನು ಜಯಿಸಿ ಶಿವನನ್ನು ಕುರಿತು ಘೋರವಾದ ತಪವನ್ನಾಚರಿಸಿದಳು. ಆಗ ಶಿವನು ಪ್ರಸನ್ನನಾದನು ಮುಂದೆ ವಿಷ್ಣುವಿನ ಪ್ರಾರ್ಥನೆಯನ್ನು ಮನ್ನಿಸಿ ರುದ್ರನು ಲೋಕಾಚಾರದಂತೆ ಪಾರ್ವತಿಯನ್ನು ಮದುವೆಯಾದನು, ಮುಂದೆಲ್ಲವೂ ಮಂಗಳವಾಯಿತು, ಸುಖವಾಯಿತು.

ಇತ್ಯೇತತ್ಕಥಿತಂ ತಾತ ಸಮಾಸಾಚ್ಚರಿತಂ ವಿಭೋಃ ।
ಶಂಕರಸ್ಯ ಪರಂ ದಿವ್ಯಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೩೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ನವಮೋಽಧ್ಯಾಯಃ



೩೬. ಎಲೈ ನಾರದಮುನಿ, ಹೀಗೆ ನಿನಗೆ ಜಗದೊಡೆಯನಾದ ಶಂಕರನ ದಿವ್ಯ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳಿರುವೆನು. ಇನ್ನೇನನ್ನು ಕೇಳಬೇಕೆಂದಿರುವೆ? ಅದನ್ನು ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ದಶಮೋಽಧ್ಯಾಯಃ

---

॥ ನಾರದ ಉವಾಚ ॥

ವಿಷ್ಣುಶಿಷ್ಯ ಮಹಾಭಾಗ ವಿಧೇ ಶೈವವರ ಪ್ರಭೋ ।
ಶಿವಲೀಲಾಮಿಮಾಂ ವ್ಯಾಸಾತ್ಪ್ರೀತ್ಯಾ ಮೇ ವಕ್ತುಮರ್ಹಸಿ ॥ ೧ ॥

ಸತೀವಿರಹಯುಕ್ಶಂಭುಃ ಕಿಂ ಚಕ್ರೇ ಚರಿತಂ ತಥಾ ।
ತಪಃ ಕರ್ತುಂ ಕದಾಯಾತೋ ಹಿಮವತ್ಪ್ರಸ್ಥಮುತ್ತಮಂ ॥ ೨ ॥

ಶಿವಾಶಿವವಿವಾದೋಽಭೂತ್ಕಥಂ ಕಾಮಕ್ಷಯಶ್ಚ ಮೇ ।
ತಪಃ ಕೃತ್ವಾ ಕಥಂ ಪ್ರಾಪ ಶಿವಂ ಶಂಭುಂ ಚ ಪಾರ್ವತೀ ॥ ೩ ॥

---

### ಹತ್ತನೆಯ ಅಧ್ಯಾಯವು

೧-೪. ನಾರದಮುನಿಯು ಪ್ರಶ್ನಿಸಿದನು :—ಶಿವಭಕ್ತರಲ್ಲಿ ಉತ್ತಮನೂ ವಿಷ್ಣು ಶಿಷ್ಯನೂ ಆದ ಓ ಬ್ರಹ್ಮನೇ, ನೀನು ಹೇಳಿದ ಶಿವಲೀಲೆಯನ್ನು ಇನ್ನೂ ವಿಸ್ತಾರವಾಗಿ ಹೇಳು. ಸತೀದೇವಿಯಿಂದ ವಿರಹಿತನಾದ ಶಂಕರನು ಏನು ಮಾಡಿದನು ? ಹಿಮಾಲಯದ ತಪ್ಪಲಿಗೆ ತಪಸ್ಸನ್ನಾಚರಿಸಲು ಯಾವಾಗ ಬಂದನು ? ಶಿವಪಾರ್ವತಿಯರಿಗೆ ವಿವಾದವು ಹೇಗಾಯಿತು ? ಕಾಮದಹನವು ಹೇಗಾಯಿತು ? ಪಾರ್ವತಿಯು

ತತ್ಸರ್ವಮಪರಂ ಚಾಪಿ ಶಿವಸಚ್ಚರಿತಂ ಪರಂ ।
ವಕ್ತುಮರ್ಹಸಿ ಮೇ ಬ್ರಹ್ಮನ್ ಮಹಾನಂದಕರಂ ಶುಭಂ　॥ ೪ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ನಾರದಸ್ಯ ಪ್ರಶ್ನಂ ಲೋಕಾಧಿಪೋತ್ತಮಃ ।
ವಿಧಿಃ ಪ್ರೋವಾಚ ಸುಪ್ರೀತ್ಯಾ ಸ್ಮೃತ್ವಾ ಶಿವಪದಾಂಬುಜಂ　॥ ೫ ॥

॥ ಬ್ರಹ್ಮೋವಾಚ ॥

ದೇವರ್ಷೇ ಶೈವವರ್ಯಾದ್ಯ ತದ್ಯಶಃ ಶೃಣು ಚಾದರಾತ್ ।
ಪಾವನಂ ಮಂಗಲಕರಂ ಭಕ್ತಿವರ್ಧನಮುತ್ತಮಂ　॥ ೬ ॥

ಆಗತ್ಯ ಸ್ವಗಿರಿಂ ಶಂಭುಃ ಪ್ರಿಯಾವಿರಹಕಾತರಃ ।
ಸಸ್ಮಾರ ಸ್ವಪ್ರಿಯಾಂ ದೇವೀಂ ಸತೀಂ ಪ್ರಾಣಾಧಿಕಾಂ ಹೃದಾ　॥ ೭ ॥

ಗಣಾನಾಭಾಷ್ಯ ಶೋಚಂಸ್ತಾಂ ತದ್ಗುಣಾನ್ ಪ್ರೇಮವರ್ಧನಾನ್ ।
ವರ್ಣಯಾಮಾಸ ಸುಪ್ರೀತ್ಯಾ ದರ್ಶಯನ್ ಲೌಕಿಕೀಂ ಗತಿಂ　॥ ೮ ॥

---

ತಪವನ್ನಾಚರಿಸಿ ಶಿವನನ್ನು ಹೇಗೆ ಪಡೆದಳು? ಶುಭವೂ ಆನಂದಕರವೂ ಆದ ಇದೆಲ್ಲ ಚರಿತ್ರೆಯನ್ನೂ ನನಗೆ ವಿಸ್ತಾರವಾಗಿ ಹೇಳಬೇಕು ಎಂದನು.

೫. ಸೂತಮುನಿಯು ಹೇಳಿದನು:—ಎಲೈ ಶೌನಕಾದಿಮುನಿಗಳೇ, ಹೀಗೆ ನಾರದನು ಮಾಡಿದ ಪ್ರಶ್ನೆಯನ್ನು ಕೇಳಿ ಜಗತ್ಪಿತಾಮಹನಾದ ಬ್ರಹ್ಮನು ಆಗ ಶಿವನ ಪಾದಕಮಲವನ್ನು ಭಕ್ತಿಯಿಂದ ಧ್ಯಾನಿಸಿ ಹೀಗೆ ಹೇಳಿದನು.

೬. ಬ್ರಹ್ಮನು ಹೇಳಿದನು:—ಶಿವಭಕ್ತನಾದ ಎಲೈ ನಾರದಮುನಿ, ಪವಿತ್ರವೂ ಮಂಗಲವೂ ಭಕ್ತಿಪ್ರದವೂ ಆದ ಶಿವಮಹಿಮೆಯನ್ನು ಹೇಳುವೆನು. ಆದರದಿಂದ ಕೇಳು.

೭-೯. ಆ ಶಂಕರನು ಕೈಲಾಸಕ್ಕೆ ಬಂದು ತನ್ನ ಪ್ರಿಯೆಯ ವಿರಹದಿಂದ ದುಃಖಿತನಾಗಿ ಪ್ರಾಣಾಧಿಕಳಾದ ಸತೀದೇವಿಯನ್ನು ಕುರಿತು ತುಂಬಾ ಚಿಂತಿಸಿದನು. ಪ್ರೀತಿಯನ್ನು ಹೆಚ್ಚಿಸುವ ಅವಳ ಸದ್ಗುಣಗಳನ್ನು ಗಣಗಳೆದುರಿಗೆ

ದಿಗಂಬರೋ ಬಭೂವಾಥ ತ್ಯಕ್ತ್ವಾ ಗಾರ್ಹಸ್ಥ್ಯಸದ್ಗತಿಂ ।
ಪುನರ್ಬಭ್ರಾಮ ಲೋಕಾನ್ವೈ ಸರ್ವಾನ್ ಲೀಲಾವಿಶಾರದಃ ॥ ೯ ॥

ದರ್ಶನಂ ಪ್ರಾಪ್ಯ ಕುತ್ರಾಪಿ ಸತೀವಿರಹದುಃಖಿತಃ ।
ಪುನಶ್ಚ ಗಿರಿಮಾಯಾತಃ ಶಂಕರೋ ಭಕ್ತಶಂಕರಃ ॥ ೧೦ ॥

ಸಮಾಧಾಯ ಮನೋ ಯತ್ನಾತ್ಸಮಾಧಿಂ ದುಃಖನಾಶನಂ ।
ಚಕಾರ ಚ ದದರ್ಶಾಸೌ ಸ್ವರೂಪಂ ನಿಜಮವ್ಯಯಂ ॥ ೧೧ ॥

ಇತ್ಥಂ ಚಿರತರಂ ಸ್ಥಾಣುಸ್ತಸ್ಥೌ ಧ್ವಸ್ತಗುಣತ್ರಯಃ ।
ನಿರ್ವಿಕಾರೀ ಪರಂ ಬ್ರಹ್ಮ ಮಾಯಾಧೀಶಃ ಸ್ವಯಂ ಪ್ರಭುಃ ॥ ೧೨ ॥

ತತಃ ಸಮಾಧಿಂ ತತ್ಯಾಜ ವ್ಯತೀಯುರ್ಹ್ಯಮಿತಾಃ ಸಮಾಃ ।
ಯದಾ ತದಾ ಬಭೂವಾಽತ್ರ ಚರಿತಂ ತದ್ವದಾಮಿ ವಃ ॥ ೧೩ ॥

---

ಬಣ್ಣಿಸುತ್ತಿದ್ದನು. ಲೀಲಾಮಯನಾದ ಅವನು ಗೃಹಸ್ಥಾಶ್ರಮದ ವಿಧಿಯನ್ನು ಬಿಟ್ಟು ದಿಗಂಬರನಾಗಿ ಲೋಕಗಳನ್ನೆಲ್ಲಾ ಸಂಚರಿಸತೊಡಗಿದನು.

೧೦-೧೧. ಕೆಲವೆಡೆ ಆ ಪರಮೇಶ್ವರನು ಪ್ರಕಟವಾಗಿ ಗೋಚರಿಸುತ್ತಾ ಸತೀ ದೇವಿಯ ವಿರಹದಿಂದ ಸದಾ ದುಃಖವನ್ನು ಅನುಭವಿಸುತ್ತಾ ತಿರುಗಿ ಹಿಮಾಲಯಕ್ಕೆ ಬಂದನು ಅಲ್ಲಿ ಭಕ್ತವತ್ಸಲನಾದ ಆ ಶಂಕರನು ಮನಸ್ಸನ್ನು ಸ್ಥಿರವಾಗಿರಿಸಿ ಜಿತೇಂದ್ರಿಯತೆಯಿಂದಿದ್ದು ಶಾಂತಿಪ್ರದವಾದ ಸಮಾಧಿಯಲ್ಲಿ ನಿಷ್ಠನಾಗಿ ನಾಶರಹಿತವಾದ ತನ್ನ ಸ್ವರೂಪ (ಬ್ರಹ್ಮವಸ್ತು) ವನ್ನು ಸಾಕ್ಷಾತ್ಕರಿಸಿದನು.

೧೨-೧೩. ಈ ರೀತಿ ಸತ್ವರಜಸ್ತಮೋಗುಣಗಳ ಸಂಬಂಧವಿಲ್ಲದೇ ನಿರ್ವಿಕಾರನಾಗಿ ಸಮಾಧಿಯಲ್ಲಿ ಬಹಳ ಕಾಲವನ್ನು ಮಾಯಾಧೀಶನೂ, ಪರಬ್ರಹ್ಮಸ್ವರೂಪನೂ ಆದ ಆ ಶಿವನನು ಕಳೆದನು. ಆಮೇಲೆ ಸಮಾಧಿಯನ್ನು ತ್ಯಜಿಸಿ ಬಹಳ ಕಾಲವನ್ನು ಕಳೆದನು. ಆಗ ಅನೇಕ ಕಥೆಗಳು ನಡೆದಿರುವುವು. ಎಲೈ ನಾರದ, ಅವುಗಳನ್ನು ನಿನಗೆ ಹೇಳುವೆನು.

ಪ್ರಭೋರ್ಲಲಾಟದೇಶಾತ್ತು ಯತ್ಪೃಷಚ್ಛ್ರಮಸಂಭವಂ ।
ಪಪಾತ ಧರಣೌ ತತ್ರ ಸ ಬಭೂವ ಶಿಶುರ್ದ್ರುತಂ ॥ ೧೪ ॥

ಚತುರ್ಭುಜೋಽರುಣಾಕಾರೋ ರಮಣೀಯಾಕೃತಿರ್ಮುನೇ ।
ಅಲೌಕಿಕದ್ಯುತಿಶ್ರೀಮಾನ್ ತೇಜಸ್ವೀ ಪರದುಸ್ಸಹಃ ॥ ೧೫ ॥

ರುರೋದ ಸ ಶಿಶುಸ್ತಸ್ಯ ಪುರತೋ ಪರಮೇಶಿತುಃ ।
ಪ್ರಾಕೃತಾತ್ಮಜವತ್ತತ್ರ ಭವಾಚಾರರತಸ್ಯ ಹಿ ॥ ೧೬ ॥

ತದಾ ವಿಚಾರ್ಯ ಸುಧಿಯಾ ಧೃತ್ವಾ ಸುಸ್ತ್ರೀತನುಂ ಕ್ಷಿತಿಃ ।
ಆವಿರ್ಬಭೂವ ತತ್ರೈವ ಭಯಮಾನೀಯ ಶಂಕರಾತ್ ॥ ೧೭ ॥

ತಂ ಬಾಲಂ ದ್ರುತಮುತ್ಥಾಪ್ಯ ಕ್ರೋಡಾಯಾಂ ನಿದಧೇ ವರಂ ।
ಸ್ತನ್ಯಂ ಸಾಪಾಯಯತ್ಪ್ರೀತ್ಯಾ ದುಗ್ಧಂ ಸ್ವೋಪರಿಸಂಭವಂ ॥ ೧೮ ॥

ಚುಚುಂಬ ತನ್ಮುಖಂ ಸ್ನೇಹಾತ್ಸ್ಮಿತ್ವಾಕ್ರೀಡಯದಾತ್ಮಜಂ ।
ಸತ್ಯಭಾವಾತ್ಸ್ವಯಂ ಮಾತಾ ಪರಮೇಶಹಿತಾವಹಾ ॥ ೧೯ ॥

---

೧೪-೧೬. ಒಮ್ಮೆ ಶಂಕರನು ಸಮಾಧಿಯಿಂದ ಬಹಿರ್ಮುಖನಾದನು. ಆಗ ಆಯಾಸದಿಂದ ಅವನ ಲಲಾಟದಿಂದ ಬೆವರುಹನಿಯುದುರಿತು. ಅದು ಒಂದು ಶಿಶುವಾಯಿತು. ಆ ಶಿಶುವಿಗೆ ನಾಲ್ಕು ಕೈಗಳಿದ್ದುವು. ಕೆಂಬಣ್ಣವುಳ್ಳದಾಗಿದ್ದಿತು. ತುಂಬಾ ಸುಂದರವಾಗಿಯೂ ಮಹಾ ತೇಜಸ್ವಿಯಾಗಿಯೂ ಮಹಾ ಕಾಂತಿಯುಳ್ಳದಾಗಿಯೂ ಇದ್ದಿತು. ಇಂತಹ ಆ ಶಿಶುವು ಸಾಮಾನ್ಯ ಮಾನವರ ಶಿಶುವಿನಂತೆ ಶಂಕರನೆದುರಿನಲ್ಲಿ ಅಳತೊಡಗಿತು.

೧೭-೧೯. ಆಗ ಭೂದೇವಿಯು ಸುಬುದ್ಧಿಯಿಂದ ಆಲೋಚಿಸಿ ಸುಂದರವಾದ ಸ್ತ್ರೀರೂಪವನ್ನು ಧರಿಸಿ ಶಂಕರನೆದುರಿಗೆ ಪ್ರತ್ಯಕ್ಷಳಾದಳು ಮತ್ತು ಅವಳು ಶಂಕರನ ಲಲಾಟದೇಶದಿಂದ ಜನಿಸಿದ ಆ ಶಿಶುವನ್ನು ತನ್ನ ತೊಡೆಯಲ್ಲಿ ಇಟ್ಟುಕೊಂಡು ಪ್ರೀತಿಯಿಂದ ಮಲೆಯುಣ್ಣಿಸಿದಳು. ಹೀಗೆ ತಾಯಿಯಿಲ್ಲದ ಆ ಮಗುವಿಗೆ ತಾನೇ ತಾಯಿಯಾಗಿ ಪರಮೇಶ್ವರನ ಮನಸ್ಸು ಹರ್ಷಗೊಳ್ಳುವಂತೆ ಮಾಡಿದಳು.

ತದ್ದೃಷ್ಟ್ವಾ ಚರಿತಂ ಶಂಭುಃ ಕೌತುಕೀ ಸೂತಿಕೃತ್ಕೃತೀ ।
ಅಂತರ್ಯಾಮೀ ವಿಹಸ್ಯಾಥೋವಾಚ ಜ್ಞಾತ್ವಾ ರಸಾಂ ಹರಃ ॥ ೨೦ ॥

ಧನ್ಯಾ ತ್ವಂ ಧರಣಿ ಪ್ರೀತ್ಯಾ ಪಾಲಯೈತಂ ಸುತಂ ಮಮ ।
ತ್ವಯುದ್ಭೂತಂ ಶ್ರಮಜಲಾನ್ಮಹಾತೇಜಸ್ವಿನೋ ವರಂ ॥ ೨೧ ॥

ಮಮ ಶ್ರಮಕಭೂರ್ಬಾಲೋ ಯದ್ಯಪಿ ಪ್ರಿಯಕೃತ್ಕ್ಷಿತೇ ।
ತ್ವನ್ನಾಮ್ನಾ ಖ್ಯಾಥ್ಭವೇತ್ಖ್ಯಾತಸ್ತ್ರಿತಾಪರಹಿತಸ್ಸದಾ ॥ ೨೨ ॥

ಅಸೌ ಬಾಲಃ ಕುದಾತಾ ಹಿ ಭವಿಷ್ಯತಿ ಗುಣೀ ತವ ।
ಮಮಾಪಿ ಸುಖದಾತಾ ಹಿ ಗೃಹಾಣೈನಂ ಯಥಾರುಚಿ ॥ ೨೩ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಿರರಾಮಾಥ ಕಿಂಚಿದ್ವಿರಹಮುಕ್ತಧೀಃ ।
ಲೋಕಾಚಾರಕರೋ ರುದ್ರೋ ನಿರ್ವಿಕಾರೀ ಸತಾಂ ಪ್ರಿಯಃ ॥ ೨೪ ॥

ಅಪಿ ಕ್ಷಿತಿರ್ಜಗಾಮಾಶು ಶಿವಾಜ್ಞಾಮಧಿಗಮ್ಯ ಸಾ ।
ಸ್ವಸ್ಥಾನಂ ಸಸುತಾ ಪ್ರಾಪ ಸುಖಮಾತ್ಯಂತಿಕಂ ಚ ವೈ ॥ ೨೫ ॥

---

೨೦-೨೩. ಹೀಗೆ ಭೂದೇವಿಯು ಸ್ತ್ರೀರೂಪದಿಂದ ಮಗುವಿಗೆ ಸ್ತನ್ಯಪಾನ ಮಾಡಿಸಿದುದನ್ನು ನೋಡಿ ಜ್ಞಾನದೃಷ್ಟಿಯಿಂದ ಅವಳು ಭೂದೇವಿಯೆಂದು ತಿಳಿದು ಎಲೌ ಭೂದೇವಿ, ನೀನು ಧನ್ಯಳು. ನನ್ನ ಬೆವರುನೀರಿನಿಂದ ಜನಿಸಿದ ಈ ಮಗುವನ್ನು ನೀನು ಸಲಹು. ಈ ಮಗುವು ನನ್ನ ಬೆವರಿನಿಂದ ಜನಿಸಿದವನಾದರೂ ನಿನ್ನ ಹೆಸರಿನಿಂದಲೇ ಪ್ರಸಿದ್ಧಿಯನ್ನು ಪಡೆಯುವನು. ಇವನೊಳ್ಳೇ ಗುಣವಂತನೂ ನಿನಗೆ ಆನಂದವನ್ನುಂಟುಮಾಡುವವನೂ ನನ್ನನ್ನು ಸಂತೋಷಗೊಳಿಸುವವನೂ ಆಗುವನು. ಇಂತಹ ಶಿಶುವನ್ನು ನಿನ್ನಿಷ್ಟದಂತೆಯೇ ಸ್ವೀಕರಿಸು ಎಂದನು.

೨೪-೨೫. ಬ್ರಹ್ಮನು ಹೇಳಿದನು.—ಎಲೈ ನಾರದ, ಹೀಗೆ ಸ್ವಲ್ಪಕಾಲ ವಿರಹವ್ಯಥೆಯ ಕಡೆಗೆ ಮನಸ್ಸುಕೊಡದೆ ರುದ್ರನು ಲೋಕವ್ಯವಹಾರವನ್ನು ಆಚರಿಸುತ್ತಿದ್ದ ರುದ್ರನು ಆರೀತಿ ಭೂದೇವಿಗೆ ಹೇಳಿ ಸುಮ್ಮನಾದನು. ಬಳಿಕ ಭೂದೇವಿಯು ಶಿವನಪ್ಪಣೆಯನ್ನು ಪಡೆದು ಆ ಮಗುವಿನೊಡನೆ ತನ್ನ ಸ್ಥಾನಕ್ಕೆ ತೆರಳಿದಳು.

ಸ ಬಾಲೋ ಭೌಮ ಇತ್ಯಾಖ್ಯಾಂ ಪ್ರಾಪ್ಯ ಭೂತ್ವಾ ಯುವಾ ದ್ರುತಂ ।
ತಸ್ಯಾಂ ಕಾಶ್ಯಾಂ ಚಿರಂ ಕಾಲಂ ಸಿಷೇವೆ ಶಂಕರಂಪ್ರಭುಂ ॥ ೨೬ ॥

ವಿಶ್ವೇಶ್ವರಪ್ರಸಾದೇನ ಗ್ರಹತ್ವಂ ಪ್ರಾಪ್ಯ ಭೂಮಿಜಃ ।
ದಿವ್ಯಂ ಲೋಕಂ ಜಗಾಮಾಶು ಶುಕ್ರಲೋಕಾತ್ಪರಂ ವರಂ ॥ ೨೭ ॥

ಇತ್ಯುಕ್ತಂ ಶಂಭುಚರಿತಂ ಸತೀವಿರಹಸಂಯುತಂ ।
ತಪಸ್ಯಾಚರಣಂ ಶಂಭೋಶ್ಶೃಣು ಚಾದರತೋ ಮುನೇ ॥ ೨೮ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ದಶಮೋಽಧ್ಯಾಯಃ



---

೨೬-೨೭. ಆ ಶಂಕರನ ಬೆವರಿನಿಂದ ಜನಿಸಿದ ಶಿಶುವು ಯುವಕನಾಗಿ "ಭೌಮ" (ಅಂಗಾರಕ-ಕುಜ) ಎಂಬ ಹೆಸರನ್ನು ಪಡೆದು ಕಾಶಿಯಲ್ಲಿ ಬಹಳಕಾಲ ಶಂಕರನನ್ನು ಸೇವಿಸಿದನು. ಅಲ್ಲಿ ವಿಶ್ವೇಶ್ವರನ ಪ್ರಸಾದವನ್ನು ಪಡೆದು ಅವನ ಅನುಗ್ರಹದಿಂದ ನವಗ್ರಹಗಳಲ್ಲಿ ಒಬ್ಬನಾಗಿ ಶುಕ್ರಲೋಕಕ್ಕಿಂತಲೂ ಮೇಲಿರುವ ದೇವಲೋಕಕ್ಕೆ ತೆರಳಿದನು.

೨೮. ಎಲೈ ನಾರದ, ಹೀಗೆ ಸತೀದೇವಿಯ ವಿರಹಕಾಲದ ಮಧ್ಯದಲ್ಲಿ ನಡೆದ ಶಿವಚರಿತೆಯನ್ನು ನಿನಗೆ ಹೇಳಿರುವೆನು. ಈಗ ಶಂಕರನ ತಪಸ್ಸನ್ನು ವರ್ಣಿಸಿ ಹೇಳುವೆನು. ಆದರದಿಂದ ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಏಕಾದಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ವರ್ಧಮಾನಾ ಗಿರೇಃ ಪುತ್ರೀ ಸಾ ಶಕ್ತಿರ್ಲೋಕಪೂಜಿತಾ ।
ಅಷ್ಟವರ್ಷಾ ಯದಾ ಜಾತಾ ಹಿಮಾಲಯಗೃಹೇ ಸತೀ ॥ ೧ ॥

ತಜ್ಜನ್ಮ ಗಿರಿಶೋ ಜ್ಞಾತ್ವಾ ಸತೀವಿರಹಕಾತರಃ ।
ಕೃತ್ವಾ ತಾಮದ್ಭುತಾಮಂತರ್ಮುಮೋದಾತೀವ ನಾರದ ॥ ೨ ॥

ತಸ್ಮಿನ್ನೇವಾಂತರೇ ಶಂಭುರ್ಲೌಕಿಕೀಂ ಗತಿಮಾಶ್ರಿತಃ ।
ಸಮಾಧಾತುಂ ಮನಸ್ಸಮ್ಯಕ್ತಪಃ ಕರ್ತುಂ ಸಮೈಚ್ಛತ ॥ ೩ ॥

---

## ಹನ್ನೊಂದನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು:—ಎಲೈ ನಾರದ, ಹಿಮವಂತನ ಮನೆಯಲ್ಲಿ ಜನಿಸಿದ ಆದಿಶಕ್ತಿಯ ಅವತಾರಳಾದ ಪಾರ್ವತಿಯು ಬೆಳೆಯುತ್ತಾ ಎಂಟುವರ್ಷದ ಕನ್ಯೆಯಾದಳು. ಸತೀದೇವಿಯು ಹಿಮವಂತನ ಮನೆಯಲ್ಲಿ ಜನಿಸಿದುದನ್ನು ತಿಳಿದು ವಿರಹದುಃಖಿತನಾದ ಶಂಕರನು ತುಂಬಾ ಹರ್ಷಗೊಂಡನು.

೩-೪. ಇದೇ ಸಮಯದಲ್ಲಿ ಶಂಕರನು ಲೋಕಗತಿಗನುಸಾರವಾಗಿ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ತಪಸ್ಸುಮಾಡಲಿಚ್ಛಿಸಿದನು. ನಂದಿಯೇ ಮೊದ

ಕಾಂಶ್ಚಿದ್ಗಣವರಾ್ ಶಾಂತಾ್ ನಂದ್ಯಾದೀನವಗೃಹ್ಯ ಚ ।
ಗಂಗಾವತಾರಮಗಮದ್ಧಿಮವತ್ಪ್ರಸ್ಥಮುತ್ತಮಂ ॥ ೪ ॥

ಯತ್ರ ಗಂಗಾ ನಿಪತಿತಾ ಪುರಾ ಬ್ರಹ್ಮಪುರಾತ್ಸ್ರುತಾ ।
ಸರ್ವಾಘೌಘವಿನಾಶಾಯ ಪಾವನೀ ಪರಮಾ ಮುನೇ ॥ ೫ ॥

ತಪಃಪ್ರಾರಂಭಮಕರೋತ್ಸ್ಥಿತ್ವಾ ತತ್ರ ವಶೀ ಹರಃ ।
ಏಕಾಗ್ರಂ ಚಿಂತಯಾಮಾಸ ಸ್ವಮಾತ್ಮಾನಮತಂದ್ರಿತಃ ॥ ೬ ॥

ಚೇತೋಜ್ಞಾನಭವಂ ನಿತ್ಯಂ ಜ್ಯೋತೀರೂಪಂ ನಿರಾಮಯಂ ।
ಜಗನ್ಮಯಂ ಚಿದಾನಂದಂ ದ್ವೈತಹೀನಂ ನಿರಾಶ್ರಯಂ ॥ ೭ ॥

ಹರೇ ಧ್ಯಾನಪರೇ ತಸ್ಮಿನ್ ಪ್ರಮಥಾ ಧ್ಯಾನತತ್ಪರಾಃ ।
ಅಭವನ್ ಕೇಚಿದಪರೇ ನಂದೀಭೃಂಗ್ಯಾದಯೋ ಗಣಾಃ ॥ ೮ ॥

ಸೇವಾಂ ಚಕ್ರುಸ್ತದಾ ಕೇಚಿದ್ಗಣಾಃ ಶಂಭೋಃ ಪರಾತ್ಮನಃ ।
ನೈವಾಕೂಜಂಸ್ತು ಮೌನಾ ಹಿ ದ್ವಾರಪಾಃ ಕೇಚನಾಭವನ್ ॥ ೯ ॥

---

ಲಾದ ಕೆಲವು ಗಣಗಳೊಡನೆ "ಗಂಗಾವತಾರ" (ಔಷಧಿಪ್ರಸ್ಥ) ವೆಂದು ಹೆಸರುಳ್ಳ ಹಿಮಾಲಯದ ತಪ್ಪಲಿಗೆ ಬಂದನು. ಆ ತಪ್ಪಲಲ್ಲಿಯೇ ಹಿಂದೆ ಬ್ರಹ್ಮಲೋಕದಿಂದ ಬಂದು ಪಾಪವನ್ನು ತೊಳೆಯುವವಳೂ ಪರಮಪವಿತ್ರಳೂ ಆದ ಗಂಗೆಯು ಹರಿಯುತ್ತಿರುವಳು.

೬-೭. ಆ ತಪ್ಪಲಲ್ಲಿ ಶಂಕರನು ಜಿತೇಂದ್ರಿಯತೆಯಿಂದ ತಪವನ್ನಾರಂಭಿಸಿದನು. ಸಚ್ಚಿದಾನಂದರೂಪವೂ, ಸ್ವಯಂಪ್ರಕಾಶವೂ, ಭೇದವಿಲ್ಲದುದೂ ನಿತ್ಯವೂ ಮತ್ತು ಜಗದ್ರೂಪವೂ ಆದಂತಹ ತನ್ನ ಸ್ವರೂಪ (ಬ್ರಹ್ಮವಸ್ತು) ವನ್ನು ಚಿಂತಿಸತೊಡಗಿದನು.

೮-೯. ಶಂಕರನು ಹಾಗೆ ಧ್ಯಾನಪರನಾಗಲು ಕೆಲವು ಪ್ರಮಥಗಣಗಳು ಧ್ಯಾನವನ್ನು ಮಾಡತೊಡಗಿದುವು. ಕೆಲವು ಪರಮಾತ್ಮನಾದ ಆ ಶಂಕರನನ್ನು ಸೇವಿಸತೊಡಗಿದುವು. ಶಂಕರನ ಸಮಾಧಿಗೆ ವಿಘ್ನವಾಗದಂತೆ ಎಲ್ಲ ಗಣಗಳೂ ಮೌನವನ್ನಾವರಿಸಿದುವು. ಕೆಲವು ಗಣಗಳು ದ್ವಾರಪಾಲಕರಾದುವು.

ಏತಸ್ಮಿನ್ನಂತರೇ ತತ್ರ ಜಗಾಮ ಹಿಮಭೂಧರಃ ।
ಶಂಕರಸ್ಯೌಷಧಿಪ್ರಸ್ಥೇ ಶ್ರುತ್ವಾಽಽಗಮನಮಾದರಾತ್ ॥ ೧೦ ॥

ಪ್ರಣನಾಮ ಪ್ರಭುಂ ರುದ್ರಂ ಸಗಣೋ ಭೂಧರೇಶ್ವರಃ ।
ಸಮಾನರ್ಚ ಚ ಸುಪ್ರೀತಸ್ತುಷ್ಟಾವ ಸ ಕೃತಾಂಜಲಿಃ ॥ ೧೧ ॥

॥ ಹಿಮಾಲಯ ಉವಾಚ ॥

ದೇವದೇವ ಮಹಾದೇವ ಕಪರ್ದಿನ್ ಶಂಕರ ಪ್ರಭೋ ।
ತ್ವಯೈವ ಲೋಕನಾಥೇನ ಪಾಲಿತಂ ಭುವನತ್ರಯಂ ॥ ೧೨ ॥

ನಮಸ್ತೇ ದೇವದೇವೇಶ ಯೋಗಿರೂಪಧರಾಯ ಚ ।
ನಿರ್ಗುಣಾಯ ನಮಸ್ತುಭ್ಯಂ ಸಗುಣಾಯ ವಿಹಾರಿಣೇ ॥ ೧೩ ॥

ಕೈಲಾಸವಾಸಿನೇ ಶಂಭೋ ಸರ್ವಲೋಕಾಟನಾಯ ಚ ।
ನಮಸ್ತೇ ಪರಮೇಶಾಯ ಲೀಲಾಕಾರಾಯ ಶೂಲಿನೇ ॥ ೧೪ ॥

---

೧೦-೧೧. ಇದೇ ಸಮಯದಲ್ಲಿ ಹಿಮವಂತನು ಓಷಧಿಪ್ರಸ್ಥಕ್ಕೆ ಶಂಕರನು ಬಂದಿರುವುದನ್ನು ತಿಳಿದು ತನ್ನ ಪರಿವಾರದೊಡನೆ ಶಂಕರನ ಬಳಿಗೆ ಹೋಗಿ ಅಲ್ಲಿ ಜಗದೊಡೆಯನಾದ ಆ ರುದ್ರನನ್ನು ನಮಸ್ಕರಿಸಿ ಪೂಜಿಸಿದನು. ಮತ್ತು ಅಂಜಲಿಯನ್ನು ಧರಿಸಿ ಹೀಗೆ ಸ್ತುತಿಸಿದನು.

೧೨-೧೪. ಹಿಮವಂತನು ಹೇಳಿದನು:—ದೇವದೇವನೂ, ಜಗದೊಡೆಯನೂ ಆದ ಓ ಮಹಾದೇವನೇ ನೀನೇ ಈ ಜಗತ್ತನ್ನು ರಕ್ಷಿಸುವವನು ದೇವದೇವರಾದ ವಿಷ್ಣು ಬ್ರಹ್ಮರಿಗೂ ನೀನು ಒಡೆಯನು. ಇಂತಹ ನೀನು ಈಗ ಯೋಗಿಯಾಗಿ ತಪವನ್ನಾಚರಿಸುತ್ತಿರುವೆ. ನಿನಗೆ ನಮಸ್ಕಾರವು. ವಸ್ತುತಃ ನಿನಗೆ ಯಾವ ಗುಣಗಳೂ ಇಲ್ಲ ಆದರೆ ಮಾಯೆಯಿಂದ ಸಗುಣ (ಈಶ್ವರ) ನಾಗಿ ವಿಹರಿಸುವೆ. ಕೈಲಾಸವಾಸಿಯಾದರೂ ನೀನು ಎಲ್ಲ ಲೋಕಗಳನ್ನೂ ಸಂಚರಿಸುವ ಮಹಾವ್ಯಾಪಕನು. ಲೀಲಾಮಯನಾದ ಪರಮೇಶ್ವರನು. ಇಂತಹ ನಿನಗೆ ನಮಸ್ಕಾರವು.

ಪರಿಪೂರ್ಣಗುಣಾಧಾನವಿಕಾರರಹಿತಾಯ ತೇ ।
ನಮೋಽನೀಹಾಯ ವೀಹಾಯ ಧೀರಾಯ ಪರಮಾತ್ಮನೇ ॥ ೧೫ ॥

ಅಬಹಿರ್ಭೋಗಕಾರಾಯ ಜನವತ್ಸಲ ತೇ ನಮಃ ।
ತ್ರಿಗುಣಾಧೀಶ ಮಾಯೇಶ ಬ್ರಹ್ಮಣೇ ಪರಮಾತ್ಮನೇ ॥ ೧೬ ॥

ವಿಷ್ಣುಬ್ರಹ್ಮಾದಿಸೇವ್ಯಾಯ ವಿಷ್ಣುಬ್ರಹ್ಮಸ್ವರೂಪಿಣೇ ।
ವಿಷ್ಣುಬ್ರಹ್ಮಕದಾತ್ರೇ ಚ ಭಕ್ತಿಪ್ರಿಯ ನಮೋಽಸ್ತು ತೇ ॥ ೧೭ ॥

ತಪೋರತ ತಪಃಸ್ಥಾನ ಸುತಪಃಫಲದಾಯಿನೇ ।
ತಪಃಪ್ರಿಯಾಯ ಶಾಂತಾಯ ನಮಸ್ತೇ ಬ್ರಹ್ಮರೂಪಿಣೇ ॥ ೧೮ ॥

ವ್ಯವಹಾರಕರಾಯೈವ ಲೋಕಾಚಾರಕರಾಯ ತೇ ।
ಸಗುಣಾಯ ಪರೇಶಾಯ ನಮಸ್ತೇ ಪರಮಾತ್ಮನೇ ॥ ೧೯ ॥

---

೧೫-೧೭. ಮತ್ತು ನೀನು ಪರಿಪೂರ್ಣಸ್ವರೂಪನು. ವಿಕಾರಗಳಿಲ್ಲದವನು, ನಿಸ್ಪೃಹನು, ವ್ಯಾಪಕನು, ಧೀರನು, ಪರಮಾತ್ಮನು. ಇಂತಹ ನಿನಗೆ ನಮಸ್ಕಾರವು. ನೀನು ಬಾಹ್ಯವಾದ (ಹೊರಗಿನ) ಅನಿತ್ಯ ವಿಷಯಸುಖಗಳಲ್ಲಪೇಕ್ಷೆಯಿಲ್ಲದವನು. ಭಕ್ತವತ್ಸಲನು. ಸತ್ವರಜಸ್ತಮೋಗುಣಗಳಿಗೆ (ಪ್ರಕೃತಿಗೆ) ಒಡೆಯನು. ಮಾಯೆಯನ್ನೂ ತನ್ನಧೀನದಲ್ಲಿಟ್ಟಿರುವವನು. ವಿಷ್ಣು ಬ್ರಹ್ಮ ಮೊದಲಾದವರು ನಿನ್ನನ್ನು ಸೇವಿಸುವರು. ವಿಷ್ಣು ಬ್ರಹ್ಮ ಮೊದಲಾದವರ ಸ್ವರೂಪದಿಂದ ಆಯಾಯ ಕಾರ್ಯಗಳನ್ನು ಮಾಡುವವನು ನೀನು. ವಿಷ್ಣು ಬ್ರಹ್ಮ ಪದವಿಗಳನ್ನು ಕೊಡುವವನೂ ನೀನು. ಭಕ್ತಪ್ರಿಯನು ಇಂತಹ ನಿನಗೆ ನಮಸ್ಕಾರವು.

೧೮-೨೦. ಓ ಪ್ರಭುವೇ, ನೀನು ತಪಸ್ವಿಯೂ, ತಪಸ್ಸಿಗೆ ಆಶ್ರಯನು, ತಪಸ್ಸಿಗೆ ಫಲವನ್ನು ಕೊಡುವವನು, ತಪಸ್ಸು ನಿನಗೆ ಪ್ರಿಯವಾದುದು. ನೀನು ಶಾಂತನು ಬ್ರಹ್ಮರೂಪನು. ಇಂತಹ ನಿನಗೆ ನಮಸ್ಕಾರವು. ಲೋಕವನ್ನನುಸರಿಸಿ ನೀನು ವ್ಯವಹಾರವನ್ನು ಮಾಡುವೆ ನೀನು ಪರಮೇಶ್ವರನೂ ಪರಮಾತ್ಮನೂ ಆಗಿರುವೆ. ಓ ಮಹೇಶ್ವರ, ನಿನ್ನ ಲೀಲೆಯನ್ನು ತಿಳಿಯಲಸಾಧ್ಯವು. ಆದರದು ಸಾಧುಗಳಿಗೆ

ಲೀಲಾ ತವ ಮಹೇಶಾನಾವೇದ್ಯಾ ಸಾಧುಸುಖಪ್ರದಾ ।
ಭಕ್ತಾಧೀನಸ್ಸ್ವರೂಪೋಽಸಿ ಭಕ್ತವಶ್ಯೋ ಹಿ ಕರ್ಮಕೃತ್ ॥ ೨೦ ॥

ಮಮ ಭಾಗ್ಯೋದಯಾದತ್ರ ತ್ವಮಾಗತ ಇಹ ಪ್ರಭೋ ।
ಸನಾಥಂ ಕೃತವಾನ್ ಮಾಂ ತ್ವಂ ವರ್ಣಿತೋ ದೀನವತ್ಸಲಃ ॥ ೨೧ ॥

ಅದ್ಯ ಮೇ ಸಫಲಂ ಜನ್ಮ ಸಫಲಂ ಜೀವನಂ ಮಮ ।
ಅದ್ಯ ಮೇ ಸಫಲಂ ಸರ್ವಂ ಯದತ್ರ ತ್ವಮಿಹಾಗತಃ ॥ ೨೨ ॥

ಜ್ಞಾತ್ವಾ ಮಾಂ ದಾಸಮವ್ಯಗ್ರಮಾಜ್ಞಾಂ ದೇಹಿ ಮಹೇಶ್ವರ ।
ತ್ವತ್ಸೇವಾಂ ಚ ಮಹಾಪ್ರೀತ್ಯಾ ಕುರ್ಯಾಮಹಮನನ್ಯಧೀಃ ॥ ೨೩ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಗಿರೀಶಸ್ಯ ಮಹೇಶ್ವರಃ ।
ಕಿಂಚಿದುನ್ಮೀಲ್ಯ ನೇತ್ರೇ ಚ ದದರ್ಶ ಸಗಣಂ ಗಿರಿಂ ॥ ೨೪ ॥

ಸಗಣಂ ತಂ ತಥಾ ದೃಷ್ಟ್ವಾ ಗಿರಿರಾಜಂ ವೃಷಧ್ವಜಃ ।
ಉವಾಚ ಧ್ಯಾನಯೋಗಸ್ಥಃ ಸ್ಮಯನ್ನಿವ ಜಗತ್ಪತಿಃ ॥ ೨೫ ॥

---

ಸುಖವನ್ನುಂಟುಮಾಡುವಂತಹುದು. ಭಕ್ತಾದೀನನು ನೀನು. ಭಕ್ತರಿಗನುಕೂಲವಾದ ಕಾರ್ಯವನ್ನು ನೀನು ಮಾಡುವೆ.

೨೧-೨೩. ಓ ಸ್ವಾಮಿ, ನನ್ನ ಭಾಗ್ಯದಿಂದಲೇ ನೀನು ಇಲ್ಲಿಗೆ (ಹಿಮಾಲಯಕ್ಕೆ) ಬಂದಿರುವೆ. ನಾನು ಸನಾಥನಾದೆನು. ನಿನ್ನ ದೀನವತ್ಸಲತೆಯು ಪ್ರಕಟವಾಯಿತು. ಈ ನಿನ್ನ ಆಗಮನದಿಂದ ನಾನು ಧನ್ಯನಾದೆನು. ನನ್ನ ಜನ್ಮವು ಸಾರ್ಥಕವಾಯಿತು. ಜೀವನವು ಸಫಲವಾಯಿತು. ನನ್ನದೆಲ್ಲವೂ ಧನ್ಯವಾಯಿತು. ಓ ಮಹೇಶ್ವರ, ನಾನು ನಿನ್ನ ಪರಮಭಕ್ತನೆಂದೂ, ದಾಸನೆಂದೂ ತಿಳಿದು ಅಪ್ಪಣೆಮಾಡು ನಿನ್ನ ಸೇವೆಯನ್ನು ಮಹಾ ಭಕ್ತಿಯಿಂದ ಮಾಡುವೆನು.

೨೪-೨೫. ಬ್ರಹ್ಮನು ಹೇಳಿದನು:—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಸಮಾಧಿಯಲ್ಲಿ ಕುಳಿತ ಮಹೇಶ್ವರನು ಸ್ವಲ್ಪ ಕಣ್ಣನ್ನು ತೆರೆದು ಪರಿವಾರದೊಡನೆ ಬಂದಿರುವ ಪರ್ವತರಾಜನನ್ನು ನೋಡಿ ಮಂದಹಾಸದಿಂದ ಹೀಗೆ ಹೇಳಿದನು.

॥ ಮಹೇಶ್ವರ ಉವಾಚ ॥

ತವ ಪೃಷ್ಠೇ ತಪಸ್ತಪ್ತುಂ ರಹಸ್ಯಮಹಮಾಗತಃ ।
ಯಥಾ ನ ಕೋಽಪಿ ನಿಕಟಂ ಸಮಾಯಾತು ತಥಾ ಕುರು ॥ ೨೬ ॥

ತ್ವಂ ಮಹಾತ್ಮಾ ತಪೋಧಾಮಾ ಮುನೀನಾಂ ಚ ಸದಾಶ್ರಯಃ ।
ದೇವಾನಾಂ ರಾಕ್ಷಸಾನಾಂ ಚ ಪರೇಷಾಂ ಚ ಮಹಾತ್ಮನಾಂ ॥ ೨೭ ॥

ಸದಾ ವಾಸೋ ದ್ವಿಜಾದೀನಾಂ ಗಂಗಾಪೂತಶ್ಚ ನಿತ್ಯದಾ ।
ಪರೋಪಕಾರೀ ಸರ್ವೇಷಾಂ ಗಿರೀಣಾಮಧಿಪಃ ಪ್ರಭುಃ ॥ ೨೮ ॥

ಅಹಂ ತಪಶ್ಚರಾಮ್ಯತ್ರ ಗಂಗಾವತರಣೇ ಸ್ಥಲೇ ।
ಆಶ್ರಿತಸ್ತವ ಸುಪ್ರೀತೋ ಗಿರಿರಾಜ ಯತಾತ್ಮವಾನ್ ॥ ೨೯ ॥

ನಿರ್ವಿಘ್ನಂ ಮೇ ತಪಶ್ಚಾತ್ರ ಹೇತುನಾ ಯೇನ ಶೈಲಪ ।
ಸರ್ವಥಾ ಹಿ ಗಿರಿಶ್ರೇಷ್ಠ ಸುಯತ್ನಂ ಕುರು ಸಾಂಪ್ರತಂ ॥ ೩೦ ॥

ಮಮೋಪಮೇವ ಪರಮಂ ಸೇವನಂ ಪರ್ವತೋತ್ತಮ ।
ಸ್ವಗೃಹಂ ಗಚ್ಛ ಸುಪ್ರೀತ್ಯಾ ತತ್ಸಂಪಾದಯ ಯತ್ನತಃ ॥ ೩೧ ॥

---

೨೬-೨೮. ಮಹೇಶ್ವರನು ಹೇಳಿದನು:—ಎಲೈ ಪರ್ವತರಾಜನೆ, ನಿನ್ನ ತಪ್ಪ ಲಲ್ಲಿ ರಹಸ್ಯವಾಗಿ ತಪವನ್ನಾಚರಿಸಲು ಬಂದಿರುವೆನು. ನನ್ನ ಬಳಿಗೆ ಯಾರೂ ಬರ ದಂತೆ ಮಾಡು. ನೀನು ಮಹಾತ್ಮನು, ತಪಸ್ಸಿಗೆ ಆಶ್ರಯನು, ಮುನಿಗಳು ದೇವತೆಗಳು ರಾಕ್ಷಸರು ಮಹಾತ್ಮರು ಇವರೆಲ್ಲರೂ ನಿನ್ನಲ್ಲಿ ವಾಸಿಸುವರು, ಬ್ರಾಹ್ಮ ಣರು ಮೊದಲಾದವರೂ ವಾಸಿಸುವರು. ಗಂಗಾನದಿಯು ನಿನ್ನಲ್ಲಿ ಹರಿಯುವುದರಿಂದ ಸದಾ ನೀನು ಪವಿತ್ರನು, ಪರೋಪಕಾರಿಯು. ಪರ್ವತಗಳಿಗೆ ನೀನು ರಾಜನು.

೨೯-೩೧. ಎಲೈ ಗಿರಿರಾಜ, ಗಂಗೆಯು ಇಳಿದುಬಂದಿರುವ ಈ ಓಷಧಿಪ್ರಸ್ಥ ದಲ್ಲಿ ನಾನು ನಿಯಮದಿಂದ ತಪವನ್ನಾಚರಿಸುವೆನು. ನನ್ನ ತಪವು ನಿರ್ವಿಘ್ನವಾಗಿ ನೆರವೇರುವಂತೆ ಯತ್ನವನ್ನು ಮಾಡು. ಇದೇ ನನಗಾಗಬೇಕಾದ ಸೇವೆಯು. ಸಂತೋಷದಿಂದ ಮನೆಗೆ ಹೋಗಿ ನಾನು ಹೇಳಿದುದನ್ನು ಮಾಡು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಜಗತಾಂ ನಾಥಸ್ತೂಷ್ಣೀಮಾಸ ಸ ಸೂತಿಕೃತ್ ।
ಗಿರಿರಾಜಸ್ತದಾ ಶಂಭುಂ ಪ್ರಣಯಾದಿದಮಬ್ರವೀತ್ ॥ ೩೨ ॥

॥ ಹಿಮಾಲಯ ಉವಾಚ ॥

ಪೂಜಿತೋಽಸಿ ಜಗನ್ನಾಥ ಮಯಾ ತ್ವಂ ಪರಮೇಶ್ವರ ।
ಸ್ವಾಗತೇನಾದ್ಯ ವಿಷಯೇ ಸ್ಥಿತಂ ತ್ವಾಂ ಪ್ರಾರ್ಥಯಾಮಿ ಕಿಂ ॥ ೩೩ ॥

ಮಹತಾ ತಪಸಾ ತ್ವಂ ಹಿ ದೇವೈರ್ಯತ್ನಪರಾಶ್ರಿತೈಃ ।
ನ ಪ್ರಾಪ್ಯಸೇ ಮಹೇಶಾನ ಸ ತ್ವಂ ಸ್ವಯಮುಪಸ್ಥಿತಃ ॥ ೩೪ ॥

ದೇವೇಂದ್ರಾದಧಿಕಂ ಮನ್ಯೇ ಸ್ವಾತ್ಮನಂ ಪರಮೇಶ್ವರ ।
ಸಗಣೇನ ತ್ವಯಾಗತ್ಯ ಕೃತೋಽನುಗ್ರಹಭಾಗಹಂ ॥ ೩೫ ॥

ಮತ್ತೋ ಧನ್ಯತಮೋ ನಾಸ್ತಿ ನ ಮತ್ತೋಽನ್ಯೋಽಸ್ತಿ ಪುಣ್ಯವಾನ್ ।
ಭವಾನಿತಿ ಚ ಮತ್ಪೃಷ್ಠೇ ತಪಸೇ ಸಮುಪಸ್ಥಿತಃ ॥ ೩೬ ॥

ನಿರ್ವಿಘ್ನಂ ಕುರು ದೇವೇಶ ಸ್ವತಂತ್ರಃ ಪರಮಂ ತಪಃ ।
ಕರಿಷ್ಯೇಽಹಂ ತಥಾ ಸೇವಾಂ ದಾಸೋಽಹಂ ತೇ ಸದಾ ಪ್ರಭೋ ॥ ೩೭ ॥

---

೩೨. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಪರಮೇಶ್ವರನು ಸುಮ್ಮನಾದನು. ಆಗ ಗಿರಿರಾಜನು ತಿರುಗಿ ಶಂಕರನನ್ನು ಕುರಿತು,

೩೩-೩೭. ಹಿಮವಂತನು ಹೇಳಿದನು :— ಓ ಜಗದೊಡೆಯನಾದ ಪರಮೇಶ್ವರನೆ, ಸ್ವಾಗತವನ್ನು ನೀಡಿ ನಿನ್ನನ್ನು ನಾನು ಪೂಜಿಸಿರುವೆನು. ನನ್ನ ದೇಶದಲ್ಲಿಯೇ ಇರುವ ನಿನ್ನನ್ನು ಕುರಿತು ನಾನು ಏನು ಪ್ರಾರ್ಥಿಸಲಿ? ಎಲ್ಲವೂ ನಿನ್ನ ಅನುಗ್ರಹದಿಂದ ತಾನಾಗಿಯೇ ಸಿದ್ಧಿಸುವುವು. ಮಹಾ ತಪಸ್ಸಾಚರಿಸಿದರೂ ದೇವತೆಗಳಿಗೆ ನೀನು ದುರ್ಲಭನಾಗಿರುವೆ. ದೇವೇಂದ್ರನಿಗಿಂತಲೂ ನಾನು ಉತ್ತಮನೆಂದು ತಿಳಿದಿರುವೆನು. ಇಲ್ಲದಿದ್ದರೆ ನೀನು ಗಣಗಳೊಂದಿಗೆ ನನ್ನಲ್ಲಿಗೆ ಬಂದು ನನ್ನನ್ನು ಅನುಗ್ರಹಿಸುತ್ತಿದ್ದೆಯಾ? ನನಗಿಂತಲೂ ಧನ್ಯನಿನ್ನೊಬ್ಬನಿಲ್ಲ, ಪುಣ್ಯವಂತನಿಲ್ಲ. ಓ ಮಹಾದೇವ, ನನ್ನ ತಪ್ಪಲಲ್ಲಿ ಯಥೇಚ್ಛೆಯಿಂದ ತಪವನ್ನಾಚರಿಸು. ವಿಘ್ನವು ಬಾರದಂತೆ ಪ್ರಯತ್ನಿಸುವೆನು. ಓ ಪ್ರಭು, ನಾನು ಸದಾ ನಿನ್ನ ಸೇವಕನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಗಿರಿರಾಜೋಽಸೌ ಸ್ವಂ ವೇಶ್ಮ ದ್ರುತಮಾಗತಃ ।
ವೃತ್ತಾಂತಂ ತಂ ಸಮಾಚಖ್ಯೌ ಪ್ರಿಯಾಯೈ ಚ ಸಮಾದರಾತ್ ॥ ೩೮ ॥

ನಿಯಮಾನ್ ಪರೀವಾರಾನ್ ಸ್ವಗಣಾನಪಿ ನಾರದ ।
ಸಮಾಹೂಯಾಖಿಲಾನ್ ಶೈಲಪತಿಃ ಪ್ರೋವಾಚ ತತ್ತ್ವತಃ ॥ ೩೯ ॥

॥ ಹಿಮಾಲಯ ಉವಾಚ ॥

ಅದ್ಯ ಪ್ರಭೃತಿ ನೋ ಯಾತು ಕೋಽಪಿ ಗಂಗಾವತಾರಣಂ ।
ಮಚ್ಛಾಸನೇನ ಮತ್ಪ್ರಸ್ಥಂ ಸತ್ಯಮೇತದ್ಬ್ರವೀಮ್ಯಹಂ ॥ ೪೦ ॥

ಗಮಿಷ್ಯತಿ ಜನಃ ಕಶ್ಚಿತ್ತತ್ರ ಚೇತ್ತಂ ಮಹಾಖಲಂ ।
ದಂಡಯಿಷ್ಯೇ ವಿಶೇಷೇಣ ಸತ್ಯಮೇತನ್ಮಯೋದಿತಂ ॥ ೪೧ ॥

ಇತಿ ತಾನ್ ಸ ನಿಯಮ್ಯಾಶು ಸ್ವಗಣಾನ್ ನಿಖಿಲಾನ್ ಮುನೇ ।
ಸುಯತ್ನಂ ಕೃತವಾನ್ ಶೈಲಸ್ತಂ ಶೃಣು ತ್ವಂ ವದಾಮಿ ತೇ ॥ ೪೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಏಕಾದಶೋಽಧ್ಯಾಯಃ

---

೩೮-೩೯. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಹಿಮವಂತನು ತನ್ನ ಮನೆಗೆ ಜಾಗ್ರತೆಯಾಗಿ ಬಂದು ಆ ವೃತ್ತಾಂತವನ್ನು ತನ್ನ ಪ್ರಿಯಪತ್ನಿಗೆ ಹೇಳಿದನು. ಮತ್ತೂ ತನ್ನ ಪರಿವಾರದವರನ್ನೆಲ್ಲಾ ಕರೆಸಿ ಹೀಗೆ ಹೇಳಿದನು.

೪೦-೪೨. ಹಿಮಾಲಯನು ಹೇಳಿದನು:—ಎಲೈ ಚಾಕರೇ ಮತ್ತು ಪರಿವಾರ ದವರೇ, ಇದು ಮೊದಲುಗೊಂಡು ನೀವಾರೂ ಸಹ "ಗಂಗಾವತಾರ" ವೆಂಬ ತಪ್ಪ ಲಿಗೆ ಹೋಗಕೂಡದು. ನನ್ನಪ್ಪಣೆಯನ್ನು ಮೀರಿಹೋದರೆ ಅಂತಹ ಮೂರ್ಖನನ್ನು ಚೆನ್ನಾಗಿ ಶಿಕ್ಷಿಸುವೆನು. ಎಂದು ಎಲ್ಲರಿಗೂ ಅಪ್ಪಣೆಮಾಡಿ ಹಿಮವಂತನು ಶಂಕರನ ತಪಸ್ಸಿಗೆ ವಿಘ್ನಬರದಂತೆ ವ್ಯವಸ್ಥೆಮಾಡಿದನು. ಎಲೈ ನಾರದ, ಮುಂದೆ ಆ ಹಿಮ ವಂತನು ಏನು ಮಾಡಿದನೆಂಬುದನ್ನು ಹೇಳುವೆನು ಕೇಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ
ಪಾರ್ವತೀಖಂಡದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ದ್ವಾದಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥಶೈಲಪತಿರ್ಹೃಷ್ಟಃ ಸತ್ಪುಷ್ಪಫಲಂಸಂಚಯಂ ।
ಸಮಾದಾಯ ಸ್ವತನಯಾಸಹಿತೋಽಗಾದ್ಧರಾಂತಿಕಂ ॥ ೧ ॥

ಸ ಗತ್ವಾ ತ್ರಿಜಗನ್ನಾಥಂ ಪ್ರಣಮ್ಯ ಧ್ಯಾನತತ್ಪರಂ ।
ಅರ್ಥಯಾಮಾಸ ತನಯಾಂ ಕಾಲೀಂ ತಸ್ಮೈ ಹೃದಾದ್ಭುತಾಂ ॥ ೨ ॥

ಫಲಪುಷ್ಪಾದಿಕಂ ಸರ್ವಂ ತತ್ತದಗ್ರೇ ನಿಧಾಯ ಸಃ ।
ಅಗ್ರೇ ಕೃತ್ವಾ ಸುತಾಂ ಶಂಭುಮಿದಮಾಹ ಚ ಶೈಲರಾಟ್ ॥ ೩ ॥

---

## ಹನ್ನೆರಡನೆಯ ಅಧ್ಯಾಯವು

೧-೩. ಬ್ರಹ್ಮನು ಹೇಳಿದನು:—ಅನಂತರ ಹಿಮವಂತನು ಆದರದಿಂದ ಒಳ್ಳೆಯ ಪುಷ್ಪ ಮತ್ತು ಫಲಗಳನ್ನು ತೆಗೆದುಕೊಂಡು ತನ್ನ ಪುತ್ರಿ ಪಾರ್ವತಿಯೊಡನೆ ಶಿವನ ಬಳಿಗೆ ತೆರಳಿದನು. ಪಾರ್ವತಿಯನ್ನು ಶಿವನ ಸೇವೆಗಾಗಿ ನಿಯಮಿಸಬೇಕೆಂದು ಮನದಲ್ಲಿ ನಿಶ್ಚಯಿಸಿಕೊಂಡನು. ಆ ಹಿಮವಂತನು ತಾನು ತಂದ ಹಣ್ಣು ಹೂವು ಮುಂತಾದುವುಗಳನ್ನು ಶಂಕರನೆದುರಿಗಿರಿಸಿ ಪಾರ್ವತಿಯನ್ನು ಮುಂದೆ ನಿಲ್ಲಿಸಿ ಹೀಗೆ ಹೇಳಿದನು.

॥ ಹಿಮಗಿರಿರುವಾಚ ॥

ಭಗವಂಸ್ತನಯಾ ಮೇ ತ್ವಾಂ ಸೇವಿತುಂ ಚಂದ್ರಶೇಖರಂ ।
ಸಮುತ್ಸುಕಾ ಸಮಾನೀತಾ ತ್ವದಾರಾಧನಕಾಂಕ್ಷಯಾ ॥ ೪ ॥

ಸಖೀಭ್ಯಾಂ ಸಹ ನಿತ್ಯಂ ತ್ವಾಂ ಸೇವತಾಮೇವ ಶಂಕರಂ ।
ಅನುಜಾನೀಹಿ ತಾಂ ನಾಥ ಮಯಿ ತೇ ಯದ್ಯನುಗ್ರಹಃ ॥ ೫ ॥

॥ ಬ್ರಹ್ಮೋವಾಚ ॥

ಅಥ ತಾಂ ಶಂಕರೋऽಪಶ್ಯತ್ಪ್ರಥಮಾರೂಢಯೌವನಾಂ ।
ಫುಲ್ಲೇಂದೀವರಪತ್ರಾಭಾಂ ಪೂರ್ಣಚಂದ್ರನಿಭಾನನಾಂ ॥ ೬ ॥

ಸಮಸ್ತಲೀಲಾಸಂಸ್ಥಾನಶುಭವೇಷವಿಜೃಂಭಿತಾಂ ।
ಕಂಬುಗ್ರೀವಾಂ ವಿಶಾಲಾಕ್ಷೀಂ ಚಾರುಕರ್ಣಯುಗೋಜ್ಜ್ವಲಾಂ ॥ ೭ ॥

ಮೃಣಾಳಾಯತಪರ್ಯಂತಬಾಹುಯುಗ್ಮಮನೋಹರಾಂ ।
ರಾಜೀವಕುಡ್ಮಲಪ್ರಖ್ಯೌ ಘನಪೀನೌ ಪಯೋಧರೌ ॥ ೮ ॥

ಬಿಭ್ರತೀಂ ಕ್ಷೀಣಮಧ್ಯಾಂ ಚ ತ್ರಿವಳೀಮಧ್ಯರಾಜಿತಾಂ ।
ಸ್ಥಲಪದ್ಮಪ್ರತೀಕಾಶಪಾದಯುಗ್ಮವಿರಾಜಿತಾಂ ॥ ೯ ॥

---

೪-೫. ಹಿಮವಂತನು ಹೇಳಿದನು :—ಭಗವಂತನಾದ ಓ ಚಂದ್ರಶೇಖರ, ಈ ನನ್ನ ಪುತ್ರಿಯು ನಿನ್ನನ್ನು ಸೇವಿಸಲಿಚ್ಛಿಸುವಳು. ನಿನ್ನ ಆರಾಧನೆಗಾಗಿ ಇವಳನ್ನು ಕರೆದುಕೊಂಡುಬಂದಿರುವೆನು. ಇವಳು ಸಖಿಯರೀರ್ವರೊಡನೆ ನಿನ್ನನ್ನು ಸೇವಿಸುವಳು. ನನ್ನಲ್ಲಿ ಅನುಗ್ರಹವಿದ್ದರೆ ಪಾರ್ವತಿಯ ಸೇವೆಗೆ ಅನುಮತಿಯನ್ನು ಕೊಡು.

೬-೧೦. ಬ್ರಹ್ಮನು ಹೇಳಿದನು :—ಬಳಿಕ ಶಂಕರನು ಆಗತಾನೇ ಉದಯಿಸುತ್ತಲಿರುವ ಯೌವನವುಳ್ಳ ಪಾರ್ವತಿಯನ್ನು ನೋಡಿದನು. ಅರಳಿದ ಕಮಲ (ಎಲೆಯಂತೆ) ದಳದಂತೆ ಶ್ಯಾಮ (ನೀಲ) ವರ್ಣವಾಗಿದ್ದಳು. ಪೂರ್ಣಚಂದ್ರನಂತೆ ಅವಳ ಮುಖವು ಮನೋಹರವಾಗಿದ್ದಿತು. ಎಲ್ಲಾ ವಿಧವಾದ ವಿಲಾಸಗಳಿಗೂ ಆಶ್ರಯವಾದಂತಹ ವೇಷದಿಂದ ರಾರಾಜಿಸುತ್ತಲಿದ್ದಳು. ಅವಳ ಕತ್ತು ಶಂಖದಂತಿತ್ತು. ಕಣ್ಣುಗಳು ವಿಶಾಲವಾಗಿದ್ದುವು. ಕಿವಿಗಳು ಸುಂದರವಾಗಿದ್ದುವು. ಬಾಹುಗಳು ತಾವರೆ ನಾಳದಂತೆ ನೀಳವಾಗಿದ್ದುವು. ಕಮಲದ ಮೊಗ್ಗೆಯಂತೆ ಕುಚಗಳು

ಧ್ಯಾನಪಂಜರನಿರ್ಬದ್ಧಮುನಿಮಾನಸಮುಷ್ಯಲಂ ।
ದರ್ಶನಾದ್ಭ್ರಂಶನೇ ಶಕ್ತಾಂ ಯೋಷಿದ್ಗಣಶಿರೋಮಣಿಂ ॥ ೧೦ ॥

ದೃಷ್ಟ್ವಾ ತಾಂ ತಾದೃಶೀಂ ತಾತ ಧ್ಯಾನಿನಾಂ ಚ ಮನೋಹರಾಂ ।
ವಿಗ್ರಹೇ ತಂತ್ರಮಂತ್ರಾಣಾಂ ವರ್ಧಿನೀಂ ಕಾಮರೂಪಿಣೀಂ ॥ ೧೧ ॥

ನ್ಯಮೀಲಯದ್ದೃಶೌ ಶೀಘ್ರಂ ದಧ್ಯೌ ಸ್ವಂ ರೂಪಮುತ್ತಮಂ ।
ಪರತತ್ತ್ವಂ ಮಹಾಯೋಗೀ ತ್ರಿಗುಣಾತ್ಪರಮವ್ಯಯಂ ॥ ೧೨ ॥

ದೃಷ್ಟ್ವಾ ತದಾನೀಂ ಸಕಲೇಶ್ವರಂ ವಿಭುಂ
ತಪೋ ಜುಷಾಣಂ ನಿನಿಮೀಲಿತೇಕ್ಷಣಂ ।
ಕಪರ್ದಿನಂ ಚಂದ್ರಕಲಾವಿಭೂಷಣಂ
ವೇದಾಂತವೇದ್ಯಂ ಪರಮಾಸನೇ ಸ್ಥಿತಂ ॥ ೧೩ ॥

ವವಂದ ಶೀರ್ಷ್ಣಾ ಚ ಹಿಮಾಚಲಃ ಪುನಃ
ಸ ಸಂಶಯಂ ಪ್ರಾಪದದೀನಸತ್ತ್ವಃ ।

---

ತುಂಬಿಕೊಂಡು ಸಿಬಿಡವಾಗಿದ್ದುವು. ಅವಳ ನಡುವು ಸಣ್ಣದಾಗಿದ್ದಿತು. ಮಧ್ಯದಲ್ಲಿ ತ್ರಿವಳಿ (ಹೊಟ್ಟೆಯ ನೆರಿಗೆ) ಗಳಿದ್ದುವು ಹೆಜ್ಜೆಗಳು ಕಮಲದಂತೆ ಸುಂದರ ವಾಗಿದ್ದುವು. ನೋಡಿದಮಾತ್ರದಿಂದಲೇ ಜಿತೇಂದ್ರಿಯರಾದ ಮುನಿಗಳ ಮನಸ್ಸನ್ನೂ ಕೆಡಿಸುವಷ್ಟು ಅವಳು ಸುಂದರಿಯಾಗಿದ್ದಳು. ಸ್ತ್ರೀಯರಿಗೆ ರತ್ನಪ್ರಾಯಳಾಗಿದ್ದಳು.

೧೧-೧೨. ಹಾಗೆ ಧ್ಯಾನಿಗಳ ಮನಸ್ಸನ್ನೂ ಅಪಹರಿಸುವಷ್ಟು ಸುಂದರಿಯಾದ ಪಾರ್ವತಿಯನ್ನು ನೋಡಿ ಮಹಾ ಯೋಗಿಯಾದ ಆ ಶಂಕರನು ಆಕೂಡಲೇ ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ತನ್ನ ಸ್ವರೂಪವಾದ ಪ್ರಕೃತಿಗಿಂತಲೂ ಭಿನ್ನವಾದ ಪರತತ್ತ್ವವನ್ನು ಧ್ಯಾನಿಸತೊಡಗಿದನು.

೧೩-೧೪. ಹೀಗೆ ಕಣ್ಣನ್ನು ಮುಚ್ಚಿ ತಪಸ್ಸನ್ನು ಮಾಡುತ್ತಲಿರುವ ಶಂಕರ ನನ್ನು ನೋಡಿ ಹಿಮವಂತನು ಶಿರಸ್ಸಿನಲ್ಲಿ ಚಂದ್ರಕಲೆಯನ್ನು ಧರಿಸಿದವನೂ ವೇದಾಂತಗಳಿಂದ ತಿಳಿಯಲ್ಪಡತಕ್ಕವನೂ, ಯೋಗಾಸನದಲ್ಲಿ ಕುಳಿತಿರುವವನೂ ಆದಂತಹ ಆ ಶಿವನನ್ನು ನಮಸ್ಕರಿಸಿದನು. ಮತ್ತು ಅವನ ವಿಷಯದಲ್ಲಿ ಪಾರ್ವತಿ

ಉವಾಚ ವಾಕ್ಯಂ ಜಗದೇಕಬಂಧುಂ
ಗಿರೀಶ್ವರೋ ವಾಕ್ಯವಿದಾಂ ವರಿಷ್ಠಃ ॥ ೧೪ ॥

॥ ಹಿಮಾಚಲ ಉವಾಚ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ಪಶ್ಯ ಮಾಂ ಶರಣಂ ಪ್ರಾಪ್ತಮುನ್ಮೀಲ್ಯ ನಯನೇ ವಿಭೋ ॥ ೧೫ ॥

ಶಿವ ಶರ್ವ ಮಹೇಶಾನ ಜಗದಾನಂದಕೃತ್ಪ್ರಭೋ ।
ತ್ವಾಂ ನತೋಽಹಂ ಮಹಾದೇವ ಸರ್ವಾಪದ್ವಿನಿವರ್ತಕಂ ॥ ೧೬ ॥

ನ ತ್ವಾಂ ಜಾನಂತಿ ದೇವೇಶ ವೇದಾಃ ಶಾಸ್ತ್ರಾಣಿ ಕೃತ್ಸ್ನಶಃ ।
ಅತೀತೋ ಮಹಿಮಾಧ್ವಾನಂ ತವ ವಾಙ್ಮನಸೋಸ್ಸದಾ ॥ ೧೭ ॥

ಅತದ್ವ್ಯಾವೃತ್ತಿತಸ್ತ್ವಾಂ ಹಿ ಚಕಿತಂ ಚಕಿತಂ ಸದಾ ।
ಅಭಿಧತ್ತೇ ಶ್ರುತಿಃ ಸರ್ವಾ ಪರೇಷಾಂ ಕಾ ಕಥಾ ಮತಾ ॥ ೧೮ ॥

ಜಾನಂತಿ ಬಹವೋ ಭಕ್ತಾಸ್ತ್ವತ್ಕೃಪಾಂ ಪ್ರಾಪ್ಯ ಭಕ್ತಿತಃ ।
ಶರಣಾಗತಭಕ್ತಾನಾಂ ನ ಕುತ್ರಾಪಿ ಭಯಾದಿಕಂ ॥ ೧೯ ॥

---

ಯನ್ನು ಮದುವೆಯಾಗುವನೋ ಇಲ್ಲವೊ?' ಎಂದು ಸಂಶಯಗೊಂಡನು. ಜಗದ್ಬಂಧುವಾದ ಆ ಈಶ್ವರನನ್ನು ಕುರಿತು ಹೀಗೆ ಹೇಳಿದನು.

೧೫-೧೭. ಕರುಣಾಮಯನೂ ದೇವದೇವನೂ ಆದ ಓ ಮಹಾದೇವ, ನಿನ್ನನ್ನು ಮರೆಹೊಕ್ಕಿರುವ ನನ್ನನ್ನು ಕಣ್ಣನ್ನು ತೆರೆದು ನೋಡು. ಓ ಶಂಕರ, ನೀನು ಮಂಗಳರೂಪನು, ದುಃಖವನ್ನು ಹೋಗಲಾಡಿಸುವವನು, ಜಗತ್ತಿಗೆ ಆನಂದವನ್ನುಂಟುಮಾಡುವವನು, ಸಕಲ ಆಪತ್ತುಗಳನ್ನೂ ಹೋಗಲಾಡಿಸುವವನು. ಓ ದೇವದೇವ, ವೇದಗಳೂ ಶಾಸ್ತ್ರಗಳೂ ಸಹ ನಿನ್ನನ್ನು ಸರಿಯಾಗಿ ತಿಳಿಸಲಾರವು. ನಿನ್ನ ಮಹಿಮೆಯು ವಾಕ್ಯ ಮತ್ತು ಮನಸ್ಸುಗಳಿಗೆ ಸಿಲುಕದಂತಹುದು.

೧೮-೨೦. ಶ್ರುತಿಯು ನಿನ್ನ ಸ್ವರೂಪವನ್ನು ಎಲ್ಲ "ಜಡವಸ್ತುಗಳಿಗಿಂತಲೂ ಭಿನ್ನವಾದುದು" ಎಂದು ಭಯಪಟ್ಟುಕೊಂಡೇ ವರ್ಣಿಸುವುದು. ಇನ್ನು ಮಿಕ್ಕವರು ವರ್ಣಿಸುವುದೆಂತು? ಆದರೆ ನಿನ್ನ ಭಕ್ತರು ನಿನ್ನ ಅನುಗ್ರಹದಿಂದಲೇ ನಿನ್ನನ್ನು ತಿಳಿಯ

ವಿಜ್ಞಪ್ತಿಂ ಶೃಣು ಮತ್ಪ್ರೀತ್ಯಾ ಸ್ವದಾಸಸ್ಯ ಮಮಾಧುನಾ ।
ತವ ದೇವಾಜ್ಞಯಾ ತಾತ ದೀನತ್ವಾದ್ವರ್ಣಯಾಮಿ ಹಿ ॥ ೨೦ ॥

ಸಭಾಗ್ಯೋಽಹಂ ಮಹಾದೇವ ಪ್ರಸಾದಾತ್ತವ ಶಂಕರ ।
ಮತ್ವಾ ಸ್ವದಾಸಂ ಮಾಂ ನಾಥ ಕೃಪಾಂ ಕುರು ನಮೋಽಸ್ತು ತೇ ॥ ೨೧ ॥

ಪ್ರತ್ಯಹಂ ಚಾಗಮಿಷ್ಯಾಮಿ ದರ್ಶನಾರ್ಥಂ ತವ ಪ್ರಭೋ ।
ಅನಯಾ ಸುತಯಾ ಸ್ವಾಮಿನ್ ನಿದೇಶಂ ದಾತುಮರ್ಹಸಿ ॥ ೨೨ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯೋನ್ಮೀಲ್ಯ ನೇತ್ರೇ ಮಹೇಶ್ವರಃ ।
ತ್ಯಕ್ತಧ್ಯಾನಃ ಪರಾಮೃಶ್ಯ ದೇವದೇವೋಽಬ್ರವೀದ್ವಚಃ ॥ ೨೩ ॥

॥ ಮಹೇಶ್ವರ ಉವಾಚ ॥

ಆಗಂತವ್ಯಂ ತ್ವಯಾ ನಿತ್ಯಂ ದರ್ಶನಾರ್ಥಂ ಮಮಾಚಲ ।
ಕುಮಾರೀಂ ಸದನೇ ಸ್ಥಾಪ್ಯ ನಾನ್ಯಥಾ ಮಮ ದರ್ಶನಂ ॥ ೨೪ ॥

---

ಬಲ್ಲೆ. ನಿನ್ನ ಮರೆಹೊಕ್ಕ ಭಕ್ತರಿಗೆ ಯಾವ ಭಯವೂ ಇಲ್ಲ. ನಿನ್ನ ದಾಸನಾದ ನನ್ನ ವಿಜ್ಞಾಪನೆಯನ್ನು ಕೇಳು. ನಿನ್ನ ಆಜ್ಞೆಯಿಂದಲೇ ನನಗೆ ತಿಳಿದುದನ್ನು ಹೇಳುವೆನು.

೨೧-೨೨. ಓ ಮಹಾದೇವ, ನಿನ್ನ ಅನುಗ್ರಹದಿಂದ ನಾನು ಭಾಗ್ಯಶಾಲಿಯಾಗಿರುವೆನು. ನನ್ನನ್ನು ನಿನ್ನ ದಾಸನೆಂದು ತಿಳಿದು ನನ್ನಲ್ಲನುಗ್ರಹಮಾಡು. ಪ್ರತಿದಿನವೂ ಪಾರ್ವತಿಯೊಡನೆ ನಿನ್ನ ದರ್ಶನಕ್ಕೆ ಬರುವೆನು. ಇದಕ್ಕೆ ಅನುಮತಿಯನ್ನು ಕೊಡು ಎಂದನು.

೨೩. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಮಹೇಶ್ವರನು ಕಣ್ಣುಗಳನ್ನು ತೆರೆದು, ಧ್ಯಾನದಿಂದ ಬಹಿರ್ಮುಖನಾಗಿ,

೨೪. ಮಹೇಶ್ವರನು ಹೇಳಿದನು :—ಎಲೈ ಪರ್ವತರಾಜ, ನಿತ್ಯವೂ ನೀನು ನನ್ನ ದರ್ಶನಕ್ಕೆ ಬರಬಹುದು. ಈ ನಿನ್ನ ಪುತ್ರಿಯನ್ನು ಮನೆಯಲ್ಲಿಯೇ ಬಿಟ್ಟು ಬರಬೇಕು. ಇವಳನ್ನು ಕರೆತರಬಾರದು ಹಾಗಲ್ಲದಿದ್ದರೆ ನಿನಗೆ ನನ್ನ ದರ್ಶನವು ದೊರೆಯಲಾರದು ಎಂದನು.

॥ ಬ್ರಹ್ಮೋವಾಚ ॥
ಮಹೇಶವಚನಂ ಶ್ರುತ್ವಾ ಶಿವಾತಾತಸ್ತಥಾವಿಧಂ ।
ಅಚಲಃ ಪ್ರತ್ಯುವಾಚೇದಂ ಗಿರಿಶಂ ನತಕಂಧರಃ ॥ ೨೫ ॥

॥ ಹಿಮಾಚಲ ಉವಾಚ ॥
ಕಸ್ಮಾನ್ಮಯಾನಯಾ ಸಾರ್ಧಂ ನಾಗಂತವ್ಯಂ ತದುಚ್ಯತಾಂ ।
ಸೇವನೇ ಕಿಮಯೋಗ್ಯೇಯಂ ನಾಹಂ ವೇದ್ಮ್ಯತ್ರ ಕಾರಣಂ ॥ ೨೬ ॥

॥ ಬ್ರಹ್ಮೋವಾಚ ॥
ತತೋಽಬ್ರವೀದ್ಗಿರಿಂ ಶಂಭುಃ ಪ್ರಹಸನ್ ವೃಷಭಧ್ವಜಃ ।
ಲೋಕಾಚಾರಂ ವಿಶೇಷೇಣ ದರ್ಶಯನ್ ಹಿ ಕುಯೋಗಿನಾಂ ॥ ೨೭ ॥

॥ ಶಂಭುರುವಾಚ ॥
ಇಯಂ ಕುಮಾರೀ ಸುಶ್ರೋಣೀ ತನ್ವೀ ಚಂದ್ರಾನನಾ ಶುಭಾ ।
ನಾನೇತವ್ಯಾ ಮತ್ಸಮೀಪೇ ವಾರಯಾಮಿ ಪುನಃ ಪುನಃ ॥ ೨೮ ॥

ಮಾಯಾರೂಪಾ ಸ್ಮೃತಾ ನಾರೀ ವಿದ್ವದ್ಭಿರ್ವೇದಪಾರಗೈಃ ।
ಯುವತೀ ತು ವಿಶೇಷೇಣ ವಿಘ್ನಕರ್ತ್ರೀ ತಪಸ್ವಿನಾಂ ॥ ೨೯ ॥

---

೨೫. ಬ್ರಹ್ಮನು ಹೇಳಿದನು:—ಹೀಗೆ ಮಹೇಶ್ವರನು ಹೇಳಿದ ಮಾತನ್ನು ಕೇಳಿ ಹಿಮವಂತನು ಶಿರಸ್ಸನ್ನು ಬಗ್ಗಿಸಿ ತಿರುಗಿ ಹೇಳಿದನು.

೨೬. ಹಿಮವಂತನು ಹೇಳಿದನು:—ಓ ಶಂಕರ, ಈ ಪಾರ್ವತಿಯನ್ನೇಕೆ ಕರೆದುಕೊಂಡುಬರಬಾರದು? ಇವಳು ನಿನ್ನ ಸೇವೆಗೆ ಅಯೋಗ್ಯಳೇ? ನೀನು ಹೇಳಿದುದಕ್ಕೆ ಕಾರಣವೇ ನನಗೆ ತಿಳಿಯಲಿಲ್ಲವಲ್ಲಾ?

೨೭. ಬ್ರಹ್ಮನು ಹೇಳಿದನು:—ಬಳಿಕ ಶಂಕರನು ನಕ್ಕು, ಸಾಮಾನ್ಯ ಯೋಗಿಗಳ ಲೋಕರೀತಿಯನ್ನು ಪ್ರದರ್ಶಿಸುತ್ತಾ ಹೀಗೆ ಹೇಳಿದನು.

೨೮-೩೦. ಶಂಕರನು ಹೇಳಿದನು:—ಎಲೈ ಪರ್ವತರಾಜ, ಈ ನಿನ್ನ ಕುಮಾರಿಯು, ಸುಂದರಿಯಾಗಿರುವಳು. ಮೃದುವಾದ ಶರೀರವುಳ್ಳವಳು. ಚಂದ್ರನಂತೆ ಇವಳ ಮುಖವಿರುವುದು. ಇಂತಹ ಸುಂದರಿಯನ್ನು ನನ್ನ ಬಳಿಗೆ ಕರೆದುಕೊಂಡು ಬರಕೂಡದು. ಪುನಃ ಪುನಃ ಇದೇ ಮಾತನ್ನು ಹೇಳುತ್ತೇನೆ. ತಿಳಿದವರು

ಅಹಂ ತಪಸ್ವೀ ಯೋಗೀ ಚ ನಿರ್ಲಿಪ್ತೋ ಮಾಯಯಾ ಸದಾ ।
ಪ್ರಯೋಜನಂ ಚ ಯುಕ್ತ್ಯಾ ವೈ ಸ್ತ್ರಿಯಾ ಕಿಂ ಮೇಽಸ್ತಿ ಭೂಧರ ॥ ೩೦ ॥

ಏವಂ ಪುನರ್ನ ವಕ್ತವ್ಯಂ ತಪಸ್ವಿವರಸಂಶ್ರಿತ ।
ವೇದಧರ್ಮಪ್ರವೀಣಸ್ತ್ವಂ ಯತೋ ಜ್ಞಾನಿವರೋ ಬುಧಃ ॥ ೩೧ ॥

ಭವತ್ಯಚಲ ತತ್ಸಂಗಾದ್ವಿಷಯೋತ್ಪತ್ತಿರಾಶು ವೈ ।
ವಿನಶ್ಯತಿ ಚ ವೈರಾಗ್ಯಂ ತತೋ ಭ್ರಶ್ಯತಿ ಸತ್ತಪಃ ॥ ೩೨ ॥

ಅತಸ್ತಪಸ್ವಿನಾ ಶೈಲ ನ ಕಾರ್ಯಾ ಸ್ತ್ರೀಷು ಸಂಗತಿಃ ।
ಮಹಾವಿಷಯಮೂಲಂ ಸಾ ಜ್ಞಾನವೈರಾಗ್ಯನಾಶಿನೀ ॥ ೩೩ ॥

॥ ಬ್ರಹ್ಮೋವಾಚ ॥

ಇತ್ಯಾದ್ಯುಕ್ತ್ವಾ ಬಹುತರಂ ಮಹಾಯೋಗೀ ಮಹೇಶ್ವರಃ ।
ವಿರರಾಮ ಗಿರೀಶಂ ತಂ ಮಹಾಯೋಗಿವರಃ ಪ್ರಭುಃ ॥ ೩೪ ॥

---

ಸ್ತ್ರೀಯನ್ನು ಮಾಯೆಯೆಂದು ಹೇಳಿರುವರು. ಅದರಲ್ಲಿಯೂ ಯುವತಿಯು ತಪಸ್ವಿಗಳಿಗೆ ವಿಘ್ನವನ್ನುಂಟುಮಾಡಿಯೇ ಮಾಡುವಳು. ನಾನೂ ತಪಸ್ವಿಯು ಮತ್ತು ಯೋಗಿಯು. ಮಾಯೆಯ ಸಂಬಂಧವಿಲ್ಲದವನು. ಇಂತಹ ನನಗೆ ಸ್ತ್ರೀಯಿಂದ ಪ್ರಯೋಜನವೇನು?

೩೧-೩೩. ಮಹಾತಪಸ್ವಿಗಳಿಗೆ ಆಶ್ರಯನಾದ ಎಲೈ ಹಿಮವಂತನೇ, ನೀನು ಧರ್ಮವನ್ನು ಬಲ್ಲ ಮಹಾಜ್ಞಾನಿಯು. ಇಂತಹ ನೀನು ತಿರುಗಿ ಹೀಗೆ ಹೇಳಕೂಡದು. ಸ್ತ್ರೀಯ ಸಂಬಂಧದಿಂದ ಕೂಡಲೇ ವಿಷಯಸುಖದಲ್ಲಿ ಅಭಿಲಾಷೆ ಯುಂಟಾಗುವುದು. ವೈರಾಗ್ಯವು ನಾಶವಾಗುವುದು. ಆಮೇಲೆ ತಪಸ್ಸು ಹಾಳಾಗುವುದು. ಆದಕಾರಣ ತಪಸ್ವಿಯಾದವನು ಸ್ತ್ರೀಯರ ಸಂಬಂಧವನ್ನು ಬೆಳೆಸಬಾರದು. ವಿಷಯಸುಖಗಳಿಗೆ ಸ್ತ್ರೀಯೇ ಮೂಲವು. ಜ್ಞಾನ ಮತ್ತು ವೈರಾಗ್ಯಗಳನ್ನು ನಾಶ ಮಾಡುವಳು ಎಂದಳು.

೩೪-೩೫. ಬ್ರಹ್ಮನು ಹೇಳಿದನು:—ಹೀಗೆ ಅನೇಕಪ್ರಕಾರವಾಗಿ ಹೇಳಿ ಮಹಾ ಯೋಗಿಯಾದ ಶಂಕರನು ಸುಮ್ಮನಾದನು. ವೈರಾಗ್ಯದಿಂದ ಕೂಡಿ

ಏತಚ್ಛ್ರುತ್ವಾ ವಚನಂ ತಸ್ಯ ಶಂಭೋಃ
ನಿರಾಮಯಂ ನಿಃಸ್ಪೃಹಂ ನಿಷ್ಠುರಂ ಚ ।
ಕಾಲೀತಾತಶ್ಚಕಿತೋಽಭೂತ್ಸುರರ್ಷೇ
ತದ್ವತ್ಕಿಂಚಿದ್ವ್ಯಾಕುಲಶ್ಚಾಸ ತೂಷ್ಣೀಂ ॥ ೩೫ ॥

ತಪಸ್ವಿನೋಕ್ತಂ ವಚನಂ ನಿಶಮ್ಯ
ತಥಾ ಗಿರೀಶಂ ಚಕಿತಂ ವಿಚಾರ್ಯ ।
ಅತಃ ಪ್ರಣಮ್ಯೈವ ಶಿವಂ ಭವಾನೀ
ಜಗಾದ ವಾಕ್ಯಂ ವಿಶದಂ ತದಾನೀಂ ॥ ೩೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ದ್ವಾದಶೋಽಧ್ಯಾಯಃ

---

ದುದೂ, ನಿಷ್ಠುರವೂ, ಆದಂತಹ ಆ ಮಾತನ್ನು ಕೇಳಿ ಹಿಮವಂತನು ತುಂಬಾ ಆಶ್ಚರ್ಯಗೊಂಡು ದುಃಖಿತನಾದನು.

೩೬. ತಪಸ್ವಿಯಾದ ಶಂಕರನ ಮಾತನ್ನು ಕೇಳಿ ಪರ್ವತರಾಜನು ಚಕಿತನಾದುದನ್ನು ನೋಡಿ ಪಾರ್ವತಿಯು ಶಂಕರನನ್ನು ನಮಸ್ಕರಿಸಿ ವಿಶದವಾಗಿ ಹೀಗೆ ಹೇಳಿದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ತ್ರಯೋದಶೋಽಧ್ಯಾಯಃ

॥ ಭವಾನ್ಯುವಾಚ ॥

ಕಿಮುಕ್ತಂ ಗಿರಿರಾಜಾಯ ತ್ವಯಾ ಯೋಗಿಂಸ್ತಪಸ್ವಿನಾ ।
ತದುತ್ತರಂ ಶೃಣು ವಿಭೋ ಮತ್ತೋ ಜ್ಞಾನವಿಶಾರದ ॥ ೧ ॥

ತಪಶ್ಶಕ್ತ್ಯಾನ್ವಿತಃ ಶಂಭೋ ಕರೋಷಿ ವಿಪುಲಂ ತಪಃ ।
ತವ ಬುದ್ಧಿರಿಯಂ ಜಾತಾ ತಪಸ್ತಪ್ತುಂ ಮಹಾತ್ಮನಃ ॥ ೨ ॥

ಸಾ ಶಕ್ತಿಃ ಪ್ರಕೃತಿರ್ಜ್ಞೇಯಾ ಸರ್ವೇಷಾಮಪಿ ಕರ್ಮಣಾಂ ।
ತಯಾ ವಿರಚ್ಯತೇ ಸರ್ವಂ ಪಾಲ್ಯತೇ ಚ ವಿನಾಶ್ಯತೇ ॥ ೩ ॥

---

## ಹದಿಮೂರನೆಯ ಅಧ್ಯಾಯವು

೧-೨. ಪಾರ್ವತಿಯು ಶಂಕರನಿಗೆ ಹೇಳಿದಳು :—ಜ್ಞಾನಿಯಾದ ಓ ಯೋಗಿಯೇ, ಪರ್ವತರಾಜನಿಗೆ ಏನು ಹೇಳಿರುವೆಯೋ ಅದಕ್ಕುತ್ತರವನ್ನು ನಾನು ಹೇಳುವೆನು, ಕೇಳು. ತಪಶ್ಶಕ್ತಿಯೊಂದಿರುವುದು. ಆ ಶಕ್ತಿಯಿಂದಲೇ ನಿನಗೆ ತಪಸ್ಸು ಮಾಡಲು ಬುದ್ಧಿಯುಂಟಾಗಿರುವುದು. ಅದರಂತೆ ತಪವನ್ನೂ ಆಚರಿಸುತ್ತಲಿರುವೆ.

೩-೫. ಆ ತಪಶ್ಶಕ್ತಿಯೇ ಪ್ರಕೃತಿಯು. ಕರ್ಮಗಳೆಲ್ಲಕ್ಕೂ ಆದಿಕಾರಣವು. ಪ್ರಕೃತಿಯಿಂದಲೇ ಜಗತ್ತು ಜನಿಸುವದು ರಕ್ಷಿಸಲ್ಪಡುವುದು. ಕೊನೆಯಲ್ಲಿ ನಾಶ

ಕಸ್ತ್ವಂ ಕಾ ಪ್ರಕೃತಿಸ್ಸೂಕ್ಷ್ಮಾ ಭಗವಂಸ್ತದ್ವಿಮೃಶ್ಯತಾಂ ।
ವಿನಾ ಪ್ರಕೃತ್ಯಾ ಚ ಕಥಂ ಲಿಂಗರೂಪೀ ಮಹೇಶ್ವರಃ ॥ ೪ ॥

ಅರ್ಚನೀಯೋಽಸಿ ವಂದ್ಯೋಽಸಿ ಧ್ಯೇಯೋಽಸಿ ಪ್ರಾಣಿನಾಂ ಸದಾ ।
ಪ್ರಕೃತ್ಯಾ ಚ ವಿಚಾರ್ಯೇತಿ ಹೃದಾ ಸರ್ವಂ ತದುಚ್ಯತಾಂ ॥ ೫ ॥

॥ ಬ್ರಹ್ಮೋವಾಚ ॥

ಪಾರ್ವತ್ಯಾಸ್ತದ್ವಚಃ ಶ್ರುತ್ವಾ ಮಹೋತಿಕರಣೇ ರತಃ ।
ಸುವಿಹಸ್ಯ ಪ್ರಸನ್ನಾತ್ಮಾ ಮಹೇಶೋ ವಾಕ್ಯಮಬ್ರವೀತ್ ॥ ೬ ॥

॥ ಮಹೇಶ್ವರ ಉವಾಚ ॥

ತಪಸಾ ಪರಮೇಣೈವ ಪ್ರಕೃತಿಂ ನಾಶಯಾಮ್ಯಹಂ ।
ಪ್ರಕೃತ್ಯಾ ರಹಿತಃ ಶಂಭುರಹಂ ತಿಷ್ಠಾಮಿ ತತ್ತ್ವತಃ ॥ ೭ ॥

ತಸ್ಮಾಚ್ಚ ಪ್ರಕೃತೇಸ್ಸದ್ಭಿರ್ನ ಕಾರ್ಯಃ ಸಂಗ್ರಹಃ ಕ್ವಚಿತ್ ।
ಸ್ಥಾತವ್ಯಂ ನಿರ್ವಿಕಾರೈಶ್ಚ ಲೋಕಾಚಾರವಿವರ್ಜಿತೈಃ ॥ ೮ ॥

---

ವನ್ನೈದುವುದು. ಓ ಭಗವಂತ, ನೀನಾರು? ಆ ಪ್ರಕೃತಿಯಾರು? ಎಂದು ವಿಚಾರ ಮಾಡು. ಪ್ರಕೃತಿಯಿಲ್ಲದಿದ್ದರೆ ನಿನಗೆ ಲಿಂಗರೂಪವು ಹೇಗೆ ಬರುತ್ತಲಿದ್ದಿತು? ಆ ಪ್ರಕೃತಿಯ ಮಹಿಮೆಯಿಂದಲೇ ನೀನು ಜನಗಳಿಂದ ಪೂಜಿಸಿಸಲ್ಪಡುತ್ತಲಿರುವೆ, ವಂದಿಸಲ್ಪಡುತ್ತಲಿರುವೆ, ಧ್ಯಾನಿಸಲ್ಪಡುತ್ತಲಿರುವೆ. ಇದೆಲ್ಲವನ್ನೂ ಚೆನ್ನಾಗಿ ಯೋಚಿಸು.

೬. ಬ್ರಹ್ಮನು ಹೇಳಿದನು:—ಹೀಗೆ ಪಾರ್ವತಿಯು ಹೇಳಿದ ಮಾತನ್ನು ಕೇಳಿ ಮಹಾಮಹಿಮನಾದ ಶಂಕರನು ಮಂದಹಾಸವನ್ನು ಬೀರುತ್ತಾ ಪ್ರಸನ್ನತೆಯಿಂದ ಹೀಗೆ ಹೇಳಿದನು.

೭-೮. ಪರಮೇಶ್ವರನು ಹೇಳಿದನು:—ಮಹಾತಪಸ್ಸಿನಿಂದ ನಾನು ಪ್ರಕೃತಿಯನ್ನು ನಾಶಮಾಡುವೆನು. ಹೀಗೆ ಪ್ರಕೃತಿಯಿಂದ ಬಿಡುಗಡೆ ಹೊಂದಿ ನಾನು ಸುಖವಾಗಿರುವೆನು. ಅದರಂತೆ ಪ್ರತಿಯೊಬ್ಬ ಜ್ಞಾನಿಯೂ ಸಹ ಪ್ರಕೃತಿಸಂಬಂಧವನ್ನು ತ್ಯಜಿಸಿ ಲೋಕಾಚಾರವನ್ನು ಬಿಟ್ಟು ನಿರ್ವಿಕಾರನಾಗಿ ಇರಬೇಕು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಶಂಭುನಾ ತಾತ ಲೌಕಿಕವ್ಯವಹಾರತಃ ।
ಸುವಿಹಸ್ಯ ತದಾ ಕಾಲೀ ಜಗಾದ ಮಧುರಂ ವಚಃ ॥ ೯ ॥

॥ ಕಾಲ್ಯುವಾಚ ॥

ಯದುಕ್ತಂ ಭವತಾ ಯೋಗಿನ್ ವಚನಂ ಶಂಕರ ಪ್ರಭೋ ।
ಸಾ ಚ ಕಿಂ ಪ್ರಕೃತಿರ್ನಸ್ಯಾದತೀತಸ್ತ್ವಾಂ ಭವಾನ್ ಕಥಂ ॥ ೧೦ ॥

ಏತದ್ವಿಚಾರ್ಯ ವಕ್ತವ್ಯಂ ತತ್ತ್ವತೋ ಹಿ ಯಥಾತಥಂ ।
ಪ್ರಕೃತ್ಯಾ ಸರ್ವಮೇತಚ್ಚ ಬದ್ಧಮಸ್ತಿ ನಿರಂತರಂ ॥ ೧೧ ॥

ತಸ್ಮಾತ್ತ್ವಯಾ ನ ವಕ್ತವ್ಯಂ ನ ಕಾರ್ಯಂ ಕಿಂಚಿದೇವ ಹಿ ।
ವಚನಂ ರಚನಂ ಸರ್ವಂ ಪ್ರಾಕೃತಂ ವಿದ್ಧಿ ಚೇತಸಾ ॥ ೧೨ ॥

ಯಚ್ಛೃಣೋಷಿ ಯದಶ್ನಾಸಿ ಯತ್ಪಶ್ಯಸಿ ಕರೋಷಿ ಯತ್ ।
ತತ್ಸರ್ವಂ ಪ್ರಕೃತೇಃ ಕಾರ್ಯಂ ಮಿಥ್ಯಾವಾದೋ ನಿರರ್ಥಕಃ ॥ ೧೩ ॥

ಪ್ರಕೃತೇಃ ಪರತಶ್ಚೇತ್ತ್ವಂ ಕಿಮರ್ಥಂ ತಪ್ಯಸೇ ತಪಃ ।
ತ್ವಯಾ ಶಂಭೋಽಧುನಾ ಹ್ಯಸ್ಮಿನ್ ಗಿರೌ ಹಿಮವತಿ ಪ್ರಭೋ ॥ ೧೪ ॥

---

೯. ಬ್ರಹ್ಮನು ಹೇಳಿದನು:—ಹೀಗೆ ಶಂಕರನು ಲೋಕವ್ಯವಹಾರಕ್ಕನುಸಾರವಾಗಿ ಹೇಳಲು ಆಗ ಪಾರ್ವತಿಯು ನಕ್ಕು ಹೀಗೆ ಹೇಳಿದಳು.

೧೦-೧೨. ಪಾರ್ವತಿಯು ಹೇಳಿದಳು:—ಯೋಗಿಯಾದ ಓ ಶಂಕರ, ನೀನೀಗ ಮಾತನಾಡಿದುದು ಪ್ರಕೃತಿಯಲ್ಲವೇ? ಹೀಗಿರಲು ನೀನು ಪ್ರಕೃತಿಯನ್ನು ಬಿಟ್ಟಿರುವುದೆಂತು? ಇದನ್ನು ವಿಮರ್ಶೆಮಾಡಿ ಹೇಳು. ಜಗತ್ತೆಲ್ಲವೂ ಪ್ರಕೃತಿಯ ಬಂಧನದಲ್ಲಿಯೇ ಇರುವುದು. ಪ್ರಕೃತಿಯಿಂದ ಹೊರತಾದವನು ಮಾತನಾಡಲೂ ಬಾರದು. ಯಾವ ಕಾರ್ಯವನ್ನೂ ಮಾಡಬಾರದು. ಮಾತು ಮತ್ತು ಕಾರ್ಯ ಇವೆಲ್ಲವೂ ಪ್ರಕೃತಿಯ ಸಂಬಂಧವಾದುವುಗಳಷ್ಟೆ.

೧೩-೧೪. ಕೇಳುವುದು, ತಿನ್ನುವುದು, ನೋಡುವುದು, ಮಾಡುವುದು, ಇದೆಲ್ಲವೂ ಪ್ರಕೃತಿಯ ಕಾರ್ಯಗಳು. ಇದು ನಿಶ್ಚಯ. ಓ ಶಂಕರ, ನೀನು ಪ್ರಕೃತಿಯನ್ನು ಬಿಟ್ಟವನಾದರೆ ಈ ಗಿರಿಯಲ್ಲಿ ತಪವನ್ನೇಕೆ ಆಚರಿಸುತ್ತ

ಪ್ರಕೃತ್ಯಾ ಗಿಲಿತೋಽಸಿ ತ್ವಂ ನ ಜಾನಾಸಿ ನಿಜಂ ಹರ ।
ನಿಜಂ ಜಾನಾಸಿ ಚೇದೀಶ ಕಿಮರ್ಥಂ ತಪ್ಯತೇ ತಪಃ ॥ ೧೫ ॥

ವಾಗ್ವಾದೇನ ಚ ಕಿಂ ಕಾರ್ಯಂ ಮಮ ಯೋಗಿಂಸ್ತ್ವಯಾ ಸಹ ।
ಪ್ರತ್ಯಕ್ಷೇ ಹ್ಯನುಮಾನಸ್ಯ ನ ಪ್ರಮಾಣಂ ವಿದುರ್ಬುಧಾಃ ॥ ೧೬ ॥

ಇಂದ್ರಿಯಾಣಾಂ ಗೋಚರತ್ವಂ ಯಾವದ್ಭವತಿ ದೇಹಿನಾಂ ।
ತಾವತ್ಸರ್ವಂ ವಿಮಂತವ್ಯಂ ಪ್ರಾಕೃತಂ ಜ್ಞಾನಿಭಿರ್ಧಿಯಾ ॥ ೧೭ ॥

ಕಿಂ ಬಹೂಕ್ತೇನ ಯೋಗೀಶ ಶೃಣು ಮದ್ವಚನಂ ಪರಂ ।
ಸಾ ಚಾಹಂ ಪುರುಷೋಽಸಿ ತ್ವಂ ಸತ್ಯಂ ಸತ್ಯಂ ನ ಸಂಶಯಃ ॥ ೧೮ ॥

ಮದನುಗ್ರಹತಸ್ತ್ವಂ ಹಿ ಸಗುಣೋ ರೂಪವಾನ್ಮತಃ ।
ಮಾಂ ವಿನಾ ತ್ವಂ ನಿರೀಹೋಽಸಿ ನ ಕಿಂಚಿತ್ಕರ್ತುಮರ್ಹಸಿ ॥ ೧೯ ॥

ಪರಾಧೀನಸ್ಸದಾ ತ್ವಂ ಹಿ ನಾನಾಕರ್ಮಕರೋ ವಶೀ ।
ನಿರ್ವಿಕಾರೀ ಕಥಂ ತ್ವಂ ಹಿ ನ ಲಿಪ್ತಶ್ಚ ಮಯಾ ಕಥಂ ॥ ೨೦ ॥

---

ಲಿರುವೆ? ನೀನು ಪ್ರಕೃತಿಯಿಂದ ಬಂಧಿಸಲ್ಪಟ್ಟು ನಿನ್ನ ಸ್ವರೂಪವನ್ನು ತಿಳಿಯದವನಾಗಿರುವೆ. ಆದಲ್ಲದೆ ಸ್ವರೂಪಜ್ಞಾನವು ನಿನಗಿದ್ದರೆ ತಪವನ್ನೇಕೆ ನೀನು ಆಚರಿಸಬೇಕು.

೧೬-೧೮. ಓ ಯೋಗಿಯೆ, ಹೆಚ್ಚಿನ ವಿವಾದದಿಂದ ಪ್ರಯೋಜನವಿಲ್ಲ. ಪ್ರತ್ಯಕ್ಷವಾದ ವಿಷಯದಲ್ಲಿ ವಿವಾದದ ಅವಶ್ಯಕತೆಯಿಲ್ಲ. ಇಂದ್ರಿಯಗಳಿಗೆ ಗೋಚರವಾಗುವ ವಸ್ತುಗಳೆಲ್ಲವೂ ಪ್ರಕೃತಿಮಯವಾದುವುಗಳು. ಹೆಚ್ಚು ಹೇಳಿಯೇನು? ಆ ಪ್ರಕೃತಿಯೇ ನಾನಾಗಿರುವೆನು. ನೀನು ಪುರುಷನು, ಇದು ಸತ್ಯವಾದ ಮಾತು, ಇದರಲ್ಲಿ ಸಂಶಯವೇನಿಲ್ಲ.

೧೯-೨೧. ನನ್ನ (ಪ್ರಕೃತಿಯ) ಅನುಗ್ರಹದಿಂದಲೇ ನೀನು ಸಗುಣನೂ ರೂಪ (ವಿಗ್ರಹ) ವುಳ್ಳವನೂ ಆಗಿರುವೆ. ನಾನಿಲ್ಲದಿದ್ದರೇ ನೀನೇನನ್ನೂ ಮಾಡಲಾರೆ. ನೀನೀಶ್ವರನೇ ಆಗುವುದಿಲ್ಲ. ಪರಾಧೀನನಾಗಿ ಸದಾ ಕಾರ್ಯವನ್ನು ಮಾಡುವ ನೀನು ನಿರ್ವಿಕಾರಿಯು ಹೇಗೆ? ಮಾಯೆಯಿಂದ ಹೇಗೆ ಬಿಡಲ್ಪಟ್ಟಿರುವೆ? ಪ್ರಕೃತಿಯಿಂದ

ಪ್ರಕೃತೇಃ ಪರಮೋಽಸಿ ತ್ವಂ ಯದಿ ಸತ್ಯಂ ವಚಸ್ತವ ।
ತರ್ಹಿ ತ್ವಯಾ ನ ಭೇತವ್ಯಂ ಸಮೀಪೇ ಮಮ ಶಂಕರ ॥ ೨೧ ॥

॥ ಬ್ರಹ್ಮೋವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯಾಃ ಸಾಂಖ್ಯಶಾಸ್ತ್ರೋದಿತಂ ಶಿವಃ ।
ವೇದಾಂತಮತಸಂಸ್ಥೋ ಹಿ ವಾಕ್ಯಮೂಚೇ ಶಿವಾಂ ಪ್ರತಿ ॥ ೨೨ ॥

॥ ಶ್ರೀಶಿವ ಉವಾಚ ॥
ಇತ್ಯೇವಂ ತ್ವಂ ಯದಿ ಬ್ರೂಷೇ ಗಿರಿಜೇ ಸಾಂಖ್ಯಧಾರಿಣೀ ।
ಪ್ರತ್ಯಹಂ ಕುರು ಮೇ ಸೇವಾಮನಿಷಿದ್ಧಾಂ ಸುಭಾಷಿಣೀ ॥ ೨೩ ॥

ಯದ್ಯಹಂ ಬ್ರಹ್ಮ ನಿರ್ಲಿಪ್ತೋ ಮಾಯಯಾ ಪರಮೇಶ್ವರಃ ।
ವೇದಾಂತವೇದ್ಯೋ ಮಾಯೇಶಸ್ತ್ವಂ ಕರಿಷ್ಯಸಿ ಕಿಂ ತದಾ ॥ ೨೪ ॥

॥ ಬ್ರಹ್ಮೋವಾಚ ॥
ಇತ್ಯೇವಮುಕ್ತ್ವಾ ಗಿರಿಜಾಂ ವಾಕ್ಯಮೂಚೇ ಗಿರಿಂ ಪ್ರಭುಃ ।
ಭಕ್ತಾನುರಂಜನಕರೋ ಭಕ್ತಾನುಗ್ರಹಕಾರಕಃ ॥ ೨೫ ॥

---

ಬಿಡಲ್ಪಟ್ಟವನಾದರೆ ನೀನು ಸ್ತ್ರೀಯಾದ ನನಗಾಗಿ ಹೆದರಬೇಕಾದುದಿಲ್ಲ. ನಾನು ನಿನ್ನ ಸಮೀಪದಲ್ಲಿದ್ದಮಾತ್ರದಿಂದ ನಿರ್ಲಿಪ್ತನಾದ ನಿನಗಾಗುವ ತೊಂದರೆಯೇನು?

೨೨. ಬ್ರಹ್ಮನು ಹೇಳಿದನು:—ಹೀಗೆ ಸಾಂಖ್ಯಶಾಸ್ತ್ರಕ್ಕನುಸಾರವಾಗಿ ಗಿರಿಜೆಯು ಹೇಳಿದ ಮಾತುಗಳನ್ನು ಕೇಳಿ ವೇದಾಂತಮತವನ್ನನುಸರಿಸಿ ನಡೆಯುವ ಶಂಕರನು ಆ ಪಾರ್ವತಿಯನ್ನು ಕುರಿತು ಹೀಗೆ ಹೇಳಿದನು.

೨೩-೨೪. ಶಂಕರನು ಹೇಳಿದನು:—ಎಲೌ ಗಿರಿಜೆ ಸಾಂಖ್ಯಶಾಸ್ತ್ರದಂತೆ ನೀನು ಹೀಗೆ ಹೇಳುವವಳಾದರೆ ನಿತ್ಯವೂ ನನ್ನ ಪರಿಶುದ್ಧವಾದ ಸೇವೆಯನ್ನು ಮಾಡು. ಆದರೆ ವೇದಾಂತಶಾಸ್ತ್ರದಲ್ಲಿ ಹೇಳುವಂತೆ ನಾನು ಶುದ್ಧಬ್ರಹ್ಮನು. ಮಾಯೆಯಿಂದ ಈಶ್ವರನಾಗಿರುವೆನು. ಆ ಮಾಯೆಯು ನನ್ನ ಅಧೀನವಾಗಿರುವುದು. ಎಲೌ ಪಾರ್ವತಿ ಹೀಗಿದ್ದರೆ ಏನು ಮಾಡುವೆ?

೨೫. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಭಕ್ತರನ್ನನುಗ್ರಹಿಸುವ ಶಂಕರನು ಹಿಮವಂತನನ್ನು ಕುರಿತು,

॥ ಶಿವ ಉವಾಚ ॥

ಅತ್ರೈವ ಸೋಽಹಂ ತಪಸಾ ಪರೇಣ
ಗಿರೇ ತವ ಪ್ರಸ್ಥವರೇಽತಿರಮ್ಯೇ ।
ಚರಾಮಿ ಭೂಮೌ ಪರಮಾರ್ಥಭಾವ-
ಸ್ವರೂಪಮಾನಂದಮಯಂ ಸುಲೋಚಯನ್ ॥ ೨೬ ॥

ತಪಸ್ತಪ್ತುಮನುಜ್ಞಾ ಮೇ ದಾತವ್ಯಾ ಪರ್ವತಾಧಿಪ ।
ಅನುಜ್ಞಯಾ ವಿನಾ ಕಿಂಚಿತ್ತಪಃ ಕರ್ತುಂ ನ ಶಕ್ಯತೇ ॥ ೨೭ ॥

॥ ಬ್ರಹ್ಮೋವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ದೇವದೇವಸ್ಯ ಶೂಲಿನಃ ।
ಪ್ರಣಮ್ಯ ಹಿಮವಾನ್ ಶಂಭುಮಿದಂ ವಚನಮಬ್ರವೀತ್ ॥ ೨೮ ॥

॥ ಹಿಮವಾನುವಾಚ ॥

ತ್ವದೀಯಂ ಹಿ ಜಗತ್ಸರ್ವಂ ಸದೇವಾಸುರಮಾನುಷಂ ।
ಕಿಮಪ್ಯಹಂ ಮಹಾದೇವ ತುಚ್ಛೋ ಭೂತ್ವಾ ವದಾಮಿ ತೇ ॥ ೨೯ ॥

---

೨೬-೨೭. ಶಿವನು ಹೇಳಿದನು :—ಎಲೈ ಪರ್ವತರಾಜನೆ, ಇಲ್ಲಿಯೇ ನಿನ್ನ ರಮ್ಯವಾದೀ ತಪ್ಪಲಲ್ಲಿ ತಪವನ್ನಾಚರಿಸುತ್ತಾ ಆನಂದಮಯವೂ ಪರಮಾರ್ಥವೂ ಆದಂತಹ ನನ್ನ (ಬ್ರಹ್ಮ) ಸ್ವರೂಪವನ್ನು ಧ್ಯಾನಿಸುವೆನು. ಇಲ್ಲಿ ತಪವನ್ನಾ ಚರಿಸಲು ನನಗನುಮತಿಯನ್ನು ಕೊಡು. ನಿನ್ನ ಅನುಮತಿಯಿಲ್ಲದೆ ತಪವನ್ನಾ ಚರಿಸಲು ಸಾಧ್ಯವಿಲ್ಲ.

೨೮. ಬ್ರಹ್ಮನು ಹೇಳಿದನು :—ಹೀಗೆ ದೇವದೇವನಾದ ಶಂಕರನು ಹೇಳಿದ ಮಾತನ್ನು ಕೇಳಿ ಹಿಮವಂತನು ಶಂಕರನನ್ನು ನಮಸ್ಕರಿಸಿ ತಿರುಗಿ ಹೇಳಿದನು.

೨೯. ಹಿಮವಂತನು ಹೇಳಿದನು :—ಓ ಮಹಾದೇವ, ಜಗತ್ತೆಲ್ಲವೂ ನಿನ್ನದು ದೇವತೆಗಳು ದೈತ್ಯರು, ಮಾನವರು ಎಲ್ಲರೂ ನಿನ್ನವರು. ಹೀಗಿರಲು ಸಾಮಾನ್ಯ ನಾದ ನಾನು ನಿನಗನುಮತಿಕೊಡುವದೆಂದರೇನು ? ಎಂದನು.

॥ ಬ್ರಹ್ಮೋವಾಚ ॥

ಏವಮುಕ್ತೋ ಹಿಮವತಾ ಶಂಕರೋ ಲೋಕಶಂಕರಃ ।
ವಿಹಸ್ಯ ಗಿರಿರಾಜಂ ತಂ ಪ್ರಾಹ ಯಾಹೀತಿ ಸಾದರಂ ॥ ೩೦ ॥

ಶಂಕರೇಣಾಭ್ಯನುಜ್ಞಾತಃ ಸ್ವಗೃಹಂ ಹಿಮವಾ‌ನ್ ಯಯೌ ।
ಸಾರ್ಧಂ ಗಿರಿಜಯಾ ನಿತ್ಯಂ ಸ ಪ್ರತ್ಯಹಂ ದರ್ಶನೇ ಸ್ಥಿತಃ ॥ ೩೧ ॥

ಪಿತ್ರಾ ವಿನಾಪಿ ಸಾ ಕಾಲೀ ಸಖೀಭ್ಯಾಂ ಸಹ ನಿತ್ಯಶಃ ।
ಜಗಾಮ ಶಂಕರಾಭ್ಯಾಶಂ ಸೇವಾಯೈ ಭಕ್ತಿತತ್ಪರಾ ॥ ೩೨ ॥

ನಿಷಿಷೇಧ ನ ತಾಂ ಕೋಪಿ ಗಣೋ ನಂದೀಶ್ವರಾದಿಕಃ ।
ಮಹೇಶಶಾಸನಾತ್ತಾತ ತಚ್ಛಾಸನಕರಃ ಶುಚಿಃ ॥ ೩೩ ॥

ಸಾಂಖ್ಯವೇದಾಂತಮತಯೋಶ್ಶಿವಯೋಶ್ಶಿವದಸ್ಸದಾ ।
ಸಂವಾದಃ ಸುಖಕೃಚ್ಚೋಕ್ತೋಽಭಿನ್ನಯೋಃ ಸುವಿಚಾರತಃ ॥ ೩೪ ॥

ಗಿರಿರಾಜಸ್ಯ ವಚನಾತ್ತನಯಾಂ ತಸ್ಯ ಶಂಕರಃ ।
ಪಾರ್ಶ್ವೇ ಸಮೀಪೇ ಜಗ್ರಾಹ ಗೌರವಾದಪಿ ಗೋಪರಃ ॥ ೩೫ ॥

---

೩೦-೩೩. ಬ್ರಹ್ಮನು ಹೇಳಿದನು:—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಶಂಕರನು ಮಂದಹಾಸವನ್ನು ಬೀರಿ ಆ ಹಿಮವಂತನಿಗೆ ಮನೆಗೆ ತೆರಳಲು ಅನುಮತಿಯನ್ನಿತ್ತನು. ಶಂಕರನನುಮತಿಯನ್ನು ಪಡೆದು ಹಿಮವಂತನು ಪಾರ್ವತಿಯೊಡನೆ ಶಿವದರ್ಶನಕ್ಕೆ ಬರುತ್ತಲಿದ್ದನು. ಹಿಮವಂತನು ಬರದಿದ್ದರೂ ಪಾರ್ವತಿಯು ನಿತ್ಯವೂ ಸಖಿಯರೀರ್ವರೊಡನೆ ಶಂಕರನ ಬಳಿಗೆ ಬಂದು ಭಕ್ತಿಯಿಂದ ಅವನನ್ನು ಸೇವಿಸುತ್ತಲಿದ್ದಳು. ಶಂಕರನಪ್ಪಣೆಯಂತೆ ಬರುತ್ತಲಿರುವ ಆ ಗಿರಿಜೆಯನ್ನು ನಂದಿ ಮೊದಲಾದ ಗಣಗಳು ತಡೆಯುತ್ತಿರಲಿಲ್ಲ.

೩೪-೩೫. ಆ ಶಿವ ಮತ್ತು ಪಾರ್ವತಿಯರಲ್ಲಿ ನಿತ್ಯವೂ ಸಾಂಖ್ಯ ಮತ್ತು ವೇದಾಂತಮತಗಳಲ್ಲಿ ವಿವಾದವಾಗುತ್ತಲಿದ್ದಿತು. ಪರ್ವತರಾಜನ ಮಾತನ್ನು ಗೌರವಿಸಿ ಶಂಕರನು ಗಿರಿಜೆಯನ್ನು ತನ್ನ ಸೇವೆಗೆ ನಿಯಮಿಸಿಕೊಂಡನು.

ಉವಾಚೇದಂ ವಚಃ ಕಾಲೀಂ ಸಖೀಭ್ಯಾಂ ಸಹ ಗೋಪತಿಃ ।
ನಿತ್ಯಂ ಮಾಂ ಸೇವತಾಂ ಯಾತು ನಿರ್ಭೀತಾ ಹ್ಯತ್ರ ತಿಷ್ಠತು ॥ ೩೬ ॥

ಏವಮುಕ್ತ್ವಾ ತು ತಾಂ ದೇವೀಂ ಸೇವಾಯೈ ಜಗೃಹೇ ಹರಃ ।
ನಿರ್ವಿಕಾರೋ ಮಹಾಯೋಗೀ ನಾನಾಲೀಲಾಕರಃ ಪ್ರಭುಃ ॥ ೩೭ ॥

ಇದಮೇವ ಮಹದ್ಧೈರ್ಯಂ ಧೀರಾಣಾಂ ಸುತಪಸ್ವಿನಾಂ ।
ವಿಘ್ನವಂತ್ಯಪಿ ಸಂಪ್ರಾಪ್ಯ ಯದ್ವಿಘ್ನೈರ್ನ ವಿಹನ್ಯತೇ ॥ ೩೮ ॥

ತತಃ ಸ್ವಪುರಮಾಯಾತೋ ಗಿರಿರಾಟ್ ಪರಿಚಾರಕೈಃ ।
ಮುಮೋದಾತೀವ ಮನಸಿ ಸಪ್ರಿಯಸ್ಸ ಮುನೀಶ್ವರ ॥ ೩೯ ॥

ಹರಶ್ಚ ಧ್ಯಾನಯೋಗೇನ ಪರಮಾತ್ಮಾನಮಾದರಾತ್ ।
ನಿರ್ವಿಘ್ನೇನ ಸ್ವಮನಸಾ ತ್ವಾಸೀಚ್ಚಿಂತಯಿತುಂ ಸ್ಥಿತಃ ॥ ೪೦ ॥

ಕಾಲೀ ಸಖೀಭ್ಯಾಂ ಸಹಿತಾ ಪ್ರತ್ಯಹಂ ಚಂದ್ರಶೇಖರಂ ।
ಸೇವಮಾನಾ ಮಹಾದೇವಂ ಗಮನಾಗಮನೇ ಸ್ಥಿತಾ ॥ ೪೧ ॥

---

೩೬-೩೮. ಆಗ ಶಂಕರನು ಪಾರ್ವತಿಯನ್ನು ಕುರಿತು ಎಲೌ ಪಾರ್ವತಿ, ನಿತ್ಯವೂ ನನ್ನನ್ನು ಸೇವಿಸುತ್ತಾ ಧೈರ್ಯವಾಗಿಲ್ಲಿರಬಹುದು ಎಂದು ಹೇಳಿ ಅವಳನ್ನು ತನ್ನ ಸೇವೆಯಲ್ಲಿ ನಿಯಮಿಸಿಕೊಂಡನು. ಅದೇ ಧೈರ್ಯವು. ಯಾವುದು ವಿಘ್ನಗಳೊದಗಿದರೂ ನಾಶವಾಗಲಾರದೋ ಅದೇ ಧೈರ್ಯವು. ಅಂಥಹ ಧೈರ್ಯವುಳ್ಳವರೇ ಧೀರರು.

೩೯-೪೧. ಬಳಿಕ ಹಿಮವಂತನು ಪರಿವಾರದೊಡನೆ ತನ್ನ ರಮನೆಗೆ ಬಂದು ಎಲ್ಲರೊಡನೆ ತುಂಬಾ ಹರ್ಷಗೊಂಡನು. ಅತ್ತಲಾಗಿ ಶಂಕರನೂ ಸಹ ಸ್ಥಿರವಾದ ಮನಸ್ಸಿನಿಂದ ಪರಮಾತ್ಮನನ್ನು ಧ್ಯಾನಿಸತೊಡಗಿದನು. ಗಿರಿಜೆಯು ನಿತ್ಯವೂ ಶಂಕರನಲ್ಲಿಗೆ ಬಂದು ಅವನನ್ನು ಭಕ್ತಿಯಿಂದ ಸೇವಿಸಿ ಕೊನೆಗೆ ಮನೆಗೆ ತೆರಳುತ್ತಿದ್ದಳು.

ಪ್ರಕ್ಷಾಲ್ಯ ಚರಣೌ ಶಂಭೋಃ ಪಪೌ ತಚ್ಚರಣೋದಕಂ ।
ವಹ್ನಿಶೌಚೇನ ವಸ್ತ್ರೇಣ ಚಕ್ರೇ ತದ್ಗಾತ್ರಮಾರ್ಜನಂ ॥ ೪೨ ॥

ಷೋಡಶೇನೋಪಚಾರೇಣ ಸಂಪೂಜ್ಯ ವಿಧಿವದ್ಧರಂ ।
ಪುನಃ ಪುನಃ ಸುಪ್ರಣಮ್ಯ ಯಯೌ ನಿತ್ಯಂ ಪಿತುರ್ಗೃಹಂ ॥ ೪೩ ॥

ಏವಂ ಸಂಸೇವಮಾನಾಯಾಂ ಶಂಕರಂ ಧ್ಯಾನತತ್ಪರಂ ।
ವ್ಯತೀಯಾಯ ಮಹಾನ್ ಕಾಲಶ್ಶಿವಾಯಾ ಮುನಿಸತ್ತಮ ॥ ೪೪ ॥

ಕದಾಚಿತ್ಸಹಿತಾ ಕಾಲೀ ಸಖೀಭ್ಯಾಂ ಶಂಕರಾಶ್ರಮೇ ।
ವಿತೇನೇ ಸುಂದರಂ ಗಾನಂ ಸುತಾಲಂ ಸ್ಮರವರ್ಧನಂ ॥ ೪೫ ॥

ಕದಾಚಿತ್ಕುಶಪುಷ್ಪಾಣಿ ಸಮಿಧಂ ನಯತಿ ಸ್ವಯಂ ।
ಸಖೀಭ್ಯಾಂ ಸ್ಥಾನಸಂಸ್ಕಾರಂ ಕುರ್ವತೀ ಸ್ಮ ವಸತ್ತದಾ ॥ ೪೬ ॥

ಕದಾಚಿನ್ನಿಯತಾ ಗೇಹೇ ಸ್ಥಿತಾ ಚಂದ್ರಭೃತೋ ಭೃಶಂ ।
ವೀಕ್ಷಂತೀ ವಿಸ್ಮಯಾಪಾಸ ಸಕಾಮಾ ಚಂದ್ರಶೇಖರಂ ॥ ೪೭ ॥

---

೪೨-೪೩. ಆ ಪಾರ್ವತಿಯು ಶಂಕರನ ಪಾದಗಳನ್ನು ಶುದ್ಧಜಲದಿಂದ ತೊಳೆದು ಆ ಚರಣತೀರ್ಥವನ್ನು ಕುಡಿಯುವಳು. ಬೆಂಕಿಯಿಂದ ಒಣಗಿಸಿದ ಶುದ್ಧವಾದ ಬಟ್ಟೆಯಿಂದ ಶಂಕರನ ಶರೀರವನ್ನೊರೆಸುವಳು. ಬಳಿಕ ಷೋಡಶೋಪಚಾರಗಳಿಂದ ಶಂಕರನನ್ನರ್ಚಿಸಿ ಪುನಃ ಪುನಃ ನಮಸ್ಕರಿಸಿ ತಂದೆಯ ಮನೆಗೆ ತೆರಳುವಳು.

೪೪-೪೬. ಹೀಗೆ ಆ ಗಿರಿಜೆಯು ಧ್ಯಾನನಿಷ್ಠನಾದ ಶಂಕರನನ್ನು ಬಹಳಕಾಲ ಸೇವಿಸಿದಳು. ಒಮ್ಮೆ ಆ ಉಮೆಯು ಸಖಿಯರೊಡನೆ ತಾಳಗತಿಲಯಗಳಿಂದ ಮನೋಹರವಾಗಿ ಕಾಮೋದ್ರೇಕವಾಗುವಂತಹ ಗಾನಮಾಡುವಳು. ಮತ್ತೊಮ್ಮೆ ದರ್ಭೆ, ಹೂವು, ಸಮಿತ್ತು ಇವುಗಳನ್ನು ತಾನೇ ತಂದೊಪ್ಪಿಸುವಳು. ಸಖಿಯರೊಡನೆ ಸೇರಿ ಶಂಕರನು ತಪವಾಚರಿಸುವ ಸ್ಥಳವನ್ನು ಶುದ್ಧಮಾಡುವಳು.

೪೭-೪೮. ಒಮ್ಮೆ ಆ ಪಾರ್ವತಿಯು ಚಂದ್ರಶೇಖರನ ಸುಂದರವಾದ ಮುಖವನ್ನು ಕಾಮಾಭಿಲಾಷೆಯಿಂದ ನೋಡುತ್ತಾ ಆ ಶಂಕರನನ್ನೂ ಆಶ್ಚರ್ಯಗೊಳಿಸಿದಳು.

ತತಸ್ತ್ವಪೇನ ಭೂತೇಶಸ್ತಾಂ ನಿಸ್ಸಂಗಾಂ ಪರಿಸ್ಥಿತಾಂ ।
ಸೋಽಚಿಂತಯತ್ತದಾ ವೀಕ್ಷ್ಯ ಭೂತದೇಹೇ ಸ್ಥಿತೇತಿ ಚ ॥ ೪೮ ॥

ಸಾಗ್ರಹೀದ್ಗಿರಿಶಃ ಕಾಲೀಂ ಭಾರ್ಯಾರ್ಥೇ ನಿಕಟೇ ಸ್ಥಿತಾಂ ।
ಮಹಾಲಾವಣ್ಯನಿಚಯಾಂ ಮುನೀನಾಮಪಿ ಮೋಹಿನೀಂ ॥ ೪೯ ॥

ಮಹಾದೇವಃ ಪುನರ್ದೃಷ್ಟ್ವಾ ತಾಂ ತಥಾ ಸಂಯತೇಂದ್ರಿಯಾಂ ।
ಸ್ವಸೇವನೇ ರತಾಂ ನಿತ್ಯಂ ಸದಯುಸ್ಸಮಚಿಂತಯತ್ ॥ ೫೦ ॥

ಯದ್ಯೈವೇಷಾ ತಪಶ್ಚರ್ಯಾವ್ರತಂ ಕಾಲೀ ಕರಿಷ್ಯತಿ ।
ತದಾ ಚ ತಾಂ ಗ್ರಹೀಷ್ಯಾಮಿ ಗರ್ವಬೀಜವಿವರ್ಜಿತಾಂ ॥ ೫೧ ॥

ಇತಿ ಸಂಚಿಂತ್ಯ ಭೂತೇಶೋ ದ್ರುತಂ ಧ್ಯಾನಂ ಸಮಾಶ್ರಿತಃ ।
ಮಹಾಯೋಗೀಶ್ವರೋಽಭೂದ್ವೈ ಮಹಾಲೀಲಾಕರಃ ಪ್ರಭುಃ ॥ ೫೨ ॥

ಧ್ಯಾನಾಸಕ್ತಸ್ಯ ತಸ್ಯಾಥ ಶಿವಸ್ಯ ಪರಮಾತ್ಮನಃ ।
ಹೃದಿ ನಾಸೀನ್ಮನೇ ಕಾಚಿದನ್ಯಾ ಚಿಂತಾ ವ್ಯವಸ್ಥಿತಾ ॥ ೫೩ ॥

---

ಹೀಗೆ ಗಿರಿಜೆಯು ಮನೆಮಠಗಳನ್ನು ಬಿಟ್ಟು ಜಿತೇಂದ್ರಿಯತೆಯಿಂದ ತನ್ನನ್ನೇ ಸೇವಿಸುತ್ತಿರುವಳಾದರೂ ಶಂಕರನು ಅವಳು ಅಶುದ್ಧವಾದ ಮನುಷ್ಯಶರೀರವುಳ್ಳವಳು ಎಂದು ಮಹಾಸುಂದರಿಯಾಗಿದ್ದರೂ ಆ ಗಿರಿಜೆಯನ್ನು ಸ್ವೀಕರಿಸಲಿಲ್ಲ.

೫೦-೫೨. ಆ ಮಹಾದೇವನು ಜಿತೇಂದ್ರಿಯತೆಯಿಂದ ತನ್ನನ್ನೇ ನಿತ್ಯವೂ ಸೇವಿಸುವ ಆ ಪಾರ್ವತಿಯನ್ನು ನೋಡಿ ದಯೆಯುಳ್ಳವನಾಗಿ ಹೀಗೆ ಚಿಂತಿಸಿದನು. ಈ ಗಿರಿಜೆಯು ತಪಸ್ಸನ್ನು ಮಾಡಿ ತನ್ನ ಗರ್ಭದೋಷ ಮತ್ತು ಗರ್ವ ಮುಂತಾದುವುಗಳನ್ನು ಕಳೆದುಕೊಂಡರೆ ಆಗ ಇವಳನ್ನು ಪರಿಗ್ರಹಿಸುವೆನು ಎಂದು ಯೋಚಿಸಿ ಲೀಲಾಮಯನಾದ ಪರಮೇಶ್ವರನು ಆಕೂಡಲೇ ಧ್ಯಾನಯೋಗದಿಂದ ತಪವನ್ನಾಚರಿಸತೊಡಗಿದನು.

೫೩-೫೫. ಹಾಗೆ ಪರಮೇಶ್ವರನು ಧ್ಯಾನಾಸಕ್ತನಾಗಲು ಆಗ ಅವನ ಮನಸ್ಸಿನಲ್ಲಿ ಪರಮಾತ್ಮಚಿಂತೆಯು ಹೊರತು ಮಿಕ್ಕಾವುದೂ ಇರಲಿಲ್ಲ. ಪಾರ್ವತಿಯು

ಕಾಲೀತ್ವನುದಿನಂ ಶಂಭುಂ ಸದ್ಭಕ್ತ್ಯಾ ಸಮುಸೇವತ ।
ವಿಚಿಂತಯಂತೀ ಸತತಂ ತಸ್ಯ ರೂಪಂ ಮಹಾತ್ಮನಃ ॥ ೫೪ ॥

ಹರೋ ಧ್ಯಾನಪರಃ ಕಾಲೀಂ ನಿತ್ಯಂ ಪ್ರೈಕ್ಷತ ಸುಸ್ಥಿತಾಂ ।
ವಿಸ್ಮೃತ್ಯ ಪೂರ್ವಚಿಂತಾಂ ತಾಂ ಪಶ್ಯನ್ನಪಿ ನ ಪಶ್ಯತಿ ॥ ೫೫ ॥

ಏತಸ್ಮಿನ್ನಂತರೇ ದೇವಾ ಶಕ್ರಾದ್ಯಾ ಮುನಯಶ್ಚ ತೇ ।
ಬ್ರಹ್ಮಾಜ್ಞಯಾ ಸ್ಮರಂ ತತ್ರ ಪ್ರೇಷಯಾಮಾಸುರಾದರಾತ್ ॥ ೫೬ ॥

ತೇನ ಕಾರಯಿತುಂ ಯೋಗಂ ಕಾಲ್ಯಾ ರುದ್ರೇಣ ಕಾಮತಃ ।
ಮಹಾವೀರ್ಯೇಣಾಸುರೇಣ ತಾರಕೇಣ ಪ್ರಪೀಡಿತಾಃ ॥ ೫೭ ॥

ಗತ್ವಾ ತತ್ರ ಸ್ಮರಸ್ಸರ್ವಮುಪಾಯಮಕರೋನ್ನಿಜಂ ।
ಚುಕ್ಷುಭೇ ನ ಹರಃ ಕಿಂಚಿತ್ತಂ ಚ ಭಸ್ಮೀಚಕಾರ ಹ ॥ ೫೮ ॥

ಪಾರ್ವತ್ಯಪಿ ವಿಗರ್ವಾಭೂನ್ಮುನೇ ತಸ್ಯ ನಿದೇಶತಃ ।
ತತಸ್ತಪೋ ಮಹತ್ಕೃತ್ವಾ ಶಿವಂ ಪ್ರಾಪ ಪತಿಂ ಸತೀ ॥ ೫೯ ॥

---

ನಿತ್ಯವೂ ಶಂಕರನ ರೂಪವನ್ನು ಭಕ್ತಿಯಿಂದ ಚಿಂತಿಸುತ್ತಾ ಅವನನ್ನು ಸೇವಿಸುವಳು. ಧ್ಯಾನನಿಷ್ಠನಾದ ಹರನು ನಿತ್ಯವೂ ಪಾರ್ವತಿಯನ್ನು ನೋಡುತ್ತಿದ್ದರೂ ಅವಳ ಪೂರ್ವ ಚರಿತ್ರೆಯನ್ನು ಮರೆತು ಅವಳ ನಿಜವಾದ ಸ್ವರೂಪವನ್ನು ತಿಳಿಯಲಿಲ್ಲ. ಅವಳ ವಿಷಯದಲ್ಲಿ ಪೇಚ್ಛಾದ ಆಸಕ್ತಿಯುಳ್ಳವನೂ ಆಗಲಿಲ್ಲ.

೫೬-೫೮. ಈ ಮಧ್ಯದಲ್ಲಿ ತಾರಕಾಸುರನಿಂದ ಪೀಡಿತರಾದ ಇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನಪ್ಪಣೆಯಂತೆ ಪಾರ್ವತಿಯೊಡನೆ ಶಂಕರನನ್ನು ಸೇರಿಸಲು ಮನ್ಮಥನನ್ನು ಆ ಶಂಕರನ ಬಳಿಗೆ ಕಳುಹಿಸಿದರು. ಮನ್ಮಥನು ಶಂಕರನ ಬಳಿಗೆ ಬಂದು ತನ್ನ ಉಪಾಯಗಳನ್ನೆಲ್ಲಾ ಪ್ರಯೋಗಿಸಿದನು. ಆದರೂ ಶಂಕರನ ಮನಸ್ಸು ವಿಕಾರವನ್ನು ಹೊಂದಲಿಲ್ಲ. ಅಷ್ಟೇ ಅಲ್ಲದೇ ಶಂಕರನು ಕೋಪಗೊಂಡು ಮನ್ಮಥನನ್ನು ತನ್ನ ನೇತ್ರಾಗ್ನಿಯಿಂದ ಸುಟ್ಟು ಭಸ್ಮಮಾಡಿದನು.

೫೯-೬೦. ಆಗ ಪಾರ್ವತಿಯ ಗರ್ವವೆಲ್ಲವೂ ಹೋಯಿತು. ಮುಂದೆ ಅವಳು ಶಂಕರನಪ್ಪಣೆಯಂತೆ ಘೋರತಪವನ್ನಾಚರಿಸಿ ಶಂಕರನನ್ನು ಪತಿಯಾಗಿ ಪಡೆದಳು.

ಬಭೂವತುಸ್ತೌ ಸುಪ್ರೀತೌ ಪಾರ್ವತೀಪರಮೇಶ್ವರೌ ।
ಚಕ್ರತುರ್ದೇವಕಾರ್ಯಂ ಹಿ ಪರೋಪಕರಣೇ ರತೌ ॥ ೬೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ತ್ರಯೋದಶೋಽಧ್ಯಾಯಃ



---

ಮುಂದೆ ಪರೋಪಕಾರಿಗಳಾದ ಆ ಶಿವಪಾರ್ವತಿಯರು ತುಂಬಾ ಪ್ರೀತರಾಗಿ ದೇವ ಕಾರ್ಯವನ್ನು ನೆರವೇರಿಸಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಚತುರ್ದಶೋಽಧ್ಯಾಯಃ

---

॥ ನಾರದ ಉವಾಚ ॥

ವಿಷ್ಣುಶಿಷ್ಯ ಮಹಾಶೈವ ಸಮ್ಯಗುಕ್ತಂ ತ್ವಯಾ ವಿಧೇ ।
ಚರಿತಂ ಪರಮಂ ಹ್ಯೇತಚ್ಛಿವಾಯಾಶ್ಚ ಶಿವಸ್ಯ ಚ ॥ ೧ ॥

ಕಸ್ತಾರಕಾಸುರೋ ಬ್ರಹ್ಮನ್ ಯೇನ ದೇವಾಃ ಪ್ರಪೀಡಿತಾಃ ।
ಕಸ್ಯ ಪುತ್ರಸ್ಸ ವೈ ಬ್ರೂಹಿ ತತ್ಕಥಾಂ ಚ ಶಿವಾಶ್ರಯಾಂ ॥ ೨ ॥

ಭಸ್ಮೀಚಕಾರ ಸ ಕಥಂ ಶಂಕರಶ್ಚ ಸ್ಮರಂ ವಶೀ ।
ತದಪಿ ಬ್ರೂಹಿ ಸುಪ್ರೀತ್ಯಾದ್ಭುತಂ ತಚ್ಚರಿತಂ ವಿಭೋಃ ॥ ೩ ॥

ಕಥಂ ಶಿವಾ ತಪೋಽತ್ಯುಗ್ರಂ ಚಕಾರ ಸುಖಹೇತವೇ ।
ಕಥಂ ಪ್ರಾಪ ಪತಿಂ ಶಂಭುಮಾದಿಶಕ್ತಿರ್ಜಗತ್ಪರಾ ॥ ೪ ॥

---

## ಹದಿನಾಲ್ಕನೆಯ ಅಧ್ಯಾಯವು

೧-೪. ನಾರದಮುನಿಯು ಪ್ರಶ್ನಿಸಿದನು :—ವಿಷ್ಣುಶಿಷ್ಯನೂ ಶಿವಭಕ್ತನೂ ಆದ ಓ ವಿಧಿಯೇ, ಶಿವಪಾರ್ವತಿಯರ ಚರಿತೆಯನ್ನು ನೀನು ಈಗ ಚನ್ನಾಗಿ ಹೇಳಿರುವೆ. ದೇವತೆಗಳನ್ನು ಪೀಡಿಸಿದ ತಾರಕಾಸುರನು ಯಾರು? ಅವನು ಯಾರ ಮಗನು? ಮಹಾ ಜಿತೇಂದ್ರಿಯನಾದ ಶಂಕರನು ಮನ್ಮಥನನ್ನು ಹೇಗೆ ಭಸ್ಮಮಾಡಿದನು? ಆದಿಶಕ್ತಿಯಾದ ಪಾರ್ವತಿಯು ಘೋರವಾಗಿ ತಪವನ್ನಾಚರಿಸಿ ಶಂಕರನನ್ನು ಹೇಗೆ

ಏತತ್ಸರ್ವಮಶೇಷೇಣ ವಿಶೇಷೇಣ ಮಹಾಬುಧ ।
ಬ್ರೂಹಿ ಮೇ ಶ್ರದ್ದಧಾನಾಯ ಸ್ವಪುತ್ರಾಯ ಶಿವಾತ್ಮನೇ ॥ ೫ ॥

॥ ಬ್ರಹ್ಮೋವಾಚ ॥

ಪುತ್ರವರ್ಯ ಮಹಾಪ್ರಾಜ್ಞ ಸುರರ್ಷೇ ಶಂಸಿತವ್ರತ ।
ವಕ್ಷ್ಯೇಹಂ ಶಂಕರಂ ಸ್ಮೃತ್ವಾ ಸರ್ವಂ ತಚ್ಚರಿತಂ ಶೃಣು ॥ ೬ ॥

ಪ್ರಥಮಂ ತಾರಕಸ್ಯೈವ ಚರಿತಂ ಶೃಣು ನಾರದ ।
ಯದ್ವಧಾರ್ಥಂ ಮಹಾಯತ್ನಃ ಕೃತೋ ದೈವೈಃ ಶಿವಾಶ್ರಯೈಃ ॥ ೭ ॥

ಮಮ ಪುತ್ರೋ ಮರೀಚಿರ್ಯಃ ಕಶ್ಯಪಸ್ತಸ್ಯ ಚಾತ್ಮಜಃ ।
ತ್ರಯೋದಶಮಿತಾಸ್ತಸ್ಯ ಸ್ತ್ರಿಯೋ ದಕ್ಷಸುತಾಶ್ಚ ಯಾಃ ॥ ೮ ॥

ದಿತಿರ್ಜ್ಯೇಷ್ಠಾ ಚ ತತ್ಸ್ತ್ರೀ ಹಿ ಸುಷುವೆ ಸಾ ಸುತದ್ವಯಂ ।
ಹಿರಣ್ಯಕಶಿಪುರ್ಜ್ಯೇಷ್ಠೋ ಹಿರಣ್ಯಾಕ್ಷೋಽನುಜಸ್ತತಃ ॥ ೯ ॥

---

ಪಡೆದಳು? ಮಹಾ ಪ್ರಾಜ್ಞನಾದ ಓ ಬ್ರಹ್ಮನೇ? ಇದೆಲ್ಲವನ್ನೂ ಸಂಪೂರ್ಣವಾಗಿ ನನಗೆ ಹೇಳು. ಕೇಳಬೇಕೆಂಬ ಶ್ರದ್ಧೆಯಿರುವುದು ಎನ್ನಲು,

೬-೭. ಬ್ರಹ್ಮನು ಹೇಳಿದನು:—ನನ್ನ ಪುತ್ರರಲ್ಲುತ್ತಮನೂ, ಮಹಾಪಂಡಿತನೂ ಆದ ಎಲೈ ನಾರದನೆ, ಈಗ ನಾನು ಶಂಕರನನ್ನು ಸ್ಮರಿಸಿ ಅವನ ಚರಿತ್ರೆಯನ್ನು ಸಂಪೂರ್ಣವಾಗಿ ನಿನಗೆ ಹೇಳುವೆನು. ಮೊದಲು ತಾರಕಾಸುರನ ಚರಿತ್ರವನ್ನೇ ಹೇಳುವೆನು. ಆ ದೈತ್ಯನನ್ನು ಸಂಹರಿಸಲು ದೇವತೆಗಳು ಮಹಾಯತ್ನವನ್ನು ಮಾಡಿದರು.

೮-೧೦. ಕಶ್ಯಪನು ನನ್ನ (ಬ್ರಹ್ಮ) ಪುತ್ರನಾದ ಮರೀಚಿಯ ಪುತ್ರನು ಅವನ ಹದಿಮೂರುಜನ ದಕ್ಷಕನ್ಯೆಯರನ್ನು ಮದುವೆಯಾದನು. ಆ ಕನ್ಯೆಯರಲ್ಲಿ ದಿತಿಯು ಹಿರಿಯುವಳು. ಅವಳು ಎರಡು ಮಕ್ಕಳನ್ನು ಹಡೆದಳು. ಮೊದಲನೆಯವನು ಹಿರಣ್ಯಕಶಿಪುವು ಎರಡನೆಯವನು ಹಿರಣ್ಯಾಕ್ಷನು. ಈ ಅಣ್ಣತಮ್ಮಂದಿರು ದೇವತೆಗಳನ್ನು ಪೀಡಿಸುತ್ತಲಿದ್ದರು. ದೇವಶತ್ರುಗಳಾದ ಆ ದೈತ್ಯರೀರ್ವರನ್ನು ಹರಿಯು

ತೌ ಹತೌ ವಿಷ್ಣುನಾ ದೈತ್ಯೌ ನೃಸಿಂಹಕ್ರೋಡರೂಪತಃ ।
ಸುದುಃಖದೌ ತತೋ ದೇವಾ ಸುಖಮಾಪುಶ್ಚ ನಿರ್ಭಯಾಃ ॥ ೧೦ ॥

ದಿತಿಶ್ಚ ದುಃಖಿತಾಸೀತ್ಸಾ ಕಶ್ಯಪಂ ಶರಣಂ ಗತಾ ।
ಪುನಸ್ಸಂಸೇವ್ಯ ತಂ ಭಕ್ತ್ಯಾ ಗರ್ಭಮಾಧತ್ತ ಸುವ್ರತಾ ॥ ೧೧ ॥

ತದ್ವಿಜ್ಞಾಯ ಮಹೇಂದ್ರೋಽಪಿ ಲಬ್ಧಚ್ಛಿದ್ರೋ ಮಹೋದ್ಯಮಿ ।
ತದ್ಗರ್ಭಂ ವ್ಯಚ್ಛಿನತ್ತತ್ರ ಪ್ರವಿಶ್ಯ ಪವಿನಾ ಮುಹುಃ ॥ ೧೨ ॥

ತದ್ವ್ರತಸ್ಯ ಪ್ರಭಾವೇಣ ಸ ತದ್ಗರ್ಭೋ ಮಮಾರ ಹ ।
ಸ್ವಪಂತ್ಯಾ ದೈವಯೋಗೇನ ಸಪ್ತ ಸಪ್ತಾಭವನ್ ಸುತಾಃ ॥ ೧೪ ॥

ದೇವಾ ಆಸನ್ ಸುತಾಸ್ತೇ ಚ ನಾಮತೋ ಮರುತೋಽಖಿಲಾಃ ।
ಸ್ವರ್ಗಂ ಯಯುಸ್ತದೇಂದ್ರೇಣ ದೇವರಾಜಾತ್ಮಸಾತ್ಕೃತಾಃ ॥ ೧೫ ॥

ಪುನರ್ದಿತಿಃ ಪತಿಂ ಭೇಜೇಽನುತಪ್ತಾ ನಿಜಕರ್ಮತಃ ।
ಚಕಾರ ಸುಪ್ರಸನ್ನಂ ತಂ ಮುನಿಂ ಪರಮಸೇವಯಾ ॥ ೧೬ ॥

---

ನರಸಿಂಹ ಮತ್ತು ಮಹಾವರಾಹ ಅವತಾರಗಳನ್ನು ಮಾಡಿ ಸಂಹರಿಸಿದನು. ಆಗ ದೇವತೆಗಳಿಗೆ ಸುಖವಾಯಿತು.

೧೧-೧೫. ತನ್ನ ಪುತ್ರರಾದ ಹಿರಣ್ಯಾಕ್ಷ-ಹಿರಣ್ಯಕಶಿಪುಗಳು ಮೃತರಾದುದ ರಿಂದ ದಿತಿಯು ತುಂಬಾ ದುಃಖಗೊಂಡಳು. ಅವಳು ತಿರುಗಿ ಕಶ್ಯಪನನ್ನು ಮರೆ ಹೊಕ್ಕು ಭಕ್ತಿಯಿಂದ ಸೇವಿಸಿ, ಅವನನುಗ್ರಹದಿಂದ ವ್ರತವನ್ನಾಚರಿಸಿ ಗರ್ಭವನ್ನು ಧರಿಸಿದಳು. ಅದನ್ನು ತಿಳಿದು ದೇವೇಂದ್ರನು ಸಮಯವನ್ನು ಸಾಧಿಸಿ ದಿತಿಯ ಗರ್ಭವನ್ನು ಪ್ರವೇಶಿಸಿ ಆ ಗರ್ಭವನ್ನು ಕತ್ತರಿಸಿದನು. ಆದರೆ ವ್ರತದ ಪ್ರಭಾವದಿಂದ ಗರ್ಭವು ನಾಶವಾಗಲಿಲ್ಲ. ಅದರಿಂದ ಏಳುಜನ ಪುತ್ರರು ಜನಿಸಿದರು. ಅವರು "ಮರುತ್ತು" (ವಾಯು) ಗಳೆಂಬ ಏಳು ದೇವತೆಗಳಾದರು. ಅವರೆಲ್ಲರೂ ದೇವೇಂದ್ರ ನಿಂದ ಗೌರವಿಸಲ್ಪಟ್ಟು ಸ್ವರ್ಗಕ್ಕೆ ತೆರಳಿದರು.

೧೬. ದಿತಿಯು ತನ್ನ ಕರ್ಮಕ್ಕಾಗಿ ಪಶ್ಚಾತ್ತಾಪಪಟ್ಟು ತಿರುಗಿ ತನ್ನ ಪತಿ ಯಾದ ಕಶ್ಯಪನನ್ನು ಚನ್ನಾಗಿ ಸೇವಿಸಿ ಪ್ರಸನ್ನಗೊಳಿಸಿದಳು. ಆಗ ಕಶ್ಯಪನು ಹೀಗೆ ಹೇಳಿದನು.

॥ ಕಶ್ಯಪ ಉವಾಚ ॥

ತಪಃ ಕುರು ಶುಚಿರ್ಭೂತ್ವಾ ಬ್ರಹ್ಮಣಶ್ಚಾಯುತಂ ಸಮಾಃ ।
ಚೇದ್ಭವಿಷ್ಯತಿ ತತ್ಪೂರ್ವಂ ಭವಿತಾ ತೇ ಸುತಸ್ತದಾ ॥ ೧೬ ॥

ತಥಾ ದಿತ್ಯಾ ಕೃತಂ ಪೂರ್ಣಂ ತತ್ತಪಃ ಶ್ರದ್ಧಯಾ ಮುನೇ ।
ತತಃ ಪತ್ಯುಃ ಪ್ರಾಪ್ಯ ಗರ್ಭಂ ಸುಷುವೇ ತಾದೃಶಂ ಸುತಂ ॥ ೧೭ ॥

ವಜ್ರಾಂಗನಾಮಾ ಸೋಽಭೂಚ್ಚ ದಿತಿಪುತ್ರೋಽಮರೋಪಮಃ ।
ನಾಮತುಲ್ಯತನುರ್ವೀರಃ ಸುಪ್ರತಾಪ್ಯುದ್ಭವಾದ್ಬಲೀ ॥ ೧೮ ॥

ಜನನೀಶಾಸನಾತ್ಸದ್ಯಃ ಸ ಸುತೋ ನಿರ್ಜರಾಧಿಪಂ ।
ಬಲಾದ್ಧೃತ್ವಾ ದದೌ ದಂಡಂ ವಿವಿಧಂ ನಿರ್ಜರಾನಪಿ ॥ ೧೯ ॥

ದಿತಿಸ್ಸುಖಮತೀವಾಪ ದೃಷ್ಟ್ವಾ ಶಕ್ರಾದಿದುರ್ದಶಾಂ ।
ಅಮರಾ ಅಪಿ ಶಕ್ರಾದ್ಯಾಃ ಜಗ್ಮುರ್ದುಃಖಂ ಸ್ವಕರ್ಮತಃ ॥ ೨೦ ॥

---

೧೬. ಕಶ್ಯಪನು ಹೇಳಿದನು:—ಎಲೌ ದಿತಿ, ಶುಚಿಯಾಗಿದ್ದು ಬ್ರಹ್ಮನ ಹತ್ತುಸಾವಿರ ವರ್ಷಗಳವರೆಗೆ ತಪವನ್ನಾಚರಿಸು. ಹಾಗೆ ಮಾಡಿದರೆ ನಿನಗೆ ಪುತ್ರನು ಜನಿಸುವನು ಎಂದನು.

೧೭-೧೮. ಬ್ರಹ್ಮನು ಹೇಳಿದನು:—ಆದರಂತೆ ದಿತಿಯು ಪೂರ್ಣವಾಗಿ ತಪಸ್ಸನ್ನು ಶ್ರದ್ಧೆಯಿಂದ ಮಾಡಿದಳು. ಬಳಿಕ ಅವಳು ಪತಿಯಿಂದ ಗರ್ಭವನ್ನು ಪಡೆದು ವಜ್ರಾಂಗನೆಂಬ ಪುತ್ರನನ್ನು ಹಡೆದಳು. ಆ ವಜ್ರಾಂಗನು ಹೆಸರಿಗೆ ತಕ್ಕಂತೆ ವಜ್ರಮಯನಾಗಿದ್ದನು. ದೇವತೆಗಳಂತೆ ಬಲಶಾಲಿಯೂ ಪರಾಕ್ರಮಿಯೂ ಆಗಿದ್ದನು.

೧೯-೨೦. ಆ ವಜ್ರಾಂಗನು ತನ್ನ ತಾಯಿಯ ಅಪ್ಪಣೆಯಂತೆ ಇಂದ್ರನನ್ನು ಸೆರೆಹಿಡಿದು ಶಿಕ್ಷಿಸಿದನು. ದೇವತೆಗಳನ್ನೂ ಶಿಕ್ಷಿಸಿದನು. ದೇವತೆಗಳಿಗಾದ ದುರ್ದಶೆಯನ್ನು ನೋಡಿ ದಿತಿಯು ಸಂತೋಷಗೊಂಡಳು. ದೇವತೆಗಳೂ ಸಹ ತಮ್ಮ ಕರ್ಮದಿಂದ ತುಂಬಾ ದುಃಖವನ್ನು ಹೊಂದಿದರು.

ತದಾಹಂ ಕಶ್ಯಪೇನಾಶು ತತ್ರಾಗತ್ಯ ಸುಸಾಮಗೀಃ ।
ದೇವಾನತ್ಯಾಜಯಂಸ್ತಸ್ಮಾತ್ಸದಾ ದೇವಹಿತೇ ರತಃ ॥ ೨೧ ॥

ದೇವಾನ್ ಮುಕ್ತ್ವಾ ಸ ವಜ್ರಾಂಗಸ್ತತಃ ಪ್ರೋವಾಚ ಸಾದರಂ ।
ಶಿವಭಕ್ತೋಽತಿಶುದ್ಧಾತ್ಮಾ ನಿರ್ವಿಕಾರಃ ಪ್ರಸನ್ನಧೀಃ ॥ ೨೨ ॥

॥ ವಜ್ರಾಂಗ ಉವಾಚ ॥

ಇಂದ್ರೋ ದುಷ್ಟಃ ಪ್ರಜಾಘಾತೀ ಮಾತುರ್ಮೇ ಸ್ವಾರ್ಥಸಾಧಕಃ ।
ಸ ಫಲಂ ಪ್ರಾಪ್ತವಾನದ್ಯ ಸ್ವರಾಜ್ಯಂ ಹಿ ಕರೋತು ಸಃ ॥ ೨೩ ॥

ಮಾತುರಾಜ್ಞಾವಶಾದ್ಬ್ರಹ್ಮನ್ ಕೃತಮೇತನ್ಮಯಾಽಖಿಲಂ ।
ನ ಮೇ ಭೋಗಾಭಿಲಾಷೋ ವೈ ಕಸ್ಯಚಿದ್ಭುವನಸ್ಯ ವೈ ॥ ೨೪ ॥

ತತ್ತ್ವಸಾರಂ ವಿಧೇ ಬ್ರೂಹಿ ಮಹ್ಯಂ ವೇದವಿದಾಂ ವರ ।
ಯೇನ ಸ್ಯಾಂ ಸುಸುಖೀ ನಿತ್ಯಂ ನಿರ್ವಿಕಾರಃ ಪ್ರಸನ್ನಧೀಃ ॥ ೨೫ ॥

ತಚ್ಛ್ರುತ್ವಾಹಂ ಮುನೇಽವೋಚಂ ಸಾತ್ತ್ವಿಕೋ ಭಾವ ಉಚ್ಯತೇ ।
ತತ್ತ್ವಸಾರ ಇತಿ ಪ್ರೀತ್ಯಾ ಸೃಜಾಮ್ಯೇಕಾಂ ವರಾಂ ಸ್ತ್ರಿಯಂ ॥ ೨೬ ॥

---

೨೧-೨೨. ಆಗ ನಾನು (ಬ್ರಹ್ಮನು) ಕಶ್ಯಪನ ಬಳಿಗೆ ಬಂದು ದೇವತೆಗಳಿಗೂ ವಜ್ರಾಂಗನಿಗೂ ಸಮಾಧಾನಮಾಡಿಸಿ ದೇವತೆಗಳನ್ನು ಬಿಡಿಸಿದೆನು. ಶಿವಭಕ್ತನಾದ ವಜ್ರಾಂಗನು ನನ್ನ ಮಾತಿನಮೇಲೆ ದೇವತೆಗಳನ್ನು ಬಿಟ್ಟು, ನನ್ನನ್ನು ಕುರಿತು ಆದರ ದಿಂದ ಹೀಗೆ ಹೇಳಿದನು.

೨೩-೨೫. ವಜ್ರಾಂಗನು ಹೇಳಿದನು:—ಓ ಬ್ರಹ್ಮನೇ, ಈ ಇಂದ್ರನು ಮಹಾ ದುಷ್ಟನು. ಸ್ವಾರ್ಥಕ್ಕಾಗಿ ಅವನು ನನ್ನ ತಾಯಿಯ ಪುತ್ರರನ್ನು ಹಿಂಸಿಸಿರು ವನು. ಅವನ ದುಷ್ಟತನಕ್ಕೆ ಸರಿಯಾದ ಫಲವನ್ನನನುಭವಿಸಿದನು. ಈಗ ಅವನ ರಾಜ್ಯವನ್ನು ಅವನೇ ಅನುಭವಿಸಲಿ. ನನಗೆ ಯಾವ ರಾಜ್ಯದ ಅಭಿಲಾಷೆಯೂ ಇಲ್ಲ. ವೇದವಿದ್ವಾಂಸನಾದ ಓ ವಿಧಿಯೇ ತತ್ವಸಾರವನ್ನು ನನಗೆ ಹೇಳು. ಅದರಿಂದ ನಾನು ಶಾಂತಿಯನ್ನು ಹೊಂದಿ ನಿತ್ಯವೂ ಸುಖಿಯಾಗಿರುವೆನು ಎಂದನು

೨೬-೨೭. ವಜ್ರಾಂಗನ ಆ ಮಾತನ್ನು ಕೇಳಿ ನಾನು "ಸಾತ್ವಿಕವಾದ ವೃತ್ತಿ" (ನಡತೆ) ಯೇ ತತ್ವಸಾರವು (ಮುಖ್ಯತತ್ವವು) ಎಂದು ಹೇಳಿ "ವರಾಂಗೀ" ಎಂಬ

ವರಾಂಗೀಂ ನಾಮ ತಾಂ ದತ್ವಾ ತಸ್ಮೈ ದಿತಿಸುತಾಯ ವೈ ।
ಅಯಾಂ ಸ್ವಧಾಮ ಸುಪ್ರೀತಃ ಕಶ್ಯಪಸ್ತತ್ಪಿತಾಪಿ ಚ ॥ ೨೭ ॥

ತತೋ ದೈತ್ಯಸ್ಸ ವಜ್ರಾಂಗಸ್ಸಾತ್ತ್ವಿಕಂ ಭಾವಮಾಶ್ರಿತಃ ।
ಆಸುರಂ ಭಾವಮುತ್ಸೃಜ್ಯ ನಿರ್ವೈರಸ್ಸುಖಮಾಪ್ತವಾನ್ ॥ ೨೮ ॥

ನ ಬಭೂವ ವರಾಂಗ್ಯಾ ಹಿ ಹೃದಿ ಭಾವೋಽಥ ಸಾತ್ತ್ವಿಕಃ ।
ಸಕಾಮಾ ಸ್ವಪತಿಂ ಭೇಜೇ ಶ್ರದ್ಧಯಾ ವಿವಿಧಂ ಸತೀ ॥ ೨೯ ॥

ಅಥ ತತ್ಸೇವನಾದಾಶು ಸಂತುಷ್ಟೋಽಭೂನ್ಮಹಾಪ್ರಭುಃ ।
ಸ ವಜ್ರಾಂಗಃ ಪತಿಸ್ತಸ್ಯಾ ಉವಾಚ ವಚನಂ ತದಾ ॥ ೩೦ ॥

॥ ವಜ್ರಾಂಗ ಉವಾಚ ॥

ಕಿಮಿಚ್ಛಸಿ ಪ್ರಿಯೇ ಬ್ರೂಹಿ ಕಿಂ ತೇ ಮನಸಿ ವರ್ತತೇ ।
ತಚ್ಛ್ರುತ್ವಾನಮ್ಯ ತಂ ಪ್ರಾಹ ಸಾ ಪತಿಂ ಸ್ವಮನೋರಥಂ ॥ ೩೧ ॥

---

ಓರ್ವ ಸುಂದರಿಯಾದ ಸ್ತ್ರೀಯನ್ನು ಸೃಜಿಸಿದೆನು. ಆ ಸ್ತ್ರೀಯನ್ನು ವಜ್ರಾಂಗನಿಗೆ ಮದುವೆಮಾಡಿಸಿ ನನ್ನ ಸ್ಥಾನಕ್ಕೆ ತೆರಳಿದೆನು. ಕಶ್ಯಪಮುನಿಯೂ ಸಹ ಅವನ ಆಶ್ರಮಕ್ಕೆ ಹೋದನು.

೨೮-೩೦. ಬಳಿಕ ಆ ವಜ್ರಾಂಗನು ರಾಕ್ಷಸಭಾವವನ್ನು ತ್ಯಜಿಸಿ ದೇವತೆಗಳೊಡನೆ ವೈರವನ್ನು ಬಿಟ್ಟು ಸಾತ್ವಿಕಭಾವದಿಂದಲೇ ಇರತೊಡಗಿದನು. ಆದ್ದರೆ ಅವನ ಮಡದಿಯಾದ ವರಾಂಗಿಯಲ್ಲಿ ಸಾತ್ವಿಕಭಾವವುದಯಿಸಲಿಲ್ಲ. ಅವಳು ಪುತ್ರಕಾಮನೆಯುಳ್ಳವಳಾಗಿ ಶ್ರದ್ಧೆಯಿಂದ ತನ್ನ ಪತಿಯಾದ ವಜ್ರಾಂಗನನ್ನು ಸೇವಿಸಿದಳು. ಅವಳಾಸೇವೆಯಿಂದ ಸಂತುಷ್ಟನಾಗಿ,

೩೧. ವಜ್ರಾಂಗನು ಹೇಳಿದನು:––ಎಲೌ ಪ್ರಿಯೇ, ಇನ್ನೇನನ್ನಪೇಕ್ಷಿಸುವೆ? ನಿನ್ನ ಮನದಲ್ಲೇನಿರುವುದು? ಎಂದು ಕೇಳಿದನು. ಅದನ್ನು ಕೇಳಿ ವರಾಂಗಿಯು ಪತಿಯನ್ನು ಪ್ರೀತಿಯಿಂದಾಲಂಗಿಸಿ ತನ್ನ ಮನೋರಥವನ್ನು ಹೀಗೆ ಹೇಳಿದಳು.

॥ ವರಾಂಗ್ಯುವಾಚ ॥

ಚೇತ್ಪ್ರಸನ್ನೋಽಭವಸ್ತ್ವಂ ವೈ ಸುತಂ ಮೇ ದೇಹಿ ಸತ್ಪತೇ ।
ಮಹಾಬಲಂ ತ್ರಿಲೋಕಸ್ಯ ಜೇತಾರಂ ಹರಿದುಃಖದಂ ॥ ೩೨ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ಪ್ರಿಯಾವಾಕ್ಯಂ ವಿಸ್ಮಿತೋಽಭೂತ್ಸ ಆಕುಲಃ ।
ಉವಾಚ ಹೃದಿ ಸ ಜ್ಞಾನೀ ಸಾತ್ತ್ವಿಕೋ ವೈರವರ್ಜಿತಃ ॥ ೩೩ ॥

ಪ್ರಿಯೇಚ್ಛತಿ ವಿರೋಧಂ ವೈ ಸುರೈರ್ಮೇ ನ ಹಿ ರೋಚತೇ ।
ಕಿಂ ಕುರ್ಯಾಂ ಹಿ ಕ್ವ ಗಚ್ಛೇಯಂ ಕಥಂ ನಶ್ಯೇನ್ನ ಮೇ ಪಣಃ ॥ ೩೪ ॥

ಪ್ರಿಯಾಮನೋರಥಶ್ಚೈವ ಪೂರ್ಣಸ್ಸ್ಯಾತ್ತ್ರಿಜಗಚ್ಛವೇತ್ ।
ಕ್ಲೇಶಯುಙ್ನಿತರಾಂ ಭೂಯೋ ದೇವಾಶ್ಚ ಮುನಯಸ್ತಥಾ ॥ ೩೫ ॥

---

೩೨. ವರಾಂಗಿಯು ಹೇಳಿದಳು :—ಓ ಪ್ರಿಯನೇ, ನೀನು ಪ್ರಸನ್ನನಾಗಿದ್ದರೆ ನನಗೊಬ್ಬ ಸುಪುತ್ರನನ್ನು ಕರುಣಿಸು. ಅವನು ಮೂರು ಲೋಕಗಳನ್ನೂ ಜಯಿಸುವಂತಹ ವೀರನಾಗಿರಬೇಕು. ಹರಿಯನ್ನೂ ಜಯಿಸುವಂತಹವನಾಗಬೇಕು.

೩೩. ಬ್ರಹ್ಮನು ಹೇಳಿದನು :—ಹೆಂಡತಿಯಾದ ವರಾಂಗಿಯು ಹೇಳಿದ ಮಾತನ್ನು ಕೇಳಿ ಜ್ಞಾನಿಯೂ, ಸಾತ್ವಿಕನೂ, ಶಾಂತನೂ, ಆದ ಆ ವಜ್ರಾಂಗನು ತುಂಬಾ ವಿಸ್ಮಯಗೊಂಡನು. ಮತ್ತು ಮನಸ್ಸಿನಲ್ಲಿ ವ್ಯಥೆಗೊಂಡು ಹೀಗೆ ಯೋಚಿಸಿದನು.

೩೪. ಈ ನನ್ನ ಪ್ರಿಯೆಯು ದೇವತೆಗಳೊಡನೆ ವಿರೋಧವನ್ನು ಬೆಳಸಲಿಚ್ಛಿಸುವಳು. ಇದು ನನಗೆ ಸರಿಹೋಗುವುದಿಲ್ಲ. ಈಗ ನಾನೇನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ಪ್ರತಿಜ್ಞೆಯು ನಾಶವಾಗದಿರುವ ಬಗೆ ಹೇಗೆ?

೩೫. ಪ್ರಿಯಳ ಇಷ್ಟಾರ್ಥವು ಈಡೇರಿದರೆ ಜಗತ್ತಿಗೇ ಕಷ್ಟವುಂಟಾಗುವುದು. ದೇವತೆಗಳಿಗೂ, ಮುನಿಗಳಿಗೂ, ದುಃಖವುಂಟಾಗುವುದು.

ನ ಪೂರ್ಣಃ ಸ್ಯಾತ್ಪ್ರಿಯಾಕಾಮಸ್ತದಾ ಮೇ ನರಕೋ ಭವೇತ್ ।
ದ್ವಿಧಾಪಿ ಧರ್ಮಹಾನಿರ್ಮೇ ಭವತೀತ್ಯನುಚುಕ್ರುವಾನ್ ॥ ೩೬ ॥

ವಜ್ರಾಂಗ ಇತ್ಥಂ ಬಭ್ರಾಮ ಸ ಮುನೇ ಧರ್ಮಸಂಕಟೇ ।
ಬಲಾಬಲಂ ದ್ವಯೋಸ್ತತ್ರ ಚಿಂತಯಾಮಾಸ ತತ್ತ್ವತಃ ॥ ೩೭ ॥

ಶಿವೇಚ್ಛಯಾ ಸ ಹಿ ಮುನೇ ವಾಕ್ಯಂ ಮೇನೇ ಸ್ತ್ರಿಯೋ ಬುಧಃ ।
ತಥಾಸ್ತ್ವಿತಿ ವಚಃ ಪ್ರಾಹ ಪ್ರಿಯಾಂ ಪ್ರತಿ ಸ ದೈತ್ಯರಾಟ್ ॥ ೩೮ ॥

ತದರ್ಥಮಕರೋತ್ತೀವ್ರಂ ತಪೋಽನ್ಯದ್ದುಷ್ಕರಂ ಸ ತು ।
ಮಾಂ ಸಮುದ್ದಿಶ್ಯ ಸುಪ್ರೀತ್ಯಾ ಬಹುವರ್ಷಂ ಜಿತೇಂದ್ರಿಯಃ ॥ ೩೯ ॥

ವರಂ ದಾತುಮಗಾಂ ತಸ್ಮೈ ದೃಷ್ಟ್ವಾಹಂ ತತ್ತಪೋ ಮಹತ್ ।
ವರಂ ಬ್ರೂಹೀತ್ಯವೋಚಂ ಚ ಸುಪ್ರಸನ್ನೇನ ಚೇತಸಾ ॥ ೪೦ ॥

---

೩೬. ಪತ್ನಿಯ ಇಷ್ಟವನ್ನು ಸಲ್ಲಿಸದಿದ್ದರೆ ನರಕವುಂಟಾಗುವುದು. ಸಲ್ಲಿಸಿದರೆ ದೇವತೆಗಳಿಗೆ ತೊಂದರೆಯಾಗುವುದು. ಹೀಗೆ ಎರಡು ವಿಧದಲ್ಲಿಯೂ ಧರ್ಮ ಹಾನಿಯು ಆಗುವುದು. ಹೀಗೆಂದು ಆಲೋಚಿಸಿದನು.

೩೭. ಎಲೈ ನಾರದ, ಹೀಗೆ ಆ ವಜ್ರಾಂಗನು ಉಭಯಸಂಕಟದಲ್ಲಿ ಸಿಕ್ಕಿ ಬಿದ್ದನು. ಆಗಲವನು ಪತ್ನಿಯ ಇಷ್ಟಾರ್ಥ, ದೇವತೆಗಳ ಸುಖ ಇವೆರಡರಲ್ಲಿ ಯಾವುದು ಪ್ರಬಲವಾದುದೆಂದು ಚರ್ಚಿಸಿ,

೩೮. ಶಿವಪ್ರೇರಣೆಯಿಂದ ಆ ವಜ್ರಾಂಗನು ಸ್ತ್ರೀಯ ಇಷ್ಟಾರ್ಥವನ್ನು ಪೂರೈಸುವುದೇ ಉತ್ತಮವಾದುದೆಂದು ತಿಳಿದನು. ಅದರಂತೆ ವಜ್ರಾಂಗಿಯ ಮಾತನ್ನು ಅಂಗೀಕರಿಸಿದನು.

೩೯. ಪತ್ನಿಯ ಇಷ್ಟಾರ್ಥವನ್ನು ಸಲ್ಲಿಸಲು ಆ ವಜ್ರಾಂಗನು ಜಿತೇಂದ್ರಿಯ ನಾಗಿ ನನ್ನನ್ನು ಕುರಿತು ಘೋರವಾದ ತಪವನ್ನು ಬಹಳಕಾಲ ಆಚರಿಸಿದನು.

೪೦. ಆ ವಜ್ರಾಂಗನ ಮಹಾತಪಸ್ಸಿಗೆ ಮೆಚ್ಚಿ ನಾನು ವರವನ್ನು ಕೊಡಲು ಅವನ ಬಳಿಗೆ ಹೋಗಿ ನಿನಗೆ ಬೇಕಾದ ವರವನ್ನು ಕೇಳು ಎಂದು ಅವನಿಗೆ ಹೇಳಲು,

ವಜ್ರಾಂಗಸ್ತು ತದಾ ಪ್ರೀತಂ ಮಾಂ ದೃಷ್ಟ್ವಾ ಖೇ ಸ್ಥಿತಂ ವಿಭುಂ ।
ಸುಪ್ರಣಮ್ಯ ಬಹು ಸ್ತುತ್ವಾ ವರಂ ವವ್ರೇ ಪ್ರಿಯಾಹಿತಂ ॥ ೪೧ ॥

॥ ವಜ್ರಾಂಗ ಉವಾಚ ॥

ಸುತಂ ದೇಹಿ ಸ್ವಮಾತುರ್ಮೇ ಮಹಾಹಿತಕರಂ ಪ್ರಭೋ ।
ಮಹಾಬಲಂ ಸುಪ್ರತಾಪಂ ಸುಸಮರ್ಥಂ ತಪೋನಿಧಿಂ ॥ ೪೨ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಚ ತದ್ವಾಕ್ಯಂ ತಥಾಸ್ತ್ವಿತ್ಯಬ್ರವಂ ಮುನೇ ।
ಅಯಾಂ ಸ್ವಧಾಮ ತದ್ದತ್ವಾ ವಿಮನಾಸ್ಸಂಸ್ಮರನ್ ಶಿವಂ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಚತುರ್ದಶೋಽಧ್ಯಾಯಃ

---

೪೧. ಆಗ ವಜ್ರಾಂಗನು ಆಕಾಶದಲ್ಲಿ ಪ್ರಸನ್ನನಾಗಿ ನಿಂತಿರುವ ನನ್ನನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ, ಬಹುವಾಗಿ ಸ್ತುತಿಸಿ ತನಗೆ ಬೇಕಾದ ವರವನ್ನು ಕೇಳಿದನು.

೪೨. ವಜ್ರಾಂಗನು ಹೇಳಿದನು:—ಓ ಸ್ವಾಮಿ, ನನಗೋರ್ವ ಸುಪುತ್ರ ನನ್ನು ಕರುಣಿಸು. ಅವನು ಮಹಾಬಲಿಷ್ಠನೂ, ಶೂರನೂ, ಸಮರ್ಥನೂ ತಪಸ್ವಿಯೂ ಆಗಿರಬೇಕು. ಮೇಲಾಗಿ ಅವನು ತನ್ನ ತಾಯಿಯು ಅಪೇಕ್ಷಿಸುವ ಮಹಾ ಕಾರ್ಯವನ್ನು ಸಾಧಿಸುವವನಾಗಬೇಕು ಎಂದನು.

೪೩. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ವಜ್ರಾಂಗನು ಹೇಳಿದ ಮಾತನ್ನು ಕೇಳಿ ಹಾಗೆಯೇ ಆಗಲೆಂದು ವರವನ್ನವನಿಗೆ ಕೊಟ್ಟೆನು. ಮುಂದೆ ದೇವತೆಗಳಿಗೆ ಅನಿಷ್ಟವಾದ ಆ ವರದಿಂದ ದುಃಖಿತನಾಗಿ ನಾನು ಶಿವನನ್ನು ಸ್ಮರಿಸುತ್ತಾ ಉದಾಸೀನತೆಯಿಂದ ನನ್ನ ಲೋಕಕ್ಕೆ ತೆರಳಿದೆನು

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಪಂಚದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಥ ಸಾ ಗರ್ಭಮಾಧತ್ತ ವರಾಂಗೀ ತತ್ಪ್ರಸಾದರಾತ್ ।
ಸ ವವರ್ಧಾಂಭ್ಯಂತರೇ ಹಿ ಬಹುವರ್ಷೈಃ ಸುತೇಜಸಾ ॥ ೧ ॥

ತತಸ್ಸಾ ಸಮಯೇ ಪೂರ್ಣೇ ವರಾಂಗೀ ಸುಷುವೇ ಸುತಂ ।
ಮಹಾಕಾಯಂ ಮಹಾವೀರ್ಯಂ ಪ್ರಜ್ವಲಂತಂ ದಿಶೋ ದಶ ॥ ೨ ॥

ತದೈವ ಚ ಮಹೋತ್ಪಾತಾ ಬಭೂವುರ್ದುಃಖಹೇತವಃ ।
ಜಾಯಮಾನೇ ಸುತೇ ತಸ್ಮಿನ್ ವರಾಂಗ್ಯಾಃ ಸುರದುಃಖದೇ ॥ ೩ ॥

---

## ಹದಿನೈದನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:— ಎಲೈ ನಾರದ, ಬಳಿಕ ವಜ್ರಾಂಗನ ಮಡದಿಯಾದ ವರಾಂಗಿಯು ಅವನ ಅನುಗ್ರಹದಿಂದ ಗರ್ಭವನ್ನು ಧರಿಸಿದಳು. ಆ ಗರ್ಭವು ವಜ್ರಾಂಗಿಯ ಉದರದಲ್ಲಿ ಬಹುಕಾಲ ತೇಜಸ್ಸಿನಿಂದ ಬೆಳೆಯಿತು.

೨. ಅನಂತರ ದಿನ ತುಂಬಲು, ಆ ವರಾಂಗಿಯು ಪುತ್ರನೋರ್ವನನ್ನು ಹಡೆದಳು. ಅವನು ದೊಡ್ಡ ದೇಹವುಳ್ಳವನಾಗಿಯೂ, ತುಂಬಾ ವೀರ್ಯವಂತನಾಗಿಯೂ, ತುಂಬಾ ತೇಜಸ್ವಿಯಾಗಿಯೂ ಇದ್ದನು.

೩. ಆ ಶಿಶುವು ಜನಿಸುತ್ತಿರುವಾಗಲೇ ದುಃಖವನ್ನು ಸೂಚಿಸುವಂತಹ ಅನೇಕ ಉತ್ಪಾತಗಳು ಆದುವು.

ದಿವಿ ಭುವ್ಯಂತರಿಕ್ಷೇ ಚ ಸರ್ವಲೋಕಭಯಂಕರಾಃ ।
ಅನರ್ಥಸೂಚಕಾಸ್ತಾತ ತ್ರಿವಿಧಾಸ್ತಾನ್ ಬ್ರವೀಮ್ಯಹಂ ॥ ೪ ॥

ಸೋಲ್ಕಾಶ್ಚಾಶನಯಃ ಪೇತುರ್ಮಹಾಶಬ್ದಾ ಭಯಂಕರಾಃ ।
ಉದಯಂ ಚಕ್ರುರುತ್ಪಾತಾಃ ಕೇತವೋ ದುಃಖದಾಯಕಾಃ ॥ ೫ ॥

ಚಚಾಲ ವಸುಧಾ ಸಾದ್ರಿರ್ಜಜ್ವಲುಸ್ಸಕಲಾ ದಿಶಃ ।
ಚುಕ್ಷುಭುಸ್ಸರಿತಸ್ಸರ್ವಾಃ ಸಾಗರಾಶ್ಚ ವಿಶೇಷತಃ ॥ ೬ ॥

ಹೂತ್ಕಾರಾನೀರಯರ್ನ್ ಘೋರಾನ್ ಖರಸ್ಪರ್ಶೋಽಮರುದ್ವವೌ ।
ಉನ್ಮೂಲಯನ್ಮಹಾವೃಕ್ಷಾನ್ ವಾತ್ಯಾನೀಕೋ ರಜೋಧ್ವಜಃ ॥ ೭ ॥

ಸರಾಹ್ವೋಃ ಸೂರ್ಯವಿಧ್ವೋಸ್ತು ಮುಹುಃ ಪರಿಘಯೋಽಭವನ್ ।
ಮಹಾಭಯಸ್ಯ ವಿಪ್ರೇಂದ್ರ ಸೂಚಕಾಸ್ಸುಖಹಾರಕಾಃ ॥ ೮ ॥

---

೪. ಸ್ವರ್ಗ, ಭೂಮಿ, ಅಂತರಿಕ್ಷ ಈ ಮೂರುಲೋಕಗಳಲ್ಲೂ ಆಗ ತುಂಬಾ ಭಯಂಕರಗಳಾದ ಮತ್ತು ಅನಿಷ್ಟವನ್ನು ಸೂಚಿಸುವಂತಹ ಉತ್ಪಾತಗಳಾದುವು. ಎಲೈ ನಾರದ, ಅವುಗಳನ್ನು ನಿನಗೆ ವರ್ಣಿಸಿ ಹೇಳುವೆನು.

೫-೬. ಬೆಂಕಿಕೆಂಡಗಳ ಸುರಿಮಳೆಯಾಯಿತು. ಸಿಡಿಲು ಮಹಾಶಬ್ದದೊಡನೆ ಬಡಿಯಿತು. ಅನಿಷ್ಟವಾದ ಅನೇಕ ಉತ್ಪಾತಗಳು ಉದಯಿಸಿದುವು. ಭೂಕಂಪ ವಾಯಿತು, ಪರ್ವತಗಳು ನಡುಗಿದುವು, ದಿಕ್ಕುಗಳು ಉರಿಯತೊಡಗಿದುವು. ನದಿ ಗಳು, ಸಮುದ್ರಗಳು ತುಂಬಾ ಕ್ಷೋಭೆಗೊಂಡುವು.

೭. ಭಯಂಕರವಾದ ಘೂತ್ಕಾರಗಳು ಕೇಳಿಬಂದುವು. ಬಿರುಗಾಳಿಯು ಜೋರಾಗಿ ಬೀಸಿತು. ಧೂಳನ್ನು ಭಯಂಕರವಾಗೆಬ್ಬಿಸಿ ದೊಡ್ಡದೊಡ್ಡ ಮರಗಳನ್ನು ಕಿತ್ತುಹಾಕಿತು.

೮. ಸೂರ್ಯಚಂದ್ರರಿಗೆ ಗ್ರಹಣಹಿಡಿದುದಲ್ಲದೇ ಸುತ್ತಲೂ ಪರಿಧಿ (ಕೊಡೆ) ಗಳು ಕಾಣಿಸಿದುವು. ಹೀಗೆ ಮಹಾ ಅನಿಷ್ಟಗಳಾದ ಉತ್ಪಾತಗಳಾದುವು.

ಮಹೀಧ್ರವಿವರೇಭ್ಯಶ್ಚ ನಿರ್ಘಾತಾ ಭಯಸೂಚಕಾಃ ।
ರಥನಿರ್ಹ್ರಾದತುಲ್ಯಾಶ್ಚ ಜಜ್ಞಿರೇऽವಸರೇ ತತಃ ॥ ೯ ॥

ಸೃಗಾಲೋಲೂಕಟಂಕಾರೈರ್ವಮಂತ್ಯೋ ಮುಖತೋऽನಲಂ ।
ಅಂತರ್ಗ್ರಾಮೇಷು ವಿಕಟಂ ಪ್ರಣೇದುರಶಿವಾಃ ಶಿವಾಃ ॥ ೧೦ ॥

ಯತಸ್ತತೋ ಗ್ರಾಮಸಿಹ್ಮಾ ಉನ್ನಮಯ್ಯ ಶಿರೋಧರಾಂ ।
ಸಂಗೀತವದ್ರೋದನವದ್ವ್ಯಮುಂಚನ್ ವಿವಿಧಾನ್ ರವಾನ್ ॥ ೧೧ ॥

ಖಾರ್ಕಾರರಭಸಾ ಮತ್ತಾಃ ಖುರೈರ್ಘ್ನಂತೋ ರಸಾಂ ಖರಾಃ ।
ವರೂಥಶಸ್ತದಾ ತಾತ ಪರ್ಯಧಾವನ್ನಿತಸ್ತತಃ ॥ ೧೨ ॥

ಖಗಾ ಉದಪತನ್ನೀಡಾದ್ರಾಸಭತ್ರಸ್ತಮಾನಸಾಃ ।
ಕ್ರೋಶಂತೋ ವ್ಯಗ್ರಚಿತ್ತಾಶ್ಚ ಸ್ಥಿತಿಮಾಪುರ್ನ ಕುತ್ರಚಿತ್ ॥ ೧೩ ॥

ಶಕೃನ್ಮೂತ್ರಮುಕಾಶ್ಚಾಶ್ಚ ಗೋಷ್ಠೇऽರಣ್ಯೇ ಭಯಾಕುಲಾಃ ।
ಬಭ್ರಮುಃ ಸ್ಥಿತಿಮಾಪುರ್ನೋ ಪಶವಸ್ತಾಡಿತಾ ಇವ ॥ ೧೪ ॥

---

೯. ಪರ್ವತಕಂಧರಗಳಿಂದ ಭಯವನ್ನು ಸೂಚಿಸುವಂತಹ ಶಬ್ದಗಳು ಉಂಟಾದುವು. ಅವು ರಥನೇಮಿಶಬ್ದದಂತೆ ಭಯಂಕರವಾಗಿದ್ದುವು.

೧೦. ನರಿಗಳು ಗೂಬೆ ಮುಂತಾದುವುಗಳು ಮುಖದಿಂದ ಬೆಂಕಿಯನ್ನುಗುಳಿದುವು. ಗ್ರಾಮಗಳ ಮಧ್ಯದಲ್ಲಿ ನಿಂತು ನರಿಗಳು ಅಮಂಗಳವಾಗಿ ಕೂಗಿದುವು.

೧೧. ಶುನಕ (ನಾಯಿ) ಗಳು ಅಲ್ಲಲ್ಲಿ ತಲೆಯನ್ನೆತ್ತಿಕೊಂಡು ಸಂಗೀತದಂತೆಯೂ, ಅಳುವಂತೆಯೂ ಬೊಗಳಿದುವು.

೧೨. ಕತ್ತೆಗಳು ಗುಂಪುಗುಂಪಾಗಿ ಕೂಡಿ ಅಪಸ್ವರದಿಂದ ಕೂಗುತ್ತಲೂ ಭೂಮಿಯನ್ನು ಗೊರಸುಗಳಿಂದ ಕುಟ್ಟುತ್ತಲೂ ಅಲ್ಲಲ್ಲಿ ಸಂಚರಿಸಿದುವು.

೧೩. ಕತ್ತೆಗಳ ಭಯಂಕರ ಕೂಗುಗಳನ್ನು ಕೇಳಿ ಪಕ್ಷಿಗಳು ಹೆದರಿ ಗೂಡುಗಳಿಂದ ಹಾರಿ ಚಿಲಿಗುಟ್ಟುತ್ತಾ ಒಂದೆಡೆಯೂ ಕುಳಿತುಕೊಳ್ಳದೆ ಹಾರತೊಡಗಿದುವು.

೧೪. ಪಶುಗಳೂ ಸಹ ಹುಂಬಾ ಭಯಗೊಂಡು ಗಾಬರಿಯಿಂದ ಒಂದೆಡೆ ನಿಲ್ಲದೆ, ಸಗಣಿ ಮೂತ್ರಗಳನ್ನು ವಿಸರ್ಜಿಸುತ್ತಾ ಸಂಚರಿಸಿದುವು.

ಗಾವೋಽತ್ರಸನ್ನಸೃಗ್ದೋಹಾ ಬಾಷ್ಪನೇತ್ರಾ ಭಯಾಕುಲಾಃ ।
ತೋಯದಾ ಅಭವಂಸ್ತತ್ರ ಭಯದಾಃ ಪೂಯವರ್ಷಿಣಃ ॥ ೧೫ ॥

ವ್ಯರುದನ್ ಪ್ರತಿಮಾಸ್ತತ್ರ ದೇವಾನಾಮುತ್ಪತಿಷ್ಣವಃ ।
ವಿನಾನಿಲಂ ದ್ರುಮಾಃ ಪೇತುರ್ಗ್ರಹಯುದ್ಧಂ ಬಭೂವ ಖೇ ॥ ೧೬ ॥

ಇತ್ಯಾದಿಕಾ ಬಹೂತ್ಪಾತಾ ಜಜ್ಞಿರೇ ಮುನಿಸತ್ತಮ ।
ಅಜ್ಞಾನಿನೋ ಜನಾಸ್ತತ್ರ ಮೇನಿರೇ ವಿಶ್ವಸಂಪ್ಲವಂ ॥ ೧೭ ॥

ಅಥ ಪ್ರಜಾಪತಿರ್ನಾಮಾಕರೋತ್ತಸ್ಯಾಸುರಸ್ಯ ವೈ ।
ತಾರಕೇತಿ ವಿಚಾರ್ಯೈವ ಕಶ್ಯಪೋ ಹಿ ಮಹೌಜಸಃ ॥ ೧೮ ॥

ಮಹಾವೀರಸ್ಸ ಸಹಸಾ ವ್ಯಜ್ಯಮಾನಾತ್ಮಪೌರುಷಃ ।
ವವೃಧೇಽತ್ಯಶ್ಮಸಾರೇಣ ಕಾಯೇನಾದ್ರಿಪತಿರ್ಯಥಾ ॥ ೧೯ ॥

---

೧೫. ಹಸುಗಳು ಭಯಗೊಂಡು ಕಣ್ಣೀರನ್ನು ಸುರಿಸಿದುವು. ಹಾಲುಬದಲಾಗಿ ರಕ್ತವನ್ನು ಕರೆದುವು. ಮೇಘಗಗಳು ಭಯವಾಗುವಂತೆ ರಕ್ತವನ್ನು ಸುರಿಸಿದುವು.

೧೬. ದೇವತಾವಿಗ್ರಹಗಳು ಅಲ್ಲಾಡಿದವು, ಅಳುವಂತೆ ಶಬ್ದಮಾಡಿದುವು. ಗಾಳಿಯಿಲ್ಲದೆಯೇ ಮರಗಳು ಬಿದ್ದುವು. ಆಕಾಶದಲ್ಲಿ ಗ್ರಹಗಳಿಗೆ ಯುದ್ಧವಾಯಿತು.

೧೭. ಎಲೈ ನಾರದ, ಹೀಗೆ ಅನೇಕ ಉತ್ಪಾತಗಳು ಆದುವು. ಇದನ್ನು ನೋಡಿ ತಿಳಿವಳಿಕೆಯಿಲ್ಲದ ಜನಗಳು ಪ್ರಪಂಚಪ್ರಳಯವಾಗುವುದೆಂದು ತಿಳಿದರು.

೧೮. ಆಮೇಲೆ ಕಶ್ಯಪಬ್ರಹ್ಮನು, ಆ ಅಸುರನ ಯೋಗ್ಯತೆಯನ್ನು ವಿಮರ್ಶಿಸಿ ಅವನಿಗೆ ತಾರಕನೆಂದು ಹೆಸರಿಟ್ಟನು.

೧೯. ಮಹಾವೀರನಾದ ಆ ತಾರಕನು ಆಗಲೇ ಉದಯಿಸುತ್ತಲಿರುವ ಪೌರುಷವುಳ್ಳವನಾಗಿ ವಜ್ರದಂತೆ ಬಲಿಷ್ಠವಾದ ಶರೀರದಿಂದ ಬೆಳೆಯತೊಡಗಿದನು.

ಅಥೋ ಸ ತಾರಕೋ ದೈತ್ಯೋ ಮಹಾಬಲಪರಾಕ್ರಮಃ ।
ತಪಃ ಕರ್ತುಂ ಜನನ್ಯಾಶ್ಚಾಜ್ಞಾಂ ಯಯಾಚೇ ಮಹಾಮನಾಃ ॥ ೨೦ ॥

ಪ್ರಾಪ್ತಾಜ್ಞಃ ಸ ಮಹಾಮಾಯೀ ಮಾಯಿನಾಮಪಿ ಮೋಹಕಃ ।
ಸರ್ವದೇವಜಯಂ ಕರ್ತುಂ ತಪೋಽರ್ಥಂ ಮನ ಆದಧೇ ॥ ೨೧ ॥

ಮಧೋರ್ವನಮುಪಾಗಮ್ಯ ಗುರ್ವಾಜ್ಞಾಪ್ರತಿಪಾಲಕಃ ।
ವಿಧಿಮುದ್ದಿಶ್ಯ ವಿಧಿವತ್ತಪಸ್ತೇಪೇ ಸುದಾರುಣಂ ॥ ೨೨ ॥

ಊರ್ಧ್ವಬಾಹುಶ್ಚೈಕಪಾದೋ ರವಿಂ ಪಶ್ಯನ್ ಸ ಚಕ್ಷುಷಾ ।
ಶತವರ್ಷಂ ತಪಶ್ಚಕ್ರೇ ದೃಢಚಿತ್ತೋ ದೃಢವ್ರತಃ ॥ ೨೩ ॥

ಅಂಗುಷ್ಠೇನ ಭುವಂ ಸ್ಪೃಷ್ಟ್ವಾ ಶತವರ್ಷಂ ಚ ತಾದೃಶಃ ।
ತೇಪೇ ತಪೋ ದೃಢಾತ್ಮಾ ಸ ತಾರಕೋಽಸುರರಾಟ್ಪ್ರಭುಃ ॥ ೨೪ ॥

---

೨೦. ಬಳಿಕ ಮಹಾ ಪರಾಕ್ರಮಿಯಾದ ಆ ತಾರಕಾಸುರನು ತಾನು ತಪಸ್ಸನ್ನಾಚರಿಸಲೋಸುಗ ತಾಯಿಯ ಅನುಮತಿಯನ್ನು ಬೇಡಿದನು.

೨೧. ಮಾತೆಯ ಅನುಮತಿಯನ್ನು ಪಡೆದು ಮಹಾಮಾಯಾವಿಯಾದ ತಾರಕನು ದೇವತೆಗಳೆಲ್ಲರನ್ನೂ ಜಯಿಸಲೋಸುಗ ತಪವನ್ನಾಚರಿಸಲು ಮನಸ್ಸು ಮಾಡಿದನು.

೨೨. ಮುಂದೆ ಆ ಅಸುರನು ತಂದೆಯ ಅನುಮತಿಯನ್ನೂ ಪಡೆದು ಮಧುವನವೆಂಬ ಅರಣ್ಯಕ್ಕೆ ಬಂದು ಅಲ್ಲಿ ಬ್ರಹ್ಮನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿದನು.

೨೩. ದೃಢವಾದ ನಿಯಮವುಳ್ಳವನಾಗಿಯೂ ಜಿತೇಂದ್ರಿಯನಾಗಿಯೂ ಇದ್ದ ಆ ತಾರಕಾಸುರನು ಬಾಹುಗಳನ್ನು ಮೇಲಕ್ಕೆತ್ತಿಕೊಂಡು ಒಂದೇ ಕಾಲಿನಲ್ಲಿ ನಿಂತುಕೊಂಡು ಸೂರ್ಯನನ್ನು ನೆಟ್ಟದೃಷ್ಟಿಯಿಂದ ನೋಡುತ್ತಾ ನೂರುವರ್ಷಗಳವರೆಗೆ ತಪವನ್ನಾಚರಿಸಿದನು.

೨೪. ಅಂಗುಷ್ಠದಿಂದಲೇ ಭೂಮಿಯಲ್ಲಿ ನಿಂತು ನೂರುವರ್ಷಗಳವರೆಗೆ ಆ ದೃಢಮನಸ್ಸುಳ್ಳ ದೈತ್ಯರಾಜನು ತಪವನ್ನಾಚರಿಸಿದನು.

ಶತವರ್ಷಂ ಜಲಂ ಪ್ರಾಶ್ಯ ಶತವರ್ಷಂ ಚ ವಾಯುಭುಕ್ ।
ಶತವರ್ಷಂ ಜಲೇ ತಿಷ್ಠನ್ ಶತಂ ಚ ಸ್ಥಂಡಿಲೇಽತಪತ್ ॥ ೨೫ ॥

ಶತವರ್ಷಂ ತಥಾ ಚಾಗ್ನೌ ಶತವರ್ಷಮಧೋಮುಖಃ ।
ಶತವರ್ಷಂ ತು ಹಸ್ತಸ್ಯ ತಲೇನ ಚ ಭುವಂ ಸ್ಥಿತಃ ॥ ೨೬ ॥

ಶತವರ್ಷಂ ತು ವೃಕ್ಷಸ್ಯ ಶಾಖಾಮಾಲಂಬ್ಯ ವೈ ಮುನೇ ।
ಪದಾಭ್ಯಾಂ ಶುಚಿಧೂಮಂ ಹಿ ಪಿಬಂಶ್ಚಾಧೋಮುಖಸ್ತಥಾ ॥ ೨೭ ॥

ಏವಂ ಕಷ್ಟತರಂ ತೇಪೇ ಸುತಪಸ್ಸ ತು ದೈತ್ಯರಾಟ್ ।
ಕಾಮಮುದ್ದಿಶ್ಯ ವಿಧಿವಚ್ಛೃಣ್ವತಾಮಪಿ ದುಸ್ಸಹಂ ॥ ೨೮ ॥

ತತ್ರೈವಂ ತಪತಸ್ತಸ್ಯ ಮಹತ್ತೇಜೋ ವಿನಿಃಸೃತಂ ।
ಶಿರಸಸ್ಸರ್ವಸಂಸರ್ಪಿ ಮಹೋಪದ್ರವಕೃನ್ಮುನೇ ॥ ೨೯ ॥

---

೨೫. ನೂರುವರ್ಷಗಳು ನೀರನ್ನು ಮಾತ್ರ ಸೇವಿಸುತ್ತಲೂ ನೂರುವರ್ಷ ವಾಯುವನ್ನು ಮಾತ್ರ ಸೇವಿಸುತ್ತಲೂ ತಪವನ್ನಾಚರಿಸಿದನು. ಮತ್ತು ನೂರುವರ್ಷ ನೀರಿನಲ್ಲಿ ನಿಂತುಕೊಂಡೂ, ನೂರುವರ್ಷ ಸ್ಥಂಡಿಲದಲ್ಲಿದ್ದೂ ತಪವನ್ನಾಚರಿಸಿದನು.

೨೬. ಅಗ್ನಿಯ ಮಧ್ಯದಲ್ಲಿ ನಿಂತು ನೂರುವರ್ಷಗಳು ಆ ತಾರಕನು ತಪಸ್ಸನ್ನು ಮಾಡಿದನು. ಕೇವಲ ಕೈಯ್ಯೊಂದರಿಂದಲೇ ಭೂಮಿಯಲ್ಲಿ ನಿಂತು ನೂರು ವರ್ಷ ತಪಸ್ಸನ್ನಾಚರಿಸಿದನು.

೨೭. ಕೆಳಗೆ ಬೆಂಕಿಯನ್ನು ಹಾಕಿ ಕಾಲುಗಳಿಂದ ಮರದ ಕೊಂಬೆಯನ್ನವಲಂಬಿಸಿ ತಲೆಕೆಳಗಾಗಿ ಜೋತುಬಿದ್ದು ಆ ಬೆಂಕಿಯು ಪವಿತ್ರವಾದ ಧೂಮವನ್ನು ಕುಡಿಯುತ್ತಾ ನೂರುವರ್ಷಗಳವರೆಗೆ ತಪಸ್ಸು ಮಾಡಿದನು.

೨೮. ಆ ತಾರಕಾಸುರನು ತನ್ನ ಇಷ್ಟಾರ್ಥಸಿದ್ಧಿಗಾಗಿ ಕೇಳುವುದಕ್ಕೂ ಅಸಾಧ್ಯವಾದಂತಹ ತಪಸ್ಸನ್ನು ವಿಧಿವತ್ತಾಗಿ ಆಚರಿಸಿದನು.

೨೯. ಹೀಗೆ ಆ ದೈತ್ಯನು ತಪಸ್ಸನ್ನಾಚರಿಸುತ್ತಲಿರಲು ಅವನ ಶಿರಸ್ಸಿನಿಂದ ಪ್ರಕಾಶಮಾನವಾದ ಮಹಾ ತೇಜಸ್ಸು ಹೊರಟಿತು. ಅದು ತುಂಬಾ ದೊಡ್ಡದಾಗಿದ್ದು ಮಹಾ ಉಪದ್ರವವನ್ನುಂಟುಮಾಡುವುದಾಗಿತ್ತು.

ತೇನೈವ ದೇವಲೋಕಾಸ್ತೇ ದಗ್ಧಪ್ರಾಯಾ ಬಭೂವಿರೇ ।
ಅಭಿತೋ ದುಃಖಮಾಪನ್ನಾಃ ಸರ್ವೇ ದೇವರ್ಷಯೋ ಮುನೇ ॥ ೩೦ ॥

ಇಂದ್ರಶ್ಚ ಭಯಮಾಪೇದೇಽಧಿಕಂ ದೇವೇಶ್ವರಸ್ತದಾ ।
ತಪಸ್ಯತ್ಯದ್ಯ ಕಶ್ಚಿಚ್ಚೈ ಮತ್ಪದಂ ಧರ್ಷಯಿಷ್ಯತಿ ॥ ೩೧ ॥

ಅಖಂಡಂ ಚೈವ ಬ್ರಹ್ಮಾಂಡಂ ಸಂಹರಿಷ್ಯತ್ಯಯಂ ಪ್ರಭುಃ ।
ಇತಿ ಸಂಶಯಮಾಪನ್ನಾಸ್ಸರ್ವೇ ದೇವರ್ಷಯೋ ಮುನೇ ॥ ೩೨ ॥

ತತಸ್ಸರ್ವೇ ಸುಸಮ್ಮಂತ್ರ್ಯ ಮಿಥಸ್ತೇ ನಿರ್ಜರರ್ಷಯಃ ।
ಮಲ್ಲೋಕಮಗಮನ್ ಭೀತಾ ದೀನಾ ಮಾಂ ಸಮುಪಸ್ಥಿತಾಃ ॥ ೩೩ ॥

ಮಾಂ ಪ್ರಣಮ್ಯ ಸುಸಂಸ್ತೂಯ ಸರ್ವೇ ತೇ ಕ್ಲಿಷ್ಟಚೇತಸಃ ।
ಕೃತಸ್ವಂಜಲಯೋ ಮಹ್ಯಂ ವೃತ್ತಂ ಸರ್ವಂ ನ್ಯವೇದಯನ್ ॥ ೩೪ ॥

---

೩೦. ಎಲೈ ನಾರದ, ಆ ತೇಜಸ್ಸಿನಿಂದಲೇ ದೇವಲೋಕಗಳು ಭಸ್ಮವಾದಂತೆ ಆದುವು. ಅದರಿಂದ ದೇವತೆಗಳೂ ದೇವಮುನಿಗಳೂ ಸಹ ತುಂಬಾ ದುಃಖಗೊಂಡರು.

೩೧-೩೨. ಇಂದ್ರನೂ ತುಂಬಾ ಭಯಗೊಂಡನು. ಇವನು (ತಾರಕನು) ತಪವನ್ನಾಚರಿಸುತ್ತಲಿರುವನು. ನನ್ನ ಇಂದ್ರಪದವನ್ನು ಕಸಿದುಕೊಳ್ಳುವನು. ಎಂದು ಚಿಂತಿಸಿದನು. ಅಕಾಲದಲ್ಲಿ ಈ ಅಸುರನು ಬ್ರಹ್ಮಾಂಡವನ್ನು ಸಂಹಾರ ಮಾಡುವನು ಎಂದು ದೇವರ್ಷಿಗಳು ಚಿಂತಿಸಿದರು.

೩೩. ಬಳಿಕ ಭಯಗೊಂಡವರೂ, ದೀನರೂ, ಆದ ದೇವತೆಗಳು ಮತ್ತು ದೇವರ್ಷಿಗಳು, ತಮ್ಮೊಳಗೆ ಆಲೋಚಿಸಿಕೊಂಡು ನನ್ನ ಲೋಕಕ್ಕೆ (ಬ್ರಹ್ಮಲೋಕಕ್ಕೆ) ಬಂದು,

೩೪. ಅವರೆಲ್ಲರೂ ನನಗೆ ನಮಸ್ಕರಿಸಿ ಅಂಜಲಿಯನ್ನು ಧರಿಸಿ ಸ್ತೋತ್ರ ಮಾಡಿ ನಡೆದಿರುವ ವೃತ್ತಾಂತವೆಲ್ಲವನ್ನೂ ನನಗೆ ನಿವೇದಿಸಿದರು.

ಅಹಂ ಸರ್ವಂ ಸುನಿಶ್ಚಿತ್ಯ ಕಾರಣಂ ತಸ್ಯ ಸದ್ಧಿಯಾ ।
ವರಂ ದಾತುಂ ಗತಸ್ತತ್ರ ಯತ್ರ ತಪ್ಯತಿ ಸೋಽಸುರಃ ॥ ೩೫ ॥

ಅವೋಚಂ ವಚನಂ ತಂ ವೈ ವರಂ ಬ್ರೂಹೀತ್ಯಹಂ ಮುನೇ ।
ತಪಸ್ತಪ್ತಂ ತ್ವಯಾ ತೀವ್ರಂ ನಾದೇಯಂ ವಿದ್ಯತೇ ತವ ॥ ೩೬ ॥

ಇತ್ಯೇವಂ ಮದ್ವಚಃ ಶ್ರುತ್ವಾ ತಾರಕಸ್ಯ ಮಹಾಸುರಃ ।
ಮಾಂ ಪ್ರಣಮ್ಯ ಸುಸಂಸ್ತೂಯ ವರಂ ವವ್ರೇಽತಿದಾರುಣಂ ॥ ೩೭ ॥

॥ ತಾರಕ ಉವಾಚ ॥

ತ್ವಯಿ ಪ್ರಸನ್ನೇ ವರದೇ ಕಿಮಸಾಧ್ಯಂ ಭವೇನ್ಮಮ ।
ಅತೋ ಯಾಚೇ ವರಂ ತ್ವತ್ತಃ ಶೃಣು ತನ್ಮೇ ಪಿತಾಮಹ ॥ ೩೮ ॥

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರೋ ಮಮ ।
ದೇಯಂ ವರದ್ವಯಂ ಮಹ್ಯಂ ಕೃಪಾಂ ಕೃತ್ವಾ ಮಮೋಪರಿ ॥ ೩೯ ॥

---

೩೫. ಆಗ ನಾನು (ಬ್ರಹ್ಮನು) ದೇವತೆಗಳು ನಿವೇದಿಸಿದ ಲೋಕೋಪದ್ರವಕ್ಕೆ ಕಾರಣ (ತಾರಕನ ತಪಸ್ಸು) ವನ್ನು ತಿಳಿದವನಾಗಿ ಆ ತಾರಕಾಸುರನು ತಪಸ್ಸುಮಾಡುತ್ತಿರುವಲ್ಲಿಗೆ ವರವನ್ನು ಕೊಡಲು ತೆರಳಿದೆನು.

೩೬. ಎಲೈ ನಾರದ, ಅನಂತರ ನಾನು ಆ ಅಸುರನನ್ನು ಕುರಿತು ಎಲೈ ಅಸುರನೇ, ನೀನು ಘೋರವಾದ ತಪವನ್ನಾಚರಿಸಿರುವೆ. ನಿನ್ನ ತಪಸ್ಸಿಗೆ ಕೊಡಬಾರದಂತಹ ವರನಾವುದೂ ಇಲ್ಲ. ಬೇಕಾದವರವನ್ನು ಕೇಳಿಕೊ ಎಂದು ಹೇಳಿದೆನು.

೩೭. ನನ್ನ ಮಾತನ್ನು ಕೇಳಿ ಆ ತಾರಕಾಸುರನು ಭಕ್ತಿಯಿಂದ ನನ್ನನ್ನು ನಮಸ್ಕರಿಸಿ ಸ್ತುತಿಸಿ ಭಯಂಕರವಾದ ವರವೊಂದನ್ನು ಹೀಗೆ ಕೇಳಿಕೊಂಡನು.

೩೮. ತಾರಕನು ಹೇಳಿದನು:—ಓ ಬ್ರಹ್ಮದೇವ, ನೀನು ಪ್ರಸನ್ನನಾದಮೇಲೆ ನನಗೆ ಅಸಾಧ್ಯವಾವುದೂ ಇಲ್ಲ. ಆದುದರಿಂದ ಓ ಪಿತಾಮಹ, ನಿನ್ನಿಂದ ಈ ವರವನ್ನು ಅಪೇಕ್ಷಿಸುವೆನು ಕೇಳು.

೩೯. ಓ ದೇವೇಶ ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ನಾನು ಕೇಳುವ ಈ ವರಗಳೆರಡನ್ನು ದಯಮಾಡಿ ಕೊಡು.

ತ್ವಯಾ ಚ ನಿರ್ಮಿತೇ ಲೋಕೇ ಸಕಲೇsಸ್ಮಿನ್ ಮಹಾಪ್ರಭೋ ।
ಮತ್ತೋಬಲ್ಯೋ ಬಲವಾನ್ನೂನಂ ನ ಭವೇತ್ಕೋsಪಿ ವೈ ಪುಮಾನ್ ॥ ೪೦ ॥

ಶಿವವೀರ್ಯಸಮುತ್ಪನ್ನಃ ಪುತ್ರಸ್ಸೇನಾಪತಿರ್ಯದಾ ।
ಭೂತ್ವಾ ಶಸ್ತ್ರಂ ಕ್ಷಿಪೇನ್ಮಹ್ಯಂ ತದಾ ಮೇ ಮರಣಂ ಭವೇತ್ ॥ ೪೧ ॥

ಇತ್ಯುಕ್ತೋsಥ ತದಾ ತೇನ ದೈತ್ಯೇನಾಹಂ ಮುನೀಶ್ವರ ।
ವರಂ ಚ ತಾದೃಶಂ ದತ್ವಾ ಸ್ವಲೋಕಮಗಮದ್ದ್ರುತಂ ॥ ೪೨ ॥

ದೈತ್ಯೋsಪಿ ಸ ವರಂ ಲಬ್ಧ್ವಾ ಮನಸೇಪ್ಸಿತಮುತ್ತಮಂ ।
ಸುಪ್ರಸನ್ನತರೋ ಭೂತ್ವಾ ಶೋಣಿತಾಖ್ಯಪುರಂ ಗತಃ ॥ ೪೩ ॥

ಅಭಿಷಿಕ್ತಸ್ತದಾ ರಾಜ್ಯೇ ತ್ರೈಲೋಕ್ಯಸ್ಯಾಸುರೈಸ್ಸಹ ।
ಶುಕ್ರೇಣ ದೈತ್ಯಗುರುಣಾsಜ್ಞಯಾ ಮೇ ಮಹಾಸುರಃ ॥ ೪೪ ॥

---

೪೦. ಓ ಮಹಾಪ್ರಭು, ನೀನು ನಿರ್ಮಿಸಿದ ಈ ಜಗತ್ತಿನಲ್ಲಿ ನನಗಿಂತಲೂ ಬಲಿಷ್ಠನಾಗಿ ಯಾವ ಪುರುಷನೂ ಇರಕೂಡದು.

೪೧. ಶಿವನ ವೀರ್ಯದಿಂದ ಜನಿಸಿದ ಕುಮಾರನು ಸೇನಾಪತಿಯಾಗಿ ನನ್ನ ಮೇಲೆ ಅಸ್ತ್ರವನ್ನು ಪ್ರಯೋಗಿಸಿದರೆ ಆಗ ಮಾತ್ರ ನನಗೆ ಮರಣವಾಗಬೇಕು.

೪೨. ಹೀಗೆ ತಾರಕಾಸುರನು ಹೇಳಲು ನಾನು ಅದರಂತೆಯೇ ವರಗಳೆರಡನ್ನು ಅವನಿಗೆ ಕೊಟ್ಟು ನನ್ನ ಸ್ಥಾನಕ್ಕೆ ತೆರಳಿದೆನು.

೪೩. ಬಳಿಕ ಆ ದೈತ್ಯನೂ ಸಹ ನನ್ನಿಂದ ಬೇಕಾದ ವರಗಳನ್ನು ಪಡೆದು ತುಂಬಾ ಸಂತೋಷಗೊಂಡು ಶೋಣಿತಪುರವೆಂಬ ತನ್ನ ರಾಜಧಾನಿಗೆ ತೆರಳಿದನು.

೪೪. ಅನಂತರ ದೈತ್ಯಗುರುವಾದ ಶುಕ್ರಾಚಾರ್ಯನು ನನ್ನ ಆಜ್ಞೆಯಂತೆ ತಾರಕಾಸುರನನ್ನು ದೈತ್ಯರಿಗೆಲ್ಲಾ ಮೂರುಲೋಕಕ್ಕೂ ಚಕ್ರವರ್ತಿಯಾಗಿ ರಾಜ್ಯದಲ್ಲಿ ಅಭಿಷೇಕಮಾಡಿದನು.

ತತಸ್ತು ಸ ಮಹಾದೈತ್ಯೋಽಭವತ್ತ್ರೈಲೋಕ್ಯನಾಯಕಃ ।
ಸ್ವಾಜ್ಞಾಂ ಪ್ರವರ್ತಯಾಮಾಸ ಪೀಡಯನ್ ಸಚರಾಚರಂ ॥ ೪೫ ॥

ರಾಜ್ಯಂ ಚಕಾರ ವಿಧಿವತ್ತ್ರಿಲೋಕಸ್ಯ ಸ ತಾರಕಃ ।
ಪ್ರಜಾಶ್ಚ ಪಾಲಯಾಮಾಸ ಪೀಡಯನ್ ನಿರ್ಜರಾದಿಕಾನ್ ॥ ೪೬ ॥

ತತಸ್ಸ ತಾರಕೋ ದೈತ್ಯಸ್ತೇಷಾಂ ರತ್ನಾನ್ಯುಪಾದದೇ ।
ಇಂದ್ರಾದಿಲೋಕಪಾಲಾನಾಂ ಸ್ವತೋ ದತ್ತಾನಿ ತದ್ಭಯಾತ್ ॥ ೪೭ ॥

ಇಂದ್ರೇಣೈರಾವತಸ್ತಸ್ಯ ಭಯಾತ್ತಸ್ಮೈ ಸಮರ್ಪಿತಃ ।
ಕುಬೇರೇಣ ತದಾ ದತ್ತಾ ನಿಧಯೋ ನವಸಂಖ್ಯಕಾಃ ॥ ೪೮ ॥

ವರುಣೇನ ಹಯಾಶ್ಶುಭ್ರಾ ಋಷಿಭಿಃ ಕಾಮಧುಕ್ತಥಾ ।
ಸೂರ್ಯೇಣೋಚ್ಚೈಶ್ಶ್ರವಾ ದಿವ್ಯೋ ಭಯಾತ್ತಸ್ಮೈ ಸಮರ್ಪಿತಃ ॥ ೪೯ ॥

---

೪೫. ಬಳಿಕ ಆ ಮಹಾಸುರನು ಮೂರುಲೋಕಗಳಿಗೊಡೆಯನಾಗಿ ತನ್ನ ಆಜ್ಞೆಯನ್ನು ಹೊರಡಿಸಿ ಜನಗಳನ್ನು ಪೀಡಿಸತೊಡಗಿದನು.

೪೬. ಆ ತಾರಕಾಸುರನು ಮೂರುಲೋಕಗಳ ರಾಜ್ಯಭಾರವನ್ನೂ ವಿಧಿವತ್ತಾಗಿ ಮಾಡತೊಡಗಿದನು. ದೇವತೆಗಳು ಮುಂತಾದವರನ್ನು ಪೀಡಿಸುತ್ತಾ ಪ್ರಜೆಗಳನ್ನು ಪಾಲಿಸಿದನು.

೪೭. ಆ ತಾರಕನು ಇಂದ್ರ ಮೊದಲಾದ ಲೋಕಪಾಲರನ್ನು ಹೆದರಿಸಿ ಅವರಿಂದ ರತ್ನಗಳನ್ನು ಕಿತ್ತುಕೊಂಡನು.

೪೮. ಇಂದ್ರನು ಹೆದರಿ ಆ ತಾರಕನಿಗೆ ತನ್ನ ಐರಾವತವನ್ನು ಕೊಟ್ಟನು. ಕುಬೇರನು ತನ್ನ ನವನಿಧಿಗಳನ್ನು ಕೊಟ್ಟನು.

೪೯. ವರುಣನು ಉತ್ತಮವಾದ ಬಿಳಿಯ ಕುದುರೆಗಳನ್ನು ಭಯದಿಂದ ತಾರಕಾಸುರನಿಗೆ ಕೊಟ್ಟನು. ಋಷಿಗಳು ಕಾಮಧೇನುವನ್ನು ಕೊಟ್ಟರು. ಸೂರ್ಯನು ಉಚ್ಚೈಶ್ರವಸ್ಸೆಂಬ ದಿವ್ಯಾಶ್ವವನ್ನು ಕೊಟ್ಟನು.

ಯತ್ರ ಯತ್ರ ಶುಭಂ ವಸ್ತು ದೃಷ್ಟಂ ತೇನಾಸುರೇಣ ಹಿ ।
ತತ್ತದ್ಗೃಹೀತಂ ತಸ್ಮಾನ್ನಿಸ್ಸಾರಸ್ತ್ರಿಭವೋಽಭವತ್ ॥ ೫೦ ॥

ಸಮುದ್ರಾಶ್ಚ ತಥಾ ರತ್ನಾನ್ಯದುಸ್ತಸ್ಮೈ ಭಯಾಮ್ಮುನೇ ।
ಅಕೃಷ್ಟಪಚ್ಯಾಸೀತ್ಪೃಥಿವೀ ಪ್ರಜಾಕಾಮದುಘಾಖಿಲಾ ॥ ೫೧ ॥

ಸೂರ್ಯಶ್ಚ ತಪತೇ ತದ್ವತ್ತದ್ದುಃಖಂ ನ ಯಥಾ ಭವೇತ್ ।
ಚಂದ್ರಸ್ತು ಪ್ರಭಯಾ ದೃಶ್ಯೋ ವಾಯುಸ್ಸರ್ವಾನುಕೂಲ್ಯವಾನ್ ॥ ೫೨ ॥

ದೇವಾನಾಂ ಚೈವ ಯದ್ದ್ರವ್ಯಂ ಪಿತೄಣಾಂ ಚ ಪರಸ್ಯ ಚ ।
ತತ್ಸರ್ವಂ ಸಮುಪಾದತ್ತಮಸುರೇಣ ದುರಾತ್ಮನಾ ॥ ೫೩ ॥

ವಶೀಕೃತ್ಯ ಸ ಲೋಕಾಂಸ್ತ್ರೀನ್ ಸ್ವಯಮಿಂದ್ರೋ ಬಭೂವ ಹ ।
ಅದ್ವಿತೀಯಃ ಪ್ರಭುಶ್ಚಾಸೀದ್ರಾಜ್ಯಂ ಚಕ್ರೇಽದ್ಭುತಂ ವಶೀ ॥ ೫೪ ॥

---

೫೦. ಭೂಮಿಯಲ್ಲಿ ಕಂಡ ಕಂಡ ಉತ್ತಮವಸ್ತುಗಳೆಲ್ಲವನ್ನೂ ಆ ತಾರಕನು ತೆಗೆದುಕೊಂಡನು. ಹೀಗಾಗಿ ಮೂರುಲೋಕಗಳೂ ನಿಸ್ಸಾರವಾದುವು.

೫೧ ಎಲೈ ನಾರದ, ಭೂಮಿಯಲ್ಲಿ ಆಗ ಉಳದೇ ದವಸಧಾನ್ಯಗಳನ್ನು ಬೆಳೆಯುತ್ತಿದ್ದಿತು, ಪ್ರಜೆಗಳು ಬೇಕು ಬೇಕಾದಂತಹ ವಸ್ತುಗಳನ್ನು ಯತ್ನವಿಲ್ಲದೇ ಪಡೆದರು. ಸಮುದ್ರಗಳೂ ಸಹ ಭಯದಿಂದ ಆ ತಾರಕನಿಗೆ ತಮ್ಮಲ್ಲಿರುವ ರತ್ನ ಗಳನ್ನು ಕೊಟ್ಟುವು.

೫೨. ಸೂರ್ಯನು ಆ ತಾರಕಾಸುರನಿಗೆ ದುಃಖವಾಗದಂತೆ ಪ್ರಕಾಶಿಸುತ್ತ ಲಿದ್ದನು. ಚಂದ್ರನು ತಂಪಾದ ಬೆಳದಿಂಗಳನ್ನುಂಟುಮಾಡುತ್ತಲಿದ್ದನು. ವಾಯುವು ಅನುಕೂಲವಾಗಿ ಬೀಸುತ್ತಲಿದ್ದನು.

೫೩. ದೇವತೆಗಳ ಮತ್ತು ಪಿತೃದೇವತೆಗಳ ಉತ್ತಮುವಸ್ತುಗಳೆಲ್ಲವನ್ನೂ ಆ ದುರಾತ್ಮನಾದ ದೈತ್ಯನು ಕಿತ್ತುಕೊಂಡನು.

೫೪. ಆ ತಾರಕನು ಹೀಗೆ ಮೂರುಲೋಕಗಳನ್ನೂ ತನ್ನ ವಶಮಾಡಿಕೊಂಡು ತಾನೇ ಇಂದ್ರನಾದನು. ಮಹಾಸಾರ್ವಭೌಮನಾದನು. ವೈಭವದಿಂದ ರಾಜ್ಯಭಾರ ವನ್ನು ಮಾಡಿದನು.

ನಿಸ್ಸಾರ್ಯ ಸಕಲಾನ್ ದೇವಾನ್ ದೈತ್ಯಾನಸ್ಥಾಪಯತ್ತದಾ ।
ಸ್ವಯಂ ನಿಯೋಜಯಾಮಾಸ ದೇವಯೋನಿಸ್ಸ್ವಕರ್ಮಣಿ ॥ ೫೫ ॥

ಅಥ ತದ್ಬಾಧಿತಾ ದೇವಾಸ್ಸರ್ವೇ ಶಕ್ರಪುರೋಗಮಾಃ ।
ಮುನೇ ಮಾಂ ಶರಣಂ ಜಗ್ಮುರನಾಥಾ ಅತಿವಿಹ್ವಲಾಃ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಪಂಚದಶೋಽಧ್ಯಾಯಃ



---

೫೫. ಆ ಅಸುರನು ದೇವತೆಗಳೆಲ್ಲರನ್ನೂ ಸ್ವರ್ಗದಿಂದ ಓಡಿಸಿ ಅವರ ಸ್ಥಾನದಲ್ಲಿ ದೈತ್ಯರನ್ನು ನಿಯಮಿಸಿದನು.

೫೬. ಎಲೈ ನಾರದ, ಬಳಿಕ ತಾರಕಾಸುರನಿಂದ ಹೀಗೆ ಪೀಡಿಸಲ್ಪಟ್ಟ ಆ ದೇವತೆಗಳು ಕಾಪಾಡುವವರಿಲ್ಲದೆ, ನನ್ನಲ್ಲಿಗೆ ಶರಣು ಬಂದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಷೋಡಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಥ ತೇ ನಿರ್ಜರಾಸ್ಸರ್ವೇ ಸುಪ್ರಣಮ್ಯ ಪ್ರಜೇಶ್ವರಂ ।
ತುಷ್ಟುವುಃ ಪರಯಾ ಭಕ್ತ್ಯಾ ತಾರಕೇಣ ಪ್ರಪೀಡಿತಾಃ ॥ ೧ ॥

ಅಹಂ ಶ್ರುತ್ವಾಮರನುತಿಂ ಯಥಾರ್ಥಾಂ ಹೃದಯಂಗಮಾಂ ।
ಸುಪ್ರಸನ್ನತರೋ ಭೂತ್ವಾ ಪ್ರತ್ಯವೋಚಂ ದಿವೌಕಸಃ ॥ ೨ ॥

ಸ್ವಾಗತಂ ಸ್ವಾಧಿಕಾರಾ ವೈ ನಿರ್ವಿಘ್ನಾಸ್ಸಂತಿ ವಸ್ಸುರಾಃ ।
ಕಿಮರ್ಥಮಾಗತಾ ಯೂಯಮತ್ರ ಸರ್ವೇ ವದಂತು ಮೇ ॥ ೩ ॥

---

### ಹದಿನಾರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಬಳಿಕ ತಾರಕಾಸುರನಿಂದ ಪೀಡಿಸಲ್ಪಟ್ಟ ಆ ದೇವತೆಗಳು ಬ್ರಹ್ಮನನ್ನು ನಮಸ್ಕರಿಸಿ ಭಕ್ತಿಯಿಂದ ತುಂಬಾ ಸ್ತುತಿಸಿದರು.

೨. ಆಗ ನಾನು, ಅರ್ಥಗರ್ಭಿತವೂ ಮನೋಹರವೂ ಆದ ದೇವಸ್ತುತಿಯನ್ನು ಕೇಳಿ ತುಂಬಾ ಪ್ರಸನ್ನನಾಗಿ,

೩. ಎಲೈ ದೇವತೆಗಳಿರಾ, ನಿಮಗೆ ಸುಖಾಗಮನವೇ ? ನಿಮ್ಮ ಅಧಿಕಾರಗಳು ತೊಂದರೆಯಿಲ್ಲದೆ ನಡೆಯುತ್ತಿರುವವಷ್ಟೆ ? ಈಗ ನೀವಿಲ್ಲಿಗೆ ಬಂದಿರುವ ಕಾರಣವೇನು ? ಎಲ್ಲವನ್ನೂ ಹೇಳಿರಿ ಎಂದೆನು.

ಇತಿ ಶ್ರುತ್ವಾ ವಚೋ ಮೇ ತೇ ನತ್ವಾ ಸರ್ವೇ ದಿವೌಕಸಃ ।
ಮಾಮೂಚುರ್ನತಕಾ ದೀನಾಸ್ತಾರಕೇಣ ಪ್ರಪೀಡಿತಾಃ ॥ ೪ ॥

॥ ದೇವಾ ಊಚುಃ ॥

ಲೋಕೇಶ ತಾರಕೋ ದೈತ್ಯೋ ವರೇಣ ತವ ದರ್ಪಿತಃ ।
ನಿರಸ್ಯಾಸ್ಮಾನ್ ಹಠಾತ್ಸ್ಥಾನ್ಯಗ್ರಹೀನ್ನೋ ಬಲಾತ್ಸ್ವಯಂ ॥ ೫ ॥

ಭವತಃ ಕಿಮು ನ ಜ್ಞಾತಂ ಯನ್ನ ದುಃಖಮುಪಸ್ಥಿತಂ ।
ತದ್ದುಃಖಂ ನಾಶಯ ಕ್ಷಿಪ್ರಂ ವಯಂ ತೇ ಶರಣಂ ಗತಾಃ ॥ ೬ ॥

ಅಹರ್ನಿಶಂ ಬಾಧತೇಽಸ್ಮಾನ್ಯತ್ರ ತತ್ರ ಸ್ಥಿತಾನ್ ಸ ವೈ ।
ಪಲಾಯಮಾನಾಃ ಪಶ್ಯಾಮೋ ಯತ್ರ ತತ್ರಾಪಿ ತಾರಕಂ ॥ ೭ ॥

ತಾರಕಾನ್ನಶ್ಚ ಯದ್ದುಃಖಂ ಸಂಭೂತಂ ಸಕಲೇಶ್ವರ ।
ತೇನ ಸರ್ವೇ ವಯಂ ತಾತ ಪೀಡಿತಾಃ ಸಕಲಾ ಅತಿ ॥ ೮ ॥

---

೪-೫. ಎಲೈ ನಾರದ, ಹೀಗೆ ನಾನು ಹೇಳಿದ ಮಾತುಗಳನ್ನು ಕೇಳಿ ದುಃಖಿತರಾದ ಆ ದೇವತೆಗಳು ನನಗೆ ನಮಸ್ಕರಿಸಿ ಹೇಳಿದರು. ಜಗದೊಡೆಯನಾದ ಓ ಬ್ರಹ್ಮನೇ, ತಾರಕನೆಂಬ ಅಸುರನಿರುವನು. ಅವನು ನಿನ್ನ ವರದಿಂದ ಕೊಬ್ಬಿ ನಮ್ಮೆಲ್ಲರನ್ನೂ ಸ್ವರ್ಗದಿಂದ ಬಲಾತ್ಕಾರದಿಂದ ಓಡಿಸಿ ನಮ್ಮ ಸ್ಥಾನವನ್ನಾಕ್ರಮಿಸಿರುವನು.

೬. ಸರ್ವಜ್ಞನಾದ ನಿನಗೆ ತಿಳಿಯದಿರುವುದಾವುದು ? ಆದಕಾರಣ ಈಗ ನೀನು ನಮಗೆ ಬಂದಿರುವ ದುಃಖವನ್ನು ಹೋಗಲಾಡಿಸು. ನಿನಗೆ ನಾವು ಶರಣು ಬಂದಿರುವೆವು.

೭. ಆ ತಾರಕನು ನಿತ್ಯವೂ ನಮ್ಮನ್ನು ಎಲ್ಲಿದ್ದರೂ ಹಿಂಸಿಸುವನು. ಎಲ್ಲೆಲ್ಲಿಗೆ ಓಡಿಹೋದರೂ ಸಹ ಮಾಯಾವಿಯಾದ ಅವನು ಅಲ್ಲಿ ಬಂದು ಪೀಡಿಸುವನು.

೮. ಓ ಜಗದೀಶ್ವರ, ಆ ತಾರಕನಿಂದ ನಮಗೆ ಮಹಾದುಃಖವು ಬಂದಿರುವುದು. ನಮ್ಮೆಲ್ಲರನ್ನೂ ಆ ದೈತ್ಯನು ತುಂಬಾ ಹಿಂಸಿಸುತ್ತಿರುವನು.

ಅಗ್ನಿರ್ಯಮೋಽಥ ವರುಣೋ ನಿರ್ಋತಿರ್ವಾಯುರೇವ ಚ ।
ಅನ್ಯೇ ದಿಕ್ಪತಯಶ್ಚಾಪಿ ಸರ್ವೇ ಯದ್ವಶಗಾಮಿನಃ ॥ ೯ ॥

ಸರ್ವೇ ಮನುಷ್ಯಧರ್ಮಾಣಸ್ಸರ್ವೈಃ ಪರಿಕರೈರ್ಯುತಾಃ ।
ಸೇವಂತೇ ತಂ ಮಹಾದೈತ್ಯಂ ನ ಸ್ವತಂತ್ರಾಃ ಕದಾಚನ ॥ ೧೦ ॥

ಏವಂ ತೇನಾರ್ದಿತಾ ದೇವಾ ವಶಗಾಸ್ತಸ್ಯ ಸರ್ವದಾ ।
ತದಿಚ್ಛಾಕಾರ್ಯನಿರತಾಸ್ಸರ್ವೇ ತಸ್ಯಾನುಜೀವಿನಃ ॥ ೧೧ ॥

ಯಾವತ್ಯೋ ವನಿತಾಸ್ಸರ್ವಾ ಯೇ ಚಾಪ್ಯಪ್ಸರಸಾಂ ಗಣಾಃ ।
ಸರ್ವಾಂಸ್ತಾನಗ್ರಹೀದ್ದೈತ್ಯಸ್ತಾರಕೋಽಸೌ ಮಹಾಬಲೀ ॥ ೧೨ ॥

ನ ಯಜ್ಞಾಃ ಸಂಪ್ರವರ್ತಂತೇ ನ ತಪಸ್ಯಂತಿ ತಾಪಸಾಃ ।
ದಾನಧರ್ಮಾದಿಕಂ ಕಿಂಚಿನ್ನ ಲೋಕೇಷು ಪ್ರವರ್ತತೇ ॥ ೧೩ ॥

---

೯-೧೦. ಅಗ್ನಿ, ಯಮ, ವರುಣ, ನಿರ್ಋತಿ ಮತ್ತು ವಾಯು ಮೊದಲಾದ ದಿಕ್ಪಾಲಕರೆಲ್ಲರೂ ಸಹ ಆ ದೈತ್ಯನಿಗೆ ಅಧೀನರಾಗಿ ಮನುಷ್ಯರಂತೆ ಎಲ್ಲಾ ಪರಿಕರ (ಸಹಾಯ) ಗಳೊಡನೆ ಅವನನ್ನು ಸೇವಿಸುತ್ತಲಿರುವರು. ಅವರಿಗೆ ಸ್ವಾತಂತ್ರ್ಯವೇ ಇಲ್ಲವಾಗಿದೆ.

೧೧. ಹೀಗೆ ದೇವತೆಗಳು ಆ ತಾರಕನಿಂದ ಪೀಡಿತರಾಗಿ ಸದಾ ಅವನ ಅಧೀನರಾಗಿದ್ದು ಅವನಿಗೆ ಬೇಕಾದಂತಹ ಕಾರ್ಯಗಳನ್ನು ಮಾಡಿಕೊಡುತ್ತಾ ಅವನನ್ನೇ ಆಶ್ರಯಿಸಿಕೊಂಡಿರುವರು.

೧೨. ದೇವಸುಂದರಿಯರನ್ನೂ ಅಪ್ಸರೆಯರನ್ನೂ ಸಹ ಆ ದೈತ್ಯನು ಬಲಾತ್ಕಾರದಿಂದ ಅಪಹರಿಸಿರುವನು.

೧೩. ಆ ದುಷ್ಟ ದೈತ್ಯನು ಯಜ್ಞಗಳನ್ನು ನಡೆಯಗೊಡಿಸುವುದಿಲ್ಲ. ತಪಸ್ವಿಗಳು ಆವನ ಭಯದಿಂದ ತಪಸ್ಸನ್ನೇ ಆಚರಿಸುತ್ತಲಿಲ್ಲ. ಲೋಕದಲ್ಲಿ ದಾನಧರ್ಮಗಳಾವುವೂ ನಡೆಯುತ್ತಲಿಲ್ಲ.

ತಸ್ಯ ಸೇನಾಪತಿಃ ಕ್ರೌಂಚೋ ಮಹಾಪಾಪ್ಯಸ್ತಿ ದಾನವಃ ।
ಸ ಪಾತಾಲತಲಂ ಗತ್ವಾ ಬಾಧತೇತ್ಯನಿಶಂ ಪ್ರಜಾಃ ॥ ೧೪ ॥

ತೇನ ನಸ್ತಾರಕೇಣೇದಂ ಸಕಲಂ ಭುವನತ್ರಯಂ ।
ಹೃತಂ ಹಠಾಜ್ಜಗದ್ಧಾತಃ ಪಾಪೇನಾಕರುಣಾತ್ಮನಾ ॥ ೧೫ ॥

ವಯಂ ಚ ತತ್ರ ಯಾಸ್ಯಾಮೋ ಯತ್ಸ್ಥಾನಂ ತ್ವಂ ವಿನಿರ್ದಿಶೇಃ ।
ಸ್ವಸ್ಥಾನ್ತ್ಯದ್ವಾರಿತಾಸ್ತೇನ ಲೋಕನಾಥ ಸುರಾರಿಣಾ ॥ ೧೬ ॥

ತ್ವಂ ನೋ ಗತಿಶ್ಚ ಶಾಸ್ತಾ ಚ ಧಾತಾ ತ್ರಾತಾ ತ್ವಮೇವ ಹಿ ।
ವಯಂ ಸರ್ವೇ ತಾರಕಾಖ್ಯವಹ್ನೌ ದಗ್ಧಾಸ್ಸುವಿಹ್ವಲಾಃ ॥ ೧೭ ॥

ತೇನ ಕ್ರೂರಾ ಉಪಾಯಾ ನಸ್ಸರ್ವೇ ಹತಬಲಾಃ ಕೃತಾಃ ।
ವಿಕಾರೇ ಸಾನ್ನಿಪಾತೇ ವಾ ವೀರ್ಯವಂತ್ಯೌಷಧಾನಿ ಚ ॥ ೧೮ ॥

---

೧೪. ಆ ದೈತ್ಯನಿಗೆ "ಕ್ರೌಂಚ" ನೆಂಬ ಮಹಾ ಪಾಪಿಯಾದ ಸೇನಾಪತಿ ಯಿರುವನು. ಅವನು ಪಾತಾಳಲೋಕಕ್ಕೆ ಹೋಗಿ ಅಲ್ಲಿನ ಪ್ರಜೆಗಳೆಲ್ಲರನ್ನೂ ಹಿಂಸಿಸುವನು.

೧೫. ಓ ಸೃಷ್ಟಿಕರ್ತನೇ, ಹೀಗೆ ನಮ್ಮದಾಗಿದ್ದ ಮೂರುಲೋಕಗಳನ್ನೂ ಸಹ ಆ ತಾರಕಾಸುರನು ಕಿತ್ತುಕೊಂಡು ಕರುಣವಿಲ್ಲದೇ ನಮ್ಮನ್ನು ಹಿಂಸಿಸುವನು.

೧೬. ಓ ಜಗದೊಡೆಯನೇ, ಹೀಗೆ ಆ ತಾರಕನಿಂದ ಓಡಿಸಲ್ಪಟ್ಟ ನಮಗೆ ಸ್ಥಾನವೇ ಇಲ್ಲವಾಗಿವೆ. ನೀನು ಹೇಳಿದ ಸ್ಥಾನಕ್ಕೆ ಹೋಗಲು ಸಿದ್ಧರಾಗಿರುವೆವು.

೧೭. ಓ ದೇವನೇ, ನೀನೇ ನಮಗೆ ಗತಿಯು, ನಮ್ಮನ್ನು ಸೃಷ್ಟಿಸಿ ರಕ್ಷಿಸುವವನೂ ನೀನೇ. ಹೀಗಿದ್ದೂ ನಾವು ತಾರಕಾಸುರನೆಂಬ ದೊಡ್ಡ ಬೆಂಕಿಯಲ್ಲಿ ಬಿದ್ದು ದುಃಖಿತರಾಗಿರುವೆವು.

೧೮. ಆ ದೈತ್ಯನಲ್ಲಿ ನಮ್ಮ ಉಪಾಯಗಳೊಂದೂ ನಡೆಯುವುದಿಲ್ಲ. ಮಹಾಸನ್ನಿಪಾತಜ್ವರಗಳಲ್ಲಿ ಮಹಾಮಹಾ ಔಷಧಿಗಳೂ ಪ್ರಯೋಜನವಿಲ್ಲದವುಗಳಾ ಗುತ್ತವಷ್ಟೆ?

ಯತ್ರಾಸ್ಮಾಕಂ ಜಯಾಶಾ ಹಿ ಹರಿಚಕ್ರೇ ಸುದರ್ಶನೇ ।
ತತ್ಕುಂಠಿತಮಭೂತ್ತಸ್ಯ ಕಂಠೇ ಪುಷ್ಪಮಿವಾರ್ಪಿತಂ ॥ ೧೯ ॥

॥ ಬ್ರಹ್ಮೋವಾಚ ॥

ಇತ್ಯೇತದ್ವಚನಂ ಶ್ರುತ್ವಾ ನಿರ್ಜರಾಣಾಮಹಂ ಮುನೇ ।
ಪ್ರತ್ಯವೋಚಂ ಸುರಾನ್ ಸರ್ವಾಂಸ್ತತ್ಕಾಲಸದೃಶಂ ವಚಃ ॥ ೨೦ ॥

॥ ಬ್ರಹ್ಮೋವಾಚ ॥

ಮಮೈವ ವಚಸಾ ದೈತ್ಯಸ್ತಾರಕಾಖ್ಯಃ ಸಮೇಧಿತಃ ।
ನ ಮತ್ತಸ್ತಸ್ಯ ಹನನಂ ಯುಜ್ಯತೇ ಹಿ ದಿವೌಕಸಃ ॥ ೨೧ ॥

ತತೋ ನೈವ ವಧೋ ಯೋಗ್ಯೋ ಯಥೋ ವೃದ್ಧಿಮುಪಾಗತಃ ।
ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ ॥ ೨೨ ॥

---

೧೯. ನಮಗೆ ವಿಷ್ಣುಚಕ್ರದಿಂದ ಆ ದೈತ್ಯನನ್ನು ಜಯಿಸಬಹುದೆಂಬ ಆಶೆಯಿತ್ತು. ಆದರೆ ಆ ಚಕ್ರವೂ ಸಹ ಬಿಟ್ಟೊಡನೆಯೇ ತಾರಕಾಸುರನೆದೆಯನ್ನು ಹೂವಿನಂತೆ ಅಲಂಕರಿಸಿತು ಎಂದರು.

೨೦. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ದೇವತೆಗಳು ಹೇಳಿದ ಮಾತುಗಳನ್ನು ಕೇಳಿ ನಾನು ಆ ಕಾಲಕ್ಕೆ ಯೋಗ್ಯವಾದಂತಹ ಮಾತನ್ನು ಹೀಗೆ ಹೇಳಿದೆನು.

೨೧. ಎಲೈ ದೇವತೆಗಳಿರಾ, ಕೇಳಿರಿ ಆ ತಾರಕಾಸುರನು ನನ್ನ ವರಗಳಿಂದಲೇ ಅಭಿವೃದ್ಧಿಯನ್ನು ಹೊಂದಿರುವನು. ಆದಕಾರಣ ನನ್ನಿಂದಲೇ ಅವನು ಸಾಯುವಂತಿಲ್ಲ.

೨೨. ಅಭಿವೃದ್ಧಿಗೆ ತಂದವನೇ ಕೊಲ್ಲುವುದು ಯೋಗ್ಯವಲ್ಲವಷ್ಟೆ? ವಿಷವೃಕ್ಷವನ್ನಾದರೂ ತಾನೇ ಬೆಳೆಸಿ ತಾನೇ ಕತ್ತರಿಸಕೂಡದು.

ಯುಷ್ಮಾಕಂ ಚಾಖಿಲಂ ಕಾರ್ಯಂ ಕರ್ತುಂ ಯೋಗ್ಯೋ ಹಿ ಶಂಕರಃ ।
ಕಿಂ ತು ಸ್ವಯಂ ನ ಶಕ್ತೋ ಹಿ ಪ್ರತಿಕರ್ತುಂ ಪ್ರಚೋದಿತಃ ॥ ೨೬ ॥

ತಾರಕಾಖ್ಯಸ್ತು ಪಾಪೇನ ಸ್ವಯಮೇಷ್ಯತಿ ಸಂಕ್ಷಯಂ ।
ಯಥಾ ಯೂಯಂ ಸಂವಿದಧ್ವಮುಪದೇಶಕರಸ್ತ್ವಹಂ ॥ ೨೪ ॥

ನ ಮಯಾ ತಾರಕೋ ವಧ್ಯೋ ಹರಿಣಾಪಿ ಹರೇಣ ಚ ।
ನಾನ್ಯೇನಾಪಿ ಸುರೈರ್ವಾಪಿ ಮದ್ವರಾತ್ಸತ್ಯಮುಚ್ಯತೇ ॥ ೨೫ ॥

ಶಿವವೀರ್ಯಸಮುತ್ಪನ್ನೋ ಯದಿ ಸ್ಯಾತ್ತನಯಸ್ಸುರಾಃ ।
ಸ ಏವ ತಾರಕಾಖ್ಯಸ್ಯ ಹಂತಾ ದೈತ್ಯಸ್ಯ ನಾಪರಃ ॥ ೨೬ ॥

ಯಮುಪಾಯಮಹಂ ವಚ್ಮಿ ತಂ ಕುರುಧ್ವಂ ಸುರೋತ್ತಮಾಃ ।
ಮಹಾದೇವಪ್ರಸಾದೇನ ಸಿದ್ಧಿಮೇಷ್ಯತಿ ಸ ಧ್ರುವಂ ॥ ೨೭ ॥

---

೨೩. ನಿಮ್ಮ ಕಾರ್ಯವನ್ನು ಶಂಕರನು ಮಾತ್ರ ನಿರ್ವಹಿಸಬಲ್ಲನು. ಆದರೆ ತಾನೇ ಅದನ್ನು ಮಾಡಲಸಮರ್ಥನು. ಇನ್ನೊಬ್ಬರ ಮೂಲಕ ಅದನ್ನು ಮಾಡಿಸಲು ಶಕ್ತನು.

೨೪. ತಾರಕಾಸುರನು ತನ್ನ ಪಾಪದಿಂದಲೇ ತಾನು ಸಾಯುವಂತೆ ಪ್ರಯತ್ನಿಸಿ. ಈ ವಿಷಯದಲ್ಲಿ ನಾನು ನಿಮಗೆ ಒಂದು ಉಪಾಯವನ್ನು ಹೇಳುವೆನು.

೨೫. ಆ ತಾರಕಾಸುರನನ್ನು ನಾನಾಗಲೀ, ವಿಷ್ಣುರುದ್ರರಾಗಲೀ, ಕೊಲ್ಲಲು ಸಾಧ್ಯವಿಲ್ಲ. ಮಿಕ್ಕ ಯಾವ ದೇವತೆಗಳೂ ಕೊಲ್ಲಲಾರರು. ಇದು ಸತ್ಯವಾದುದು. ನಾನು ಹಾಗೆಯೇ ವರವನ್ನು ಕೊಟ್ಟಿರುವೆನು.

೨೬. ಎಲೈ ದೇವತೆಗಳಿರಾ, ಶಿವನ ವೀರ್ಯದಿಂದ ಓರ್ವ ಕುಮಾರನು ಜನಿಸಿದುದಾದರೆ ಅವನೇ ತಾರಕಾಸುರನನ್ನು ಕೊಲ್ಲುವನು. ಇನ್ನಾರಿಂದಲೂ ಸಾಧ್ಯವಿಲ್ಲ.

೨೭. ಆ ವಿಷಯದಲ್ಲಿ ನಾನೊಂದು ಉಪಾಯವನ್ನು ಹೇಳುವೆನು ಕೇಳಿರಿ. ಮಹಾದೇವನ ಅನುಗ್ರಹದಿಂದ ನಿಮ್ಮ ಇಷ್ಟಾರ್ಥವು ಸಿದ್ಧಿಸುವುದು.

ಸತೀ ದಾಕ್ಷಾಯಣೀ ಪೂರ್ವಂ ತ್ಯಕ್ತದೇಹಾ ತು ಯಾಭವತ್ ।
ಸೋತ್ಪನ್ನಾ ಮೇನಕಾಗರ್ಭಾತ್ಸಾ ಕಥಾ ವಿದಿತಾ ಹಿ ವಃ ॥ ೨೮ ॥

ತಸ್ಯಾ ಅವಶ್ಯಂ ಗಿರಿಶಃ ಕರಿಷ್ಯತಿ ಕರಗ್ರಹಂ ।
ತಥಾಪ್ಯುದ್ಯಮುಪಾಯಂ ಚ ತಥಾಪಿ ತ್ರಿದೌವಕಸಃ ॥ ೨೯ ॥

ತಥಾ ವಿದಧ್ವಂ ಸುತರಾಂ ತಸ್ಯಾಂ ತು ಪರಿಯತ್ನತಃ ।
ಪಾರ್ವತ್ಯಾಂ ಮೈನಕಾಯಾಂ ವೈ ರೇತಃಪ್ರತಿನಿಪಾತನೇ ॥ ೩೦ ॥

ತಮೂರ್ಧ್ವರೇತಸಂ ಶಂಭುಂ ಸೈವ ಪ್ರಚ್ಯುತರೇತಸಂ ।
ಕರ್ತುಂ ಸಮರ್ಥಾ ನಾನ್ಯಾಸ್ತಿ ತಥಾ ಕಾಪ್ಯಬಲಾ ಬಲಾತ್ ॥ ೩೧ ॥

ಸಾ ಸುತಾ ಗಿರಿರಾಜಸ್ಯ ಸಾಂಪ್ರತಂ ಪ್ರೌಢಯೌವನಾ ।
ತಪಸ್ಯಂತಂ ಹಿಮಗಿರೌ ನಿತ್ಯಂ ಸಂಸೇವತೇ ಹರಂ ॥ ೩೨ ॥

---

೨೮. ದಕ್ಷಪುತ್ರಿಯಾದ ಸತೀದೇವಿಯು ಹಿಂದೆ ದಕ್ಷಯಜ್ಞದಲ್ಲಿ ಶರೀರವನ್ನು ತ್ಯಜಿಸಿದ್ದಳಷ್ಟೆ. ಅವಳೇ ತಿರುಗಿ ಹಿಮವಂತನ ಮಡದಿಯಾದ ಮೇನಕಾದೇವಿಯಲ್ಲಿ ಜನಿಸಿರುವಳು. ಈ ಕಥೆಯು ನಿಮಗೆ ತಿಳಿದೇ ಇರುವುದು.

೨೯. ಆ ಮೇನಕಾಪುತ್ರಿಯಾದ ಪಾರ್ವತಿಯನ್ನು ಶಂಕರನು ಅವಶ್ಯವಾಗಿ ಮದುವೆಮಾಡಿಕೊಳ್ಳುವನು. ಆದರೂ ನೀವೂ ಈ ವಿಷಯದಲ್ಲಿ ಪ್ರಯತ್ನವನ್ನು ಮಾಡಬೇಕು.

೩೦. ಎಲೈ ದೇವತೆಗಳಿರಾ, ಆ ಪಾರ್ವತಿಯಲ್ಲಿ ಶಂಕರನು ವೀರ್ಯವನ್ನು ವಿಸರ್ಜಿಸುವಂತೆ ಪ್ರಯತ್ನವನ್ನು ಮಾಡಿರಿ.

೩೧. ಆ ಪಾರ್ವತೀದೇವಿಯೇ ಶಂಕರನ ವೀರ್ಯವು ಬೀಳುವಂತೆ ಮಾಡಲು ಸಮರ್ಥಳು. ಇನ್ನಾವ ಸ್ತ್ರೀಯಿಂದಲೂ ಸಾಧ್ಯವಿಲ್ಲ.

೩೨. ಆ ಪಾರ್ವತಿಯು ಈಗ ಯೌವನವನ್ನು ಹೊಂದಿರುವಳು. ಅವಳು ಹಿಮಾಲಯದ ತಪ್ಪಲಲ್ಲಿ ತಪಸ್ಸು ಮಾಡುತ್ತಲಿರುವ ಶಂಕರನನ್ನು ಭಕ್ತಿಯಿಂದ ಸೇವಿಸುತ್ತಲಿರುವಳು.

ವಾಕ್ಯಾದ್ಧಿಮವತಃ ಕಾಲೀ ಸ್ವಪಿತುರ್ಹಠತಶ್ಶಿವಾ ।
ಸಖೀಭ್ಯಾಂ ಸೇವತೇ ಸಾರ್ಧಂ ಧ್ಯಾನಸ್ಥಂ ಪರಮೇಶ್ವರಂ ॥ ೩೩ ॥

ತಾಮಗ್ರತೋಽರ್ಚಮಾನಾಂ ವೈ ತ್ರೈಲೋಕ್ಯೇ ವರವರ್ಣಿನೀಂ ।
ಧ್ಯಾನಸಕ್ತೋ ಮಹೇಶೋ ಹಿ ಮನಸಾಪಿ ನ ಹೀಯತೇ ॥ ೩೪ ॥

ಭಾರ್ಯಾರ್ಥಂ ಸಮೀಹೇತ ಯಥಾ ಸ ಕಾಲೀಂ ಚಂದ್ರಶೇಖರಃ ।
ತಥಾ ವಿಧಧ್ವಂ ತ್ರಿದಶಾ ನ ಚಿರಾದೇವ ಯತ್ನತಃ ॥ ೩೫ ॥

ಸ್ಥಾನಂ ಗತ್ವಾಥ ದೈತ್ಯಸ್ಯ ತಮಹಂ ತಾರಕಂ ತತಃ ।
ನಿವಾರಯಿಷ್ಯೇ ಕುಹಠಾತ್ಸ್ವಸ್ಥಾನಂ ಗಚ್ಛತಾಮರಾಃ ॥ ೩೬ ॥

ಇತ್ಯುಕ್ತ್ವಾಹಂ ಸುರರ್ಷೇ ಶೀಘ್ರಂ ತಾರಕಾಖ್ಯಸ್ಯ ತಸ್ಯ ವೈ ।
ಉಪಸಂಗಮ್ಯ ಸುಪ್ರೀತ್ಯಾ ಸಮಾಭಾಷ್ಯೇದಮಬ್ರುವಂ ॥ ೩೭ ॥

---

೩೩. ಆ ದೇವಿಯು ತಂದೆಯ ಅನುಮತಿಯನ್ನು ಪಡೆದು ಹಠದಿಂದ ನಿತ್ಯವೂ ಸಖಿಯರೊಡನೆ, ಧ್ಯಾನಮಗ್ನನಾದ ಪರಮೇಶ್ವರನನ್ನು ಸೇವಿಸುತ್ತಲಿರುವಳು.

೩೪. ಮೂರುಲೋಕಗಳಲ್ಲೇ ಅತಿಸುಂದರಿಯೂ ಉತ್ತಮಳೂ ಆದ ಆ ಪಾರ್ವತಿಯು ನಿತ್ಯವೂ ಅವನನ್ನು ಸೇವಿಸುವಳು. ಆದರೂ ಆ ಮಹೇಶ್ವರನು ಮನಸ್ಸಿನಲ್ಲಿಯೂ ಅವಳಲ್ಲಾಸಕ್ತಿಯುಳ್ಳವನಾಗಿಲ್ಲ.

೩೫. ಆದುದರಿಂದ ಎಲೈ ದೇವತೆಗಳಿರಾ, ಆ ಶಂಕರನು ಪಾರ್ವತಿಯನ್ನು ಮದುವೆಯಾಗುವಂತೆ ಈ ಕೂಡಲೇ ಪ್ರಯತ್ನವನ್ನು ಮಾಡಿರಿ.

೩೬. ಈಗ ಆ ತಾರಕಾಸುರನು ನಿಮ್ಮನ್ನು ಹಿಂಸಿಸದಂತೆ ತಡೆಯುವೆನು. ನೀವೆಲ್ಲರೂ ನಿಮ್ಮ ಸ್ಥಾನಗಳಿಗೆ ತೆರಳಿರಿ.

೩೭-೩೮. ಎಲೈ ನಾರದ, ಹೀಗೆ ದೇವತೆಗಳಿಗೆ ಹೇಳಿ ನಾನು ಆ ಕೂಡಲೇ ತಾರಕಾಸುರನ ಬಳಿಗೆ ಹೋಗಿ ಅಲ್ಲಿ ಆ ದೈತ್ಯನನ್ನು ಕುರಿತು ಪ್ರೀತಿಯಿಂದ ಎಲೈ ದೈತ್ಯನೇ, ಈ ಸ್ವರ್ಗರಾಜ್ಯವು ಸಂಪತ್ತುಗಳಿಗೆ ಖನಿಯಂತಿರುವುದು. ಇಂತಹ

॥ ಬ್ರಹ್ಮೋವಾಚ ॥

ತೇಜಸ್ಸಾರಮಿಮಂ ಸ್ವರ್ಗಂ ರಾಜ್ಯಂ ತ್ವಂ ಪರಿಪಾಸಿ ನಃ ।
ಯದರ್ಥಂ ಸುತಪಸ್ತಪ್ತಂ ವಾಂಛಸಿ ತ್ವಂ ತತೋಽಧಿಕಂ ॥ ೩೮ ॥

ವರಶ್ಚಾಪ್ಯಪರೋ ದತ್ತೋ ನ ಮಯಾ ಸ್ವರ್ಗರಾಜ್ಯತಾ ।
ತಸ್ಮಾತ್ಸ್ವರ್ಗಂ ಪರಿತ್ಯಜ್ಯ ಕ್ಷಿತೌ ರಾಜ್ಯಂ ಸಮಾಚರ ॥ ೩೯ ॥

ದೇವಯೋಗ್ಯಾನಿ ತತ್ರೈವ ಕಾರ್ಯಾಣಿ ನಿಖಿಲಾನ್ಯಪಿ ।
ಭವಿಷ್ಯಂತ್ಯಸುರಶ್ರೇಷ್ಠ ನಾತ್ರ ಕಾರ್ಯಾ ವಿಚಾರಣಾ ॥ ೪೦ ॥

ಇತ್ಯುಕ್ತ್ವಾಹಂ ಚ ಸಂಬೋಧ್ಯಾಸುರಂ ತಂ ಸಕಲೇಶ್ವರಃ ।
ಸ್ಮೃತ್ವಾ ಶಿವಂ ಚ ಸಶಿವಂ ತತ್ರಾಂತರ್ಧಾನಮಾಗತಃ ॥ ೪೧ ॥

ತಾರಕೋಽಪಿ ಪರಿತ್ಯಜ್ಯ ಸ್ವರ್ಗಂ ಕ್ಷಿತಿಮುಪಾಭ್ಯಗಾತ್ ।
ಶೋಣಿತಾಖ್ಯಪುರೇ ಸ್ಥಿತ್ವಾ ಸರ್ವರಾಜ್ಯಂ ಚಕಾರ ಸಃ ॥ ೪೨ ॥

---

ನಮ್ಮ ರಾಜ್ಯವನ್ನು ನೀನು ಆಕ್ರಮಿಸಿ ಆಳುತ್ತಲಿರುವೆ. ನೀನು ತಪಸ್ಸುಮಾಡಿ ಕೇಳಿರುವ ವರಕ್ಕಿಂತಲೂ ಹೆಚ್ಚಾಗಿ ಅಪೇಕ್ಷಿಸುತ್ತಲಿರುವೆ.

೩೯. ಸ್ವರ್ಗರಾಜ್ಯವನ್ನಾಳುವಂತೆ ವರವನ್ನು ನಾನು ನಿನಗೆ ಕೊಟ್ಟಿಲ್ಲ. ಆದಕಾರಣ ಈ ಸ್ವರ್ಗವನ್ನು ಬಿಡು.

೪೦. ಭೂಲೋಕದಲ್ಲಿಯೇ ನಿನಗೆ ದೇವಭೋಗಗಳೆಲ್ಲವೂ ಲಭಿಸುವುವು. ಇದರಲ್ಲಿ ಸಂಶಯವೇ ಇಲ್ಲ.

೪೧. ಹೀಗೆ ಹೇಳಿ ನಾನು ಆ ತಾರಕಾಸುರನಿಂದ ಬೀಳ್ಕೊಂಡು ಶಿವನನ್ನೂ ದೇವಿಯನ್ನೂ ಸ್ಮರಿಸುತ್ತಾ ಅಲ್ಲಿಯೇ ಅಂತರ್ಧಾನನಾದೆನು.

೪೨. ಮುಂದೆ ತಾರಕನೂ ಸಹ ನನ್ನ ಅಪ್ಪಣೆಯಂತೆ ಸ್ವರ್ಗವನ್ನು ಬಿಟ್ಟು ಶೋಣಿತಪುರಕ್ಕೆ ತೆರಳಿ ಅಲ್ಲಿ ರಾಜ್ಯವಾಳತೊಡಗಿದನು.

ದೇವಾಸ್ಸರ್ವೇಽಪಿ ತಚ್ಛ್ರುತ್ವಾ ಮುದ್ವಾಕ್ಯಂ ಸುಪ್ರಣಮ್ಯ ಮಾಂ ।
ಶಕ್ರಸ್ಥಾನಂ ಯಯುಃ ಪ್ರೀತ್ಯಾ ಶಕ್ರೇಣ ಸುಸಮಾಹಿತಾಃ ॥ ೪೩ ॥

ತತ್ರ ಗತ್ವಾ ಮಿಲಿತ್ವಾ ಚ ವಿಚಾರ್ಯ ಚ ಪರಸ್ಪರಂ ।
ತೇ ಸರ್ವೇ ಮರುತಃ ಪ್ರೀತ್ಯಾ ಮಘವಂತಂ ವಚೋಽಬ್ರುವನ್ ॥ ೪೪ ॥

॥ ದೇವಾ ಊಚುಃ ॥

ಶಂಭೋರ್ಯಥಾ ಶಿವಾಯಾಂ ವೈ ರುಚಿರ್ಜಾಯೇತ ಕಾಮತಃ ।
ಮಘವಂಸ್ತೇ.ಪ್ರಕರ್ತವ್ಯಂ ಬ್ರಹ್ಮೋಕ್ತಂ ಸರ್ವಮೇವ ತತ್ ॥ ೪೫ ॥

॥ ಬ್ರಹ್ಮೋವಾಚ ॥

ಇತ್ಯೇವಂ ಸರ್ವವೃತ್ತಾಂತಂ ವಿನಿವೇದ್ಯ ಸುರೇಶ್ವರಂ ।
ಜಗ್ಮುಸ್ತೇ ಸರ್ವತೋ ದೇವಾಃ ಸ್ವಂ ಸ್ವಂ ಸ್ಥಾನಂ ಮುದಾನ್ವಿತಾಃ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಷೋಡಶೋಽಧ್ಯಾಯಃ

---

೪೩-೪೪. ಹೀಗೆ ತಾರಕಾಸುರನು ಶೋಣಿತಪುರಕ್ಕೆ ತೆರಳಿದುದನ್ನು ಕೇಳಿ ದೇವತೆಗಳು ಇಂದ್ರನೊಡನೆ ಮತ್ತೆ ಸ್ವರ್ಗಕ್ಕೆ ಹೋಗಿ ಅಲ್ಲಿ ಪರಸ್ಪರ ಆಲೋಚಿಸಿಕೊಂಡು ಇಂದ್ರನನ್ನು ಕುರಿತು,

೪೫. ದೇವತೆಗಳು ಹೇಳಿದರು :—ಓ ಇಂದ್ರನೇ, ಶಂಕರನು ಪ್ರೀತಿಯಿಂದ ಪಾರ್ವತಿಯನ್ನು ಮದುವೆಮಾಡಿಕೊಳ್ಳುವಂತೆ ಪ್ರಯತ್ನಿಸಬೇಕು. ಬ್ರಹ್ಮನು ಹೇಳಿದುದು ಸತ್ಯವಾದುದು ಎಂದರು.

೪೬. ಬ್ರಹ್ಮನು ಹೇಳಿದನು:—ಹೀಗೆ ಮಾಡಬೇಕಾದುದೆಲ್ಲವನ್ನೂ ಇಂದ್ರನಿಗೆ ಹೇಳಿ ದೇವತೆಗಳು ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಸಪ್ತದಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಗತೇಷು ತೇಷು ದೇವೇಷು ಶಕ್ರಸ್ಸಸ್ಮಾರ ವೈ ಸ್ಮರಂ ।
ಪೀಡಿತಸ್ತಾರಕೇಣಾತಿ ದೈತ್ಯೇನ ಚ ದುರಾತ್ಮನಾ ॥ ೧ ॥

ಆಗತಸ್ತತ್ಕ್ಷಣಾತ್ಕಾಮಸ್ಸವಸಂತೋ ರತಿಪ್ರಿಯಃ ।
ಸಾವಲೇಪೋ ಯುತೋ ರತ್ಯಾ ತ್ರೈಲೋಕ್ಯವಿಜಯೀ ಪ್ರಭುಃ ॥ ೨ ॥

ಪ್ರಣಾಮಂ ಚ ತತಃ ಕೃತ್ವಾ ಸ್ಥಿತ್ವಾ ತತ್ಪುರತಸ್ಸ್ಮರಃ ।
ಮಹೋನ್ನತಮನಾಸ್ತತ್ರ ಸಾಂಜಲಿಃ ಶಕ್ರಮಬ್ರವೀತ್ ॥ ೩ ॥

---

## ಹದಿನೇಳನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹಿಂದೆ ಹೇಳಿದಂತೆ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದ ಮೇಲೆ, ತಾರಕಾಸುರನಿಂದ ಪೀಡಿಸಲ್ಪಟ್ಟ ಇಂದ್ರನು ಮುಂದಿನಕಾರ್ಯಕ್ಕಾಗಿ ಮನ್ಮಥನನ್ನು ಸ್ಮರಿಸಿದನು.

೨. ರತಿಪತಿಯೂ ಮೂರುಲೋಕಗಳನ್ನು ಜಯಿಸಿದವನೂ ಆದಂತಹ ಮನ್ಮಥನು ಆಕೂಡಲೇ ಗರ್ವದಿಂದ ಕೂಡಿ ತನ್ನ ಪ್ರಿಯಳೊಡನೆಯೂ ವಸಂತನೊಡನೆಯೂ ಇಂದ್ರನ ಬಳಿಗೆ ಬಂದನು.

೩. ಬಳಿಕ ಆ ಮನ್ಮಥನು ಇಂದ್ರನನ್ನು ನಮಸ್ಕರಿಸಿ ಗಂಭೀರಭಾವದಿಂದ ಆ ಇಂದ್ರನೆದುರಿಗೆ ಅಂಜಲಿಯನ್ನು ಧರಿಸಿ ಹೀಗೆ ಹೇಳಿದನು.

॥ ಕಾಮ ಉವಾಚ ॥

ಕಿಂ ಕಾರ್ಯಂ ತೇ ಸಮುತ್ಪನ್ನಂ ಸ್ಮೃತೋಽಹಂ ಕೇನ ಹೇತುನಾ ।
ತತ್ತ್ವಂ ಕಥಯ ದೇವೇಶ ತತ್ಕರ್ತುಂ ಸಮುಪಾಗತಃ ॥ ೪ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಕಂದರ್ಪಸ್ಯ ಸುರೇಶ್ವರಃ ।
ಉವಾಚ ವಚನಂ ಪ್ರೀತ್ಯಾ ಯುಕ್ತಂ ಯುಕ್ತಮಿತಿ ಸ್ತುವನ್ ॥ ೫ ॥

॥ ಶಕ್ರ ಉವಾಚ ॥

ತವ ಸಾಧು ಸಮಾರಂಭೋ ಯನ್ಮೇ ಕಾರ್ಯಮುಪಸ್ಥಿತಂ ।
ತತ್ಕರ್ತುಮುದ್ಯತೋಽಸಿ ತ್ವಂ ಧನ್ಯೋಽಸಿ ಮಕರಧ್ವಜ ॥ ೬ ॥

ಪ್ರಸ್ತುತಂ ಶೃಣು ಮದ್ವಾಕ್ಯಂ ಕಥಯಾಮಿ ತವಾಗ್ರತಃ ।
ಮದೀಯಂ ಚೈವ ಯತ್ಕಾರ್ಯಂ ತ್ವದೀಯಂ ತನ್ನ ಚಾನ್ಯಥಾ ॥ ೭ ॥

ಮಿತ್ರಾಣಿ ಮಮ ಸಂತ್ಯೇವ ಬಹೂನಿ ಸುಮಹಾಂತಿ ಚ ।
ಪರಂ ತು ಸ್ಮರ ಸನ್ಮಿತ್ರಂ ತ್ವತ್ತುಲ್ಯಂ ನ ಹಿ ಕುತ್ರಚಿತ್ ॥ ೮ ॥

---

೪. ಮನ್ಮಥನು ಹೇಳಿದನು:—ಎಲೈ ದೇವೇಂದ್ರನೆ, ನಿನಗೆ ಯಾವ ಮಹಾ ಕಾರ್ಯವು ಬಂದೊದಗಿರುವುದು? ನನ್ನನ್ನು ಸ್ಮರಿಸಿದುದೇತಕ್ಕೆ? ಅದನ್ನು ಬೇಗನೆ ಹೇಳು. ಈ ಕೂಡಲೇ ಆ ಕಾರ್ಯವನ್ನು ಮಾಡಲು ಸಿದ್ಧನಾಗಿರುವೆನು ಎಂದನು.

೫-೬. ಬ್ರಹ್ಮನು ಹೇಳಿದನು:—ಹೀಗೆ ಮನ್ಮಥನು ಹೇಳಿದ ಮಾತನ್ನು ಕೇಳಿ ಇಂದ್ರನು, ಯೋಗ್ಯವಾದುದನ್ನೇ ಹೇಳಿರುವೆ ಎಂದು ಮನ್ಮಥನನ್ನು ಆದರದಿಂದ ಹೊಗಳುತ್ತಾ ಎಲೈ ಮನ್ಮಥನೆ, ನಿನ್ನ ಸಮಾರಂಭ (ಸಿದ್ಧತೆ) ವು ಚನ್ನಾಗಿರುವುದು. ಈಗ ನನಗೆ ಒದಗಿರುವ ಮಹಾಕಾರ್ಯವನ್ನು ಸಾಧಿಸಲು ಸಿದ್ಧನಾಗಿರುವೆ. ನೀನೇ ಧನ್ಯನು.

೭. ಈಗ ಒದಗಿರುವ ಆ ಮಹಾಕಾರ್ಯವನ್ನು ಹೇಳುವೆನು. ನನ್ನ ಕಾರ್ಯವೇ ನಿನ್ನ ಕಾರ್ಯವೆಂದು ತಿಳಿ. ಇದು ಹೊಗಳಿಕೆಯ ಮಾತಲ್ಲ.

೮. ಎಲೈ ಮದನ, ನನಗೆ ಅನೇಕಜನ ಪ್ರಿಯಮಿತ್ರರಿರುವರು. ಆದರೆ ನಿನ್ನಂತಹ ಸನ್ಮಿತ್ರನು ಮತ್ತೊಬ್ಬನಿಲ್ಲ.

ಜಯಾರ್ಥಂ ಮೇ ದ್ವಯಂ ತಾತಂ ನಿರ್ಮಿತಂ ವಜ್ರಮುತ್ತಮಂ ।
ವಜ್ರ ತು ನಿಷ್ಫಲಂ ಸ್ಯಾದ್ವೈ ತ್ವಂ ತು ನೈವ ಕದಾಚನ ॥ ೯ ॥

ಯತೋ ಹಿತಂ ಪ್ರಜಾಯೇತ ತತಃ ಕೋ ನು ಪ್ರಿಯಃ ಪರಃ ।
ತಸ್ಮಾನ್ಮಿತ್ರವರಸ್ತ್ವಂ ಹಿ ಮತ್ಕಾರ್ಯಂ ಕರ್ತುಮರ್ಹಸಿ ॥ ೧೦ ॥

ಮಮ ದುಃಖಂ ಸಮುತ್ಪನ್ನಮಸಾಧ್ಯಂ ಚಾಪಿ ಕಾಲಜಂ ।
ಕೇನಾಪಿ ನೈವ ತಚ್ಛಕ್ಯಂ ದೂರೀಕರ್ತುಂ ತ್ವಯಾ ವಿನಾ ॥ ೧೧ ॥

ದಾತುಃ ಪರೀಕ್ಷಾ ದುರ್ಭಿಕ್ಷೇ ರಣೇ ಶೂರಸ್ಯ ಜಾಯತೇ ।
ಆಪತ್ಕಾಲೇ ತು ಮಿತ್ರಸ್ಯಾಶಕ್ತೌ ಸ್ತ್ರೀಣಾಂ ಕುಲಸ್ಯ ಹಿ ॥ ೧೨ ॥

ವಿನಯೇ ಸಂಕಟೇ ಪ್ರಾಪ್ತೇಽವಿತಥಸ್ಯ ಪರೋಕ್ಷತಃ ।
ಸುಸ್ನೇಹಸ್ಯ ತಥಾ ತಾತ ನಾನ್ಯಥಾ ಸತ್ಯಮೀರಿತಂ ॥ ೧೩ ॥

---

೯. ಜಯವನ್ನು ಸಂಪಾದಿಸಲು ನನಗೆ ಎರಡು ಸಾಧನಗಳಿರುವುವು, ಒಂದು ಮನ್ಮಥನಾದ ನೀನು ಮತ್ತೊಂದು ವಜ್ರಾಯುಧವು. ಆ ವಜ್ರಾಯುಧವೂ ಸಹ ಒಮ್ಮೊಮ್ಮೆ ನಿಷ್ಫಲವಾಗುವುದು. ಆದರೆ ನಿನಗೆ ಎಂದೂ ಅಪಜಯವಿಲ್ಲ.

೧೦. ಹಿತವನ್ನು ಮಾಡುವವನಿಗಿಂತಲೂ ಪ್ರಿಯನಾದವನು ಯಾರು ? ಆದುದರಿಂದ ಮಿತ್ರವರ್ಯನಾದ ನೀನು ನನ್ನ ಈ ಕಾರ್ಯವನ್ನು ಮಾಡಬೇಕು.

೧೧. ಕಾಲವಶದಿಂದ ನನಗೆ ಈಗ ಮಹಾದುಃಖವು ಬಂದಿರುವುದು. ನಿನ್ನ ಹೊರತು ಆ ದುಃಖವನ್ನು ಹೋಗಲಾಡಿಸುವವನಾವನೂ ಇಲ್ಲ.

೧೨. ದುರ್ಭಿಕ್ಷಕಾಲದಲ್ಲಿ ದಾನಮಾಡುವನ ಪರೀಕ್ಷೆಯಾಗುತ್ತದೆ. ಯುದ್ಧ ದಲ್ಲಿ ಶೂರನ ಯೋಗ್ಯತೆಯು ಗೊತ್ತಾಗುತ್ತದೆ. ಕಷ್ಟಕಾಲದಲ್ಲಿ ಮಿತ್ರನ ಯೋಗ್ಯ ತೆಯು ಗೊತ್ತಾಗುತ್ತದೆ. ಗೃಹಕೃತ್ಯವು ಕೆಳಮಟ್ಟಕ್ಕೆ ಬಂದಾಗ ಸ್ತ್ರೀಯರ ಯೋಗ್ಯ ತೆಯು ಪರೀಕ್ಷೆಯಾಗುತ್ತದೆ.

೧೩. ಸಂಕಟವಲ್ಲಿ ಸ್ನೇಹದ ಪರೀಕ್ಷೆಯಾಗುತ್ತದೆ. ಎದುರಿನಲ್ಲಿ ಆಡಿದ ಮಾತಿನ ಸತ್ಯತೆಯು ಹಿಂದುಗಡೆಯಲ್ಲಿ ಗೊತ್ತಾಗುತ್ತದೆ. ಇದು ಸತ್ಯವಾದ ಮಾತು.

ಪ್ರಾಪ್ತಾಯಾಂ ವೈ ಮಮಾಪತ್ತಾವನಿವಾರ್ಯಾಯಾಂ ಪರೇಣ ಹಿ ।
ಪರೀಕ್ಷಾ ಚ ತ್ವದೀಯಾದ್ಯ ಮಿತವರ್ಯ ಭವಿಷ್ಯತಿ ॥ ೧೪ ॥

ನ ಕೇವಲಂ ಸ್ವಕೀಯಂ ಚ ಕಾರ್ಯಮಸ್ತಿ ಸುಖಾವಹಂ ।
ಕಿಂತು ಸರ್ವಸುರಾದೀನಾಂ ಕಾರ್ಯಮೇತನ್ನ ಸಂಶಯಃ ॥ ೧೫ ॥

॥ ಬ್ರಹ್ಮೋವಾಚ ॥

ಇತ್ಯೇತನ್ಮಘವದ್ವಾಕ್ಯಂ ಶ್ರುತ್ವಾ ತು ಮಕರಧ್ವಜಃ ।
ಉವಾಚ ಪ್ರೇಮಗಂಭೀರಂ ವಾಕ್ಯಂ ಸುಸ್ಮಿತಪೂರ್ವಕಂ ॥ ೧೬ ॥

॥ ಕಾಮ ಉವಾಚ ॥

ಕಿಮರ್ಥಮಿತ್ಥಂ ವದಸಿ ನೋತ್ತರಂ ವಚ್ಮ್ಯಹಂ ತವ ।
ಉಪಕೃತ್ಕೃತ್ರಿಮಂ ಲೋಕೇ ದೃಶ್ಯತೇ ಕಥ್ಯತೇ ನ ಚ ॥ ೧೭ ॥

ಸಂಕಟೇ ಬಹು ಯೋ ಬ್ರೂತೇ ಸ ಕಿಂ ಕಾರ್ಯಂ ಕರಿಷ್ಯತಿ ।
ತಥಾಪಿ ಚ ಮಹಾರಾಜ ಕಥಯಾಮಿ ಶೃಣು ಪ್ರಭೋ ॥ ೧೮ ॥

---

೧೪. ಎಲೈ ಮಿತ್ರವರ್ಯನಾದ ಮನ್ಮಥನೆ, ಹೀಗೆ ಅನಿವಾರ್ಯವಾಗಿ ಬಂದಿರುವ ಈ ನನ್ನ ಆಪತ್ತಿನಲ್ಲಿ ನಿನ್ನ ಪರೀಕ್ಷೆಯೂ ಆಗತಕ್ಕದ್ದಿದೆ.

೧೫. ಈ ಕಾರ್ಯದಿಂದ ಕೇವಲ ನನಗೆ ಮಾತ್ರ ಸುಖವಾಗುವುದಿಲ್ಲ. ಎಲ್ಲಾ ದೇವತೆಗಳಿಗೂ ಇದರಿಂದ ಸುಖವಾಗುವುದು. ಇದರಲ್ಲಿ ಸಂಶಯವಿಲ್ಲ ಎಂದನು.

೧೬-೧೭. ಬ್ರಹ್ಮನು ಹೇಳಿದನು:—ಹೀಗೆ ಇಂದ್ರನು ಹೇಳಿದ ಮಾತುಗಳನ್ನು ಕೇಳಿ ಮನ್ಮಥನು ಮಂದಹಾಸದೊಡನೆ, ಆದರಯುಕ್ತವೂ ಗಂಭೀರವೂ ಆದ ವಾಕ್ಯಗಳಿಂದ ಹೇಳಿದನು. ಎಲೈ ಇಂದ್ರನೆ, ಇದೇನು ಹೀಗೆ ಹೇಳುವೆ? ಇದಕ್ಕೆ ಉತ್ತರವನ್ನು ನಾನು ಹೇಳುವುದಿಲ್ಲ. ಮಿತ್ರನು ಉಪಕಾರವನ್ನು ಮಾಡುವನೇ ಹೊರತು, ಸುಮ್ಮನೇ ಮಾತನಾಡಲಾರನು.

೧೮. ಆಪತ್ತಿನ ಕಾಲದಲ್ಲಿ ಹೆಚ್ಚಾಗಿ ಯಾವನು ಮಾತನಾಡುವನೋ ಅವನು ಏನೂ ಮಾಡಲಾರನು. ಹಾಗಿದ್ದರೂ ಈಗ ನಾನು ಒಂದು ಮಾತನ್ನು ಹೇಳುವೆನು ಕೇಳು.

ಪದಂ ತೇ ಕರ್ಷಿತುಂ ಯೋ ವೈ ತಪಸ್ತಪತಿ ದಾರುಣಂ ।
ಪಾತಯಿಷ್ಯಾಮ್ಯಹಂ ತಂ ಚ ಶತ್ರುಂ ತೇ ಮಿತ್ರ ಸರ್ವಥಾ ॥ ೧೯ ॥

ಕ್ಷಣೇನ ಭ್ರಂಶಯಿಷ್ಯಾಮಿ ಕಟಾಕ್ಷೇಣ ವರಸ್ತ್ರಿಯಾಃ ।
ದೇವರ್ಷಿದಾನವಾದೀಂಶ್ಚ ನರಾಣಾಂ ಗಣನಾ ನ ಮೇ ॥ ೨೦ ॥

ವಜ್ರಂ ತಿಷ್ಠತು ದೂರೇ ವೈ ಶಸ್ತ್ರಾಣ್ಯಸ್ತ್ರಾಣ್ಯನೇಕಶಃ ।
ಕಿಂ ತೇ ಕಾರ್ಯಂ ಕರಿಷ್ಯಂತಿ ಮಯಿ ಮಿತ್ರ ಉಪಸ್ಥಿತೇ ॥ ೨೧ ॥

ಬ್ರಹ್ಮಾಣಂ ವಾ ಹರಿಂ ವಾಪಿ ಭ್ರಷ್ಟಂ ಕುರ್ಯಾಂ ನ ಸಂಶಯಃ ।
ಅನ್ಯೇಷಾಂ ಗಣನಾ ನಾಸ್ತಿ ಪಾತಯೇಯಂ ಹರಂ ತ್ವಪಿ ॥ ೨೨ ॥

ಪಂಚೈವ ಮೃದವೋ ಬಾಣಾಸ್ತೇ ಚ ಪುಷ್ಪಮಯಾ ಮಮ ।
ಚಾಪಸ್ತ್ರಿಧಾ ಪುಷ್ಪಮಯಶ್ಶಿಂಜಿನೀ ಭ್ರಮರಾರ್ಜಿತಾ ॥ ೨೩ ॥

---

೧೯. ಎಲೈ ಮಿತ್ರನೆ, ನಿನ್ನ ಇಂದ್ರಪದವಿಯನ್ನು ಕಸಿದುಕೊಳ್ಳಲು ಯಾವನು ತಪಸ್ಸುಮಾಡಿದರೂ ಅವನನ್ನು ಸರ್ವಥಾ ನಾನು ಹಾಳುಮಾಡುವೆನು.

೨೦. ಸುಂದರಸ್ತ್ರೀಯ ಕುಡಿನೋಟಗಳಿಂದ ತಪಸ್ವಿಯ ತಪಸ್ಸನ್ನು ಕೆಡಿಸುವೆನು. ದೇವತೆಗಳು, ಋಷಿಗಳು, ದಾನವರು, ಮಾನವರು, ಇವರ ಲೆಕ್ಕವೇ ನನಗಿಲ್ಲ.

೨೧. ನಿನ್ನ ವಜ್ರವು ದೂರದಲ್ಲಿರಲಿ, ಶಸ್ತ್ರಗಳು ಅಸ್ತ್ರಗಳು ಇವೆಲ್ಲವೂ ಸಹ ಮಿತ್ರನಾದ ನನ್ನಮುಂದೆ ಅದೆಂತಹ ಕಾರ್ಯವನ್ನು ಸಾಧಿಸಬಲ್ಲವು?

೨೨. ಬ್ರಹ್ಮವಿಷ್ಣುಗಳನ್ನೂ ಮೋಹಗೊಳಿಸಬಲ್ಲೆನು. ಮಿಕ್ಕವರ ಗಣನೆಯೇ ನನಗಿಲ್ಲ. ಹರನನ್ನೂ ಸಹ ಮೋಹಗೊಳಿಸಬಲ್ಲೆನು.

೨೩. ನನ್ನಲ್ಲಿ ಮೃದುವಾದ ಐದೇ ಬಾಣಗಳಿರುವುವು. ಅವೂ ಹೂವಿನವು. ಧನಸ್ಸು ಮೂರುವಿಧವಾಗಿರುವುದು. ಅದೂ ಹೂವಿನದೇ, ಮೌರ್ವಿ (ಧನುಸ್ಸಿನ ಹಗ್ಗ)ಯು ದುಂಬಿಗಳಿಂದ ಮಾಡಿದುದು.

ಬಲಂ ಸುದಯಿತಾ ಮೇ ಹಿ ವಸಂತಃ ಸಚಿವಃ ಸ್ಮೃತಃ ।
ಅಹಂ ಪಂಚಬಲೋ ದೇವಾ ಮಿತ್ರಂ ಮಮ ಸುಧಾನಿಧಿಃ ॥ ೨೪ ॥

ಸೇನಾಧಿಪಶ್ಚ ಶೃಂಗಾರೋಃ ಹಾವಭಾವಾಶ್ಚ ಸೈನಿಕಾಃ ।
ಸರ್ವೇ ಮೇ ಮೃದವಃ ಶಕ್ರ ಅಹಂ ಚಾಪಿ ತಥಾವಿಧಃ ॥ ೨೫ ॥

ಯದ್ಯೇನ ಪೂರ್ಯತೇ ಕಾರ್ಯಂ ಧೀಮಾಂಸ್ತತ್ತೇನ ಯೋಯೇತ್ ।
ಮಮ ಯೋಗ್ಯಂ ತು ಯತ್ಕಾರ್ಯ ಸರ್ವಂ ತನ್ಮೇ ನಿಯೋಜಯ
॥ ೨೬ ॥

॥ ಬ್ರಹ್ಮೋವಾಚ ॥

ಇತ್ಯೇವಂ ತು ವಚಸ್ತಸ್ಯ ಶ್ರುತ್ವಾ ಶಕ್ರಸ್ಸುಹರ್ಷಿತಃ ।
ಉವಾಚ ಪ್ರಣಮನ್ವಾಚಾ ಕಾಮಂ ಕಾಂತಾಸುಖಾವಹಂ ॥ ೨೭ ॥

---

೨೪. ನನ್ನ ಪತ್ನಿಯಾದ ರತಿಯೇ ನನ್ನ ಬಲವು. ವಸಂತನೇ ಮಂತ್ರಿಯು. ಚಂದ್ರನು ನನ್ನ ಮಿತ್ರನು. ಹೀಗೆ ನಾನು ಐದು ವಿಧವಾಗಿ ಬಲವುಳ್ಳವನಾಗಿರುವೆನು.

೨೫. ಶೃಂಗಾರರಸವು ನನ್ನ ಸೇನಾಪತಿಯು. ಸುಂದರಿಯರ ಹಾವಭಾವಗಳು ನನ್ನ ಸೈನಿಕರು. ಹೀಗೆ ನನ್ನ ಬಲವೆಲ್ಲವೂ ಮೃದುವಾದುದಾಗಿದೆ. ನಾನೂ ಸಹ ಮೃದುವಾದವನು.

೨೬. ಯಾವನು ಬುದ್ಧಿವಂತಿಕೆಯಿಂದ ಯಾವಕಾರ್ಯವನ್ನು ನಿರ್ವಹಿಸ ಬಲ್ಲನೋ ಅವನನ್ನು ಆ ಕಾರ್ಯದಲ್ಲಿಯೇ ನಿಯೋಗಿಸಬೇಕು. ಆದುದರಿಂದ ಈಗ ನನಗೆ ಯೋಗ್ಯವಾದ ಕಾರ್ಯವನ್ನು ನಿಯಮಿಸು ಎಂದನು.

೨೭. ಬ್ರಹ್ಮನು ಹೇಳಿದನು :— ಹೀಗೆ ಮನ್ಮಥನು ಹೇಳಿದ ಮಾತುಗಳನ್ನು ಕೇಳಿ ಇಂದ್ರನು ತುಂಬಾ ಸಂತೋಷಗೊಂಡು ಅವನನ್ನು ಗೌರವಿಸುತ್ತಾ ಈ ಮಾತನ್ನಾಡಿದನು. ಆ ಮಾತು ಮನ್ಮಥಪತ್ನಿಯಾದ ರತಿಗೆ ಮಾತ್ರ ದುಃಖವನ್ನುಂಟು ಮಾಡುವಂತಹುದಾಗಿತ್ತು.

॥ ಶಕ್ರ ಉವಾಚ ॥

ಯತ್ಕಾರ್ಯಂ ಮನಸೋದ್ದಿಷ್ಟಂ ಮಯಾ ತಾತ ಮನೋಭವ ।
ಕರ್ತುಂ ತತ್ತ್ವಂ ಸಮರ್ಥೋಽಸಿ ನಾನ್ಯಸ್ಮಾತ್ತಸ್ಯ ಸಂಭವಃ ॥ ೨೮ ॥

ಶೃಣು ಕಾಮ ಪ್ರವಕ್ಷ್ಯಾಮಿ ಯಥಾರ್ಥಂ ಮಿತ್ರಸತ್ತಮ ।
ಯದರ್ಥೇ ಚ ಸ್ಪೃಹಾ ಜಾತಾ ತವ ಚಾದ್ಯ ಮನೋಭವ ॥ ೨೯ ॥

ತಾರಕಾಖ್ಯೋ ಮಹಾದೈತ್ಯೋ ಬ್ರಹ್ಮಣೋ ವರಮದ್ಭುತಂ ।
ಅಭೂದಜೇಯಸ್ಸಂಪ್ರಾಪ್ಯ ಸರ್ವೇಷಾಮಪಿ ದುಃಖದಃ ॥ ೩೦ ॥

ತೇನ ಸಂಪೀಡ್ಯತೇ ಲೋಕೋ ನಷ್ಟಾ ಧರ್ಮಾ ಹ್ಯನೇಕಶಃ ।
ದುಃಖಿತಾ ನಿರ್ಜರಾಸ್ಸರ್ವೇ ಋಷಯಶ್ಚ ತಥಾಖಿಲಾಃ ॥ ೩೧ ॥

ದೇವೈಶ್ಚ ಸಕಲೈಸ್ತೇನ ಕೃತಂ ಯುದ್ಧಂ ಯಥಾಬಲಂ ।
ಸರ್ವೇಷಾಂ ಚಾಯುಧಾನ್ಯತ್ರ ವಿಫಲಾನ್ಯಭವನ್ ಪುರಾ ॥ ೩೨ ॥

---

೨೮. ಇಂದ್ರನು ಹೇಳಿದನು:—ಎಲೈ ಮನ್ಮಥನೆ, ನಾನು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡಿರುವ ಕಾರ್ಯವನ್ನು ಮಾಡಲು ನೀನೇ ಸಮರ್ಥನು. ಇನ್ನಾರೂ ಮಾಡಲಾರರು.

೨೯. ಎಲೈ ಕಾಮನೆ, ನಿಜವಾದ ವಿಷಯವನ್ನು ಈಗ ಹೇಳುವೆನು. ಯಾವುದನ್ನು ಮಾಡುವುದಕ್ಕಾಗಿ ನೀನು ಆತುರಗೊಂಡಿರುವೆಯೋ ಆ ಕಾರ್ಯವನ್ನು ಈಗ ಹೇಳುವೆನು ಕೇಳು.

೩೦. ತಾರಕನೆಂಬ ಮಹಾದೈತ್ಯನು ಬ್ರಹ್ಮನಿಂದ ಅದ್ಭುತವಾದ ವರವೊಂದನ್ನು ಪಡೆದು ಎಲ್ಲರಿಗೂ ಅಜೇಯನಾಗಿರುವನು. ಎಲ್ಲರನ್ನೂ ಪೀಡಿಸುತ್ತಲಿರುವನು.

೩೧. ಆ ದೈತ್ಯನು ಜನಗಳೆಲ್ಲರನ್ನೂ ಪೀಡಿಸುತ್ತಲಿರುವನು. ಧರ್ಮಗಳೆಲ್ಲವೂ ನಷ್ಟವಾಗಿರುವುವು. ದೇವತೆಗಳು ಋಷಿಗಳು ಎಲ್ಲರೂ ದುಃಖಿತರಾಗಿರುವರು.

೩೨. ದೇವತೆಗಳೆಲ್ಲರೂ ಆ ದೈತ್ಯನೊಡನೆ ಶಕ್ತಿಯನ್ನು ಮೀರಿ ಯುದ್ಧ ಮಾಡಿದರು. ಎಲ್ಲರ ಆಯುಧಗಳೂ ಸಹ ವ್ಯರ್ಥವಾದುವು.

ಭಗ್ನಃ ಪಾಶೋ ಜಲೇಶಸ್ಯ ಹರಿಚಕ್ರಂ ಸುದರ್ಶನಂ ।
ತತ್ಕಂಠಿತಮಭೂತ್ತಸ್ಯ ಕಂಠೇ ಕ್ಷಿಪ್ತಂ ಚ ವಿಷ್ಣುನಾ ॥ ೩೩ ॥

ಏತಸ್ಯ ಮರಣಂ ಪ್ರೋಕ್ತಂ ಪ್ರಜೇಶೇನ ದುರಾತ್ಮನಃ ।
ಶಂಭೋರ್ವೀರ್ಯೋದ್ಭವಾದ್ಬಾಲಾನ್ಮಹಾಯೋಗೀಶ್ವರಸ್ಯ ಹಿ ॥ ೩೪ ॥

ಏತತ್ಕಾರ್ಯಂ ತ್ವಯಾ ಸಾಧು ಕರ್ತವ್ಯಂ ಸುಪ್ರಯತ್ನತಃ ।
ತತಃ ಸ್ಯಾನ್ಮಿತ್ರವರ್ಯಾತಿ ದೇವಾನಾಂ ನಃ ಪರಂ ಸುಖಂ ॥ ೩೫ ॥

ಮಮಾಪಿ ವಿಹಿತಂ ತಸ್ಮಾತ್ಸರ್ವಲೋಕಸುಖಾವಹಂ ।
ಮಿತ್ರಧರ್ಮಂ ಹೃದಿ ಸ್ಮೃತ್ವಾ ಕರ್ತುಮರ್ಹಸಿ ಸಾಂಪ್ರತಂ ॥ ೩೬ ॥

ಶಂಭುಸ್ಸ ಗಿರಿರಾಜೇ ಹಿ ತಪಃ ಪರಮಮಾಸ್ಥಿತಃ ।
ಸ ಪ್ರಭುರ್ನಾಪಿ ಕಾಮೇನ ಸ್ವತಂತ್ರಃ ಪರಮೇಶ್ವರಃ ॥ ೩೭ ॥

---

೩೩. ವರುಣನ ಪಾಶವು ಭಗ್ನವಾಯಿತು. ವಿಷ್ಣುವು ಆ ದೈತ್ಯನ ಕತ್ತಿನ ಮೇಲೆ ಸುದರ್ಶನ ಚಕ್ರವನ್ನು ಪ್ರಯೋಗಿಸಿದನು. ಆದರದು ಮೊಂಡಾಗಿ ಆ ದೈತ್ಯನ ಕತ್ತನ್ನಲಂಕರಿಸಿ ಅಲ್ಲಿಯೇ ಕುಳಿತಿತು.

೩೪. ಮಹಾ ಯೋಗೀಶ್ವರನಾದ ಪರಮೇಶ್ವರನ ವೀರ್ಯದಿಂದ ಜನಿಸಿದ ಕುಮಾರನಿಂದಲೇ ಮರಣವಾಗುವುದೆಂದು ಬ್ರಹ್ಮನು ಆ ದೈತ್ಯನಿಗೆ ವರವನ್ನು ಕೊಟ್ಟಿರುವನು.

೩೫. ಎಲೈ ಮಿತ್ರೋತ್ತಮನೆ, ಈ ಮಹಾಕಾರ್ಯವನ್ನು ನೀನು ಪ್ರಯತ್ನದಿಂದ ನೆರವೇರಿಸಬೇಕು. ಹಾಗೆ ಮಾಡಿದರೆ ದೇವತೆಗಳಾದ ನಮ್ಮೆಲ್ಲರಿಗೂ ಸುಖವಾಗುವುದು.

೩೬. ನನಗೂ ಈ ಕಾರ್ಯವು ಹಿತವಾದುದು. ಆದುದರಿಂದ ಎಲೈ ಮದನ, ಸ್ನೇಹವನ್ನು ಸ್ಮರಿಸಿ ಲೋಕಕ್ಕೆಲ್ಲಾ ಸುಖವಾಗುವಂತಹ ಈ ಕಾರ್ಯವನ್ನು ನೀನು ಮಾಡಬೇಕು.

೩೭. ಆ ಶಂಕರನು ಹಿಮಾಲಯದಲ್ಲಿ ತಪಸ್ಸನ್ನಾಚರಿಸುತ್ತಾ ಕುಳಿತಿರುವನು ಎಲ್ಲಕ್ಕೂ ಪ್ರಭುವಾದ ಆ ಶಿವನು ಯಾವ ಅಭೀಷ್ಟಸಾಧನೆಗಾಗಿಯೂ ತಪವನ್ನಾಚರಿಸುತ್ತಲಿಲ್ಲ. ಅವನು ಸ್ವತಂತ್ರನು, ಪರಮೇಶ್ವರನು, ಬೇಕಾದ ಇಷ್ಟಾರ್ಥಗಳನ್ನು ಅವನೇ ಅನುಗ್ರಹಿಸುವನು.

ತತ್ಸಮೀಪೇ ಚ ದೇವಾರ್ಥಂ ಪಾರ್ವತೀ ಸ್ವಸಖೀಯುತಾ ।
ಸೇವಮಾನಾ ತಿಷ್ಠತೀತಿ ಪಿತ್ರಾಜ್ಞಪ್ತಾ ಮಯಾ ಶ್ರುತಂ ॥ ೩೮ ॥

ಯಥಾ ತಸ್ಯಾಂ ರುಚಿಸ್ತಸ್ಯ ಶಿವಸ್ಯ ನಿಯತಾತ್ಮನಃ ।
ಜಾಯತೇ ನಿತರಾಂ ಮಾರ ತಥಾ ಕಾರ್ಯಂ ತ್ವಯಾ ಧ್ರುವಂ ॥ ೩೯ ॥

ಇತಿ ಕೃತ್ವಾ ಕೃತೀ ಸ್ಯಾಸ್ತ್ವಂ ಸರ್ವಂ ದುಃಖಂ ವಿನಂಕ್ಷ್ಯತಿ ।
ಲೋಕೇ ಸ್ಥಾಯೀ ಪ್ರತಾಪಸ್ತೇ ಭವಿಷ್ಯತಿ ನ ಚಾನ್ಯಥಾ ॥ ೪೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತಸ್ಸ ತು ಕಾಮೋ ಹಿ ಪ್ರಫುಲ್ಲಮುಖಪಂಕಜಃ ।
ಪ್ರೇಮ್ಣೋವಾಚೇತಿ ದೇವೇಶಂ ಕರಿಷ್ಯಾಮಿ ನ ಸಂಶಯಃ ॥ ೪೧ ॥

ಇತ್ಯುಕ್ತ್ವಾ ವಚನಂ ತಸ್ಮೈ ತಥೇತ್ಯೋಮಿತಿ ತದ್ವಚಃ ।
ಅಗ್ರಹೀತ್ತರಸಾ ಕಾಮಃ ಶಿವಮಾಯಾವಿಮೋಹಿತಃ ॥ ೪೨ ॥

---

೩೮. ಆ ಶಿವನ ಸಮೀಪದಲ್ಲಿರುತ್ತಾ ಪಾರ್ವತಿಯು ಸಖಿಯರೊಡನೆ ತನ್ನ ತಂದೆಯಾದ ಹಿಮವಂತನ ಅಪ್ಪಣೆಯಂತೆ ದೇವಕಾರ್ಯಸಿದ್ಧಿಗಾಗಿ ಶಂಕರನನ್ನು ಸೇವಿಸುತ್ತಲಿರುವಳು. ಹೀಗೆಂದು ನಾನು ಕೇಳಿರುವೆನು.

೩೯. ಎಲೈ ಮನ್ಮಥನೆ, ಆ ಪಾರ್ವತಿಯಲ್ಲಿ ಮಹಾಯೋಗಿಯಾದ ಶಿವನಿಗೆ ಪ್ರೀತಿಯುಂಟಾಗುವಂತೆ ನೀನು ಪ್ರಯತ್ನಿಸಬೇಕು.

೪೦. ಹಾಗೆ ಮಾಡಿ ನೀನು ಕೃತಕೃತ್ಯನಾಗು. ಅದರಿಂದ ಎಲ್ಲರ ದುಃಖವೂ ನಾಶವಾಗುವುದು. ಲೋಕದಲ್ಲಿ ನಿನ್ನ ಪ್ರತಾಪವು ಸ್ಥಿರವಾಗಿ ನಿಲ್ಲುವುದು ಎಂದನು.

೪೧. ಬ್ರಹ್ಮನು ಹೇಳಿದನು :— ಹೀಗೆ ಇಂದ್ರನು ಹೇಳಲು ಆಗ ಮನ್ಮಥನಿಗೆ ಸಂತೋಷದಿಂದ ಮುಖವರಳಿತು. ಪ್ರೀತಿಯಿಂದ ಇಂದ್ರನನ್ನು ಕುರಿತು, ಆಗಲಿ. ಈ ಕಾರ್ಯವನ್ನು ಮಾಡುವೆನು ಇದರಲ್ಲಿ ಸಂಶಯವಿಲ್ಲ ಎಂದು ಹೇಳಿದನು.

೪೨. ಹೀಗೆ ಹೇಳಿ ಮನ್ಮಥನು ಶಿವನ ಮಾಯೆಯಿಂದ ಮೋಹಗೊಂಡವನಾಗಿ ಇಂದ್ರನ ಮಾತನ್ನು ಅಂಗೀಕರಿಸಿದನು.

ಯತ್ರ ಯೋಗೀಶ್ವರಸ್ಸಾಕ್ಷಾತ್ತಪ್ಯತೇ ಪರಮಂ ತಪಃ ।
ಜಗಾಮ ತತ್ರ ಸುಪ್ರೀತಸ್ಸದಾರಸ್ಸವಸಂತಕಃ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಸಪ್ತದಶೋಽಧ್ಯಾಯಃ



೪೩. ಬಳಿಕ ಮನ್ಮಥನು ರತಿ ಮತ್ತು ವಸಂತರೊಡನೆ ಯೋಗೀಶ್ವರನಾದ ಪರಮೇಶ್ವರನು ತಪಸ್ಸುಮಾಡುತ್ತಿರುವಲ್ಲಿಗೆ ಸಂತೋಷದಿಂದ ತೆರಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಅಷ್ಟಾದಶೋಽಧ್ಯಾಯಃ

॥ ಬ್ರಹ್ಮೋವಾಚ ॥

ತತ್ರ ಗತ್ವಾ ಸ್ಮರೋ ಗರ್ವೀ ಶಿವಮಾಯಾವಿಮೋಹಿತಃ ।
ಮೋಹಕಸ್ಯ ಮಧೋಶ್ಚಾದೌ ಧರ್ಮಂ ವಿಸ್ತಾರಯನ್ ಸ್ಥಿತಃ ॥ ೧ ॥

ವಸಂತಸ್ಯ ಚ ಯೋ ಧರ್ಮಃ ಪ್ರಸಸಾರ ಸ ಸರ್ವತಃ
ತಪಃಸ್ಥಾನೇ ಮಹೇಶಸ್ಯೌಷಧಿಪ್ರಸ್ಥೇ ಮುನೀಶ್ವರ ॥ ೨ ॥

ವನಾನಿ ಚ ಪ್ರಫುಲ್ಲಾನಿ ಪಾದಪಾನಾಂ ಮಹಾಮುನೇ ।
ಆಸನ್ ವಿಶೇಷತಸ್ತತ್ರ ತತ್ಪ್ರಭಾವಾನ್ಮುನೀಶ್ವರ ॥ ೩ ॥

---

## ಹದಿನೆಂಟನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಶಿವನ ಬಳಿಗೆ ಹೋಗಿ ಗರ್ವಿಷ್ಠನಾದ ಮನ್ಮಥನು ಶಿವಮಾಯೆಯ ಮಹಿಮೆಯಿಂದ ಮೊದಲು ತನ್ನ ಮಿತ್ರನಾದ ವಸಂತನ ಧರ್ಮವು ಆ ತಪೋವನದಲ್ಲಿ ಹರಡುವಂತೆ ಮಾಡಿದನು.

೨. ಆಗ ಮಹೇಶನ ತಪೋವನವಾದ ಓಷಧಿಪ್ರಸ್ಥವೆಂಬ ತಪ್ಪಲಿನಲ್ಲಿ ವಸಂತ ಋತುವು ಉದಯಿಸಿ ತನ್ನ ಪ್ರಭಾವವನ್ನು ಅಲ್ಲೆಲ್ಲಾ ಬೀರಿತು.

೩. ಎಲೈ ನಾರದ, ಆ ವನದಲ್ಲಿ ವಸಂತಪ್ರಭಾವದಿಂದ ಮರಗಳೆಲ್ಲವೂ ಚಿಗುರಿದುವು.

ಪುಷ್ಪಾಣಿ ಸಹಕಾರಾಣಾಮಶೋಕವನಿಕಾಸು ವೈ ।
ವಿರೇಜುಃ ಸುಸ್ಮರೋದ್ದೀಪಕಕರಾಣಿ ಸುರಭೀಣ್ಯಪಿ ॥ ೪ ॥

ಕೈರವಾಣಿ ಚ ಪುಷ್ಪಾಣಿ ಭ್ರಮರಾಕಲಿತಾನಿ ಚ ।
ಬಭೂವುರ್ಮದನಾವೇಶಕರಾಣಿ ಚ ವಿಶೇಷತಃ ॥ ೫ ॥

ಸುಕಾಮೋದ್ದೀಪನಕರಂ ಕೋಕಿಲಾಕಲಕೂಜಿತಂ ।
ಆಸೀದತಿ ಸುರಮ್ಯಂ ಚ ಮನೋಹರಮತಿಪ್ರಿಯಂ ॥ ೬ ॥

ಭ್ರಮರಾಣಾಂ ತಥಾ ಶಬ್ದಾ ವಿವಿಧಾ ಅಭವನ್ಮುನೇ ।
ಮನೋಹರಾಶ್ಚ ಸರ್ವೇಷಾಂ ಕಾಮೋದ್ದೀಪಕರಾ ಅಪಿ ॥ ೭ ॥

ಚಂದ್ರಸ್ಯ ವಿಶದಾ ಕಾಂತಿರ್ವಿಕೀರ್ಣಾ ಹಿ ಸಮಂತತಃ ।
ಕಾಮಿನಾಂ ಕಾಮಿನೀನಾಂ ಚ ದೂತಿಕಾ ಇವ ಸಾಭವತ್ ॥ ೮ ॥

ಮಾನಿನಾಂ ಪ್ರೇರಣಾಯಾಸೀತ್ತತ್ಕಾಲೇ ಕಾಲದೀಪಿಕಾ ।
ಮಾರುತಶ್ಚ ಸುಖಃ ಸಾಭೋ ವವೌ ವಿಹರಿಣೋಽಪ್ರಿಯಃ ॥ ೯ ॥

---

೪. ಅಶೋಕವನಗಳಲ್ಲಿ ಮಾವಿನಮರಗಳು ಹೂವುಗಳನ್ನು ಬಿಟ್ಟವು. ಅದರ ಸುವಾಸನೆಯು ಎಲ್ಲೆಲ್ಲಿಯೂ ಹರಡಿ ಜನರಿಗೆ ಮನ್ಮಥವಿಕಾರವುಂಟಾಗುವಂತಿತ್ತು.

೫. ಕಮಲಗಳು ಅರಳಿ ಅವುಗಳಲ್ಲಿ ದುಂಬಿಗಳು ಮುತ್ತಿ ಮಧುಪಾನವನ್ನು ಮಾಡುತ್ತಾ ಕಾಮವಿಕಾರವಾಗುವಂತೆ ಝೇಂಕರಿಸುತ್ತಿದ್ದವು.

೬-೭. ಕಾಮೋದ್ದೀಪನವಾಗುವಂತೆ ಕೋಗಿಲೆಗಳು ಮನೋಹರವಾಗಿ ಧ್ವನಿಗೈಯ್ಯುತ್ತಿದ್ದವು. ದುಂಬಿಗಳು ಅನೇಕ ವಿಧವಾಗಿ ಮನೋಹರವಾಗಿ ಝೇಂಕರಿಸಿದುವು.

೮. ನಿರ್ಮಲವಾದ ಚಂದ್ರಕಾಂತಿಯು ಎಲ್ಲೆಡೆಯಲ್ಲಿಯೂ ಹರಡಿ ಕಾಮನೀ ಕಾಮುಕರನ್ನು ಸೇರಿಸುವ ದೂತಿಯಂತಾಯಿತು.

೯. ವಸಂತಕಾಲವೆಂಬ ದೀಪಿಕೆಯು ಕಾಮುಕರನ್ನು ಕಾಮೋತ್ಸವಕ್ಕೆ ಪ್ರೇರಣಮಾಡತೊಡಗಿತು. ಗಾಳಿಯು ಸುಖವಾಗಿ ಬೀಸಿತು. ಆದರೆ ವಿರಹಿಗಳಿಗೆ ದುಃಖಕರವಾಗಿತ್ತು.

ಏವಂ ವಸಂತವಿಸ್ತಾರೋ ಮದನಾವೇಶಕಾರಕಃ ।
ವನೌಕಸಾಂ ತದಾ ತತ್ರ ಮುನೀನಾಂ ದುಸ್ಸಹೋಽಭವತ್ ॥ ೧೦ ॥

ಅಚೇತಸಾಮಪಿ ತದಾ ಕಾಮಾಸಕ್ತಿರಭೂನ್ಮುನೇ ।
ಸುಚೇತಸಾಂ ಹಿ ಜೀವಾನಾಂ ಸೇತಿ ಕಿಂ ವರ್ಣ್ಯತೇ ಕಥಾ ॥ ೧೧ ॥

ಏವಂ ಚಕಾರ ಸ ಮಧುಃ ಸ್ವಪ್ರಭಾವಂ ಸುದುಸ್ಸಹಂ ।
ಸರ್ವೇಷಾಂ ಚೈವ ಜೀವಾನಾಂ ಕಾಮೋದ್ದೀಪನಕಾರಕಃ ॥ ೧೨ ॥

ಅಕಾಲನಿರ್ಮಿತಂ ತಾತ ಮಧೋರ್ವೀಕ್ಷ್ಯ ಹರಸ್ತದಾ ।
ಆಶ್ಚರ್ಯಂ ಪರಮಂ ಮೇನೇ ಸ್ವಲೀಲಾತ್ತತನುಃ ಪ್ರಭುಃ ॥ ೧೩ ॥

ಅಥ ಲೀಲಾಕರಸ್ತತ್ರ ತಪಃ ಪರಮದುಷ್ಕರಂ ।
ತತಾಪ ಸ ವಶೀಶೋ ಹಿ ಹರೋ ದುಃಖಹರಸ್ತದಾ ॥ ೧೪ ॥

ವಸಂತೇ ಪ್ರಸೃತೇ ತತ್ರ ಕಾಮೋ ರತಿಸಮನ್ವಿತಃ ।
ಚೂತಂ ಬಾಣಂ ಸಮಾಕೃಷ್ಯ ಸ್ಥಿತಸ್ತದ್ವಾಮಪಾರ್ಶ್ವತಃ ॥ ೧೫ ॥

---

೧೦. ವಸಂತಋತುವು ತನ್ನ ಪ್ರಭಾವವನ್ನು ಅಲ್ಲಿಲ್ಲಾ ಹರಡಿ ವನದಲ್ಲಿರುವ ಮುನಿಗಳಿಗೂ ಮನ್ಮಥವಿಕಾರವನ್ನುಂಟುಮಾಡುವುದಾಗಿದ್ದಿತು.

೧೧. ಎಲೈ ನಾರದನೆ, ತಿರ್ಯಕ್ಪ್ರಾಣಿಗಳಿಗೂ ಸಹ ಆಗ ಕಾಮವಿಕಾರ ವುಂಟಾಯಿತು. ಇನ್ನು ಮನುಷ್ಯರಿಗೆ ಉಂಟಾಯಿತೆಂದು ಹೇಳಬೇಕಾದುದೇನು ?

೧೨. ಹೀಗೆ ವಸಂತನು ಎಲ್ಲ ಪ್ರಾಣಿಗಳಿಗೂ ಕಾಮವಿಕಾರವನ್ನು ಹೊಂದು ವಂತೆ ದುಸ್ಸಹವಾದ ತನ್ನ ಪ್ರಭಾವವನ್ನು ಪ್ರಸರಿಸಿದನು.

೧೩. ಅಕಾಲದಲ್ಲಿ ವಸಂತಋತುವಿನ ಮಹಿಮೆಯನ್ನು ನೋಡಿ ಲೀಲಾಮೂರ್ತಿಯಾದ ಹರನು ತುಂಬಾ ಆಶ್ಚರ್ಯಗೊಂಡನು.

೧೪. ಆದರೂ ಆ ಶಿವನು ಘೋರವಾದ ತಪವನ್ನಾಚರಿಸುತ್ತಲಿದ್ದನು ದುಃಖನಾಶಕನಾದ ಆ ಹರನು ಮಹಾ ಜಿತೇಂದ್ರಿಯನಲ್ಲವೇ ?

೧೫. ವಸಂತನು ತನ್ನ ಮಹಿಮೆಯನ್ನು ಹರಡಲು ಅಲ್ಲಿ ಮನ್ಮಥನು ತನ್ನ ಚೂತಬಾಣವನ್ನು ಬಿಲ್ಲಿಗೇರಿಸಿ ಶಿವನ ಎಡಭಾಗದಲ್ಲಿ ರತಿಯೊಡನೆ ನಿಂತನು.

ಸ್ವಪ್ರಭಾವಂ ವಿತಸ್ತಾರ ಮೋಹಯನ್ ಸಕಲಾನ್ ಜನಾನ್ ।
ರತ್ಯಾ ಯುಕ್ತಂ ತದಾ ಕಾಮಂ ದೃಷ್ಟ್ವಾ ಕೋ ವಾ ನ ಮೋಹಿತಃ ॥ ೧೬ ॥

ಏವಂ ಪ್ರವೃತ್ತಸುರತೌ ಶೃಂಗಾರೋಽಪಿ ಗಣೈಸ್ಸಹ ।
ಹಾವಭಾವಯುತಸ್ತತ್ರ ಪ್ರವಿವೇಶ ಹರಾಂತಿಕಂ ॥ ೧೭ ॥

ಮದನಃ ಪ್ರಕಟಸ್ತತ್ರ ನ್ಯವಸಚ್ಚಿತ್ತಗೋ ಬಹಿಃ ।
ನ ದೃಷ್ಟವಾಂಸ್ತದಾ ಶಂಭೋಶ್ಛಿದ್ರಂ ಯೇನ ಪ್ರವಿಶ್ಯತೇ ॥ ೧೮ ॥

ಯದಾ ಚಾಪ್ರಾಪ್ತವಿವರಸ್ತಸ್ಮಿನ್ಯೋಗಿವರೇ ಸ್ಮರಃ ।
ಮಹಾದೇವಸ್ತದಾ ಸೋಽಭೂನ್ಮಹಾಭಯವಿಮೋಹಿತಃ ॥ ೧೯ ॥

ಜ್ವಲಜ್ಜ್ವಾಲಾಗ್ನಿಸಂಕಾಶಭಾಲನೇತ್ರಸಮನ್ವಿತಂ ।
ಧ್ಯಾನಸ್ಥಂ ಶಂಕರಂ ಕೋ ವಾ ಸಮಾಸಾದಯಿತುಂ ಕ್ಷಮಃ ॥ ೨೦ ॥

---

೧೬. ಮತ್ತು ಆ ಕಾಮನು ತನ್ನ ಮಹಿಮೆಯನ್ನು ವಿಸ್ತರಿಸಿ ಜನಗಳನ್ನು ಮೋಹಗೊಳಿಸತೊಡಗಿದನು. ರತಿಯಿಂದ ಕೂಡಿದ ಆ ಮನ್ಮಥನನ್ನು ನೋಡಿದರೆ ಯಾವನು ತಾನೇ ಮೋಹಗೊಳ್ಳಲಾರನು?

೧೭. ಹೀಗೆ ಮನ್ಮಥವಸಂತರು ಶೃಂಗಾರಪುರುಷ (ರಸ) ನೂ ಸಹ ತಮ್ಮ ವೈಭವವನ್ನು ಹರಡಲು ಹಾವಭಾವ ಮೊದಲಾದ ಪರಿವಾರದೊಡನೆ ಶಿವನ ಬಳಿಗೆ ಬಂದರು.

೧೮. ಮದನನು ಅಲ್ಲಿ ಮೊದಲೇ ಪ್ರಕಟವಾಗಿ ಇದ್ದನು. ಆದರೆ ಶಂಕರನು ಮೋಹಗೊಳ್ಳುವಂತಹ ಸಂದರ್ಭವೇ ಒದಗಲಿಲ್ಲ.

೧೯. ಯೋಗಿರಾಜನಾದ ಮಹಾದೇವನು ತನ್ನ ಬಲೆಗೆ ಸಿಗದಿರುವುದನ್ನು ನೋಡಿ ಮನ್ಮಥನು ತುಂಬಾ ಭಯಗೊಂಡನು.

೨೦. ಆ ಶಂಕರನ ತೃತೀಯ ನೇತ್ರವು ಉರಿಯುತ್ತಿರುವ ಅಗ್ನಿಜ್ವಾಲೆಯನ್ನು ಉಗುಳುತ್ತಲಿರುವಂತೆ ಜಾಜ್ವಲ್ಯಮಾನವಾಗಿತ್ತು. ಇಂತಹ ಶಿವನು ಧ್ಯಾನಮಗ್ನನಾಗಿ ಕುಳಿತಿರುವಾಗ ಅವನನ್ನು ಮೋಹಗೊಳಿಸಲು ಯಾರಿಗೆ ತಾನೇ ಶಕ್ತಿಯಿರುವುದು?

ಏತಸ್ಮಿನ್ನಂತರೇ ತತ್ರ ಸಖೀಭ್ಯಾಂ ಸಂಯುತಾ ಶಿವಾ ।
ಜಗಾಮ ಶಿವಪೂಜಾರ್ಥಂ ನೀತ್ವಾ ಪುಷ್ಪಾಣ್ಯನೇಕಶಃ ॥ ೨೧ ॥

ಪೃಥಿವ್ಯಾಂ ಯಾದೃಶಂ ಲೋಕೈಸ್ಸೌಂದರ್ಯಂ ವರ್ಣ್ಯತೇ ಮಹತ್ ।
ಕೃತ್ಸ್ನರ್ವಮಧಿಕಂ ತಸ್ಯಾಂ ಪಾರ್ವತ್ಯಾಮಸ್ತಿ ನಿಶ್ಚಿತಂ ॥ ೨೨ ॥

ಆರ್ತವಾನಿ ಸುಪುಷ್ಪಾಣಿ ಧೃತಾನಿ ಚ ತಯಾ ಯದಾ ।
ತತ್ಸೌಂದರ್ಯಂ ಕಥಂ ವರ್ಣ್ಯಮಪಿ ವರ್ಷಶತೈರಪಿ ॥ ೨೩ ॥

ಯದಾ ಶಿವಸಮೀಪೇ ತು ಗತಾ ಸಾ ಪರ್ವತಾತ್ಮಜಾ ।
ತದೈವ ಶಂಕರೋ ಧ್ಯಾನಂ ತ್ಯಕ್ತ್ವಾ ಕ್ಷಣಮವಸ್ಥಿತಃ ॥ ೨೪ ॥

ತಚ್ಛಿದ್ರಂ ಪ್ರಾಪ್ಯ ಮದನಃ ಪ್ರಥಮಂ ಹರ್ಷಣೇನ ತು ।
ಬಾಣೇನ ಹರ್ಷಯಾಮಾಸ ಪಾರ್ಶ್ವಸ್ಥಂ ಚಂದ್ರಶೇಖರಂ ॥ ೨೫ ॥

---

೨೧. ಈ ಸಮಯದಲ್ಲಿ ಪಾರ್ವತಿಯು ಶಿವಪೂಜೆಗಾಗಿ ಹೂವುಗಳನ್ನು ಹಿಡಿದುಕೊಂಡು ಸಖಿಯರೊಡನೆ ಅಲ್ಲಿಗೆ ಬಂದಳು.

೨೨. ಜಗತ್ತಿನಲ್ಲಿ ಮಹಾ ಲೋಕೋತ್ತರವೆಂದು ಎಂತಹ ಸೌಂದರ್ಯವನ್ನು ವರ್ಣಿಸುವೆವೋ ಅಂತಹ ಸೌಂದರ್ಯಕ್ಕಿಂತಲೂ ಮಿಗಿಲಾದ ಸೌಂದರ್ಯವು ಪಾರ್ವತಿಯಲ್ಲಿ ರಾರಾಜಿಸುತ್ತಲಿದ್ದಿತು.

೨೩. ಇನ್ನು ಆಯಾಯ ಋತುಗಳ ಸುಂದರಪುಷ್ಪಗಳಿಂದ ಆ ಗಿರಿಜೆಯನ್ನು ಅಲಂಕರಿಸಿದರೆ ಅವಳ ಸೌಂದರ್ಯವನ್ನು ಸಾವಿರಾರು ವರ್ಷಗಳಾದರೂ ವರ್ಣಿಸಲಸಾಧ್ಯವು.

೨೪. ಲೋಕಸುಂದರಿಯಾದ ಪಾರ್ವತಿಯು ಶಿವನ ಬಳಿಗೆ ಬರಲು ಆಗ ಶಿವನು ಧ್ಯಾನವನ್ನು ಬಿಟ್ಟು ಸ್ವಲ್ಪಹೊತ್ತು ಬಹಿರ್ಮುಖನಾಗಿದ್ದನು.

೨೫. ಇದೇ ಸಮಯವನ್ನು ನೋಡಿ ಮನ್ಮಥನು ಮೊದಲು ಹರ್ಷಣ (ಸಂತೋಷಗೊಳಿಸುವುದು) ಎಂಬ ಬಾಣವನ್ನು ಪ್ರಯೋಗಿಸಿ ಶಂಕರನಿಗೆ ಹರ್ಷವಾಗುವಂತೆ ಮಾಡಿದನು.

ಶೃಂಗಾರೈಶ್ಚ ತದಾ ಭಾವೈಸ್ಸಹಿತಾ ಪಾರ್ವತೀ ಹರಂ ।
ಜಗಾಮ ಕಾಮಸಾಹಾಯ್ಯೇ ಮುನೇ ಸುರಭಿಣಾ ಸಹ ॥ ೨೬ ॥

ತದೈವಾಕೃಷ್ಯ ತಚ್ಚಾಪಂ ರುಚ್ಯರ್ಥಂ ಶೂಲಧಾರಿಣಃ ।
ದ್ರುತಂ ಪುಷ್ಪಶರಂ ತಸ್ಮೈ ಸ್ಮರೋಽಮುಂಚತ್ಸುಸಂಯುತಃ ॥ ೨೭ ॥

ಯಥಾ ನಿರಂತರಂ ನಿತ್ಯಮಾಗಚ್ಛತಿ ತಥಾ ಶಿವಂ ।
ತನ್ನಮಸ್ಕೃತ್ಯ ತತ್ಪೂಜಾಂ ಕೃತ್ವಾ ತತ್ಪುರತಃ ಸ್ಥಿತಾ ॥ ೨೮ ॥

ಸಾ ದೃಷ್ಟ್ವಾ ಪಾರ್ವತೀ ತತ್ರ ಪ್ರಭುಣಾ ಗಿರಿಶೇನ ಹ ।
ವಿವೃಣ್ವತೀ ತದಂಗಾನಿ ಸ್ತ್ರೀಸ್ವಭಾವಾತ್ಸುಲಜ್ಜಯಾ ॥ ೨೯ ॥

ಸುಸಂಸ್ಮೃತ್ಯ ವರಂ ತಸ್ಯಾ ವಿಧಿದತ್ತಂ ಪುರಾ ಪ್ರಭುಃ ।
ಶಿವೋಽಪಿ ವರ್ಣಯಾಮಾಸ ತದಂಗಾನಿ ಮುದಾ ಮುನೇ ॥ ೩೦ ॥

---

೨೬. ಆಗ ಗಿರಿಜೆಯು ಶೃಂಗಾರಹಾವಭಾವಗಳನ್ನು ಪ್ರಕಟಿಸುತ್ತಾ ಶಂಕರ ನೆದುರಿಗೆ ಬಂದಳು. ಅದರಿಂದ ಮನ್ಮಥನಿಗೆ ಬಹಳ ಸಹಾಯವಾಯಿತು.

೨೭. ಆಗಲೇ ಕಾಮನು ಶಂಕರನಿಗೆ ಅನುರಾಗವುಂಟಾಗುವಂತೆ ಪುಷ್ಪಶರ ವನ್ನು ಬಿಲ್ಲಿಗೇರಿಸಿ ಶಂಕರನ ಮೇಲೆ ಪ್ರಯೋಗಿಸಿದನು.

೨೮. ಗಿರಿಜೆಯು ನಿತ್ಯವೂ ಬರುವಂತೆ ಬಂದು ಶಿವನನ್ನು ನಮಸ್ಕರಿಸಿ ಭಕ್ತಿ ಯಿಂದ ಪೂಜಿಸಿ ಅವನೆದುರಿಗೆ ಸುಮ್ಮನೆ ನಿಂತಳು.

೨೯. ಆಗ ಅವಳು ತನ್ನ ಸುಂದರವಾದ ಅಂಗಗಳನ್ನು ಪ್ರಕಟಿಸುತ್ತಾ ಶೃಂಗಾರವನ್ನು ಬೀರುತ್ತಾ ಸ್ತ್ರೀಯರಿಗೆ ಸಹಜವಾದ ಲಜ್ಜೆಯಿಂದ ನಿಂತಿದ್ದಳು. ಇಂತಹ ಪಾರ್ವತಿಯನ್ನು ಶಿವನು ನೋಡಿ,

೩೦. ಬ್ರಹ್ಮನು ಪಾರ್ವತಿಗೆ ಕೊಟ್ಟ ವರವನ್ನು ಆಗ, ಪರಮೇಶ್ವರನು ಜ್ಞಾಪಿಸಿಕೊಂಡು ತಾನೂ ಅವಳ ಅಂಗಗಳನ್ನು ಪ್ರೀತಿಯಿಂದ ಹೀಗೆ ವರ್ಣಿಸಿದನು.

॥ ಶಿವ ಉವಾಚ ॥

ಕಿಂ ಮುಖಂ ಕಿಂ ಶಶಾಂಕಶ್ಚ ಕಿಂ ನೇತ್ರೇ ಚೋತ್ಪಲೇ ಚ ಕಿಂ ।
ಭ್ರುಕುಟ್ಯೌ ಧನುಷೀ ಚೈತೇ ಕಂದರ್ಪಸ್ಯ ಮಹಾತ್ಮನಃ ॥ ೩೧ ॥

ಅಧರಃ ಕಿಂ ಚ ಬಿಂಬಂ ಕಿಂ ಕಿಂ ನಾಸಾ ಶುಕಚಂಚುಕಾ ।
ಕಿಂ ಸ್ವರಃ ಕೋಕಿಲಾಲಾಪಃ ಕಿಂ ಮಧ್ಯಂ ಚಾಥ ವೇದಿಕಾ ॥ ೩೨ ॥

ಕಿಂ ಗತಿರ್ವರ್ಣ್ಯತೇಽಸ್ಯಾಃ ಕಿಂ ರೂಪಂ ವರ್ಣ್ಯತೇ ಮುಹುಃ ।
ಪುಷ್ಪಾಣಿ ಕಿಂ ಚ ವರ್ಣ್ಯಂತೇ ವಸ್ತ್ರಾಣಿ ಚ ಪುನಃ ಪುನಃ ॥ ೩೩ ॥

ಲಾಲಿತ್ಯಂ ಚಾರು ಯತ್ಸೃಷ್ಟೌ ತದೇವಾತ್ರ ವಿನಿರ್ಮಿತಂ ।
ಸರ್ವಥಾ ರಮಣೀಯಾನಿ ಸರ್ವಾಂಗಾನಿ ನ ಸಂಶಯಃ ॥ ೩೪ ॥

---

೩೧. ಶಂಕರನು ಹೇಳಿದನು :—ಇದೇನು ಮುಖವೋ ಅಥವಾ ಚಂದ್ರನೊ? ಇವುಗಳೇನು ಕಣ್ಣುಗಳೋ ಅಥವಾ ಕನ್ನೈದಿಲೆಗಳೋ? ಈ ಭ್ರುಕುಟಿ (ಹುಬ್ಬು) ಗಳು ಮನ್ಮಥನ ಧನಸ್ಸುಗಳೇ ಇರಬಹುದು.

೩೨. ಇದೇನು ಅಧರ (ಕೆಳದುಟಿ) ವೊ ? ಅಥವಾ ಬಿಂಬಫಲ (ತೊಂಡೆಹಣ್ಣು) ವೊ? ಇದು ನಾಸಿಕೆಯೇ? ಅಥವಾ ಗಿಳಿಯ ಚಂಚು (ಕೊಕ್ಕು) ವೆ? ಇದೇನು ಸ್ವರವೋ ಅಥವಾ ಕೋಗಿಲೆಧ್ವನಿಯೇ? ಇದು ಇವಳ ನಡುವೋ? ಅಥವಾ ವೇದಿಕೆಯೇ?

೩೩. ಇವಳ ಸುಂದರಗತಿಯನ್ನು ವರ್ಣಿಸಲೆ? ಅಥವಾ ರೂಪವನ್ನು ವರ್ಣಿಸಲೇ? ಇವಳು ಧರಿಸಿರುವ ಪುಷ್ಪಗಳನ್ನು ವರ್ಣಿಸಲೇ ? ವಸ್ತ್ರಗಳನ್ನು ವರ್ಣಿಸಲೇ ? ಎಲ್ಲವೂ ಬಹು ಮನೋಹವಾಗಿರುವುದಲ್ಲಾ.

೩೪. ಲೋಕದಲ್ಲಿರುವ ಲೋಕೋತ್ತರವಾದ ಸೌಂದರ್ಯವೆಲ್ಲವೂ, ಒಟ್ಟುಗೂಡಿ ಈ ಪಾರ್ವತಿಯಲ್ಲಿರುವುದು. ಇವಳ ಅಂಗಗಳು ಎಲ್ಲಾ ರೀತಿಯಿಂದಲೂ ರಮಣೀಯವಾಗಿರುವುವು.

ಅಹೋ ಧನ್ಯತರಾ ಚೇಯಂ ಪಾರ್ವತ್ಯದ್ಭುತರೂಪಿಣೀ ।
ಏತತ್ಸಮಾ ನ ತ್ರೈಲೋಕ್ಯೇ ನಾರೀ ಕಾಪಿ ಸುರೂಪಿಣೀ ॥ ೩೫ ॥

ಸುಲಾವಣ್ಯನಿಧಿಶ್ಚೇಯಮದ್ಭುತಾಂಗಾನಿ ಬಿಭ್ರತೀ ।
ವಿಮೋಹಿನೀ ಮುನೀನಾಂ ಚ ಮಹಾಸುಖವಿವರ್ಧಿನೀ ॥ ೩೬ ॥

॥ ಬ್ರಹ್ಮೋವಾಚ ॥

ಇತ್ಯೇವಂ ವರ್ಣಯಿತ್ವಾ ತು ತದಂಗಾನಿ ಮುಹುರ್ಮುಹುಃ ।
ವಿಧಿದತ್ತವರಾಧ್ಯಾಸಾದ್ಧರಸ್ತು ವಿರರಾಮ ಹ ॥ ೩೭ ॥

ಹಸ್ತಂ ವಸ್ತ್ರಾಂತರೇ ಯಾವದಚಾಲಯತ ಶಂಕರಃ ।
ಸ್ತ್ರೀಸ್ವಭಾವಾಚ್ಚ ಸಾ ತತ್ರ ಲಜ್ಜಿತಾ ದೂರತೋ ಗತಾ ॥ ೩೮ ॥

ವಿವೃಣ್ವತೀ ನಿಜಾಂಗಾನಿ ಪಶ್ಯಂತೀ ಚ ಮುಹುರ್ಮುಹುಃ ।
ಸುವೀಕ್ಷಣೈರ್ಮಹಾಮೋದಾತ್ಸುಸ್ಮಿತಾಽಭೂಚ್ಛಿವಾ ಮುನೇ ॥ ೩೯ ॥

---

೩೫. ಆಶ್ಚರ್ಯವು. ಇಂತಹ ಅದ್ಭುತರೂಪವುಳ್ಳ ಪಾರ್ವತಿಯು ಧನ್ಯಳು. ಇಂತಹ ಸುಂದರಿಯು ಮೂರುಲೋಕಗಳಲ್ಲಿಯೂ ಇಲ್ಲವೇ ಇಲ್ಲ.

೩೬. ಮಹಾಲಾವಣ್ಯವತಿಯಾದ ಇವಳು ತನ್ನ ಅದ್ಭುತವಾದ ಅವಯವ ಸೌಷ್ಟವದಿಂದ ಮುನಿಗಳ ಮನಸ್ಸನ್ನೂ ಮೋಹಗೊಳಿಸುವಳು. ನೋಡುವವರಿಗೆ ಮಹಾ ಸುಖವನ್ನುಂಟುಮಾಡುವಳು. ಎಂದು ಹರನು ಮನಸ್ಸಿನಲ್ಲಿಯೇ ಪಾರ್ವತಿಯನ್ನು ವರ್ಣಿಸಿದನು.

೩೭. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಪಾರ್ವತಿಯ ಅಂಗಗಳನ್ನು ಪುನಃ ಪುನಃ ವರ್ಣಿಸಿ ಹರನು ಸುಮ್ಮನಾದನು.

೩೮. ಬಳಿಕ ಶಿವನು ಜಪಕ್ಕಾಗಿ ಕೈಯನ್ನು ವಸ್ತ್ರದಲ್ಲಿ ಮುಚ್ಚಿಕೊಂಡನು. ಹೀಗೆ ಶಿವನು ತನ್ನ ಅಂಗಗಳನ್ನು ವರ್ಣಿಸಿದುದರಿಂದ ಪಾರ್ವತಿಯು ಸ್ತ್ರೀಸಹಜವಾದ ನಾಚಿಕೆಯಿಂದ ದೂರಹೋಗಿ ನಿಂತಳು.

೩೯. ಅಲ್ಲಿ ಆ ಗಿರಿಜೆಯು ತನ್ನ ಕೋಮಲವಾದ ಅಂಗಗಳನ್ನು ಪುನಃ ಪುನಃ ನೋಡಿಕೊಂಡು ಸಂತೋಷದಿಂದ ಹಿಗ್ಗಿದಳು.

ಏವಂ ಚೇಷ್ಟಾಂ ತದಾ ದೃಷ್ಟ್ವಾ ಶಂಭುರ್ಮೋಹಮುಪಾಗತಃ ।
ಉವಾಚ ವಚನಂ ಚೈವ ಮಹಾಲೀಲೋ ಮಹೇಶ್ವರಃ ॥ ೪೦ ॥

ಅಸ್ಯಾ ದರ್ಶನಮಾತ್ರೇಣ ಮಹಾನಂದೋ ಭವತ್ಯಲಂ ।
ಯದಾಲಿಂಗನಮೇತಸ್ಯಾಃ ಕುರ್ಯಾಂ ಕಿಂತು ತತಸ್ಸುಖಂ ॥ ೪೧ ॥

ಕ್ಷಣಮಾತ್ರಂ ವಿಚಾರ್ಯೇತ್ಥಂ ಸಂಪೂಜ್ಯ ಗಿರಿಜಾಂ ತತಃ ।
ಪ್ರಬುದ್ಧಸ್ಸ ಮಹಾಯೋಗೀ ಸುವಿರಕ್ತೋ ಜಗಾವಿತಿ ॥ ೪೨ ॥

ಕಿಂ ಜಾತಂ ಚರಿತಂ ಚಿತ್ರಂ ಕಿಮಹಂ ಮೋಹಮಾಗತಃ ।
ಕಾಮೇನ ವಿಕೃತಶ್ಚಾದ್ಯ ಭೂತ್ವಾಪಿ ಪ್ರಭುರೀಶ್ವರಃ ॥ ೪೩ ॥

ಈಶ್ವರೋಽಹಂ ಯದೀಚ್ಛೇಯಂ ಪರಾಂಗಸ್ಪರ್ಶನಂ ಖಲು ।
ತರ್ಹಿ ಕೋಽನ್ಯೋಽಕ್ಷಮಃ ಕ್ಷುದ್ರಃ ಕಿಂ ಕಿಂ ನೈವ ಕರಿಷ್ಯತಿ ॥ ೪೪ ॥

---

೪೦. ಪಾರ್ವತಿಯ ಶೃಂಗಾರ ಚೇಷ್ಟೆಯನ್ನು ನೋಡಿ ಮಹಾಲೀಲಾಮಯನಾದ ಮಹೇಶ್ವರನು ಮೋಹಗೊಂಡು ತನ್ನಲ್ಲಿ ಹೀಗೆಂದುಕೊಂಡನು.

೪೧. ಈ ಗಿರಿಜೆಯನ್ನು ನೋಡಿದ ಮಾತ್ರದಿಂದಲೇ ತುಂಬಾ ಆನಂದವಾಗುತ್ತಲಿದೆ. ಇನ್ನು ಇವಳನ್ನು ಆಲಿಂಗಿಸಿದರೆ ಇನ್ನೆಷ್ಟು ಸುಖವಾಗಬಹುದು?

೪೨. ಹೀಗೆ ಸ್ವಲ್ಪಹೊತ್ತು ವಿಚಾರಮಾಡಿ ಗಿರಿಜೆಯನ್ನು ವರ್ಣಿಸಿ ಬಳಿಕ ಅವನು ಎಚ್ಚೆತ್ತನು. ಮಹಾಯೋಗಿಯೂ ವಿರಕ್ತನೂ ಆದ ಆ ಮಹಾದೇವನು ಹೀಗೆ ಹೇಳಿದನು.

೪೩. ಇದೇನು ಆಶ್ಚರ್ಯವು? ಇದೇನಾಯಿತು? ನಾನೇಕೆ ಮೋಹಗೊಂಡೆನು? ಪರಮೇಶ್ವರನಾದರೂ ನಾನು ಕಾಮವಿಕಾರಕ್ಕೊಳಗಾದೆನಲ್ಲಾ,

೪೪. ಈಶ್ವರನಾದ ನಾನೇ ಪರಸ್ತ್ರೀಯ ಅಂಗಸ್ಪರ್ಶವನ್ನು ಅಪೇಕ್ಷಿಸುವನಾದರೆ ಇನ್ನು ಸಾಮಾನ್ಯ ಮನುಷ್ಯನು ಏನು ತಾನೇ ಮಾಡಲಾರನು?

ಏವಂ ವೈರಾಗ್ಯಮಾಸಾದ್ಯ ಪರ್ಯಂಕಾಸಾದನಂ ಚ ತತ್ ।
ವಾರಯಾಮಾಸ ಸರ್ವಾತ್ಮಾ ಪರೇಶಃ ಕಿಂ ಪತೇದಿಹ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಅಷ್ಟಾದಶೋಽಧ್ಯಾಯಃ



---

೪೫. ಪರಮೇಶ್ವರನಾದ ನಾನೇ ಮೋಹಗೊಳ್ಳುವುದೆಂದರೇನು? ಹೀಗೆಂದು ವೈರಾಗ್ಯವನ್ನು ಹೊಂದಿ ಪರಮೇಶ್ವರನು ಪರ್ಯಂಕಾಸನದಲ್ಲಿ ಕುಳಿತು ತಪವನ್ನಾಚರಿಸುತ್ತಾ ಕಾಮವಿಕಾರವನ್ನು ತಡೆದುಕೊಂಡನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ
ಪಾರ್ವತೀಖಂಡದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

ಗುರು ಪ್ರಸನ್ನ



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಏಕೋನವಿಂಶೋಽಧ್ಯಾಯಃ

॥ ನಾರದ ಉವಾಚ ॥

ಬ್ರಹ್ಮನ್ ವಿಧೇ ಮಹಾಭಾಗ ಕಿಂ ಜಾತಂ ತದನಂತರಂ ।
ಕಥಯ ತ್ವಂ ಪ್ರಸಾದೇನ ತಾಂ ಕಥಾಂ ಪಾಪನಾಶಿನೀಂ ॥ ೧ ॥

॥ ಬ್ರಹ್ಮೋವಾಚ ॥

ಶ್ರೂಯತಾಂ ಸಾ ಕಥಾ ತಾತ ಯಜ್ಜಾತಂ ತದನಂತರಂ ।
ತವ ಸ್ನೇಹಾತ್ಪ್ರವಕ್ಷ್ಯಾಮಿ ಶಿವಲೀಲಾಂ ಮುದಾವಹಾಂ ॥ ೨ ॥

---

### ಹತ್ತೊಂಭತ್ತನೆಯ ಅಧ್ಯಾಯವು

೧. ನಾರದಮುನಿಯು ಕೇಳಿದನು :—ಮಹಾನುಭಾವನಾದ ಓ ಬ್ರಹ್ಮನೇ, ಆಮೇಲೆ ಏನಾಯಿತು? ಪಾಪನಾಶಕವಾದ ಶಿವಕಥೆಯನ್ನು ದಯವಿಟ್ಟು ಹೇಳೆನ್ನಲು,

೨. ಬ್ರಹ್ಮನು ಹೇಳಿದನು :—ಎಲೈ ವತ್ಸ, ಮುಂದೇನಾಯಿತೆಂಬುದನ್ನು ಕೇಳು. "ನಿನ್ನಮೇಲಿನ ವಾತ್ಸಲ್ಯದಿಂದ ಸಂತೋಷಕರವಾದ ಶಿವಲೀಲೆಯನ್ನು ಹೇಳುವೆನು.

ಧೈರ್ಯಸ್ಯ ವ್ಯಸನಂ ದೃಷ್ಟ್ವಾ ಮಹಾಯೋಗೀ ಮಹೇಶ್ವರಃ
ವಿಚಿಚಿಂತ ಮನಸ್ಯೇವ ವಿಸ್ಮಿತೋಽತಿ ತತಃ ಪರಂ ॥ ೩ ॥

॥ ಶಿವ ಉವಾಚ ॥

ಕಿಮು ವಿಘ್ನಾಃ ಸಮುತ್ಪನ್ನಾಃ ಕುರ್ವತಸ್ತಪ ಉತ್ತಮಂ ।
ಕೇನ ಮೇ ವಿಕೃತಂ ಚಿತ್ತಂ ಕೃತಮತ್ರ ಕುಕರ್ಮಿಣಾ ॥ ೪ ॥

ಕುವರ್ಣನಂ ಮಯಾ ಪ್ರೀತ್ಯಾ ಪರಸ್ತ್ರ್ಯುಪರಿ ವೈ ಕೃತಂ ।
ಜಾತೋ ಧರ್ಮವಿರೋಧೋಽತ್ರ ಶ್ರುತಿಸೀಮಾ ವಿಲಂಘಿತಾ ॥ ೫ ॥

॥ ಬ್ರಹ್ಮೋವಾಚ ॥

ವಿಚಿಂತ್ಯೇತ್ಥಂ ಮಹಾಯೋಗೀ ಪರಮೇಶಸ್ಸತಾಂ ಗತಿಃ ।
ದಿಶೋ ವಿಲೋಕಯಾಮಾಸ ಪರಿತಶ್ಶಂಕಿತಸ್ತದಾ ॥ ೬ ॥

ವಾಮಭಾಗೇ ಸ್ಥಿತಂ ಕಾಮಂ ದದರ್ಶಾಕೃಷ್ಟಬಾಣಕಂ ।
ಸ್ವಶರಂ ಕ್ಷೇಪ್ತುಕಾಮಂ ಹಿ ಗರ್ವಿತಂ ಮೂಢಚೇತಸಂ ॥ ೭ ॥

---

೩. ಹಾಗೆ ಮನೋವಿಕಾರವಾದುದನ್ನು ನೋಡಿ ಮಹಾ ಯೋಗಿಯಾದ ಮಹೇಶ್ವರನು ತುಂಬಾ ಆಶ್ಚರ್ಯಗೊಂಡು ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು.

೪. ಶಿವನು ಯೋಚಿಸಿದನು :—ಘೋರವಾದ ತಪವನ್ನು ಮಾಡುತ್ತಲಿರುವ ನನಗೆ ವಿಘ್ನಗಳೇಕೆ ಬಂದುವು? ಯಾವ ದುಷ್ಟನು ನನ್ನ ಮನಸ್ಸು ವಿಕಾರಹೊಂದುವಂತೆ ಮಾಡಿದನು?

೫. ಪರಸ್ತ್ರೀಯಲ್ಲಿ ಮೋಹಗೊಂಡು ಪ್ರೀತಿಯಿಂದ ಕೆಟ್ಟ ವರ್ಣನೆಯನ್ನು ಮಾಡಿದೆನಲ್ಲಾ, ಇದು ಧರ್ಮಕ್ಕೆ ವಿರುದ್ಧವಾಯಿತು. ವೇದಮಾರ್ಗವನ್ನು ಮೀರಿದಂತಾಯಿತು.

೬. ಬ್ರಹ್ಮನು ಹೇಳಿದನು:—ಹೀಗೆ ಆಲೋಚಿಸಿ ಮಹಾಯೋಗಿಯೂ ಸದ್ಗತಿಯನ್ನು ಕೊಡುವವನೂ ಆದ ಮಹಾದೇವನು ಇಲ್ಲಿ ಯಾರಾದರೂ ಇರುವರೊ? ಎಂಬ ಶಂಕೆಯಿಂದ ಸುತ್ತಲೂ ದಿಕ್ಕುಗಳನ್ನು ನೋಡಿದನು.

೭. ಆಗ ಮೂಢನಾದ ಮನ್ಮಥನು ಬಾಣವನ್ನು ಬಿಲ್ಲಿಗೇರಿಸಿ ಎಳೆದು ಬಿಡಲು ಸಿದ್ಧನಾಗಿ ಗರ್ವದಿಂದ ನಿಂತಿದ್ದನು.

ತಂ ದೃಷ್ಟ್ವಾ ತಾದೃಶಂ ಕಾಮಂ ಗಿರೀಶಸ್ಯ ಪರಾತ್ಮನಃ ।
ಸಂಜಾತಃ ಕ್ರೋಧಸಮ್ಮರ್ದಸ್ತತ್ಕ್ಷಣಾದಪಿ ನಾರದ ॥ ೮ ॥

ಕಾಮಃ ಸ್ಥಿತೋಽಂತರಿಕ್ಷೇ ಸ ಧೃತ್ವಾ ತತ್ಸಶರಂ ಧನುಃ ।
ಚಿಕ್ಷೇಪಾಸ್ತ್ರಂ ದುರ್ನಿವಾರಮಮೋಘಂ ಶಂಕರಂ ಮುನೇ ॥ ೯ ॥

ಬಭೂವಾಮೋಘಮಸ್ತ್ರಂ ತು ಮೋಘಂ ತತ್ಪರಮಾತ್ಮನಿ ।
ಸಮಶಾಮ್ಯತ್ತತಸ್ತಸ್ಮಿನ್ ಸಂಕ್ರುದ್ಧೇ ಪರಮೇಶ್ವರೇ ॥ ೧೦ ॥

ಮೋಘೀಭೂತೇ ಶಿವೇ ಸ್ವೇಽಸ್ತ್ರೇ ಭಯಮಾಪಾಶು ಮನ್ಮಥಃ ।
ಚಕಂಪೇ ಚ ಪುರಃ ಸ್ಥಿತ್ವಾ ದೃಷ್ಟ್ವಾ ಮೃತ್ಯುಂಜಯಂ ಪರಂ ॥ ೧೧ ॥

ಸಸ್ಮಾರ ತ್ರಿದಶಾನ್ ಸರ್ವಾನ್ ಶಕ್ರಾದೀನ್ ಭಯವಿಹ್ವಲಃ ।
ಸ ಸ್ಮರೋ ಮುನಿಶಾರ್ದೂಲ ಸ್ವಪ್ರಯಾಸೇ ನಿರರ್ಥಕೇ ॥ ೧೨ ॥

---

೮. ಹೀಗೆ ನಿಂತಿರುವ ಮನ್ಮಥನನ್ನು ನೋಡಿ ಪರಮೇಶ್ವರನಿಗೆ ಆಕೂಡಲೇ ಮಹಾಕ್ರೋಧವುಂಟಾಯಿತು.

೯. ಅಷ್ಟರಲ್ಲಿ ಮನ್ಮಥನು ಅಂತರಿಕ್ಷದಲ್ಲಿ ನಿಂತು ಮಹಾಬಲಿಷ್ಠವಾದೊಂದು ಪುಷ್ಪಬಾಣವನ್ನು ಶಂಕರನಮೇಲೆ ಪ್ರಯೋಗಿಸಿದನು.

೧೦. ಎಂದೂ ವ್ಯರ್ಥವಾಗದ ಆ ಬಾಣವು, ಪರಮಾತ್ಮನಾದ ಶಿವನಲ್ಲಿ ವ್ಯರ್ಥವಾಯಿತು. ಕೋಪಗೊಂಡ ಆ ಪರಮೇಶ್ವರನಲ್ಲಿ ಹಾಗೆಯೇ ಶಾಂತವಾಯಿತು.

೧೧. ಶಿವನಲ್ಲಿ ತನ್ನ ಬಾಣವು ವ್ಯರ್ಥವಾದುದನ್ನು ನೋಡಿ ಮನ್ಮಥನು ಸುಂಬಾ ಭಯಗೊಂಡನು. ಎದುರಿಗೆ ನಿಂತು ಮೃತ್ಯುಂಜಯನಾದ ಅವನನ್ನು ನೋಡಿ ಭಯದಿಂದ ನಡುಗಿದನು.

೧೨. ತನ್ನ ಪ್ರಯತ್ನವು ವಿಫಲವಾಗಿ ಭಯಗೊಂಡ ಆ ಮನ್ಮಥನು, ಇಂದ್ರನೇ ಮೊದಲಾದ ದೇವತೆಗಳನ್ನು ಸ್ಮರಿಸಿದನು.

ಕಾಮೇನ ಸುಸ್ಮೃತಾ ದೇವಾಶ್ಶಕ್ರಾದ್ಯಾಸ್ತೇ ಮುನೀಶ್ವರ ।
ಆಯುಯುಸ್ಸಕಲಾಸ್ತೇ ಹಿ ಶಂಭುಂ ನತ್ವಾ ಚ ತುಷ್ಟುವುಃ ॥ ೧೩ ॥

ಸ್ತುತಿಂ ಕುರ್ವತ್ಸು ದೇವೇಷು ಕ್ರುದ್ಧಸ್ಯಾತಿ ಹರಸ್ಯ ಹಿ ।
ತೃತೀಯಾತ್ತಸ್ಯ ನೇತ್ರಾದ್ವೈ ನಿಸ್ಸಸಾರ ತತೋ ಮಹಾನ್ ॥ ೧೪ ॥

ಲಲಾಟಮಧ್ಯಗಾತ್ತಸ್ಮಾತ್ಸ ವಹ್ನಿರ್ದುರ್ತಸಂಭವಃ ।
ಜಜ್ವಾಲೋರ್ಧ್ವಶಿಖೋ ದೀಪ್ತಃ ಪ್ರಲಯಾಗ್ನಿಸಮಪ್ರಭಃ ॥ ೧೫ ॥

ಉತ್ಪತ್ಯ ಗಗನೇ ತೂರ್ಣಂ ನಿಪತ್ಯ ಧರಣೀತಲೇ ।
ಭ್ರಾಮಂ ಭ್ರಾಮಂ ಸ್ವಪರಿತಃ ಪಪಾತ ಮೇದಿನೀಂ ಪ್ರತಿ ॥ ೧೬ ॥

ಭಸ್ಮಸಾತ್ಕೃತವಾನ್ ಸಾಧೋ ಮದನಂ ತಾವದೇವ ಹಿ ।
ಯಾವಚ್ಚ ಮರುತಾಂ ವಾಚಃ ಕ್ಷಮ್ಯತಾಂ ಕ್ಷಮ್ಯತಾಮಿತಿ ॥ ೧೭ ॥

ಹತೇ ತಸ್ಮಿನ್ ಸ್ಮರೇ ವೀರೇ ದೇವಾ ದುಃಖಮುಪಾಗತಾಃ ।
ರುರುದುರ್ವಿಹ್ವಲಾಶ್ಚಾತಿಕ್ರೋಶಂತಃ ಕಿಮಭೂದಿತಿ ॥ ೧೮ ॥

---

೧೩. ಕಾಮನು ಸ್ಮರಿಸಲು ಇಂದ್ರನೇ ಮೊದಲಾದ ದೇವತೆಗಳು ಆಕೂಡಲೇ ಬಂದು ಶಿವನನ್ನು ನಮಸ್ಕರಿಸಿ ಸ್ತೋತ್ರಮಾಡಿದರು.

೧೪-೧೫. ದೇವತೆಗಳು ಸ್ತೋತ್ರಮಾಡುತ್ತಿರಲು ಕ್ರುದ್ಧನಾದ ಶಿವನ ಮೂರನೆಯ ಕಣ್ಣಿನಿಂದ ಮಹತ್ತಾದ ಅಗ್ನಿಯು ಹೊರಟಿತು. ಅದರ ಜ್ವಾಲೆಗಳು ಮೇಲುಮುಖವಾಗಿ ಪ್ರಳಯಾಗ್ನಿಯಂತೆ ಉರಿಯ.ತೊಡಗಿತು.

೧೬. ಆ ಅಗ್ನಿಯು ಆಕಾಶವನ್ನೆಲ್ಲಾ ವ್ಯಾಪಿಸಿ ಬಳಿಕ ಭೂಮಿಗೆ ಬಿದ್ದು ಆ ಮನ್ಮಥನ ಸುತ್ತಲೂ ಉರಿಯುತ್ತಾ ಪ್ರಕಾಶಿಸಿತು.

೧೭. ಎಲೈ ನಾರದ, ದೇವತೆಗಳು ಶಿವನನ್ನು ಕುರಿತು, ಓ ದೇವ ಕ್ಷಮಿಸು, ಮದನನನ್ನು ಕ್ಷಮಿಸು ಎಂದು ಹೇಳುತ್ತಿರುವಂತೆಯೇ ಆ ಅಗ್ನಿಯು ಮನ್ಮಥನನ್ನು ಸುಟ್ಟು ಭಸ್ಮಮಾಡಿತು.

೧೮. ಹೀಗೆ ವೀರನಾದ ಮನ್ಮಥನು ಮೃತನಾಗಲು, ದೇವತೆಗಳು ದುಃಖಗೊಂಡು " ಇದೇನು ? ಸರ್ವನಾಶವಾಯಿತು " ಎಂದು ದುಃಖದಿಂದ ರೋದಿಸಿದರು.

ಶ್ವೇತಾಂಗಾ ವಿಕೃತಾತ್ಮಾ ಚ ಗಿರಿರಾಜಸುತಾ ತದಾ ।
ಜಗಾಮ ಮಂದಿರಂ ಸ್ವಂ ಚ ಸಮಾದಾಯ ಸಖೀಜನಂ ॥ ೧೯ ॥

ಕ್ಷಣಮಾತ್ರಂ ರತಿಸ್ತತ್ರ ವಿಸಂಜ್ಞಾ ಸಾಭವತ್ತದಾ ।
ಭರ್ತೃರ್ಮೃತ್ಯುಜದುಃಖೇನ ಪತಿತಾ ಸಾ ಮೃತಾ ಇವ ॥ ೨೦ ॥

ಜಾತಾಯಾಂ ಚೈವ ಸಂಜ್ಞಾಯಾಂ ರತಿರತ್ಯಂತವಿಹ್ವಲಾ ।
ವಿಲಲಾಪ ತದಾ ತತ್ರೋಚ್ಚರಂತೀ ವಿವಿಧಂ ವಚಃ ॥ ೨೧ ॥

॥ ರತಿರುವಾಚ ॥

ಕಿಂ ಕರೋಮಿ ಕ್ವ ಗಚ್ಛಾಮಿ ಕಿಂ ಕೃತಂ ದೈವತೈರಿಹ ।
ಮತ್ಸ್ವಾಮಿನಂ ಸಮಾಹೂಯ ನಾಶಯಾಮಾಸುರುದ್ಧತಂ ॥ ೨೨ ॥

ಹಾ ಹಾ ನಾಥ ಸ್ಮರ ಸ್ವಾಮಿನ್ ಪ್ರಾಣಪ್ರಿಯ ಸುಖಪ್ರದ ।
ಇದಂ ತು ಕಿಮಭೂದತ್ರ ಹಾ ಹಾ ಪ್ರಿಯ ಪ್ರಿಯೇತಿ ಚ ॥ ೨೩ ॥

---

೧೯. ಆಗ ಪಾರ್ವತಿಗೆ ನಿರಾಶೆಯುಂಟಾಯಿತು. ತುಂಬಾ ದುಃಖಗೊಂಡು, ವಿರಹವೇದನೆಯನ್ನು ತಾಳಲಾರದೆ ತನ್ನ ಸಖಿಯರೊಡನೆ ತನ್ನ ಮನೆಗೆ ಹಿಂತಿರುಗಿದಳು.

೨೦. ಮನ್ಮಥನು ಸುಟ್ಟು ಭಸ್ಮವಾದೊಡನೆಯೇ ರತಿಯು ದುಃಖದಿಂದ ಮೃತಳಂತೆ ಭೂಮಿಗೆ ಬಿದ್ದು ಸ್ವಲ್ಪಹೊತ್ತು ಮೂರ್ಛೆಯನ್ನು ಹೊಂದಿದಳು.

೨೧. ಸಂಜ್ಞೆಯು ಬಂದಮೇಲೆ ರತಿಯು ತುಂಬಾ ವಿಹ್ವಲಳಾಗಿ ಅನೇಕ ವಿಧವಾಗಿ ದುಃಖಿಸುತ್ತಾ ಪ್ರಲಾಪಿಸಿದಳು.

೨೨. ಈಗೇನು ಮಾಡಲಿ? ಎಲ್ಲಿಗೆ ಹೋಗಲಿ? ದೇವತೆಗಳು ಇದೇನನ್ನು ಮಾಡಿದರು? ನನ್ನ ಪತಿಯನ್ನು ಇಲ್ಲಿಗೆ ಕರೆದುಕೊಂಡುಬಂದು ಕೊಲ್ಲಿಸಿರುವರಲ್ಲಾ?

೨೩. ಅಯ್ಯೋ! ನಾಥ, ನನ್ನನ್ನು ಸ್ಮರಿಸುವುದಿಲ್ಲವೆ? ಓ ಪ್ರಾಣಪ್ರಿಯ, ನಿನ್ನಿಂದ ಬೇಕಾದಂತಹ ಸುಖವನ್ನನುಭವಿಸಿದೆನಲ್ಲವೆ? ಆದರೆ ಇಲ್ಲಿ ಇದೇನಾಯಿತು? ಅಯ್ಯೋ ಪ್ರಿಯ, ಹಾ ಪ್ರಿಯ, ಬಾ ಎಂದು ರತಿಯು ಪರಿಪರಿಯಾಗಿ ವಿಲಾಪಿಸಿದಳು.

॥ ಬ್ರಹ್ಮೋವಾಚ ॥

ಇತ್ಥಂ ವಿಲಪತೀ ಸಾ ತು ವದಂತೀ ಬಹುಧಾ ವಚಃ ।
ಹಸ್ತೌ ಪಾದೌ ತದಾಸ್ಫಾಲ್ಯ ಕೇಶಾನತ್ರೋಟಯತ್ತದಾ ॥ ೨೪ ॥

ತದ್ವಿಲಾಪಂ ತದಾ ಶ್ರುತ್ವಾ ತತ್ರ ಸರ್ವೇ ವನೇಚರಾಃ ।
ಅಭವನ್ ದುಃಖಿತಾಸ್ಸರ್ವೇ ಸ್ಥಾವರಾ ಅಪಿ ನಾರದ ॥ ೨೫ ॥

ಏತಸ್ಮಿನ್ನಂತರೇ ತತ್ರ ದೇವಾಶ್ಶಕ್ರಾದಯೋಽಖಿಲಾಃ ।
ರತಿಮೂಚುಃ ಸಮಾಶ್ವಾಸ್ಯ ಸಂಸ್ಮರಂತೋ ಮಹೇಶ್ವರಂ ॥ ೨೬ ॥

॥ ದೇವಾ ಊಚುಃ ॥

ಕಿಂಚಿದ್ಭಸ್ಮ ಗೃಹೀತ್ವಾ ತು ರಕ್ಷ ಯತ್ನಾದ್ಭಯಂ ತ್ಯಜ ।
ಜೀವಯಿಷ್ಯತಿ ಸ ಸ್ವಾಮೀ ಲಪ್ಸ್ಯಸೇ ತ್ವ ಪುನಃ ಪ್ರಿಯಂ ॥ ೨೭ ॥

ಸುಖದಾತಾ ನ ಕೋಽಪ್ಯಸ್ತಿ ದುಃಖದಾತಾ ನ ಕಶ್ಚನ ।
ಸರ್ವೋಽಪಿ ಸ್ವಕೃತಂ ಭುಂಕ್ತೇ ದೇವಾನ್ ಶೋಚಸಿ ವೈ ವೃಥಾ ॥ ೨೮ ॥

---

೨೪. ಬ್ರಹ್ಮನು ಹೇಳಿದನು:—ಹೀಗೆ ಪ್ರಲಾಪಿಸುತ್ತಾ ಆ ರತೀದೇವಿಯು ಬಹುವಿಧವಾಗಿ ಮಾತನ್ನು ಆಡಿಕೊಳ್ಳುತ್ತಾ ದುಃಖಾತಿಶಯದಿಂದ ಕೈಕಾಲುಗಳನ್ನು ಹೊಡೆದುಕೊಂಡು ತಲೆಗೂದಲುಗಳನ್ನು ಕಿತ್ತುಕೊಳ್ಳುತ್ತಿದ್ದಳು.

೨೫. ಆ ರತಿಯ ವಿಲಾಪವನ್ನು ಕೇಳಿ ಅಲ್ಲಿದ್ದ ವನಚರಪ್ರಾಣಿಗಳೂ ಸಹ ದುಃಖಗೊಂಡುವು. ಸ್ಥಿರವಾದ ಪರ್ವತಾದಿಗಳೂ ಸಹ ದುಃಖವುಳ್ಳವುಗಳಾದುವು.

೨೬. ಈ ಸಮಯದಲ್ಲಿ ಅಲ್ಲಿಗೆ ಇಂದ್ರನೇ ಮೊದಲಾದ ದೇವತೆಗಳು ಬಂದು, ಶಿವನನ್ನು ಸ್ಮರಿಸುತ್ತಾ ರತಿಯನ್ನು ಸಮಾಧಾನಗೊಳಿಸಿ ಹೀಗೆ ಹೇಳಿದರು.

೨೭. ದೇವತೆಗಳು ಹೇಳಿದರು:—ಎಲೌ ರತಿದೇವಿ, ನಿನ್ನ ಗಂಡನ ಭಸ್ಮವನ್ನು ಸ್ವಲ್ಪ ತೆಗೆದುಕೊಂಡು ರಕ್ಷಿಸು. ಭಯವನ್ನು ಬಿಡು. ಶಂಕರನು ನಿನ್ನ ಪತಿಯನ್ನು ತಿರುಗಿ ಬದುಕಿಸುವನು. ನೀನು ತಿರುಗಿ ಪತಿಯನ್ನು ಪಡೆಯುವೆ.

೨೮. ಸುಖದುಃಖಗಳನ್ನು ಯಾವನೂ ಉಂಟುಮಾಡುವುದಿಲ್ಲ. ಎಲ್ಲರೂ ತಾವು ಮಾಡಿದ ಕರ್ಮಕ್ಕನುಸಾರವಾಗಿ ಸುಖದುಃಖಗಳನ್ನನುಭವಿಸುವರು. ಹೀಗಿರಲು ನೀನು ಸುಮ್ಮನೇ ದೇವತೆಗಳ ಮೇಲೆ ತಪ್ಪನ್ನು ಹೊರಿಸುತ್ತಿರುವೆ ಎಂದರು.

॥ ಬ್ರಹ್ಮೋವಾಚ ॥

ಇತ್ಯಾಶ್ವಾಸ್ಯ ರತಿಂ ದೇವಾಃ ಸರ್ವೇ ಶಿವಮುಪಾಗತಾಃ ।
ಸುಪ್ರಸಾದ್ಯ ಶಿವಂ ಭಕ್ತ್ಯಾ ವಚನಂ ಚೇದಮಬ್ರುವನ್ ॥ ೨೯ ॥

॥ ದೇವಾ ಊಚುಃ ॥

ಭಗವನ್ ಶ್ರೂಯತಾಮೇತದ್ವಚನಂ ನಃ ಶುಭಂ ಪ್ರಭೋ ।
ಕೃಪಾಂ ಕೃತ್ವಾ ಮಹೇಶಾನ ಶರಣಾಗತವತ್ಸಲ ॥ ೩೦ ॥

ಸುವಿಚಾರಯ ಸುಪ್ರೀತ್ಯಾ ಕೃತಿಂ ಕಾಮಸ್ಯ ಶಂಕರ ।
ಕಾಮೇನೈತತ್ಕೃತಂ ಯತ್ರ ನ ಸ್ವಾರ್ಥಂ ತನ್ಮಹೇಶ್ವರ ॥ ೩೧ ॥

ದುಷ್ಟೇನ ಪೀಡಿತೈರ್ದೇವೈಸ್ತಾರಕೇಣಾಖಿಲೈರ್ವಿಭೋ ।
ಕರ್ಮ ತತ್ಕಾರಿತಂ ನಾಥ ನಾನ್ಯಥಾ ವಿದ್ಧಿ ಶಂಕರ ॥ ೩೨ ॥

ರತಿರೇಕಾಕಿನೀ ದೇವ ವಿಲಾಪಂ ದುಃಖಿತಾ ಸತೀ ।
ಕರೋತಿ ಗಿರಿಶ ತ್ವಂ ಚ ತಾಮಾಶ್ವಾಸಯ ಸರ್ವದಾ ॥ ೩೩ ॥

---

೨೯. ಬ್ರಹ್ಮನು ಹೇಳಿದನು :—ಹೀಗೆ ರತಿಯನ್ನು ಸಮಾಧಾನಮಾಡಿ ದೇವತೆಗಳು ಶಿವನ ಬಳಿಗೆ ಬಂದು ಅವನನ್ನು ಭಕ್ತಿಯಿಂದ ಪ್ರಸನ್ನಗೊಳಿಸಿದರು.

೩೦. ದೇವತೆಗಳು ಹೇಳಿದರು :—ಮರೆಹೊಕ್ಕವರನ್ನು ಪ್ರೀತಿಯಿಂದ ರಕ್ಷಿಸುವ ಓ ಪರಮೇಶ್ವರನೆ, ದಯೆಯಿಟ್ಟು ನಮ್ಮ ಈ ಮಾತನ್ನು ಕೇಳು.

೩೧. ಓ ಮಹಾದೇವ, ಒಳ್ಳೇ ಮನಸ್ಸಿನಿಂದ ಮನ್ಮಥನ ಈ ಕಾರ್ಯವನ್ನು ವಿಚಾರಮಾಡು. ಆ ಮನ್ಮಥನು ತನ್ನ ಸ್ವಾರ್ಥಕ್ಕಾಗಿ ಈ ಕಾರ್ಯವನ್ನು ಮಾಡಲಿಲ್ಲ.

೩೨. ಓ ಸ್ವಾಮಿ, ದುಷ್ಟನಾದ ತಾರಕಾಸುರನಿಂದ ಪೀಡಿಸಲ್ಪಟ್ಟ ದೇವತೆಗಳು ಮನ್ಮಥನಿಂದ ಈ ಕಾರ್ಯವನ್ನು ಮಾಡಿಸಿರುವರು. ಇದರಲ್ಲಿ ಮನ್ಮಥನ ತಪ್ಪೇನೂ ಇಲ್ಲ.

೩೩. ರತಿದೇವಿಯು ಈ ಪತಿವಿರಹದಿಂದ ಪ್ರಲಾಪಿಸುತ್ತಿರುವಳು. ಓ ಜಗದೀಶ್ವರ, ಆ ರತಿಯನ್ನು ಸಮಾಧಾನಗೊಳಿಸು.

ಸಂಹಾರಂ ಕರ್ತುಕಾಮೋಽಸಿ ಕ್ರೋಧೇನಾನೇನ ಶಂಕರ ।
ದೈವತೈಸ್ಸಹ ಸರ್ವೇಷಾಂ ಹತವಾಂಸ್ತ್ವಂ ಯದಿ ಸ್ಮರಂ ॥ ೩೪ ॥

ದುಃಖಂ ತಸ್ಯಾ ರತೇರ್ದೃಷ್ಟ್ವಾ ನಷ್ಟಪ್ರಾಯಾಶ್ಚ ದೇವತಾಃ ।
ತಸ್ಮಾತ್ತ್ವಯಾ ಚ ಕರ್ತವ್ಯಂ ರತ್ಯಾಃ ಶೋಕಾಪನೋದನಂ ॥ ೩೫ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಪ್ರಸನ್ನೋ ಭಗವಾನ್ ಶಿವಃ ।
ದೇವಾನಾಂ ಸಕಲಾನಾಂ ಚ ವಚನಂ ಚೇದಮಬ್ರವೀತ್ ॥ ೩೬ ॥

॥ ಶಿವ ಉವಾಚ ॥

ದೇವಾಶ್ಚ ಋಷಯಸ್ಸರ್ವೇ ಮದ್ವಚಃ ಶೃಣುತಾದರಾತ್ ।
ಮತ್ಕೋಪೇನ ಚ ಯಜ್ಜಾತಂ ತತ್ತಥಾ ನಾನ್ಯಥಾ ಭವೇತ್ ॥ ೩೭ ॥

ಅನಂಗಸ್ತಾವದೇವ ಸ್ಯಾತ್ಕಾಮೋ ರತಿಪತಿಃ ಪ್ರಭುಃ ।
ಯಾವಚ್ಚಾವತರೇತ್ಕೃಷ್ಣೋ ಧರಣ್ಯಾಂ ರುಕ್ಮಿಣೀಪತಿಃ ॥ ೩೮ ॥

---

೩೪. ಓ ಶಂಕರ, ಈ ನಿನ್ನ ಕ್ರೋಧದಿಂದ ಮನ್ಮಥನನ್ನು ಸುಟ್ಟಿದ್ದಲ್ಲದೇ ದೇವತೆಗಳೆಲ್ಲರನ್ನೂ ಭಸ್ಮಮಾಡಿದಂತಾಯಿತು.

೩೫. ರತಿದೇವಿಯ ದುಃಖವನ್ನು ನೋಡಿ ದೇವತೆಗಳೂ ಮೃತಪ್ರಾಯ ರಾಗಿರುವರು. ಆದುದರಿಂದ ರತೀದೇವಿಯ ಶೋಕವನ್ನು ನೀನು ಹೋಗಲಾಡಿಸ ಬೇಕು.

೩೬. ಬ್ರಹ್ಮನು ಹೇಳಿದನು :—ಹೀಗೆ ದೇವತೆಗಳು ಹೇಳಿದ ಮಾತನ್ನು ಕೇಳಿ ಭಗವಂತನಾದ ಶಿವನು ಪ್ರಸನ್ನನಾಗಿ ದೇವತೆಗಳನ್ನು ಕುರಿತು ಇಂತೆಂದನು.

೩೭. ಶಿವನು ಹೇಳಿದನು :—ಎಲೈ ದೇವತೆಗಳಿರಾ ಮತ್ತು ಮುನಿಗಳಿರಾ, ನನ್ನ ಮಾತನ್ನು ಸಾವಧಾನವಾಗಿ ಕೇಳಿರಿ. ನನ್ನ ಕೋಪದಿಂದ ಆದ ಕಾರ್ಯವು ಬೇರೆಯಾಗಲಾರದು.

೩೮. ರತಿಪ್ರಿಯನಾದ ಮನ್ಮಥನು ರುಕ್ಮಿಣೀಪತಿಯಾಗಿ ಶ್ರೀಕೃಷ್ಣನು ಅವ ತರಿಸುವವರೆಗೂ ಅನಂಗ (ಶರೀರವಿಲ್ಲದವ) ನಾಗಿಯೇ ಇರುವನು.

ದ್ವಾರಕಾಯಾಂ ಯದಾ ಸ್ಥಿತ್ವಾ ಪುತ್ರಾನುತ್ಪಾದಯಿಷ್ಯತಿ ।
ತದಾ ಕೃಷ್ಣಸ್ತು ರುಕ್ಮಿಣ್ಯಾಂ ಕಾಮಮುತ್ಪಾದಯಿಷ್ಯತಿ ॥ ೩೯ ॥

ಪ್ರದ್ಯುಮ್ನನಾಮ ತಸ್ಯೈವ ಭವಿಷ್ಯತಿ ನ ಸಂಶಯಃ ।
ಜಾತಮಾತ್ರಂ ತು ತಂ ಪುತ್ರಂ ಶಂಬರಃ ಸಂಹರಿಷ್ಯತಿ ॥ ೪೦ ॥

ಹೃತ್ವಾ ಪ್ರಾಸ್ಯ ಸಮುದ್ರೇ ತಂ ಶಂಬರೋ ದಾನವೋತ್ತಮಃ ।
ಮೃತಂ ಜ್ಞಾತ್ವಾ ವೃಥಾ ಮೂಢೋ ನಗರಂ ಸ್ವಂ ಗಮಿಷ್ಯತಿ ॥ ೪೧ ॥

ತಾವಚ್ಚ ನಗರಂ ತಸ್ಯ ರತೇ ಸ್ಥೇಯಂ ಯಥಾಸುಖಂ ।
ತತ್ರೈವ ಸ್ವಪತೇಃ ಪ್ರಾಪ್ತಿಃ ಪ್ರದ್ಯುಮ್ನಸ್ಯ ಭವಿಷ್ಯತಿ ॥ ೪೨ ॥

ತತ್ರ ಕಾಮೋ ಮಿಲಿತ್ವಾ ತಂ ಹತ್ವಾ ಶಂಬರಮಾಹವೇ ।
ಭವಿಷ್ಯತಿ ಸುಖೀ ದೇವಾಃ ಪ್ರದ್ಯುಮ್ನಾಖ್ಯಃ ಸ್ವಕಾಮಿನೀಂ ॥ ೪೩ ॥

---

೩೯. ಕೃಷ್ಣನು ದ್ವಾರಕೆಯಲ್ಲಿ ರಾಜ್ಯಭಾರಮಾಡುತ್ತಲಿದ್ದು ಪ್ರಜೋತ್ಪತ್ತಿ ಮಾಡುತ್ತಲಿರುವಾಗ ರುಕ್ಮಿಣಿಯಲ್ಲಿ ಮನ್ಮಥನನ್ನು ಉತ್ಪಾದನೆಮಾಡುವನು.

೪೦. ಆಗ ಆ ಮನ್ಮಥನಿಗೆ ಪ್ರದ್ಯುಮ್ನನೆಂದು ಹೆಸರು. ಹುಟ್ಟಿದೊಡನೆಯೇ ಆ ಮಗುವನ್ನು ಶಂಬರನೆಂಬ ದೈತ್ಯನು ಅಪಹರಿಸುವನು.

೪೧. ಆಮೇಲಾಮಗುವನ್ನು ಮೂಢನಾದ ಶಂಬರಾಸುರನು ಸಮುದ್ರದಲ್ಲಿ ಎಸೆದು, ಸತ್ತುಹೋಯಿತೆಂದು ತಿಳಿದು ತನ್ನ ನಗರಕ್ಕೆ ತೆರಳುವನು.

೪೨. ಎಲೌ ರತೀದೇವಿ, ಅಲ್ಲಿಯವರೆಗೆ ನೀನು ಆ ಶಂಬರಾಸುರನ ನಗರ ದಲ್ಲಿಯೇ ಇರಬೇಕು. ಅಲ್ಲಿಯೇ ನಿನ್ನ ಪತಿಯಾದ ಪ್ರದ್ಯುಮ್ನನು ನಿನಗೆ ಲಭಿಸು ವನು.

೪೩. ಅಲ್ಲಿ ಕಾಮನು ಪ್ರದ್ಯುಮ್ನರೂಪದಿಂದ ರತಿಯನ್ನು ಸೇರಿ ಶಂಬರಾಸುರ ನನ್ನು ಸಂಹರಿಸಿ ಪ್ರಿಯಳೊಡನೆ ತುಂಬಾ ಸುಖವನ್ನನುಭವಿಸುವನು.

ತದೀಯಂ ಚೈವ ಯದ್ದ್ರವ್ಯಂ ನೀತ್ವಾ ಸ ನಗರಂ ಪುನಃ ।
ಗಮಿಷ್ಯತಿ ತಯಾ ಸಾರ್ಧಂ ದೇವಾಸ್ಸತ್ಯಂ ವಚೋ ಮಮ ॥ ೪೪ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚಃ ಶಂಭೋರ್ದೇವಾ ಊಚುಃ ಪ್ರಣಮ್ಯ ತಾಂ ।
ಕಿಂಚಿದುಚ್ಛ್ವಸಿತಾಶ್ಚಿತ್ತೇ ಕರೌ ಬದ್ಧ್ವಾ ನತಾಂಗಕಾಃ ॥ ೪೫ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಶೀಘ್ರಂ ಜೀವಯ ಕಾಮಂ ತ್ವಂ ರಕ್ಷ ಪ್ರಾಣಾ್ ರತೇರ್ಹರ ॥ ೪೬ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯಾಮರವಚಃ ಪ್ರಸನ್ನಃ ಪರಮೇಶ್ವರಃ ।
ಪುನರ್ಬಭಾಷೇ ಕರುಣಾಸಾಗರಃ ಸಕಲೇಶ್ವರಃ ॥ ೪೭ ॥

॥ ಶಿವ ಉವಾಚ ॥

ಹೇ ದೇವಾಸ್ಸುಪ್ರಸನ್ನೋಽಸ್ಮಿ ಜೀವಯಿಷ್ಯಾಮಿ ಚಾಂತರೇ ।
ಕಾಮಸ್ಸ ಮದ್ಗಣೋ ಭೂತ್ವಾ ವಿಹರಿಷ್ಯತಿ ನಿತ್ಯಶಃ ॥ ೪೮ ॥

---

೪೪. ಆ ಶಂಬರಾಸುರನ ಐಶ್ವರ್ಯವೆಲ್ಲವನ್ನೂ ತೆಗೆದುಕೊಂಡು ರತೀದೇವಿಯೊಡನೆ ತನ್ನ ನಗರ(ದ್ವಾರಕೆ)ಕ್ಕೆ ತೆರಳುವನು. ಎಲೈ ದೇವತೆಗಳಿರಾ, ನನ್ನ ಮಾತು ಸತ್ಯವಾದುದು ಎಂದನು.

೪೫-೪೬. ಬ್ರಹ್ಮನು ಹೇಳಿದನು:—ಹೀಗೆ ಶಂಕರನು ಹೇಳಿದ ಮಾತನ್ನು ಕೇಳಿ ದೇವತೆಗಳು ಸ್ವಲ್ಪ ಸಮಾಧಾನಗೊಂಡು ತಿರುಗಿ ಶಿವನನ್ನು ನಮಸ್ಕರಿಸಿ, ಕೈಗಳನ್ನು ಜೋಡಿಸಿ ವಿನಯದಿಂದ, ದೇವದೇವನಾದ ಓ ಮಹಾದೇವನೆ, ಕರುಣಾಸಮುದ್ರನಾದ ನೀನು ಮನ್ಮಥನನ್ನು ಜಾಗ್ರತೆ ಬದುಕಿಸು. ರತಿಯ ಪ್ರಾಣಗಳನ್ನು ರಕ್ಷಿಸು. ಎಂದು ಮತ್ತೆ ಬೇಡಿಕೊಂಡರು.

೪೭-೪೮. ಬ್ರಹ್ಮನು ಹೇಳಿದನು:—ಈ ರೀತಿಯಾದ ದೇವತೆಗಳ ಮಾತುಗಳನ್ನು ಕೇಳಿ ಕರುಣಾನಿಧಿಯಾದ ಪರಮೇಶ್ವರನು ಪ್ರಸನ್ನನಾಗಿ, ಎಲೈ ದೇವತೆಗಳಿರಾ, ನಾನು ತುಂಬಾ ಪ್ರಸನ್ನನಾಗಿರುವೆನು. ರಹಸ್ಯವಾಗಿ ಅವನನ್ನು ಬದುಕಿಸುವೆನು. ಆ ಕಾಮನು ನನ್ನ ಗಣವಾಗಿದ್ದು ನಿತ್ಯವೂ ವಿಹರಿಸುವನು.

ನಾಖ್ಯೇಯಮಿದಮಾಖ್ಯಾನಂ ಕಸ್ಯಚಿತ್ಸುರತಸ್ಸುರಾಃ ।
ಗಚ್ಛತ ಸ್ವಸ್ಥಲಂ ದುಃಖಂ ನಾಶಯಿಷ್ಯಾಮಿ ಸರ್ವತಃ ॥ ೪೯ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾಂತರ್ದಧೇ ರುದ್ರೋ ದೇವಾನಾಂ ಸ್ತುವತಾಂ ತದಾ ।
ಸರ್ವೇ ದೇವಾಸ್ಸುಪ್ರಸನ್ನಾ ಬಭೂವುರ್ವಿಗತಸ್ಮಯಾಃ ॥ ೫೦ ॥

ತತಸ್ತಾಂ ಚ ಸಮಾಶ್ವಾಸ್ಯ ರುದ್ರಸ್ಯ ವಚನೇ ಸ್ಥಿತಾಃ ।
ಉಕ್ತ್ವಾ ವಚಸ್ತದೀಯಂ ಚ ಸ್ವಂ ಸ್ವಂ ಧಾಮ ಯಯುರ್ಮುನೇ ॥ ೫೧ ॥

ಕಾಮಪತ್ನೀ ಸಮಾದಿಷ್ಟಂ ನಗರಂ ಸಾ ಗತಾ ತದಾ ।
ಪ್ರತೀಕ್ಷಮಾಣಾ ತಂ ಕಾಲಂ ರುದ್ರಾದಿಷ್ಟಂ ಮುನೀಶ್ವರ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಏಕೋನವಿಂಶೋಽಧ್ಯಾಯಃ

---

೪೯. ಎಲೈ ದೇವತೆಗಳೇ, ಈ ಆಖ್ಯಾನವನ್ನು ಯಾರೆದುರಿಗೂ ಹೇಳಬಾರದು. ನಿಮ್ಮ ಮನೆಗಳಿಗೆ ನಡೆಯಿರಿ. ನಿಮ್ಮೆಲ್ಲರ ದುಃಖವನ್ನೂ ನಾಶಮಾಡುವೆನು ಎಂದನು.

೫೦. ಬ್ರಹ್ಮನು ಹೇಳಿದನು:--ಶಂಕರನ ಮಾತನ್ನು ಕೇಳಿ ದೇವತೆಗಳು ಸಂತುಷ್ಟರಾಗಿ ಅವನನ್ನು ಸ್ತುತಿಸಿದರು. ಅವರು ಸ್ತುತಿಸುತ್ತಿರುವಂತೆಯೇ ಶಂಕರನು ಅಂತರ್ಧಾನನಾದನು.

೫೧. ಬಳಿಕ ದೇವತೆಗಳು ರತೀದೇವಿಯನ್ನು ಸಮಾಧಾನಗೊಳಿಸಿ ಅವನು ಹೇಳಿದ ಮಾತನ್ನು ಹೇಳಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೫೨. ರತೀದೇವಿಯು, ರುದ್ರನು ಹೇಳಿದ ಶಂಬರಾಸುರನ ನಗರಿಗೆ ಹೋಗಿ ಅಲ್ಲಿ ಅವನು ಹೇಳಿದ ಕಾಲವನ್ನು ನಿರೀಕ್ಷಿಸುತ್ತಾ ಕಾಲಕಳೆಯುತ್ತಿದ್ದಳು.

ಇಲ್ಲಿಗೆ ಶ್ರೀ ಶಿವಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ವಿಂಶೋಽಧ್ಯಾಯಃ

॥ ನಾರದ ಉವಾಚ ॥

ವಿಧೇ ನೇತ್ರಸಮುದ್ಭೂತವಹ್ನಿಜ್ವಾಲಾ ಹರಸ್ಯ ಸಾ ।
ಗತಾ ಕುತ್ರ ವದ ತ್ವಂ ತಚ್ಚರಿತ್ರಂ ಶಶಿಮೌಲಿನಃ ॥ ೧ ॥

॥ ಬ್ರಹ್ಮೋವಾಚ ॥

ಯದಾ ಭಸ್ಮ ಚಕಾರಾಶು ತೃತೀಯನಯನಾನಲಃ ।
ಶಂಭೋಃ ಕಾಮಂ ಪ್ರಜಜ್ವಾಲ ಸರ್ವತೋ ವಿಫಲಸ್ತದಾ ॥ ೨ ॥

ಹಾಹಾಕಾರೋ ಮಹಾನಾಸೀತ್ರೈಲೋಕ್ಯೇ ಸಚರಾಚರೇ ।
ಸರ್ವದೇವರ್ಷಯಸ್ತಾತ ಶರಣಂ ಮಾಂ ಯಯುರ್ದ್ರುತಮ್ ॥ ೩ ॥

---

### ಇಪ್ಪತ್ತನೆಯ ಅಧ್ಯಾಯವು

೧. ನಾರದನು ಹೇಳಿದನು :—ಓ ಬ್ರಹ್ಮನೆ, ಶಂಕರನ ಮೂರನೆಯ ಕಣ್ಣಿನಿಂದ ಜನಿಸಿದ ಅಗ್ನಿಜ್ವಾಲೆಯು ಮನ್ಮಥನನ್ನು ಭಸ್ಮಮಾಡಿ ಮುಂದೆಲ್ಲಿಗೆ ಹೋಯಿತು? ಚಂದ್ರಶೇಖರನ ಸಂಬಂಧವಾದ ಆ ಮುಂದಿನ ಕಥೆಯನ್ನು ಹೇಳು ಎಂದನು.

೨-೩. ಬ್ರಹ್ಮನು ಹೇಳಿದನು:—ಎಲೈ ನಾರದ, ಶಂಕರನ ಫಾಲನೇತ್ರವು ಯಾವಾಗ ಮನ್ಮಥನನ್ನು ಭಸ್ಮಮಾಡಿತೋ ಆಗ ಎಲ್ಲ ದೇವತೆಗಳು ಮತ್ತು ಮುನಿಗಳು ನನ್ನನ್ನು ಶರಣುಹೊಂದಿದರು.

ಸರ್ವೇ ನಿವೇದಯಾಮಾಸುಸ್ತದ್ದುಃಖಂ ಸರ್ವಮಾಕುಲಾಃ ।
ಸುಪ್ರಣಮ್ಯ ಸುಸಂಸ್ತೂಯ ಕರೌ ಬದ್ಧ್ವಾ ನತಾನನಾಃ ॥ ೪ ॥

ತಚ್ಛ್ರುತ್ವಾಹಂ ಶಿವಂ ಸ್ಮೃತ್ವಾ ತದ್ಧೇತುಂ ಸುವಿಮೃಶ್ಯ ಚ ।
ಗತಸ್ತತ್ರ ವಿನೀತಾತ್ಮಾ ತ್ರಿಲೋಕಾವನಹೇತವೇ ॥ ೫ ॥

ಸಂದಗ್ಧುಕಾಮಃ ಸ ಶುಚಿರ್ಜ್ವಾಲಾಮಾಲಾವಿಭೂಷಿತಃ ।
ಸ್ತಂಭಿತೋಽರಂ ಮಯಾ ಶಂಭುಪ್ರಸಾದಾಪ್ತಸುತೇಜಸಾ ॥ ೬ ॥

ಅಥ ಕ್ರೋಧಮಯಂ ವಹ್ನಿಂ ದಗ್ಧುಕಾಮಂ ಜಗತ್ತ್ರಯಂ ।
ವಡವಾಮುಖಮಾಕಾರ್ಷಂ ಸೌಮ್ಯಜ್ವಾಲಾಮುಖಂ ಮುನೇ ॥ ೭ ॥

ತಂ ವಾಡವತನುಮಹಂ ಸಮಾದಾಯ ಶಿವೇಚ್ಛಯಾ ।
ಸಾಗರಂ ಸಮಗಾಂ ಲೋಕಹಿತಾಯ ಜಗತಾಂ ಪತಿಃ ॥ ೮ ॥

ಆಗತಂ ಮಾಂ ಸಮಾಲೋಕ್ಯ ಸಾಗರಸ್ಸಾಂಜಲಿರ್ಮುನೇ ।
ಧೃತ್ವಾ ಚ ಪೌರುಷಂ ರೂಪಮಾಗತಸ್ಸನ್ನಿಧಿಂ ಮಮ ॥ ೯ ॥

---

೪. ಆ ದೇವತೆಗಳೆಲ್ಲರೂ ಸಹ ನನಗೆ ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ತಮ್ಮ ದುಃಖವನ್ನು ಹೇಳಿಕೊಂಡರು.

೫-೬. ದೇವತೆಗಳ ಆ ಮಾತನ್ನು ಕೇಳಿ ಅದರ ಕಾರಣವನ್ನು ವಿಮರ್ಶಿಸಿ ನಾನು ಲೋಕರಕ್ಷಣೆಗಾಗಿ ಶಿವನ ಬಳಿಗೆ ಹೋಗಿ ವಿನಯದಿಂದ ಅವನನ್ನು ಪ್ರಸನ್ನಗೊಳಿಸಿ ಅವನನುಗ್ರಹದಿಂದ ತೇಜಸ್ಸನ್ನು ಪಡೆದು ಉರಿಯುತ್ತಲಿರುವ ಆ ಫಾಲಾಗ್ನಿಯನ್ನು ಸ್ತಂಭಿಸಿದೆನು.

೭. ಆ ಅಗ್ನಿಯು ಮೂರು ಲೋಕಗಳನ್ನೂ ಸುಡಲು ಸಿದ್ಧವಾಗಿತ್ತು. ಅದನ್ನು ನಾನು ಸೌಮ್ಯವಾದ ಜ್ವಾಲೆಯುಳ್ಳದ್ದನ್ನಾಗಿ ಮಾಡಿ ವಡವಾಗ್ನಿಯನ್ನಾಗಿ ಮಾಡಿದೆನು.

೮-೧೦. ಜಗತ್ಪತಿಯಾದ ನಾನು ಲೋಕಹಿತಕ್ಕಾಗಿ ಆ ವಡವಾಗ್ನಿಯನ್ನು ಶಿವನ ಅಪ್ಪಣೆಯಂತೆ ತೆಗೆದುಕೊಂಡು ಸಮುದ್ರದ ಬಳಿಗೆ ಬರಲು ನನ್ನನ್ನು ನೋಡಿ ಸಮುದ್ರನು ಪುರುಷರೂಪವನ್ನು ಧರಿಸಿ ನನ್ನ ಬಳಿಗೆ ವಿನಯದಿಂದ ಬಂದು ನನ್ನನ್ನು

ಸುಪ್ರಣಮ್ಯಾಥ ಮಾಂ ಸಿಂಧುಸ್ಸಂಸ್ತೂಯ ಚ ಯಥಾವಿಧಿ ।
ಸ ಮಾಮುವಾಚ ಸುಪ್ರೀತ್ಯಾ ಸರ್ವಲೋಕಪಿತಾಮಹಂ ॥ ೧೦ ॥

॥ ಸಾಗರ ಉವಾಚ ॥

ಕಿಮರ್ಥಮಾಗತೋಽಸಿ ತ್ವಂ ಬ್ರಹ್ಮನ್ನತ್ರಾಖಿಲಾಧಿಪ ।
ತನ್ನಿದೇಶಯ ಸುಪ್ರೀತ್ಯಾ ಮತ್ವಾ ಮಾಂ ಚ ಸ್ವಸೇವಕಂ ॥ ೧೧ ॥

ಅಥಾಹಂ ಸಾಗರವಚಃ ಶ್ರುತ್ವಾ ಪ್ರೀತಿಪುರಸ್ಸರಂ ।
ಪ್ರಾವೋಚಂ ಶಂಕರಂ ಸ್ಮೃತ್ವಾ ಲೌಕಿಕಂ ಹಿತಮಾವರ್ಹ ॥ ೧೨ ॥

॥ ಬ್ರಹ್ಮೋವಾಚ ॥

ಶೃಣು ತಾತ ಮಹಾಧೀರ್ಮರ್ಹ ಸರ್ವಲೋಕಹಿತಾವಹ ।
ವಚ್ಮ್ಯಹಂ ಪ್ರೀತಿತಸ್ಸಿಂಧೋ ಶಿವೇಚ್ಛಾಪ್ರೇರಿತೋ ಹೃದಾ ॥ ೧೩ ॥

ಅಯಂ ಕ್ರೋಧೋ ಮಹೇಶಸ್ಯ ವಡವಾತ್ಮಾ ಮಹಾಪ್ರಭುಃ ।
ದಗ್ಧ್ವಾ ಕಾಮಂ ದ್ರುತಂ ಸರ್ವಂ ದಗ್ಧುಕಾಮೋಽಭವತ್ಪುನಃ ॥ ೧೪ ॥

---

ನಮಸ್ಕರಿಸಿ, ಸ್ತುತಿಸಿ, ಆದರದಿಂದ ಜಗತ್ಪಿತಾಮಹನಾದ ನನ್ನನ್ನು ಕುರಿತು ಹೀಗೆ ಹೇಳಿದನು.

೧೧-೧೨. ಸಮುದ್ರನು ಹೇಳಿದನು :—ಓ ಬ್ರಹ್ಮ, ನೀನು ಜಗದೊಡೆಯನು. ನಾನು ನಿನ್ನ ಸೇವಕನೆಂದು ತಿಳಿದು ನನ್ನಲ್ಲಿ ಬಂದಿರುವ ಕಾರಣವೇನೆಂಬುದನ್ನು ಅಪ್ಪಣೆಮಾಡು ಎಂದು ಬೇಡಿಕೊಳ್ಳಲು ನಾನು ಸಮುದ್ರನ ಮಾತನ್ನು ಪ್ರೀತಿ ಪೂರ್ವಕವಾಗಿ ಕೇಳಿ ಶಿವನನ್ನು ಸ್ಮರಿಸುತ್ತಾ ಲೋಕಹಿತಕ್ಕಾಗಿ ಹೀಗೆ ಹೇಳಿದೆನು.

೧೩. ಎಲೈ ಸಮುದ್ರರಾಜ, ನೀನು ಮಹಾಬುದ್ಧಿವಂತನೂ ಲೋಕಕ್ಕೆ ಹಿತವನ್ನು ಮಾಡುವವನೂ ಆಗಿರುವೆ. ಅಂತರಂಗದಲ್ಲಿ ಶಿವನು ನನ್ನನ್ನು ಪ್ರೇರಿಸುತ್ತಿರುವನು. ಅದನ್ನೇ ನಾನು ನಿನಗೆ ಈಗ ಹೇಳುತ್ತಿರುವೆನು.

೧೪. ವಡವಾರೂಪವಾದ ಈ ಅಗ್ನಿಯು ಈಶ್ವರನ ಕ್ರೋಧವಾಗಿರುತ್ತದೆ. ಇದು ಮನ್ಮಥನನ್ನು ಸುಟ್ಟಿದುದೂ ಅಲ್ಲದೆ ಜಗತ್ತೆಲ್ಲವನ್ನೂ ಸುಡುವುದರಲ್ಲಿದ್ದಿತು.

ಪ್ರಾರ್ಥಿತೋಽಹಂ ಸುರೈಶ್ಶೀಘ್ರಂ ಪೀಡಿತೈಶ್ಶಂಕರೇಚ್ಛಯಾ ।
ತತ್ರಾಗತ್ಯ ದ್ರುತಂ ತಂ ವೈ ತಾತ ಸ್ತಂಭಿತವಾನ್ ಶುಚಿಂ ॥ ೧೫ ॥

ವಾಡವಂ ರೂಪಮಾಧತ್ತ ತಮಾದಾಯಾಗತೋಽತ್ರ ಹ ।
ನಿರ್ದಿಶಾಮಿ ಜಲಾಧಾರ ತ್ವಾಮಹಂ ಕರುಣಾಕರಃ ॥ ೧೬ ॥

ಅಯಂ ಕ್ರೋಧೋ ಮಹೇಶಸ್ಯ ವಾಡವಂ ರೂಪಮಾಸ್ಥಿತಃ ।
ಜ್ವಾಲಾಮುಖಸ್ತ್ವಯಾ ಧಾರ್ಯೋ ಯಾವದಾಭೂತಸಂಪ್ಲವಂ ॥ ೧೭ ॥

ಯದಾತ್ರಾಹಂ ಸಮಾಗಮ್ಯ ವತ್ಸ್ಯಾಮಿ ಸರಿತಾಂ ಪತೇ ।
ತದಾ ತ್ವಯಾ ಪರಿತ್ಯಾಜ್ಯಃ ಕ್ರೋಧೋಽಯಂ ಶಾಂಕರೋಽದ್ಭುತಃ
॥ ೧೮ ॥

ಭೋಜನಂ ತೋಯಮೇತಸ್ಯ ತವ ನಿತ್ಯಂ ಭವಿಷ್ಯತಿ ।
ಯತ್ನಾದೇವಾವಧಾರ್ಯೋಽಯಂ ಯಥಾ ನೋಪೈತಿ ಚಾಂತರಂ ॥ ೧೯ ॥

---

೧೫. ಈ ಕ್ರೋಧಾಗ್ನಿಯಿಂದ ಪೀಡಿತರಾದ ದೇವತೆಗಳು ನನ್ನಲ್ಲಿ ಮೊರೆಯಿಟ್ಟರು. ಆಗ ನಾನು ಜಾಗ್ರತೆಯಾಗಿ ಶಿವನ ಬಳಿಗೆ ಹೋಗಿ ಅವನಿಚ್ಛೆಯಂತೆ ಆ ಕ್ರೋಧಾಗ್ನಿಯನ್ನು ಸ್ತಂಭಿಸಿದೆನು.

೧೬. ಆಮೇಲೆ ಇದು ವಡವಾರೂಪವನ್ನು ಧರಿಸಿತು. ಅದನ್ನು ತೆಗೆದುಕೊಂಡು ಇಲ್ಲಿಗೆ ಬಂದೆನು. ಇನ್ನುಮೇಲೆ ಜಲರೂಪನಾದ ನೀನೇ ಈ ವಡವಾಗ್ನಿಗೆ ಆಶ್ರಯವು.

೧೭. ವಡವಾರೂಪವಾದ ಈ ಈಶ್ವರನ ಕ್ರೋಧಾಗ್ನಿಯನ್ನು ನೀನು ಮಹಾಪ್ರಳಯಕಾಲದವರೆಗೆ ಧರಿಸಬೇಕು.

೧೮. ಮುಂದೆ ನಾನು ನಿನ್ನಲ್ಲಿಗೆ ಬಂದು ವಾಸವಾಗಿರುವೆನು. ಅಲ್ಲಿಯವರೆಗೆ ಭಯಂಕರವಾದ ಈ ವಡವಾಗ್ನಿಯನ್ನು ನೀನು ಧರಿಸಬೇಕು.

೧೯. ನಿನ್ನ ಜಲವೇ ಇದಕ್ಕೆ ಆಹಾರವು. ಇದು ಮುಳುಗಿಹೋಗದಂತೆ ಪ್ರಯತ್ನದಿಂದ ನೀನು ಧರಿಸಿ ರಕ್ಷಿಸುತ್ತಿರಬೇಕು.

॥ ಬ್ರಹ್ಮೋವಾಚ ॥

ಇತ್ಯುಕ್ತೋ ಹಿ ಮಯಾ ಸಿಂಧುರಂಗೀಚಕ್ರೇ ತದಾ ಧ್ರುವಂ ।
ಗ್ರಹೀತುಂ ವಾಡವಂ ವಹ್ನಿಂ ರೌದ್ರಂ ಚಾಶಕ್ಯಮನ್ಯತಃ ॥ ೨೦ ॥

ತತಃ ಪ್ರಕ್ಷಿಪ್ತೋ ಜಲಧೌ ಸ ವಾಡವತನಶ್ಶುಚಿಃ ।
ವಾರ್ಯೌಘಾರ್ನ್ ಸುದಹಂಸ್ತಸ್ಯ ಜ್ವಾಲಾಮಾಲಾಭಿದೀಪಿತಃ ॥ ೨೧ ॥

ತತಸ್ಸಂತುಷ್ಟಚೇತಸ್ಕಃ ಸ್ವಂ ಧಾಮಾಹಂ ಗತೋ ಮುನೇ ।
ಅಂತರ್ಧಾನಮಗಾತ್ಸಿಂಧುರ್ದಿವ್ಯರೂಪಃ ಪ್ರಣಮ್ಯ ಮಾಂ ॥ ೨೨ ॥

ಸ್ವಾಸ್ಥ್ಯಂ ಪ್ರಾಪ ಜಗತ್ಸರ್ವಂ ನಿರ್ಮುಕ್ತಂ ತದ್ಭವಾದ್ಭಯಾತ್ ।
ದೇವಾ ಬಭೂವುಸ್ಸುಖಿನೋ ಮುನಯಶ್ಚ ಮಹಾಮುನೇ ॥ ೨೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ವಿಂಶೋಽಧ್ಯಾಯಃ

---

೨೦. ಬ್ರಹ್ಮನು ಹೇಳಿದನು:—ಹೀಗೆ ನಾನು ಹೇಳಲು ಸಮುದ್ರನು ವಡವಾಗ್ನಿಯನ್ನು ಧರಿಸಲು ಅಂಗೀಕರಿಸಿದನು. ಸಮುದ್ರನು ವಿನಾ ಇನ್ನಾರೂ ಅದನ್ನು ಧರಿಸಲಾರರು.

೨೧. ಬಳಿಕ, ಆ ವಡವಾಗ್ನಿಯು ತನ್ನ ಜ್ವಾಲೆಗಳಿಂದ ಸಮುದ್ರದ ಜಲತರಂಗಗಳನ್ನು ಭಸ್ಮಮಾಡುತ್ತಾ ಒಳಗೆ ಪ್ರವೇಶಿಸಿತು.

೨೨. ಆಮೇಲೆ ದಿವ್ಯರೂಪವುಳ್ಳ ಸಮುದ್ರಪುರುಷನು ನನಗೆ ನಮಸ್ಕರಿಸಿ ಅಂತರ್ಧಾನನಾದನು. ನಾನೂ ಸಹ ಸಂತುಷ್ಟನಾಗಿ ನನ್ನ ಸ್ಥಾನಕ್ಕೆ ಬಂದೆನು.

೨೩. ಆಗ ಜಗತ್ತು ಶಂಕರನ ಕ್ರೋಧಾಗ್ನಿಯ ಭಯವಿಲ್ಲದೆ ಸ್ವಸ್ಥವಾದುದಾಯಿತು. ದೇವತೆಗಳು ಮತ್ತು ಮುನಿಗಳು ಸುಖಿಗಳಾದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಏಕವಿಂಶೋಽಧ್ಯಾಯಃ

---

॥ ನಾರದ ಉವಾಚ ॥

ವಿಧೇ ತಾತ ಮಹಾಪ್ರಾಜ್ಞ ವಿಷ್ಣುಶಿಷ್ಯ ತ್ರಿಲೋಕಕೃತ್ ।
ಅದ್ಭುತೇಯಂ ಕಥಾ ಪ್ರೋಕ್ತಾ ಶಂಕರಸ್ಯ ಮಹಾತ್ಮನಃ ॥ ೧ ॥

ಭಸ್ಮೀಭೂತೇ ಸ್ಮರೇ ಶಂಭುತೃತೀಯನಯನಾಗ್ನಿನಾ ।
ತಸ್ಮಿನ್ ಪ್ರವಿಷ್ಟೇ ಜಲಧೌ ವದ ತ್ವಂ ಕಿಮಭೂತ್ತತಃ ॥ ೨ ॥

ಕಿಂ ಚಕಾರ ತತೋ ದೇವೀ ಪಾರ್ವತೀ ಕುಧರಾತ್ಮಜಾ ।
ಗತಾ ಕುತ್ರ ಸಖೀಭ್ಯಾಂ ಸಾ ತದ್ವದಾದ್ಯ ದಯಾನಿಧೇ ॥ ೩ ॥

---

### ಇಪ್ಪತ್ತೊಂದನೆಯ ಅಧ್ಯಾಯವು

೧. ನಾರದನು ಹೇಳಿದನು :—ಜಗತ್ಕರ್ತನಾದ ಓ ತಂದೆಯೇ, ನೀನು ವಿಷ್ಣು ಶಿಷ್ಯನು. ಮೇಲಾಗಿ ಮಹಾಪಂಡಿತನು. ಇಂತಹ ನೀನು ಮಹಾಮಹಿಮನಾದ ಶಂಕರನ ಅದ್ಭುತವಾದ ಕಥೆಯನ್ನು ಹೇಳುತ್ತಲಿರುವೆ.

೨-೩. ಶಂಕರನ ಫಾಲನೇತ್ರದಿಂದ ಮನ್ಮಥನು ದಗ್ಧನಾದಮೇಲೆ ಆ ಕ್ರೋಧಾಗ್ನಿಯು ವಡವಾಗ್ನಿಯಾಗಿ ಸಮುದ್ರವನ್ನು ಪ್ರವೇಶಿಸಿತಷ್ಟೆ. ಮುಂದೆ ಏನಾಯಿತು? ಆಮೇಲೆ ಗಿರಿರಾಜಪುತ್ರಿಯಾದ ಪಾರ್ವತಿಯು ಏನು ಮಾಡಿದಳು? ಸಖಿಯರೊಡನೆ ಅವಳು ಎಲ್ಲಿಗೆ ಹೋದಳು? ಅದನ್ನು ದಯವಿಟ್ಟು ಹೇಳೆಂದು ಕೇಳಲು,

॥ ಬ್ರಹ್ಮೋವಾಚ ॥

ಶೃಣು ತಾತ ಮಹಾಪ್ರಾಜ್ಞ ಚರಿತಂ ಶಶಿಮೌಲಿನಃ ।
ಮಹೋತಿಕಾರಕಸ್ಯೈವ ಸ್ವಾಮಿನೋ ಮಮ ಚಾದರಾತ್ ॥ ೧ ॥

ಯದಾದಹಚ್ಛಂಭುನೇತ್ರೋದ್ಭವೋ ಹಿ ಮದನಂ ಶುಚಿಃ ।
ಮಹಾಶಬ್ದೋಽದ್ಭುತೋಽಭೂದ್ವೈ ಯೇನಾಕಾಶಃ ಪ್ರಪೂರಿತಃ ॥ ೨ ॥

ತೇನ ಶಬ್ದೇನ ಮಹತಾ ಕಾಮಂ ದಗ್ಧಂ ಸಮೀಕ್ಷ್ಯ ಚ ।
ಸಖೀಭ್ಯಾಂ ಸಹ ಭೀತಾ ಸಾ ಯಯೌ ಸ್ವಗೃಹಮಾಕುಲಾ ॥ ೩ ॥

ತೇನ ಶಬ್ದೇನ ಹಿಮವಾನ್ ಪರಿವಾರಸಮನ್ವಿತಃ ।
ವಿಸ್ಮಿತೋಽಭೂದತಿಕ್ಲಿಷ್ಟಃ ಸುತಾಂ ಸ್ಮೃತ್ವಾ ಗತಾಂ ತತಃ ॥ ೪ ॥

ಜಗಾಮ ಶೋಕಂ ಶೈಲೇಶಃ ಸುತಾಂ ದೃಷ್ಟ್ವಾತಿವಿಹ್ವಲಾಂ ।
ರುದಂತೀಂ ಶಂಭುವಿರಹಾದಾಸಸಾದಾಚಲೇಶ್ವರಃ ॥ ೫ ॥

---

೧. ಬ್ರಹ್ಮನು ಹೇಳಿದನು:—ಮಹಾಪ್ರಾಜ್ಞನಾದ ಎಲೈ ನಾರದನೆ, ಚಂದ್ರಶೇಖರನ ಚರಿತವನ್ನು ಹೇಳುವೆನು ಕೇಳು. ಅವನು ಮಹಾಮಹಿಮನು. ನನಗೂ ಸಹ ಒಡೆಯನು.

೨. ಶಂಕರನ ಫಾಲಾಗ್ನಿಯಿಂದ ಮನ್ಮಥನು ಭಸ್ಮವಾದೊಡನೆ ಅದ್ಭುತವಾದೊಂದು ಮಹಾಶಬ್ದವಾಯಿತು. ಅದರಿಂದ ಆಕಾಶವೆಲ್ಲವೂ ತುಂಬಿಹೋಯಿತು.

೩. ಆ ಮಹಾಶಬ್ದವನ್ನು ಕೇಳಿ, ಮನ್ಮಥನು ಭಸ್ಮವಾದುದನ್ನೂ ನೋಡಿ, ಪಾರ್ವತಿಯು ತುಂಬಾ ಹೆದರಿ ದುಃಖದಿಂದ ಸಖಿಯರೊಡನೆ ಮನೆಗೆ ಹೊರಟು ಹೋದಳು.

೪. ಆ ಶಬ್ದವನ್ನು ಕೇಳಿ ಹಿಮವಂತನೂ ಅವನ ಪರಿವಾರದವರೂ ಇದೇನೆಂದು ವಿಸ್ಮಯಗೊಂಡರು. ಆಗ ಅವನು ಶಿವನ ಬಳಿಗೆ ತನ್ನ ಪುತ್ರಿಯು ಹೋಗಿರುವುದನ್ನು ಜ್ಞಾಪಿಸಿಕೊಂಡು ತುಂಬಾ ಭಯಗೊಂಡನು.

೫-೧೦. ಅಷ್ಟರಲ್ಲಿ ಭಯವಿಹ್ವಲಳೂ, ಶಂಕರನ ವಿರಹದಿಂದ ದುಃಖಿಸುತ್ತಲೂ ಇರುವ ಪಾರ್ವತಿಯು ಅಲ್ಲಿಗೆ ಬಂದಳು. ಅವಳನ್ನು ಹಿಮವಂತನು ನೋಡಿ ಅವಳ

ಆಸಾದ್ಯ ಪಾಣಿನಾ ತಸ್ಯಾ ಮಾರ್ಜಯನ್ನಯನದ್ವಯಂ ।
ಮಾ ಬಿಭೀಹಿ ಶಿವೇऽರೋದೀರಿತ್ಯುಕ್ತ್ವಾ ತಾಂ ತದಾಗ್ರಹೀತ್ ॥ ೯ ॥

ಕ್ರೋಡೇ ಕೃತ್ವಾ ಸುತಾಂ ಶೀಘ್ರಂ ಹಿಮವಾನಚಲೇಶ್ವರಃ ।
ಸ್ವಮಾಲಯಮುಥಾನಿನ್ಯೇ ಸಾಂತ್ವಯನ್ನತಿವಿಹ್ವಲಾಂ ॥ ೧೦ ॥

ಅಂತರ್ಹಿತೇ ಸ್ಮರಂ ದಗ್ಧ್ವಾ ಹರೇ ತದ್ವಿರಹಾಚ್ಛಿವಾ ।
ವಿಕಲಾಭೂದ್ಭೃಶಂ ಸಾ ವೈ ಲೇಭೇ ಶರ್ಮ ನ ಕುತ್ರಚಿತ್ ॥ ೧೧ ॥

ಪಿತುರ್ಗೃಹಂ ತದಾ ಗತ್ವಾ ಮಿಲಿತ್ವಾ ಮಾತರಂ ಶಿವಾ ।
ಪುನರ್ಜಾತಂ ತದಾ ಮೇನೆ ಸ್ವಾತ್ಮಾನಂ ಸಾ ಧರಾತ್ಮಜಾ ॥ ೧೨ ॥

ನಿನಿಂದ ಚ ಸ್ವರೂಪಂ ಸಾ ಹಾ ಹತಾಸ್ಮೀತ್ಯಥಾಬ್ರವೀತ್ ।
ಸಖೀಭಿರ್ಬೋಧಿತಾ ಚಾಪಿ ನ ಬುಬೋಧ ಗಿರೀಂದ್ರಜಾ ॥ ೧೩ ॥

---

ಬಳಿಗೆ ಬಂದು ಕೈಯಿಂದ ಅವಳ ಕಣ್ಣುಗಳನ್ನು ಒರೆಸುತ್ತಾ ಎಲೌ ಪಾರ್ವತಿ, ಹೆದರಬೇಡ, ಅಳಬಾರದು ಎಂದು ಹೇಳಿ ಅವಳನ್ನು ಬಾಹುಗಳಿಂದ ತಬ್ಬಿ ಕೊಂಡು ಪ್ರೀತಿಯಿಂದ ಸಮಾಧಾನಗೊಳಿಸುತ್ತಾ ತನ್ನ ಮನೆಗೆ ಕರೆದುಕೊಂಡು ಬಂದನು.

೧೧. ಮನ್ಮಥನನ್ನು ಭಸ್ಮಮಾಡಿ ಹರನು ಅಂತರ್ಧಾನನಾಗಲು ಪಾರ್ವತಿಯು ಅವನ ವಿರಹದುಃಖದಿಂದ ತುಂಬಾ ಖಿನ್ನಳಾದಳು. ಎಲ್ಲೆಲ್ಲಿಯೂ ಅವಳಿಗೆ ಸುಖ ವಿಲ್ಲವಾಯಿತು

೧೨. ತಂದೆಯಮನೆಗೆ ಹೋದಬಳಿಕ ಆ ಗಿರಿಜೆಯು ತಾಯಿಯ ಸಮೀಪ ದಲ್ಲಿ ಕುಳಿತು ತಾನು ತಿರುಗಿ ಹೊಸದಾಗಿ ಹುಟ್ಟಿದಂತಾಯಿತೆಂದು ತಿಳಿದುಕೊಂಡಳು.

೧೩. ಅಯ್ಯೋ! ನನಗೆ ಎಂತಹ ಕಷ್ಟ ಒದಗಿತು? ಈಗ ಏನುಮಾಡಲಿ ಎಂದುಕೊಂಡು ಆ ಗಿರಿಜೆಯು ತನ್ನ ರೂಪವನ್ನು ನಿಂದಿಸಿಕೊಂಡಳು. ಸಖಿಯರು ಎಷ್ಟು ಹೇಳಿದರೂ ಅವಳು ಸಮಾಧಾನಗೊಳ್ಳಲಿಲ್ಲ.

ಸ್ವಪತೀ ಚ ಪಿಬಂತೀ ಚ ಸಾ ಸ್ನಾತೀ ಗಚ್ಛತೀ ಶಿವಾ ।
ತಿಷ್ಠಂತೀ ಚ ಸಖೀಮಧ್ಯೇ ನ ಕಿಂಚಿತ್ಸುಖಮಾಪ ಚ ॥ ೧೪ ॥

ಧಿಕ್ ಸ್ವರೂಪಂ ಮದೀಯಂ ಚ ತಥಾ ಜನ್ಮ ಚ ಕರ್ಮ ಚ ।
ಇತಿ ಬ್ರುವಂತೀ ಸತತಂ ಸ್ಮರಂತೀ ಹರಚೇಷ್ಟಿತಂ ॥ ೧೫ ॥

ಏವಂ ಸಾ ಪಾರ್ವತೀ ಶಂಭುವಿರಹಾತ್ಕ್ಲಿಷ್ಟಮಾನಸಾ ।
ಸುಖಂ ನ ಲೇಭೇ ಕಿಂಚಿದ್ವಾಬ್ರವೀಚ್ಛಿವಶಿವೇತಿ ಚ ॥ ೧೬ ॥

ನಿವಸಂತೀ ಪಿತುರ್ಗೇಹೇ ಪಿನಾಕಿಗತಚೇತನಾ ।
ಶುಶೋಚಾಥ ಶಿವಾ ತಾತ ಮುಮೋಹ ಚ ಮುಹುರ್ಮುಹುಃ ॥ ೧೭ ॥

ಶೈಲಾಧಿರಾಜೋಽಪ್ಯಥ ಮೇನಕಾಪಿ
ಮೈನಾಕಮುಖ್ಯಾಸ್ತನಯಾಶ್ಚ ಸರ್ವೇ ।
ತಾಂ ಸಾಂತ್ವಯಾಮಾಸುರದೀನಸತ್ತ್ವಾ
ಹರಂ ವಿಸಸ್ಮಾರ ತಥಾಪಿ ನೋ ಸಾ ॥ ೧೮ ॥

---

೧೪. ನಿದ್ರೆಯಲ್ಲಿಯೂ, ಪಾನಭೋಜನಗಳಲ್ಲಿಯೂ, ಸ್ನಾನದಲ್ಲಿಯೂ, ಎಲ್ಲಿಗಾದರೂ ಹೋಗಿಬರುವುದರಲ್ಲಿಯೂ ಅವಳಿಗೆ ಏನೂ ಬೇಡವಾಯಿತು. ಮನಸ್ಸಮಾಧಾನವಿಲ್ಲದೆ ಸದಾ ದುಃಖಪಡುತ್ತಿದ್ದಳು.

೧೫-೧೬. ಛೇ! ಈ ರೂಪದಿಂದೇನು? ಇಂತಹ ಮಾತಾಪಿತೃಗಳಲ್ಲಿ ಜನಿಸಿದರೂ ನಾನು ಅದೃಷ್ಟಹೀನಳಾದೆನಲ್ಲಾ, ಹೀಗೆಂದು ತನ್ನನ್ನು ಸದಾ ನಿಂದಿಸಿಕೊಳ್ಳುತ್ತಾ ಹರನ ಚೇಷ್ಟೆಗಳನ್ನು ಆಗಾಗ ಸ್ಮರಿಸುತ್ತಾ ಶಂಕರನ ವಿರಹದಿಂದ ದುಃಖಿತೆಯಾಗಿ ಸ್ವಲ್ಪವೂ ಸುಖವಿಲ್ಲದವಳಾಗುವಳು. ಸದಾ ಶಿವ ಶಿವ ಎಂದು ಶಿವನ ಹೆಸರನ್ನೇ ಸ್ಮರಿಸುತ್ತಲಿದ್ದಳು.

೧೭. ತಂದೆಯ ಮನೆಯಲ್ಲಿರುತ್ತಾ ಆ ಗಿರಿಜೆಯು ಸದಾ ಶಿವನಲ್ಲಿಯೇ ಆಸಕ್ತಳಾಗಿ ದುಃಖಿಸುತ್ತಿದ್ದಳು. ಪುನಃ ಪುನಃ ಮೂರ್ಛೆಗೊಳ್ಳುತ್ತಿದ್ದಳು.

೧೮. ಹಿಮವಂತ, ಮೇನಕಾದೇವಿ, ಮೈನಾಕ ಮೊದಲಾದ ಮಕ್ಕಳು ಎಲ್ಲರೂ ಸಹ ಆ ಗಿರಿಜೆಯನ್ನು ಸಮಾಧಾನಗೊಳಿಸಿದರು. ಆದರೂ ಅವಳು ಶಿವನನ್ನು ಮರೆಯದೆ ದುಃಖಿಸುತ್ತಿದ್ದಳು.

ಅಥ ದೇವಮುನೇ ಧೀರ್ಮ್ಯ ಹಿಮವತ್ಪ್ರಸ್ತರೇ ತದಾ ।
ನಿಯೋಜಿತೋ ಬಲಭಿದಾಗಮಸ್ತ್ವಂ ಕಾಮುಚಾರತಃ ॥ ೧೯ ॥

ತತಸ್ತ್ವಂ ಪೂಜಿತಸ್ತೇನ ಭೂಧರೇಣ ಮಹಾತ್ಮನಾ ।
ಕುಶಲಂ ಪೃಷ್ಟವಾಂಸ್ತಂ ವೈ ತದಾವಿಷ್ಟೋ ವರಾಸನೇ ॥ ೨೦ ॥

ತತಃ ಪ್ರೋವಾಚ ಶೈಲೇಶಃ ಕನ್ಯಾಚರಿತಮಾದಿತಃ ।
ಹರಸೇವಾನ್ವಿತಂ ಕಾಮದಹನಂ ಚ ಹರೇಣ ಚ ॥ ೨೧ ॥

ಶ್ರುತ್ವಾವೋಚೋ ಮುನೇ ತ್ವಂ ಹಿ ತಂ ಶೈಲೇಶಂ ಶಿವಂ ಭಜ ।
ತಮಾಮಂತ್ರ್ಯೋದತಿಷ್ಠಸ್ತ್ವಂ ಸಂಸ್ಮೃತ್ಯ ಮನಸಾ ಶಿವಂ ॥ ೨೨ ॥

ತಂ ಸಮುತ್ಸೃಜ್ಯ ರಹಸಿ ಕಾಲೀಂ ತಾಮುಗಮಸ್ತ್ವರಾ ।
ಲೋಕೋಪಕಾರಕೋ ಜ್ಞಾನೀ ತ್ವಂ ಮುನೇ ಶಿವವಲ್ಲಭಃ ॥ ೨೩ ॥

ಆಸಾದ್ಯ ಕಾಲೀಂ ಸಂಬೋಧ್ಯ ತದ್ಧಿತೇ ಸ್ಥಿತ ಆದರಾತ್ ।
ಅವೋಚಸ್ತ್ವಂ ವಚಸ್ತಥ್ಯಂ ಸರ್ವೇಷಾಂ ಜ್ಞಾನಿನಾಂ ವರಃ ॥ ೨೪ ॥

---

೧೯. ಎಲೈ ನಾರದನೆ, ಕೇಳು. ಬಳಿಕ ಕಾಮುಚಾರಿಯಾದ ನೀನು ದೇವೇಂದ್ರನಿಂದ ಪ್ರಾರ್ಥಿತನಾಗಿ ಹಿಮವಂತನ ಮನೆಗೆ ಬಂದೆಯಷ್ಟೆ.

೨೦. ಆಗ ಮಹಾತ್ಮನಾದ ಹಿಮವಂತನು ನಿನ್ನನ್ನು ಪೂಜಿಸಿದನು. ಆಮೇಲೆ ನೀನು ಆಸನದಲ್ಲಿ ಕುಳಿತು ಕುಶಲಪ್ರಶ್ನೆಯನ್ನು ಮಾಡಲು,

೨೧ ಹಿಮವಂತನು ನಿನಗೆ ತನ್ನ ಪುತ್ರಿಯ ಸಮಾಚಾರವನ್ನು ಹೇಳಿದನು. ಹರನನ್ನು ಸೇವಿಸಿದುದು, ಶಂಕರನು ಮನ್ಮಥನನ್ನು ಭಸ್ಮಮಾಡಿದುದು, ಎಲ್ಲವನ್ನೂ ಹೇಳಿದನು.

೨೨-೨೩. ಆಗ ನೀನು ಹಿಮವಂತನಿಗೆ " ಶಿವನನ್ನು ಸೇವಿಸು " ಎಂದು ಹೇಳಿ ಅವನನುಮತಿಯನ್ನು ಪಡೆದು ಶಿವನನ್ನು ಸ್ಮರಿಸುತ್ತಾ ಹಿಮವಂತನನ್ನು ಬೀಳ್ಕೊಂಡು ಪಾರ್ವತಿಯ ಬಳಿಗೆ ರಹಸ್ಯವಾಗಿ ಬಂದೆ. ಎಲೈ ಮುನಿ, ನೀನು ಲೋಕೋಪ ಕಾರಿಯು. ಜ್ಞಾನಿಯು. ಮೇಲಾಗಿ ಶಿವಭಕ್ತನು.

೨೪-೨೫. ಮಹಾಜ್ಞಾನಿಯಾದ ನೀನು ಪಾರ್ವತಿಯ ಬಳಿಗೆ ಬಂದು ಅವ ಳನ್ನು ಕುರಿತು ಆದರಪೂರ್ವಕವಾಗಿ ಎಲೌ ಗಿರಿಜೆ, ಸತ್ಯವಾದ ಮಾತನ್ನು ಹೇಳು

॥ ನಾರದ ಉವಾಚ ॥

ಶೃಣು ಕಾಲಿ ವಚೋ ಮೇ ಹಿ ಸತ್ಯಂ ವಚ್ಮಿ ದಯಾರತಃ ।
ಸರ್ವಥಾ ತೇ ಹಿತಕರಂ ನಿರ್ವಿಕಾರಂ ಸುಕಾಮದಂ ॥ ೨೫ ॥

ಸೇವಿತಶ್ಚ ಮಹಾದೇವಸ್ತ್ವಯೇಹ ತಪಸಾ ವಿನಾ ।
ಗರ್ವವತ್ಯಾ ಯದಧ್ವಂಸೀದ್ದೀನಾನುಗ್ರಹಕಾರಕಃ ॥ ೨೬ ॥

ವಿರಕ್ತಶ್ಚ ಸ ತೇ ಸ್ವಾಮಿೀ ಮಹಾಯೋಗೀ ಮಹೇಶ್ವರಃ ।
ವಿಸೃಷ್ಟವಾನ್ ಸ್ಮರಂ ದಗ್ಧ್ವಾ ತ್ವಾಂ ಶಿವೇ ಭಕ್ತವತ್ಸಲಃ ॥ ೨೭ ॥

ತಸ್ಮಾತ್ತ್ವಂ ಸುತಪೋಯುಕ್ತಾ ಚಿರಮಾರಾಧಯೇಶ್ವರಂ ।
ತಪಸಾ ಸಂಸ್ಕೃತಾಂ ರುದ್ರಸ್ಸದ್ವಿತೀಯಾಂ ಕರಿಷ್ಯತಿ ॥ ೨೮ ॥

ತ್ವಂ ಚಾಪಿ ಶಂಕರಂ ಶಂಭುಂ ನ ತ್ಯಕ್ಷ್ಯಸಿ ಕದಾಚನ ।
ನಾನ್ಯಂ ಪತಿಂ ಹಠಾದ್ದೇವಿ ಗ್ರಹೀಷ್ಯಸಿ ಶಿವಾದೃತೇ ॥ ೨೯ ॥

---

ವೆನು ಕೇಳು. ಆ ಮಾತು ನಿನಗೆ ಹಿತಕರವಾದುದು ಅದರಂತೆ ನಡೆದರೆ ನಿನ್ನ ಇಷ್ಟಾರ್ಥವು ಸಿದ್ಧಿಸುವುದು.

೨೬. ಮಹಾದೇವನನ್ನು ನೀನು ಸೇವಿಸಿರುವೆ. ಆದರೆ ತಪಸ್ಸನ್ನು ಮಾಡಿ ಸೇವಿಸಲಿಲ್ಲ ಸೌಂದರ್ಯಗರ್ವದಿಂದ ಈವರೆಗೆ ಸೇವಿಸಿರುವೆ. ಆ ಗರ್ವವನ್ನು ದೀನದಯಾಳುವಾದ ಶಿವನು ಮನ್ಮಥದಹನಮಾಡಿ ನಾಶಮಾಡಿದನು.

೨೭-೨೮. ನಿನ್ನ ಸ್ವಾಮಿಯಾದ ಮಹೇಶ್ವರನು ಮಹಾ ವಿರಕ್ತನು. ಮಹಾ ಯೋಗಿಯು. ಅವನು ಮನ್ಮಥವನ್ನು ದಹಿಸಿ ನಿನ್ನ ಸಹವಾಸವನ್ನು ತ್ಯಜಿಸಿ ಹೊರಟು ಹೋಗಿರುವನು. ಅವನು ಭಕ್ತವತ್ಸಲನೂ ಆದುದರಿಂದ ನೀನು ನಿಯಮವಾದ ತಪಸ್ಸಿನಿಂದ ಆ ಮಹಾದೇವನನ್ನು ಭಕ್ತಿಯಿಂದ ಬಹುಕಾಲ ಆರಾಧಿಸು. ನೀನು ತಪಸ್ಸಿನಿಂದ ಪರಿಶುದ್ಧಳಾದರೆ ಆಗ ಅವನು ನಿನ್ನನ್ನು ಮದುವೆಯಾಗುವನು.

೨೯. ನೀನೂ ಸಹ ಶಂಕರನನ್ನು ಹೊರತು ಇನ್ನಾರನ್ನೂ ಮದುವೆಯಾಗ ಲಾರೆ. ಅವನು ಹೊರತು ಇನ್ನಾವನನ್ನೂ ಸೇವಿಸಲಾರೆ ಎಂದು ಹೇಳಿದೆ.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇ ಹಿ ಮುನೇ ಸಾ ಭೂಧರಾತ್ಮಜಾ ।
ಕಿಂಚಿದುಚ್ಛ್ವಸಿತಾ ಕಾಲೀ ಪ್ರಾಹ ತ್ವಾಂ ಸಾಂಜಲಿರ್ಮುದಾ ॥ ೩೦ ॥

॥ ಶಿವೋವಾಚ ॥

ತ್ವಂ ತು ಸರ್ವಜ್ಞ ಜಗತಾಮುಪಕಾರಕರ ಪ್ರಭೋ ।
ರುದ್ರಸ್ಯಾರಾಧನಾರ್ಥಾಯ ಮಂತ್ರಂ ದೇಹಿ ಮುನೇ ಹಿ ಮೇ ॥ ೩೧ ॥

ನ ಸಿಧ್ಯತಿ ಕ್ರಿಯಾ ಕಾಪಿ ಸರ್ವೇಷಾಂ ಸದ್ಗುರುಂ ವಿನಾ ।
ಮಯಾ ಶ್ರುತಾ ಪುರಾ ಸತ್ಯಂ ಶ್ರುತಿರೇಷಾ ಸನಾತನೀ ॥ ೩೨ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚಸ್ತಸ್ಯಾಃ ಪಾರ್ವತ್ಯಾ ಮುನಿಸತ್ತಮಃ ।
ಪಂಚಾಕ್ಷರಂ ಶಂಭುಮಂತ್ರಂ ವಿಧಿಪೂರ್ವಮುಪಾದಿಶಃ ॥ ೩೩ ॥

ಅವೋಚಶ್ಚ ವಚಸ್ತಾಂ ತ್ವಂ ಶ್ರದ್ಧಾಮುತ್ಪಾದಯನ್ ಮುನೇ ।
ಪ್ರಭಾವಂ ಮಂತ್ರರಾಜಸ್ಯ ತಸ್ಯ ಸರ್ವಾಧಿಕಂ ಮುನೇ ॥ ೩೪ ॥

---

೩೦-೩೧. ಬ್ರಹ್ಮನು ಹೇಳಿದನು:—ಹೀಗೆ ನೀನು ಹೇಳಿದ ಮಾತನ್ನು ಕೇಳಿ ಗಿರಿಜೆಗೆ ಸ್ವಲ್ಪ ಮನಸ್ಸಮಾಧಾನವಾಯಿತು. ಬಳಿಕ ಆ ಪಾರ್ವತಿಯು ಕೈಮುಗಿದು ಕೊಂಡು ಓ ನಾರದಮುನಿ, ನೀನು ಸರ್ವಜ್ಞನು. ಜಗತ್ತಿಗೆ ಉಪಕಾರಿಯು. ಇಂತಹ ನೀನು ರುದ್ರನನ್ನಾರಾಧಿಸಲು ಮಂತ್ರವನ್ನು ನನಗೆ ಉಪದೇಶಿಸು.

೩೨. ಸದ್ಗುರುವಿಲ್ಲದೇ ಯಾವ ಕಾರ್ಯವೂ ಸಿದ್ಧಿಸಲಾರದಷ್ಟೆ. ಹೀಗೆಂದು ನಾನು ಕೇಳಿರುವೆನು. ಇದು ಸತ್ಯವಾದ ವೇದಮಾರ್ಗವು. ಎಂದು ನಿನ್ನನ್ನು ಪ್ರಾರ್ಥಿಸಿದಳು.

೩೩. ಬ್ರಹ್ಮನು ಹೇಳಿದನು :—ಹೀಗೆ ಪಾರ್ವತಿಯು ಹೇಳಿದ ಮಾತನ್ನು ಕೇಳಿ ನೀನು ಶಿವಪಂಚಾಕ್ಷರೀ (ನಮಃ ಶಿವಾಯ) ಮಂತ್ರವನ್ನು ವಿಧಿವತ್ತಾಗಿ ಉಪ ದೇಶಿಸಿದೆ.

೩೪. ಆಮೇಲೆ ನೀನು ಪಾರ್ವತಿಗೆ ಶ್ರದ್ಧೆಯುತ್ಪತ್ತಿಯಾಗಲೋಸುಗ ಆ ಶಿವ ಪಂಚಾಕ್ಷರೀ ಮಂತ್ರದ ಮಹತ್ತಾದ ಪ್ರಭಾವವನ್ನೂ ಹೀಗೆ ಹೇಳಿದೆ.

॥ ನಾರದ ಉವಾಚ ॥

ಶೃಣು ದೇವಿ ಮನೋರಸ್ಯ ಪ್ರಭಾವಂ ಪರಮಾದ್ಭುತಂ ।
ಯಸ್ಯ ಶ್ರವಣಮಾತ್ರೇಣ ಶಂಕರಸ್ಸುಪ್ರಸೀದತಿ ॥ ೩೫ ॥

ಮಂತ್ರೋಽಯಂ ಸರ್ವಮಂತ್ರಾಣಾಮಧಿರಾಜಶ್ಚ ಕಾಮದಃ ।
ಭುಕ್ತಿಮುಕ್ತಿಪ್ರದೋಽತ್ಯಂತಂ ಶಂಕರಸ್ಯ ಮಹಾಪ್ರಿಯಃ ॥ ೩೬ ॥

ಸುಭಗೇ ಯೇನ ಜಪ್ತೇನ ವಿಧಿನಾ ಸೋಽಚಿರಾದ್ಧ್ರುತಂ ।
ಆರಾಧಿತಸ್ತೇ ಪ್ರತ್ಯಕ್ಷೋ ಭವಿಷ್ಯತಿ ಶಿವೋ ಧ್ರುವಂ ॥ ೩೭ ॥

ಚಿಂತಯಂತೀ ಚ ತದ್ರೂಪಂ ನಿಯಮಸ್ಥಾ ಶರಾಕ್ಷರಂ ।
ಜಪ ಮಂತ್ರಂ ಶಿವೇ ತ್ವಂ ಹಿ ಸಂತುಷ್ಯತಿ ಶಿವೋ ದ್ರುತಂ ॥ ೩೮ ॥

ಏವಂ ಕುರು ತಪಸ್ಸಾಧ್ವಿ ತಪಸ್ಸಾಧ್ಯೋ ಮಹೇಶ್ವರಃ ।
ತಪಸ್ಯೇವ ಫಲಂ ಸರ್ವೈಃ ಪ್ರಾಪ್ಯತೇ ನಾನ್ಯಥಾ ಕ್ವಚಿತ್ ॥ ೩೯ ॥

---

೩೫. ನಾರದಮುನಿಯು ಹೇಳಿದನು:—ಎಲೌ ಗಿರಿಜೆ, ಈ ಮಂತ್ರದ ಅದ್ಭುತವಾದ ಮಹಿಮೆಯನ್ನು ಹೇಳುವೆನು ಕೇಳು. ಇದನ್ನು ಕೇಳಿದ ಮಾತ್ರದಿಂದಲೇ ಶಿವನು ಪ್ರಸನ್ನನಾಗುವನು.

೩೬. ಈ ಪಂಚಾಕ್ಷರೀಮಂತ್ರವು ಎಲ್ಲಾ ಮಂತ್ರಗಳಿಗೂ ಶ್ರೇಷ್ಠವಾದುದು. ಇದು ಬೇಕಾದ ಇಷ್ಟಾರ್ಥಗಳನ್ನೂ ಭೋಗಮೋಕ್ಷಗಳನ್ನೂ ಕೊಡುವುದು. ಶಂಕರನಿಗೆ ಇದು ಮಹಾ ಪ್ರಿಯವಾದುದು.

೩೭. ಎಲೌ ಪೂಜ್ಯಳೆ, ಈ ಮಂತ್ರವನ್ನು ವಿಧಿವತ್ತಾಗಿ ಜಪಿಸಿ ಶಂಕರನನ್ನು ಆರಾಧಿಸಿದರೆ ಆವನು ಜಾಗ್ರತೆ ಪ್ರತ್ಯಕ್ಷನಾಗುವನು.

೩೮. ಎಲೌ ಪಾರ್ವತಿ, ನಿಯಮದಿಂದಿದ್ದು ನೀನು ಶಂಕರನ ರೂಪವನ್ನು ಧ್ಯಾನಿಸುತ್ತಾ ಈ ಪಂಚಾಕ್ಷರಮಂತ್ರವನ್ನು ಜಪಿಸು. ಶಿವನು ಶೀಘ್ರದಲ್ಲಿಯೇ ನಿನಗೆ ಪ್ರತ್ಯಕ್ಷನಾಗುವನು.

೩೯. ಎಲೌ ಸಾಧ್ವಿ, ಹೀಗೆ ತಪಸ್ಸನ್ನಾಚರಿಸು. ತಪಸ್ಸಿನಿಂದಲೇ ಶಂಕರನನ್ನು ಪಡೆಯಬಹುದು. ತಪಸ್ಸಿನಿಂದಲೇ ಎಲ್ಲರ ಕಾರ್ಯಗಳೂ ಸಿದ್ಧಿಸುವುವು ಎಂದನು.

॥ ಬ್ರಹ್ಮೋವಾಚ ॥

ಏವಮುಕ್ತ್ವಾ ತದಾ ಕಾಲೀಂ ನಾರದ ತ್ವಂ ಶಿವಪ್ರಿಯಃ ।
ಯಾದೃಚ್ಛಿಕೋಽಗಮಸ್ತ್ವಂ ಹಿ ಸ್ವರ್ಗಂ ದೇವಹಿತೇ ರತಃ ॥ ೪೦ ॥

ಪಾರ್ವತೀ ಚ ತದಾ ಶ್ರುತ್ವಾ ವಚನಂ ತವ ನಾರದ ।
ಸುಪ್ರಸನ್ನಾ ತದಾ ಪ್ರಾಪ ಪಂಚಾಕ್ಷರಮನುತ್ತಮಂ ॥ ೪೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಏಕವಿಂಶೋಽಧ್ಯಾಯಃ



---

೪೦. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಹೇಳಿ ಶಿವಭಕ್ತನೂ, ದೇವತೆಗಳಿಗೆ ಹಿತವನ್ನು ಮಾಡುವವನೂ ಆದ ನೀನು ಸ್ವರ್ಗಕ್ಕೆ ಹೊರಟುಹೋದೆ.

೪೧. ಬಳಿಕ ಪಾರ್ವತಿಯು ನಿನ್ನ ಮಾತಿನಂತೆ ಪಂಚಾಕ್ಷರೀಮಂತ್ರದ ಉಪದೇಶವನ್ನು ತೆಗೆದುಕೊಂಡು ತುಂಬಾ ಸಂತುಷ್ಟಳಾದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ದ್ವಾವಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ತ್ವಯಿ ದೇವಮುನೇ ಯಾತೇ ಪಾರ್ವತೀ ಹೃಷ್ಟಮಾನಸಾ ।
ತಪಸ್ಸಾಧ್ಯಂ ಹರಂ ಮೇನೇ ತಪೋಽರ್ಥಂ ಮನ ಆದಧೇ ॥ ೧ ॥

ತತಸ್ಸಖ್ಯೌ ಸಮಾದಾಯ ಜಯಾಂ ಚ ವಿಜಯಾಂ ತಥಾ ।
ಮಾತರಂ ಪಿತರಂ ಚೈವ ಸಖೀಭ್ಯಾಂ ಪರ್ಯಪೃಚ್ಛತ ॥ ೨ ॥

ಪ್ರಥಮಂ ಪಿತರಂ ಗತ್ವಾ ಹಿಮವಂತಂ ನಗೇಶ್ವರಂ ।
ಪರ್ಯಪೃಚ್ಛತ್ಸುಪ್ರಣಮ್ಯ ವಿನಯೇನ ಸಮನ್ವಿತಾ ॥ ೩ ॥

---

### ಇಪ್ಪತ್ತೆರಡನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಎಲೈ ನಾರದ, ನೀನು ಸ್ವರ್ಗಕ್ಕೆ ತೆರಳಲು ಪಾರ್ವತಿಯು ತಪಸ್ಸಿನಿಂದ ಪಡೆಯಲು ಸಾಧ್ಯಸಾದ ಪರಮೇಶ್ವರನನ್ನು ತಪಸ್ಸಿನಿಂದಲೇ ಆರಾಧಿಸಲು ಸಂಕಲ್ಪಮಾಡಿದಳು.

೨. ತನ್ನ ಸಖಿಯರಾದ ಜಯೆವಿಜಯೆರನ್ನು ಕರೆದುಕೊಂಡು ಅವರ ಮೂಲಕ ತಂದೆಯ ಮತ್ತು ತಾಯಿಯ ಅನುಮತಿಯನ್ನು ಕೇಳಿದಳು.

೩. ಮೊದಲು ಆ ಗಿರಿಜೆಯು, ತಂದೆಯಾದ ಹಿಮವಂತನ ಬಳಿಗೆ ಹೋಗಿ ವಿನಯದಿಂದ ನಮಸ್ಕರಿಸಿ ಸಖಿಯರ ಮೂಲಕ ಹೀಗೆ ಕೇಳಿಸಿದಳು.

॥ ಸಖ್ಯಾವೂಚತುಃ ॥

ಹಿಮವನ್ ಶ್ರೂಯತಾಂ ಪುತ್ರೀವಚನಂ ಕಥ್ಯತೇಽಧುನಾ ।
ಸಾ ಸ್ವಯಂ ಚೈವ ದೇಹಸ್ಯ ರೂಪಸ್ಯಾಪಿ ತಥಾ ಪುನಃ ॥ ೪ ॥

ಭವತೋ ಹಿ ಕುಲಸ್ಯಾಸ್ಯ ಸಾಫಲ್ಯಂ ಕರ್ತುಮಿಚ್ಛತಿ ।
ತಪಸಾ ಸಾಧನೀಯೋಽಸೌ ನಾನ್ಯಥಾ ದೃಶ್ಯತಾಂ ವ್ರಜೇತ್ ॥ ೫ ॥

ತಸ್ಮಾಚ್ಚ ಪರ್ವತಶ್ರೇಷ್ಠ ದೇಯಾಜ್ಞಾ ಭವತಾಧುನಾ ।
ತಪಃ ಕರೋತು ಗಿರಿಜಾ ವನಂ ಗತ್ವೇತಿ ಸಾದರಂ ॥ ೬ ॥

॥ ಬ್ರಹ್ಮೋವಾಚ ॥

ಇತ್ಯೇವಂ ಚ ತದಾ ಪೃಷ್ಟಃ ಸಖೀಭ್ಯಾಂ ಮುನಿಸತ್ತಮ ।
ಪಾರ್ವತ್ಯಾ ಸುವಿಚಾರ್ಯಾಥ ಗಿರಿರಾಜೋಽಬ್ರವೀದಿದಂ ॥ ೭ ॥

॥ ಹಿಮಾಲಯ ಉವಾಚ ॥

ಮಹ್ಯಂ ಚ ರೋಚತೇಽತ್ಯರ್ಥಂ ಮೇನಾಯೈ ರುಚ್ಯತಾಂ ಪುನಃ ।
ಯಥೇದಂ ಭವಿತವ್ಯಂ ಚ ಕಿಮತಃ ಪರಮುತ್ತಮಂ ॥ ೮ ॥

---

೪-೫. ಜಯೆವಿಜಯೆರು ಹೇಳಿದರು:—ಓ ಪರ್ವತರಾಜನೆ, ನಿನ್ನ ಮಗಳ ಮಾತನ್ನು ಕೇಳು. ಅವಳು ತನ್ನ ಶರೀರ, ರೂಪ, ಮತ್ತು ನಿನ್ನ ಕುಲ ಇವುಗಳಿಷ್ಟೂ ಸಾರ್ಥಕವಾಗುವಂತೆ ಶಿವನನ್ನಾರಾಧಿಸಲು ಇಚ್ಛಿಸುತ್ತಲಿರುವಳು. ಆ ಶಂಕರನನ್ನು ತಪಸ್ಸಿನಿಂದಲ್ಲದೆ ಇನ್ನಾವವಿಧದಿಂದಲೂ ಪಡೆಯಲು ಸಾಧ್ಯವಿಲ್ಲ.

೬. ಆದುದರಿಂದ ಗಿರಿಜೆಯು ವನಕ್ಕೆ ಹೋಗಿ ತಪಸ್ಸನ್ನಾಚರಿಸಲು ನೀನು ಸಂತೋಷವಾಗಿ ಅವಳಿಗೆ ಅನುಮತಿಯನ್ನು ಕೊಡು ಎಂದರು.

೭. ಬ್ರಹ್ಮನು ಹೇಳಿದನು:—ಹೀಗೆ ಸಖಿಯರು ಪಾರ್ವತಿಗಾಗಿ ಪ್ರಶ್ನಿಸಲು ಆಗ ಹಿಮವಂತನು ಚನ್ನಾಗಿ ವಿಚಾರಮಾಡಿ ಹೀಗೆ ಹೇಳಿದನು.

೮. ಹಿಮವಂತನು ಹೇಳಿದನು:—ಎಲೈ ಸಖಿಯರೇ, ಪಾರ್ವತಿಯ ಈ ಉದ್ಯಮವು ನನಗೂ ಇಷ್ಟವಾಗಿಯೇ ಇದೆ. ಆದರೆ ಅವಳ ತಾಯಿಯಾದ ಮೇನ ಕೆಯ ಅನುಮತಿಯನ್ನು ಕೇಳಿರಿ. ಪಾರ್ವತಿಯು ಅಪೇಕ್ಷಿಸಿದಂತೆಯೇ ಆಗಬೇಕು. ಅದಕ್ಕಿಂತಲೂ ಮಿಗಿಲಾದುದು ಇನ್ನೊಂದಿಲ್ಲ.

ಸಾಫಲ್ಯಂ ತು ಮದೀಯಸ್ಯ ಕುಲಸ್ಯ ಚ ನ ಸಂಶಯಃ ।
ಮಾತ್ರೇ ತು ರುಚ್ಯತೇ ಚೇದ್ವೈ ತತಃ ಶುಭತರಂ ನು ಕಿಂ ॥ ೯ ॥

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಪಿತ್ರಾ ಪ್ರೋಕ್ತಂ ಶ್ರುತ್ವಾ ತು ತೇ ತದಾ ।
ಜಗ್ಮತುರ್ಮಾತರಂ ಸಖ್ಯೌ ತದಾಜ್ಞಪ್ತೇ ತಯಾ ಸಹ ॥ ೧೦ ॥

ಗತ್ವಾ ತು ಮಾತರಂ ತಸ್ಯಾಃ ಪಾರ್ವತ್ಯಾಸ್ತೇ ಚ ನಾರದ ।
ಸುಪ್ರಣಮ್ಯ ಕೃತಾ ಬದ್ಧ್ವೋಚತುರ್ವಚನಮಾದರಾತ್ ॥ ೧೧ ॥

॥ ಸಖ್ಯಾವೂಚತುಃ ॥

ಮಾತಸ್ತ್ವಂ ವಚನಂ ಪುತ್ರ್ಯಾಃ ಶೃಣು ದೇವಿ ನಮೋಽಸ್ತು ತೇ ।
ಸುಪ್ರಸನ್ನತಯಾ ತದ್ವೈ ಶ್ರುತ್ವಾ ಕರ್ತುಮಿಹಾರ್ಹಸಿ ॥ ೧೨ ॥

ತಪ್ತುಕಾಮಾ ತು ತೇ ಪುತ್ರೀ ಶಿವಾರ್ಥಂ ಪರಮಂ ತಪಃ ।
ಪ್ರಾಪ್ತಾನುಜ್ಞಾ ಪಿತುಶ್ಚೈವ ತುಭ್ಯಂ ಚ ಪರಿಪೃಚ್ಛತಿ ॥ ೧೩ ॥

---

೯. ಈ ಕಾರ್ಯದಿಂದ ನನ್ನ ಕುಲವು ಉದ್ಧಾರವಾಗುವುದರಲ್ಲಿ ಸಂಶಯವಿಲ್ಲ. ಅದರಲ್ಲೂ ತಾಯಿಯಾದ ಮೇನಾದೇವಿಯ ಅನುಮತಿಯು ದೊರೆತರೆ ಇನ್ನೂ ಉತ್ತಮವು ಎಂದನು.

೧೦-೧೧. ಬ್ರಹ್ಮನು ಹೇಳಿದನು :—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಸಖಿಯರು ಪಾರ್ವತಿಯ ತಾಯಿಯಾದ ಮೇನಾದೇವಿಯ ಬಳಿಗೆ ಪಾರ್ವತಿಯನ್ನು ಕರೆದುಕೊಂಡುಹೋಗಿ ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು,

೧೨. ಸಖಿಯರು ಹೇಳಿದರು :—ಓ ಮಾತೆ, ನಿನಗೆ ನಮಸ್ಕಾರವು ನಿನ್ನ ಪುತ್ರಿಯ ಮಾತನ್ನು ಕೇಳು. ಪ್ರಸನ್ನತೆಯಿಂದ ಕೇಳಿ ಆದರಂತೆ ಮಾಡು.

೧೩. ನಿನ್ನ ಪುತ್ರಿಯು ಶಿವನನ್ನುದ್ದೇಶಿಸಿ ಮಹಾತಾಪವನ್ನಾಚರಿಸಬೇಕೆಂದಿರುವಳು. ತಂದೆಯು ಅನುಮತಿಯನ್ನಿತ್ತಿರುವನು. ಈಗ ನಿನ್ನ ಅನುಮತಿಯನ್ನು ಕೇಳುತ್ತಲಿರುವಳು.

ಇಯಂ ಸ್ವರೂಪಸಾಫಲ್ಯಂ ಕರ್ತುಕಾಮಾ ಪತಿವ್ರತೇ ।
ತ್ವದಾಜ್ಞಾ ಯದಿ ಜಾಯೇತ ತಪ್ಯತೇ ಚ ಮಹಾತಪಃ ॥ ೧೪ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಚ ತತಸ್ಸಖ್ಯಾ ತೂಷ್ಣೀಮಾಸ್ತಾಂ ಮುನೀಶ್ವರ ।
ನಾಂಗೀಚಕಾರ ಮೇನಾ ಸಾ ತದ್ವಾಕ್ಯಂ ಖಿನ್ನಮಾನಸಾ ॥ ೧೫ ॥

ತತಸ್ಸಾ ಪಾರ್ವತೀ ಪ್ರಾಹ ಸ್ವಯಮೇವಾಥ ಮಾತರಂ ।
ಕರೌ ಬದ್ಧ್ವಾ ವಿನೀತಾತ್ಮಾ ಸ್ಮೃತ್ವಾ ಶಿವಪದಾಂಬುಜಂ ॥ ೧೬ ॥

॥ ಪಾರ್ವತ್ಯುವಾಚ ॥

ಮಾತಸ್ತ್ವಪ್ತುಂ ಗಮಿಷ್ಯಾಮಿ ಪ್ರಾತಃ ಪ್ರಾಪ್ತುಂ ಮಹೇಶ್ವರಂ ।
ಅನುಜಾನೀಹಿ ಮಾಂ ಗಂತುಂ ತಪಸ್ಯೇಽದ್ಯ ತಪೋವನಂ ॥ ೧೭ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಃ ಪುತ್ರ್ಯಾ ಮೇನಾ ದುಃಖಮುಪಾಗತಾ ।
ಸೋಪಾಹೂಯ ತದಾ ಪುತ್ರೀಮುವಾಚ ವಿಕಲಾ ಸತೀ ॥ ೧೮ ॥

---

೧೪. ಈ ಗಿರಿಜೆಯು ತಪವನ್ನಾಚರಿಸಿ ತನ್ನ ಸ್ವರೂಪವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳಬೇಕೆಂದಿರುವಳು. ಓ ಸಾಧ್ವಿ, ಈಗ ನಿನ್ನ ಅಪ್ಪಣೆಯೊಂದು ಲಭಿಸಿ ದರೆ ಅವಳು ತಪವನ್ನಾಚರಿಸುವಳು ಎಂದರು.

೧೫. ಬ್ರಹ್ಮನು ಹೇಳಿದನು:––ಎಲೈ ನಾರದ, ಹೀಗೆ ಹೇಳಿ ಸಖಿಯರು ಸುಮ್ಮನಾದರು. ಆದರೆ ಮೇನಾದೇವಿಯು ಖಿನ್ನಳಾಗಿ ಅವರ ಮಾತನ್ನು ಅಂಗೀ ಕರಿಸಲಿಲ್ಲ.

೧೬-೧೭. ಬಳಿಕ ತಾನೇ ತಾಯಿಯನ್ನು ಕುರಿತು ಕೈಗಳನ್ನು ಮುಗಿದು ಶಿವನನ್ನು ಸ್ಮರಿಸುತ್ತಾ ಪಾರ್ವತಿಯು ಹೇಳಿದಳು:—ಓ ಮಾತೆಯೇ, ಈಶ್ವರನನ್ನು ಪಡೆಯಲೋಸುಗ ತಪವನ್ನಾಚರಿಸಲು ನಾಳೆ ಬೆಳಗ್ಯೆ ಹೊರಡುವೆನು' ತಪೋ ವನಕ್ಕೆ ಹೋಗಲು ನನಗೆ ಅನುಮತಿಯನ್ನು ದಯಪಾಲಿಸು ಎಂದು ಪ್ರಾರ್ಥಿಸಿದಳು.

೧೮-೧೯. ಬ್ರಹ್ಮನು ಹೇಳಿದನು :–ಈ ಪ್ರಕಾರವಾದ ಪಾರ್ವತಿಯ ಮಾತನ್ನು ಕೇಳಿ ಮೇನೆಯು ತುಂಬಾ ದುಃಖಗೊಂಡಳು. ಮತ್ತು ಅವಳು ಪುತ್ರಿಯನ್ನು ಕರೆದು

॥ ಮೇನೋವಾಚ ॥

ದುಃಖಿತಾಸಿ ಶಿವೇ ಪುತ್ರಿ ತಪಸ್ತಪ್ತ್ವಂ ಪುರಾ ಯದಿ ।
ತಪಶ್ಚರ ಗೃಹೇऽದ್ಯ ತ್ವಂ ನ ಬಹಿರ್ಗಚ್ಛ ಪಾರ್ವತಿ ॥ ೧೯ ॥

ಕುತ್ರ ಯಾಸಿ ತಪಃ ಕರ್ತುಂ ದೇವಾಸ್ಸಂತಿ ಗೃಹೇ ಮಮ ।
ತೀರ್ಥಾನಿ ಚ ಸಮಸ್ತಾನಿ ಕ್ಷೇತ್ರಾಣಿ ವಿವಿಧಾನಿ ಚ ॥ ೨೦ ॥

ಕರ್ತವ್ಯೋ ನ ಹಠಃ ಪುತ್ರಿ ಗಂತವ್ಯಂ ನ ಬಹಿಃ ಕ್ವಚಿತ್ ।
ಸಾಧಿತಂ ಕಿಂ ತ್ವಯಾ ಪೂರ್ವಂ ಪುನಃ ಕಿಂ ಸಾಧಯಿಷ್ಯಸಿ ॥ ೨೧ ॥

ಶರೀರಂ ಕೋಮಲಂ ವತ್ಸೇ ತಪಸ್ತು ಕಠಿಣಂ ಮಹತ್ ।
ಏತಸ್ಮಾತ್ತು ತ್ವಯಾ ಕಾರ್ಯಂ ತಪೋऽತ್ರ ನ ಬಹಿರ್ವ್ರಜ ॥ ೨೨ ॥

ಸ್ತ್ರೀಣಾಂ ತಪೋವನಗತಿರ್ನ ಶ್ರುತಾ ಕಾಮನಾರ್ಥಿನೀ ।
ತಸ್ಮಾತ್ತ್ವಂ ಪುತ್ರಿ ಮಾ ಕಾರ್ಷೀಸ್ತಪೋऽರ್ಥಂ ಗಮನಂ ಪ್ರತಿ ॥ ೨೩ ॥

---

ದೈನ್ಯದಿಂದ ಎಲೌ ಪಾರ್ವತಿ, ನೀನು ದುಃಖಿತಳಾಗಿರುವೆ. ತಪಸ್ಸುಮಾಡಲೇ ಬೇಕೆಂದಿದ್ದರೆ ಮನೆಯಲ್ಲಿಯೇ ಮಾಡು. ಹೊರಗೆ ಹೋಗಬೇಡ.

೨೦. ಎಲೌ ಮಗಳೇ, ತಪಸ್ಸುಮಾಡಲು ನೀನು ಹೋಗುವುದಾದರೂ ಎಲ್ಲಿಗೆ? ನಮ್ಮ ಮನೆಯಲ್ಲಿಯೇ ಎಲ್ಲಾ ದೇವತೆಗಳೂ ಇರುವರು. ಎಲ್ಲಾ ತೀರ್ಥಗಳೂ ಕ್ಷೇತ್ರಗಳೂ ಇರುವುವು.

೨೧. ಎಲೌ ವತ್ಸೆ, ಹಠವನ್ನು ಮಾಡಬೇಡ. ಹೊರಗೆ ಹೋಗಬೇಡ. ಹೊರದೇಶಕ್ಕೆ ಹೋಗಿ ಹಿಂದೆ ನೀನೇನು ಸಾಧಿಸಿರುವೆ? ತಿರುಗಿ ಈಗೇನು ಸಾಧಿಸಬಲ್ಲೆ ? ಹೇಳು.

೨೨. ನಿನ್ನ ಶರೀರವು ಕೋಮಲವಾದುದು. ತಪಸ್ಸಾದರೋ ಮಹಾ ಕಠಿಣವಾದುದು. ಆದುದರಿಂದ ತಪಸ್ಸಿಗಾಗಿ ಬೇರೆ ಕಡೆಗೆ ನೀನು ಹೋಗಬೇಡ. ಇಲ್ಲಿಯೇ ಮಾಡು.

೨೩. ತಮ್ಮ ಇಷ್ಟಾರ್ಥವನ್ನು ಪಡೆಯಲು ಸ್ತ್ರೀಯರು ತಪೋವನಕ್ಕೆ ಹೋದುದನ್ನು ನಾನು ಎಲ್ಲಿಯೂ ಕೇಳಿಲ್ಲ. ಆದುದರಿಂದ ನೀನೂ ತಪಸ್ಸಿಗಾಗಿ ತಪೋವನಕ್ಕೆ ತೆರಳಲಾಗದು.

॥ ಬ್ರಹ್ಮೋವಾಚ ॥

ಇತ್ಯೇವಂ ಬಹುಧಾ ಪುತ್ರೀ ತನ್ಮಾತ್ರಾ ವಿನಿವಾರಿತಾ ।
ಸಂವೇದೇ ನ ಸುಖಂ ಕಿಂಚಿದ್ವಿನಾರಾಧ್ಯ ಮಹೇಶ್ವರಂ ॥ ೨೪ ॥

ತಪೋನಿಷಿದ್ಧಾ ತಪಸೇ ವನಂ ಗಂತುಂ ಚ ಮೇನಯಾ ।
ಹೇತುನಾ ತೇನ ಸೋಮೇತಿ ನಾಮ ಪ್ರಾಪ ಶಿವಾ ತದಾ ॥ ೨೫ ॥

ಅಥ ತಾಂ ದುಃಖಿತಾಂ ಜ್ಞಾತ್ವಾ ಮೇನಾ ಶೈಲಪ್ರಿಯಾ ಶಿವಾಂ ।
ನಿದೇಶಂ ಸಾ ದದೌ ತಸ್ಯಾಃ ಪಾರ್ವತ್ಯಾಸ್ತಪಸೇ ಮುನೇ ॥ ೨೬ ॥

ಮಾತುರಾಜ್ಞಾಂ ಚ ಸಂಪ್ರಾಪ್ಯ ಸುವ್ರತಾ ಮುನಿಸತ್ತಮ ।
ತತಃ ಸ್ವಾಂತೇ ಸುಖಂ ಲೇಭೇ ಪಾರ್ವತೀ ಸ್ಮೃತಶಂಕರಾ ॥ ೨೭ ॥

ಮಾತರಂ ಪಿತರಂ ಸಾಥ ಪ್ರಣಿಪತ್ಯ ಮುದಾ ಶಿವಾ ।
ಸಖೀಭ್ಯಾಂ ಚ ಶಿವಂ ಸ್ಮೃತ್ವಾ ತಪಸ್ತಪ್ತುಂ ಸಮುದ್ಗತಾ ॥ ೨೮ ॥

---

೨೪. ಬ್ರಹ್ಮನು ಹೇಳಿದನು :—ಹೀಗೆ ಬಹುವಿಧವಾಗಿ ಮೇನೆಯು ಪಾರ್ವತಿಯನ್ನು ತಡೆದಳು. ಹೀಗೆ ಶಂಕರನನ್ನಾರಾಧಿಸುವುದಕ್ಕೆ ಅವಕಾಶವಿಲ್ಲದೇ ಅವಳು ತುಂಬಾ ದುಃಖಿತಳಾದಳು.

೨೫. ತಪಸ್ಸಿಗಾಗಿ ತಪೋವನಕ್ಕೆ ತೆರಳಲು ಮೇನೆಯು ತಡೆದುದರಿಂದ ಪಾರ್ವತಿಗೆ ಉಮಾ (ಉ-ಎಲೌ ಪಾರ್ವತಿ, ಮಾ-ತಪವು ಬೇಡ) ಎಂದು ಹೆಸರಾಯಿತು.

೨೬. ಆಮೇಲೆ ಪಾರ್ವತಿಯು ತುಂಬಾ ದುಃಖಿತಳಾಗಿರುವುದನ್ನು ತಿಳಿದು ತಪಸ್ಸನ್ನಾಚರಿಸಲು ಮೇನೆಯು ಅವಳಿಗೆ ಅನುಮತಿಯನ್ನು ಕೊಟ್ಟಳು.

೨೭. ತಾಯಿಯ ಅನುಮತಿಯು ಲಭಿಸಿದುದರಿಂದ ತುಂಬಾ ಸಂತುಷ್ಟಳಾಗಿ ಪಾರ್ವತಿಯು ಮನಸ್ಸಿನಲ್ಲಿಯೇ ಶಿವನನ್ನು ಸ್ಮರಿಸಿದಳು.

೨೮. ಆ ಬಳಿಕ ಗಿರಿಜೆಯು ತಂದೆತಾಯಿಯರನ್ನು ನಮಸ್ಕರಿಸಿ ಸಂತೋಷದಿಂದ ಸಖಿಯರೊಡನೆ ಶಿವನನ್ನು ಸ್ಮರಿಸುತ್ತಾ ತಪಸ್ಸಿಗಾಗಿ ಹೊರಟಳು.

ಹಿತ್ವಾ ಮತಾನ್ಯನೇಕಾನಿ ವಸ್ತ್ರಾಣಿ ವಿವಿಧಾನಿ ಚ ।
ವಲ್ಕಲಾನಿ ಧೃತಾನ್ಯಾಶು ಮೌಂಜೀಂ ಬದ್ಧ್ವಾ ತು ಶೋಭನಾಂ ॥ ೨೯ ॥

ಹಿತ್ವಾ ಹಾರಂ ತಥಾ ಚರ್ಮ ಮೃಗಸ್ಯ ಪರಮಂ ಧೃತಂ ।
ಜಗಾಮ ತಪಸೇ ತತ್ರ ಗಂಗಾವತರಣಂ ಪ್ರತಿ ॥ ೩೦ ॥

ಶಂಭುನಾ ಕುರ್ವತಾ ಧ್ಯಾನಂ ಯತ್ರ ದಗ್ಧೋ ಮನೋಭವಃ ।
ಗಂಗಾವತರಣೋ ನಾಮ ಪ್ರಸ್ಥೋ ಹಿಮವತಃ ಸ ಚ ॥ ೩೧ ॥

ಹರಶೂನ್ಯೋಽಥ ದದೃಶೇ ಸ ಪ್ರಸ್ಥೋ ಹಿಮಭೂಭೃತಃ ।
ಕಾಲ್ಯಾ ತತ್ರೇತ್ಯ ಭೋಸ್ತಾತ ಪಾರ್ವತ್ಯಾ ಜಗದಂಬಯಾ ॥ ೩೨ ॥

ಯತ್ರ ಸ್ಥಿತ್ವಾ ಪುರಾ ಶಂಭುಸ್ತಪ್ತವಾನ್ ದುಸ್ತರಂ ತಪಃ ।
ತತ್ರ ಕ್ಷಣಂ ತು ಸಾ ಸ್ಥಿತ್ವಾ ಬಭೂವ ವಿರಹಾರ್ದಿತಾ ॥ ೩೩ ॥

---

೨೯. ತನಗೆ ಇಷ್ಟವಾದಂತಹ ಸುಂದರವಸ್ತ್ರಗಳನ್ನು ಬಿಟ್ಟು ನಾರುಬಟ್ಟೆಗಳನ್ನುಟ್ಟಳು. ಅದರಮೇಲೆ ಒಡ್ಯಾಣಕ್ಕೆ ಬದಲಾಗಿ ಮೌಂಜೀ ಎಂಬ ಹುಲ್ಲಿನ ದಾರವನ್ನು ಕಟ್ಟಿ ಬಿಗಿದಳು.

೩೦. ಅಲ್ಲದೆ ಅನರ್ಘವಾದ ಹಾರವನ್ನು ಬಿಟ್ಟು ಪವಿತ್ರವಾದ ಮೃಗಚರ್ಮವನ್ನು ಧರಿಸಿದಳು. ಈರೀತಿ ಸನ್ನದ್ಧಳಾಗಿ ಗಂಗಾವತರಣವೆಂಬ ತಪ್ಪಲಿಗೆ ತಪಸ್ಸಿಗಾಗಿ ಹೊರಟಳು.

೩೧. ಆ ಗಂಗಾವತರಾಣವೆಂಬ ಹಿಮವತ್ಪರ್ವತದ ತಪ್ಪಲಲ್ಲಿಯೇ ಹಿಂದೆ ಶಂಕರನು ಧ್ಯಾನಮಾಡುತ್ತಲಿದ್ದು ಮನ್ಮಥನನ್ನು ಭಸ್ಮಮಾಡಿದನು.

೩೨. ಆದರೆ ಈಗ ಅಲ್ಲಿ ಹರನಿರಲಿಲ್ಲ. ಇಂತಹ ಗಂಗಾವತರಣ ಪ್ರದೇಶವನ್ನು ಜಗನ್ಮಾತೆಯಾದ ಉಮೆಯು ಅಲ್ಲಿಗೆ ಬಂದು ನೋಡಿದಳು.

೩೩. ಹಿಂದೆ ಯಾವ ಸ್ಥಳದಲ್ಲಿ ಶಿವನು ತಪಸ್ಸು ಮಾಡುತ್ತಲಿದ್ದನೋ ಆ ಸ್ಥಳದಲ್ಲಿ ನಿಂತು ನೋಡಿ ಗಿರಿಜೆಯು ತುಂಬಾ ವಿರಹದುಃಖಿತಳಾದಳು.

ಹಾ ಹರೇತಿ ಶಿವಾ ತತ್ರ ರುದಂತೀ ಸಾ ಗಿರೇಃ ಸುತಾ ।
ವಿಲಲಾಪಾತಿದುಃಖಾರ್ತಾ ಚಿಂತಾಶೋಕಸಮನ್ವಿತಾ ॥ ೩೪ ॥

ತತಶ್ಚಿರೇಣ ಸಾ ಮೋಹಂ ಧೈರ್ಯಾತ್ಸಂಸ್ತಭ್ಯ ಪಾರ್ವತೀ ।
ನಿಯಮಾಯಾಭವತ್ತತ್ರ ದೀಕ್ಷಿತಾ ಹಿಮವತ್ಸುತಾ ॥ ೩೫ ॥

ತಪಶ್ಚಕಾರ ಸಾ ತತ್ರ ಶೃಂಗಿತೀರ್ಥೇ ಮಹೋತ್ತಮೇ ।
ಗೌರೀಶಿಖರನಾಮಾಸೀತ್ತತ್ರಪಃಕರಣಾದ್ಧಿ ತತ್ ॥ ೩೬ ॥

ಸುಂದರಾಶ್ಚ ದ್ರುಮಾಸ್ತತ್ರ ಪವಿತ್ರಾಃ ಶಿವಯಾ ಮುನೇ ।
ಆರೋಪಿತಾಃ ಪರೀಕ್ಷಾರ್ಥಂ ತಪಸಃ ಫಲಭಾಗಿನಃ ॥ ೩೭ ॥

ಭೂಮಿಶುದ್ಧಿಂ ತತಃ ಕೃತ್ವಾ ವೇದಿಂ ನಿರ್ಮಾಯ ಸುಂದರೀ ।
ತಥಾ ತಪಸ್ಸಮಾರಭ್ಧಂ ಮುನೀನಾನಪಿ ದುಷ್ಕರಂ ॥ ೩೮ ॥

---

೩೪. ಹಾ, ಹರ ಎಂದು ಆ ಪಾರ್ವತಿಯು ರೋದಿಸುತ್ತಾ ಬಹುವಾಗಿ ಪ್ರಲಾಪಿಸಿದಳು. ಮತ್ತು ದುಃಖದಿಂದ ನಿಟ್ಟುಸುರನ್ನು ಬಿಟ್ಟಳು.

೩೫. ಬಳಿಕ ಆ ದೇವಿಯು ಕೆಲವು ಕಾಲದಮೇಲೆ ಧೈರ್ಯವನ್ನು ತಂದುಕೊಂಡು ತಪಸ್ಸಿನ ನಿಯಮ (ಆಚರಣೆ) ಕ್ಕೆ ದೀಕ್ಷಿತಳಾದಳು.

೩೬. ತಪ್ಪಲಲ್ಲಿರುವ ಶೃಂಗಿತೀರ್ಥವೆಂಬ ಪವಿತ್ರ ತೀರ್ಥಕ್ಷೇತ್ರದಲ್ಲಿ ಆ ಗಿರಿಜೆಯು ತಪವನ್ನಾಚರಿಸಿದಳು. ಗೌರಿಯು ಅಲ್ಲಿ ತಪವನ್ನಾಚರಿಸಿದುದರಿಂದ ಆ ಶಿಖರಕ್ಕೆ ಮುಂದೆ "ಗೌರೀಶಿಖರ" ವೆಂದು ಹೆಸರಾಯಿತು.

೩೭. ಅಲ್ಲಿ ಗಿರಿಜೆಯು ಸುಂದರವಾದ ಮರಗಳನ್ನು ತನ್ನ ತಪಸ್ಸಿನ ಪರೀಕ್ಷೆಗಾಗಿ ಬೆಳಸಿದಳು. ಅವು ಪಾರ್ವತಿಯ ತಪಃ ಪ್ರಭಾವದಿಂದ ಮಹಾಪವಿತ್ರವಾದುವುಗಳು.

೩೮. ಆಮೇಲಾಗಿರಿಜೆಯು ಮೊದಲು ಭೂಶುದ್ಧಿಯನ್ನು ಮಾಡಿ ಅಲ್ಲಿ ಸುಂದರವಾದ ವೇದಿಕೆಯೊಂದನ್ನು ಕಲ್ಪಿಸಿ ಅದರಲ್ಲಿ ಕುಳಿತು ತಪವನ್ನಾರಂಭಿಸಿದಳು.

ವಿಗೃಹ್ಯ ಮನಸಾ ಸರ್ವಾಣೀಂದ್ರಿಯಾಣಿ ಸಹಾಶು ಸಾ ।
ಸಮುಪಸ್ಥಾನಿಕೇ ತತ್ರ ಚಕಾರ ಪರಮಂ ತಪಃ ॥ ೩೯ ॥

ಗ್ರೀಷ್ಮೇ ಚ ಪರಿತೋ ವಹ್ನಿಂ ಪ್ರಜ್ವಲಂತಂ ದಿವಾನಿಶಂ ।
ಕೃತ್ವಾ ತಸ್ಥೌ ಚ ತನ್ಮಧ್ಯೇ ಸತತಂ ಜಪತೀ ಮನುಂ ॥ ೪೦ ॥

ಸತತಂ ಚೈವ ವರ್ಷಾಸು ಸ್ಥಂಡಿಲೇ ಸುಸ್ಥಿರಾಸನಾ ।
ಶಿಲಾಪೃಷ್ಠೇ ಚ ಸಂಸಿಕ್ತಾ ಬಭೂವ ಜಲಧಾರಯಾ ॥ ೪೧ ॥

ಶೀತೇ ಜಲಾಂತರೇ ಶಶ್ವತ್ತಸ್ಥೌ ಸಾ ಭಕ್ತಿತತ್ಪರಾ ।
ಅನಾಹಾರಾತಪತ್ತತ್ರ ನೀಹಾರೇಷು ನಿಶಾಸು ಚ ॥ ೪೨ ॥

ಏವಂ ತಪಃ ಪ್ರಕುರ್ವಾಣಾ ಪಂಚಾಕ್ಷರಜಪೇ ರತಾ ।
ದಧ್ಯೌ ಶಿವಂ ಶಿವಾ ತತ್ರ ಸರ್ವಕಾಮಫಲಪ್ರದಂ ॥ ೪೩ ॥

---

೩೯. ಇಂದ್ರಿಯಗಳನ್ನೂ ಮನಸ್ಸನ್ನೂ ನಿಗ್ರಹಿಸಿ ಅಲ್ಲಿ ಘೋರ ತಪವನ್ನಾಚರಿಸಿದಳು.

೪೦. ಬೇಸಿಗೆ ಕಾಲದಲ್ಲಿ ಸುತ್ತಲೂ ಉರಿಯುವ ಅಗ್ನಿಯನ್ನು ಹಾಕಿಕೊಂಡು ಅದರ ಮಧ್ಯದಲ್ಲಿ ಕುಳಿತು ಶಿವಪಂಚಾಕ್ಷರ ಮಂತ್ರವನ್ನು ಜಪಿಸಿದಳು.

೪೧. ಮಳೆಗಾಲದಲ್ಲಿ ಕಲ್ಲಿನಮೇಲೆ ಸ್ಥಂಡಿಲ (ವೇದಿಕೆ) ವನ್ನು ಹಾಕಿ ಕುಳಿತು ತಪವನ್ನಾಚರಿಸುತ್ತಲಿದ್ದಳು. ಆಗ ಅವಳ ಮೇಲೂ ಕೆಳಗೂ ಜಲಧಾರೆಯು ಸುರಿಯುತ್ತಲಿದ್ದಿತು.

೪೨. ಹೇಮಂತಋತುವಿನಲ್ಲವಳು ನೀರಿನಲ್ಲಿ ನಿಂತು ಭಕ್ತಿಯಿಂದ ತಪವನ್ನಾಚರಿಸುತ್ತಲಿದ್ದಳು. ಶಿಶಿರಋತುವಿನಲ್ಲವಳು ರಾತ್ರಿಯಲ್ಲಿ ಆಹಾರಸೇವಿಸದೇ ಜಾಗೃತಳಾಗಿದ್ದು ತಪವನ್ನಾಚರಿಸುತ್ತಲಿದ್ದಳು.

೪೩. ಹೀಗೆ ತಪವನ್ನು ಆಚರಿಸುತ್ತಾ ಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಗಿರಿಜೆಯು ಸಕಲೇಷ್ಟಾರ್ಥಗಳನ್ನು ಕೊಡುವಂತಹ ಶಿವನನ್ನು ಧ್ಯಾನಿಸಿದಳು.

ಸ್ವಾರೋಪಿತಾರ್ ಶುಭಾರ್ ವೃಕ್ಷಾರ್ ಸಖೀಭಿಸ್ಸಿಂಚತೀ ಮುದಾ ।
ಪ್ರತ್ಯಹಂ ಸಾವಕಾಶೇ ಸಾ ತತ್ರಾತಿಥ್ಯಮಕಲ್ಪಯತ್ ॥ ೪೪ ॥

ವಾತಶ್ಚೈವ ತಥಾ ಶೀತವೃಷ್ಟಿಶ್ಚ ವಿವಿಧಾ ತಥಾ ।
ದುಸ್ಸಹೋಽಪಿ ತಥಾ ಧರ್ಮಸ್ತಯಾ ಸೇಹೇ ಸುಚಿತ್ತಯಾ ॥ ೪೫ ॥

ದುಃಖಂ ಚ ವಿವಿಧಂ ತತ್ರ ಗಣಿತಂ ನ ತಯಾ ಗತಂ ।
ಕೇವಲಂ ಮನ ಆಧಾಯ ಶಿವೇ ಸಾಸೀತ್ಸ್ಥಿತಾ ಮುನೇ ॥ ೪೬ ॥

ಪ್ರಥಮಂ ಫಲಭೋಗೇನ ದ್ವಿತೀಯಂ ಪರ್ಣಭೋಜನೈಃ ।
ತಪಃ ಪ್ರಕುರ್ವತೀ ದೇವೀ ಕ್ರಮಾನ್ನಿನ್ಯೇಽಮಿತಾಸ್ಸಮಾಃ ॥ ೪೭ ॥

ತತಃ ಪರ್ಣಾನ್ಯಪಿ ಶಿವಾ ನಿರಸ್ಯ ಹಿಮವತ್ಸುತಾ ।
ನಿರಾಹಾರಾಭವದ್ದೇವೀ ತಪಶ್ಚರಣಸಂರತಾ ॥ ೪೮ ॥

---

೪೪. ಅವಕಾಶವಿದ್ದಾಗ ಪ್ರತಿದಿನವು ಆ ಉಮೆಯು ತಾನು ಬೆಳೆಸಿದ ಶುಭ ಮರಗಳಿಗೆ ಸಖಿಯರೊಡನೆ ನೀರೆರೆಯುತ್ತಿದ್ದಳು. ಮತ್ತು ಬಂದವರಿಗೆ ಅತಿಥ್ಯವನ್ನು ಮಾಡುತ್ತಿದ್ದಳು.

೪೫. ಅಸಾಧ್ಯವಾದ ಗಾಳಿಯನ್ನೂ, ಶೀತವಾದ ಮಳೆಯನ್ನೂ ಸಹಿಸುತ್ತಾ ಸ್ಥಿರಮನಸ್ಸಿನಿಂದ ಬಹು ಕಷ್ಟವಾದ ಆ ತಪವನ್ನಾಚರಿಸುತ್ತಿದ್ದಳು.

೪೬. ಅನೇಕವಿಧವಾದ ದುಃಖಗಳನ್ನು ಅವಳು ಗಣನೆಗೆ ತರಲಿಲ್ಲ. ಕೇವಲ ಮನಸ್ಸನ್ನು ಶಿವನಲ್ಲಿರಿಸಿ ತಪವನ್ನಾಚರಿಸುತ್ತಲಿದ್ದಳು.

೪೭. ಮೊದಮೊದಲು ಆ ದೇವಿಯು ಫಲಾಹಾರವನ್ನು ಸೇವಿಸುತ್ತಲಿದ್ದಳು. ಆಮೇಲೆ, ಎಲೆಗಳನ್ನು ಸೇವಿಸುತ್ತಲಿದ್ದಳು. ಹೀಗೆ ತಪಸ್ಸನ್ನಾಚರಿಸುತ್ತಾ ಅನೇಕ ವರ್ಷಗಳನ್ನು ಕಳೆದಳು.

೪೮. ಕೆಲವು ಕಾಲಗಳಮೇಲಾದೇವಿಯು ಎಲೆಗಳನ್ನೂ ಸೇವಿಸದೆ ಎಲ್ಲ ಆಹಾರಗಳನ್ನೂ ತೊರೆದು, ತಪಸ್ಸನ್ನು ಮಾಡುತ್ತಲಿದ್ದಳು.

ಆಹಾರೇ ತ್ಯಕ್ತಪರ್ಣಾಭೂದ್ಯಸ್ಮಾದ್ಧಿಮವತಃ ಸುತಾ ।
ತೇನ ದೇವೈರಪರ್ಣೇತಿ ಕಥಿಕಾ ನಾಮತಃ ಶಿವಾ ॥ ೪೯ ॥

ಏಕಪಾದಸ್ಥಿತಾ ಸಾಧ್ವೀ ಶಿವಂ ಸಂಸ್ಮೃತ್ಯ ಪಾರ್ವತೀ ।
ಪಂಚಾಕ್ಷರಂ ಜಪಂತೀ ಚ ಮನುಂ ತೇಪೇ ತಪೋ ಮಹತ್ ॥ ೫೦ ॥

ಚೀರವಲ್ಕಲಸಂವೀತಾ ಜಟಾಸಂಘಾತಧಾರಿಣೀ ।
ಶಿವಚಿಂತನಸಂಯುಕ್ತಾ ಜಿಗಾಯ ತಪಸಾ ಮುನೀನ್ ॥ ೫೧ ॥

ಏವಂ ತಸ್ಯಾಸ್ತಪಸ್ಯಂತ್ಯಾಶ್ಚಿಂತಯಂತ್ಯಾ ಮಹೇಶ್ವರಂ ।
ತ್ರೀಣಿ ವರ್ಷಸಹಸ್ರಾಣಿ ಜಗ್ಮುಃ ಕಾಲ್ಯಾಸ್ತಪೋವನೇ ॥ ೫೨ ॥

ಷಷ್ಟಿವರ್ಷಸಹಸ್ರಾಣಿ ಯತ್ರ ತೇಪೇ ತಪೋ ಹರಃ ।
ತತ್ರ ಕ್ಷಣಮಥೋಷಿತ್ವಾ ಚಿಂತಯಾಮಾಸ ಸಾ ಶಿವಾ ॥ ೫೩ ॥

---

೪೯. ಪರ್ಣವನ್ನೂ ಆಹಾರವಾಗಿ ಸೇವಿಸದುದರಿಂದ ಆ ಗಿರಿಜೆಯನ್ನು ದೇವತೆಗಳು "ಅಪರ್ಣಾ" (ಎಲೆಯನ್ನೂ ಸೇವಿಸದವಳು) ಎಂದು ಕರೆದರು.

೫೦. ಆ ಪಾರ್ವತಿಯು ಒಂದೇ ಕಾಲಿನಿಂದ ನಿಂತು ಶಿವನನ್ನು ಸ್ಮರಿಸುತ್ತಾ ಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಮಹಾತಪವನ್ನಾಚರಿಸಿದಳು.

೫೧. ನಾರುಬಟ್ಟೆಯನ್ನುಟ್ಟು, ಜಟೆಗಳನ್ನು ಧರಿಸಿ ತಪವನ್ನಾಚರಿಸುವುದರಲ್ಲಿ ಮುನಿಗಳನ್ನೂ ಮೀರಿಸಿದಳು.

೫೨. ಹೀಗೆ ಶಿವನನ್ನು ಚಿಂತಿಸುತ್ತಾ ಆ ಗಿರಿಜೆಯು ತಪವನ್ನಾಚರಿಸುತ್ತಲಿರಲು ಮೂರುಸಾವಿರ ವರ್ಷಗಳು ಕಳೆದುಹೋದವು

೫೩. ಆ ಸ್ಥಾನದಲ್ಲಿ ಶಿವನು ಅರವತ್ತುಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದ್ದನು. ಇಂತಹ ಸ್ಥಳದಲ್ಲಿ ನಿಂತು ಗಿರಿಜೆಯು ಸ್ವಲ್ಪಹೊತ್ತು ಹೀಗೆ ಚಿಂತಿಸಿದಳು.

ನಿಯಮಸ್ಥಾಂ ಮಹಾದೇವಃ ಕಿಂ ಮಾಂ ಜಾನಾತಿ ನಾಧುನಾ ।
ಯೇನಾಹಂ ಸುಚಿರಂ ತೇನ ನಾನುಯಾತಾ ತಪೋರತಾ ॥ ೫೪ ॥

ಲೋಕೇ ವೇದೇ ಚ ಗಿರಿಶೋ ಮುನಿಭಿರ್ಗೀಯತೇ ಸದಾ ।
ಶಂಕರಸ್ಸ ಹಿ ಸರ್ವಜ್ಞಸ್ಸರ್ವಾತ್ಮಾ ಸರ್ವದರ್ಶನಃ ॥ ೫೫ ॥

ಸರ್ವಭೂತಿಪ್ರದೋ ದೇವಸ್ಸರ್ವಭಾವಾನುಭಾವನಃ ।
ಭಕ್ತಾಭೀಷ್ಟಪ್ರದೋ ನಿತ್ಯಂ ಸರ್ವಕ್ಲೇಶನಿವಾರಣಃ ॥ ೫೬ ॥

ಸರ್ವಕಾಮಾನ್ ಪರಿತ್ಯಜ್ಯ ಯದಿ ಚಾಹಂ ವೃಷಧ್ವಜೇ ।
ಅನುರಕ್ತಾ ತದಾ ಸೋಽತ್ರ ಸಂಪ್ರಸೀದತು ಶಂಕರಃ ॥ ೫೭ ॥

ಯದಿ ನಾರದತಂತ್ರೋಕ್ತಮಂತ್ರೋ ಜಪ್ತಶ್ಶಿವಾಕ್ಷರಃ ।
ಸುಭಕ್ತ್ಯಾ ವಿಧಿನಾ ನಿತ್ಯಂ ಸಂಪ್ರಸೀದತು ಶಂಕರಃ ॥ ೫೮ ॥

---

೫೪. ನಾನು ತಪವನ್ನಾಚರಿಸುವುದನ್ನು ಮಹಾದೇವನು ತಿಳಿದಿಲ್ಲವೇ? ಇಲ್ಲದಿದ್ದರೆ ಇಷ್ಟುವರ್ಷಗಳಾದರೂ ಅವನು ನನಗೆ ಏಕೆ ಪ್ರತ್ಯಕ್ಷನಾಗಲಿಲ್ಲ?

೫೫. ಆ ಶಂಕರನು ಸರ್ವಜ್ಞನು, ಸರ್ವಸ್ವರೂಪನು, ಎಲ್ಲೆಡೆಯಲ್ಲಿಯೂ ದೃಷ್ಟಿಯುಳ್ಳವನು. ಹೀಗೆಂದು ಶ್ರುತಿಗಳು ಸಾರುತ್ತಿರುವುವು. ಲೋಕಾಚಾರವೂ ಹೀಗೆಯೇ ಇರುವುದು.

೫೬. ಆ ಶಂಕರನು ಸಕಲೈಶ್ವರ್ಯಗಳನ್ನೂ ಕೊಡುವವನು. ಎಲ್ಲರ ಮನಸ್ಸನ್ನೂ ಪ್ರೇರಿಸುವವನು. ಭಕ್ತರ ಇಷ್ಟಾರ್ಥವನ್ನು ಸಲ್ಲಿಸುವವನು. ಸಕಲ ದುಃಖಗಳನ್ನೂ ಹೋಗಲಾಡಿಸುವವನು.

೫೭. ಇಂತಹ ಶಂಕರನಲ್ಲಿ ನಾನು ಎಲ್ಲ ಫಲೇಚ್ಛೆಗಳನ್ನೂ ಬಿಟ್ಟು ನಿಜವಾಗಿ ಅನುರಕ್ತಳಾಗಿದ್ದರೆ ಆ ಶಿವನು ನನಗೆ ಪ್ರಸನ್ನನಾಗಲಿ.

೫೮. ನಾರದನುಪದೇಶಿಸಿದ ಶಿವಪಂಚಾಕ್ಷರಮಂತ್ರವನ್ನು ನಾನು ಭಕ್ತಿಯಿಂದ ಜಪಿಸಿ ತಪವನ್ನಾಚರಿಸುವುದು ನಿಜವಾದರೆ ಆ ಶಿವನು ಪ್ರಸನ್ನನಾಗಲಿ.

ಯದಿ ಭಕ್ತ್ಯಾ ಶಿವಸ್ಯಾಹಂ ನಿರ್ವಿಕಾರಾ-ಯಥೋದಿತಂ ।
ಸರ್ವೇಶ್ವರಸ್ಯ ಚಾತ್ಯಂತಂ ಸಂಪ್ರಸೀದತು ಶಂಕರಃ ॥ ೫೯ ॥

ಏವಂ ಚಿಂತಯತೀ ನಿತ್ಯಂ ತೇಪೇ ಸಾ ಸುಚಿರಂ ತಪಃ ।
ಅಧೋಮುಖೀ ನಿರ್ವಿಕಾರಾ ಜಟಾವಲ್ಕಲಧಾರಿಣೀ ॥ ೬೦ ॥

ತಥಾ ತಯಾ ತಪಸ್ತಪ್ತಂ ಮುನೀನಾಮಪಿ ದುಷ್ಕರಂ ।
ಸ್ಮೃತ್ವಾ ಚ ಪುರುಷಾಸ್ತತ್ರ ವಿಸ್ಮಯಂ ಪರಮಂ ಗತಾಃ ॥ ೬೧ ॥

ತತ್ತಪೋದರ್ಶನಾರ್ಥಂ ಹಿ ಸಮಾಜಗ್ಮುಶ್ಚ ತೇಽಖಿಲಾಃ ।
ಧನ್ಯಾ ನಿಜಾನ್ಮನ್ಯಮಾನಾ ಜಗದುಶ್ಚೇತಿ ಸಮ್ಮತಾಃ ॥ ೬೨ ॥

ಮಹತಾಂ ವೃದ್ಧಿಧರ್ಮೇಷು ಗಮನಂ ಶ್ರೇಯ ಉಚ್ಯತೇ ।
ಪ್ರಮಾಣಂ ತಪಸೋ ನಾಸ್ತಿ ಮಾನ್ಯೋ ಧರ್ಮಸ್ಸದಾ ಬುಧೈಃ ॥ ೬೩ ॥

---

೫೯. ಯಾವ ವಿಕಾರವೂ ಇಲ್ಲದೇ ನಾನು ಶಿವನನ್ನು ಭಕ್ತಿಯಿಂದ ಆರಾಧಿಸಿರುವುದು ನಿಜವಾದರೆ ಆ ಶಿವನು ಪ್ರಸನ್ನನಾಗಲಿ.

೬೦. ಹೀಗೆ ಚಿಂತಿಸುತ್ತಾ ಆ ಗಿರಿಜೆಯು ಹಿಂದೆ ಹೇಳಿದಂತೆ ಜಟೆಯನ್ನು ಧರಿಸಿ ನಾರು ಬಟ್ಟೆಗಳನ್ನುಟ್ಟು, ವಿಕಾರರಹಿತಳಾಗಿ ತಲೆಕೆಳಗಾಗಿ ನಿಂತು ಬಹಳಕಾಲ ತಪವನ್ನಾಚರಿಸಿದಳು.

೬೧. ಮುನಿಗಳಿಗೂ ಅಸಾಧ್ಯವಾದಂತಹ ಘೋರತಪವನ್ನವಳು ಮಾಡಿದಳು. ಅದನ್ನು ಸ್ಮರಿಸಿದ ಪುರುಷರೂ ಸಹ ಆಶ್ಚರ್ಯಗೊಂಡರು.

೬೨. ಆ ಘೋರ ತಪಸ್ಸನ್ನು ನೋಡಲು ಅನೇಕ ಜನರು ಬಂದರು. ಅವರು ಗಿರಿಜೆಯ ತಪಸ್ಸನ್ನು ದರ್ಶನಮಾಡಿದುದರಿಂದ ತಾವು ಧನ್ಯರಾದೆವೆಂದುಕೊಂಡು ಹೀಗೆ ಹೇಳಿದರು.

೬೩. ಮಹಾತ್ಮರ ಮಹಾಕಾರ್ಯಗಳನ್ನು ನೋಡಲು ಹೋಗುವುದು ಶ್ರೇಯಸ್ಕರವು. ತಪಸ್ಸಿಗೆ ಪ್ರಮಾಣ (ಮಿತಿ) ವಿಲ್ಲ. ತಿಳಿದವರು ಧರ್ಮವನ್ನು ಮನ್ನಿಸಲೇಬೇಕು.

ಶ್ರುತ್ವಾ ದೃಷ್ಟ್ವಾ ತಪೋಽಸ್ಯಾಸ್ತು ಕಿಮನ್ಯೈಃ ಕ್ರಿಯತೇ ತಪಃ ।
ಅಸ್ಮಾತ್ತಪೋಽಧಿಕಂ ಲೋಕೇ ನ ಭೂತಂ ನ ಭವಿಷ್ಯತಿ　　॥ ೬೪ ॥

ಜಲ್ಪಂತ ಇತಿ ತೇ ಸರ್ವೇ ಸುಪ್ರಶಸ್ಯ ಶಿವಾತಪಃ ।
ಜಗ್ಮುಃ ಸ್ವಂ ಧಾಮ ಮುದಿತಾಃ ಕಠಿನಾಂಗಾಶ್ಚ ಯೇ ಹ್ಯಪಿ　　॥ ೬೫ ॥

ಅನ್ಯಚ್ಛೃಣು ಮಹರ್ಷೇ ತ್ವಂ ಪ್ರಭಾವಂ ತಪಸೋಽಧುನಾ ।
ಪಾರ್ವತ್ಯಾ ಜಗದಂಬಾಯಾಃ ಪರಾಶ್ಚರ್ಯಕರಂ ಮಹತ್　　॥ ೬೬ ॥

ತದಾಶ್ರಮಗತಾ ಯೇ ಚ ಸ್ವಭಾವೇನ ವಿರೋಧಿನಃ ।
ತೇಽಪ್ಯಾಸಂಸ್ತತ್ಪ್ರಭಾವೇಣ ವಿರೋಧರಹಿತಾಸ್ತದಾ　　॥ ೬೭ ॥

ಸಿಂಹಾ ಗಾವಶ್ಚ ಸತತಂ ರಾಗಾದಿದೋಷಸಂಯುತಾಃ ।
ತನ್ಮಹಿಮ್ನಾ ಚ ತೇ ತತ್ರ ನಾಬಾಧಂತ ಪರಸ್ಪರಂ　　॥ ೬೮ ॥

---

೬೪. ಗಿರಿಜೆಯ ಈ ತಪಸ್ಸನ್ನು ಕೇಳಿದರೆ ಅಥವಾ ನೋಡಿದರೆ ಮಿಕ್ಕ ತಪಸ್ವಿಗಳು ನಾಚಿಕೆಯಿಂದ ತಪವನ್ನೇ ಮಾಡಲಾರರು. ಈ ತಪಸ್ಸಿಗಿಂತಲೂ ಉತ್ತಮವಾದುದು ಹಿಂದೆ ನಡೆದಿಲ್ಲ. ಮುಂದೆಯೂ ನಡೆಯಲಾರದು

೬೫. ಹೀಗೆ ಹೇಳುತ್ತಾ ಅವರೆಲ್ಲರೂ ಗಿರಿಜೆಯ ತಪಸ್ಸನ್ನು ಹೊಗಳಿ ಸಂತೋಷದಿಂದ ತಮ್ಮ ಮನೆಗಳಿಗೆ ತೆರಳಿದರು. ಮಹಾಸಮರ್ಥರೂ ಕೂಡ ಅವಳ ತಪಸ್ಸನ್ನು ಹೊಗಳಿದರು.

೬೬. ಎಲೈ ನಾರದನೆ, ಜಗನ್ಮಾತೆಯಾದ ಪಾರ್ವತಿಯ ತಪಸ್ಸಿನ ಮಹಿಮೆಯನ್ನು ಇನ್ನೂ ಹೇಳುವೆನು ಕೇಳು. ಅದು ಬಹು ಆಶ್ಚರ್ಯಕರವಾಗಿರುವುದು.

೬೭. ಸ್ವಭಾವವಾಗಿ ಇನ್ನೊಬ್ಬರ ಮಹಿಮೆಯನ್ನೊಪ್ಪಿಕೊಳ್ಳದೇ ಅಸೂಯಾಪರರಾಗಿರುವ ಕೆಲವು ಜನಗಳೂ ಸಹ ಪಾರ್ವತಿಯ ಆಶ್ರಮಕ್ಕೆ ಬಂದು ಅವಳ ತಪಸ್ಸಿನ ಪ್ರಭಾವವನ್ನು ಕಂಡು ಆಶ್ಚರ್ಯಪಟ್ಟರು. ತಮ್ಮ ದುರಭಿಮಾನವನ್ನು ಬಿಟ್ಟುಬಿಟ್ಟರು.

೬೮. ಯಾವಾಗಲೂ ಪರಸ್ಪರ ರಾಗದ್ವೇಷ ಮುಂತಾದ ದೋಷಗಳಿಂದಲೂ ಸಹಜವೈರದಿಂದಲೂ ಇರುವ ಸಿಂಹ, ಗೋವುಗಳು ಮುಂತಾದ ಪ್ರಾಣಿಗಳು ಗಿರಿಜೆಯ ತಪಸ್ಸಿನ ಮಹಿಮೆಯಿಂದ ಪರಸ್ಪರ ವೈರವನ್ನು ಬಿಟ್ಟು ಅಲ್ಲಿ ಸುಖವಾಗಿದ್ದವು.

ಅಥಾನ್ಯೇ ಚ ಮುನಿಶ್ರೇಷ್ಠ ಮಾರ್ಜಾರಾ ಮೂಷಕಾದಯಃ ।
ನಿಸರ್ಗಾದ್ವೈರಿಣೋ ಯತ್ರ ವಿಕ್ರಿಯಂತೇ ಸ್ಮ ನ ಕ್ವಚಿತ್ ॥ ೬೯ ॥

ವೃಕ್ಷಾಶ್ಚ ಸಫಲಾಸ್ತತ್ರ ತೃಣಾನಿ ವಿವಿಧಾನಿ ಚ ।
ಪುಷ್ಪಾಣಿ ಚ ವಿಚಿತ್ರಾಣಿ ತತ್ರಾಸನ್ಮುನಿಸತ್ತಮ ॥ ೭೦ ॥

ತದ್ವನಂ ಚ ತದಾ ಸರ್ವಂ ಕೈಲಾಸೇನೋಪಮಾನ್ವಿತಂ ।
ಜಾತಂ ಚ ತಪಸಸ್ತಸ್ಯಾಃ ಸಿದ್ಧಿರೂಪಮಭೂತ್ತದಾ ॥ ೭೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ದ್ವಾವಿಂಶೋಽಧ್ಯಾಯಃ



---

೬೯. ಅಲ್ಲದೇ ಇಲಿ ಬೆಕ್ಕು ಮುಂತಾದ ಸಹಜವೈರವುಳ್ಳ ಪ್ರಾಣಿಗಳೂ ಸಹ ತಮ್ಮ ಸಹಜವೈರವನ್ನು ಬಿಟ್ಟಿದ್ದವು.

೭೦-೭೧. ಪಾರ್ವತಿಯ ಆ ತಪೋವನದಲ್ಲಿ ಮರಗಳೆಲ್ಲ ಯಾವಾಗಲೂ ಫಲಭರಿತವಾಗಿದ್ದುವು. ಹುಲ್ಲು ಹಸುರಾಗಿ ಬೆಳೆದಿದ್ದಿತು. ಅನೇಕಬಗೆಯ ಹೂವುಗಳು ಅರಳಿ ಕಂಗೊಳಿಸುತ್ತಿದ್ದವು. ಕೈಲಾಸದಂತೆ ಸರ್ವಾನುಕೂಲಗಳಿಂದೊಪ್ಪುತ್ತಿದ್ದಿತು. ಆ ವನವೇ ಕೊನೆಗೆ ಪಾರ್ವತಿಗೆ ಇಷ್ಟಸಿದ್ಧಿಸ್ಥಾನವಾಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
# ತ್ರಯೋವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಏವಂ ತಪತ್ಯಾಂ ಪಾರ್ವತ್ಯಾಂ ಶಿವಪ್ರಾಪ್ತೌ ಮುನೀಶ್ವರ ।
ಚಿರಕಾಲೋ ವ್ಯತೀಯಾಯ ಪ್ರಾದುರ್ಭೂತೋ ಹರೋ ನ ಹಿ ॥ ೧ ॥

ಹಿಮಾಲಯಸ್ತದಾಗತ್ಯ ಪಾರ್ವತೀಂ ಕೃತನಿಶ್ಚಯಾಂ ।
ಸಭಾರ್ಯಃ ಸಸುತಾಮಾತ್ಯ ಉವಾಚ ಪರಮೇಶ್ವರೀಂ ॥ ೨ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು :—ಎಲೈ ನಾರದ, ಹೀಗೆ ಗಿರಿಜೆಯು ಶಿವನನ್ನು ಪಡೆಯಲೋಸುಗ ತಪಸ್ಸನ್ನಾಚರಿಸುತ್ತಲಿರಲು ಬಹುಕಾಲ ಕಳೆಯಿತು. ಆದರೂ ಶಿವನು ಪ್ರತ್ಯಕ್ಷನಾಗಲಿಲ್ಲ. ಆ ಶಿವನು ಪ್ರತ್ಯಕ್ಷನಾಗುವವರಿಗೂ ತಪಸ್ಸನ್ನು ಮಾಡಲೇಬೇಕೆಂದು ಧೃಡನಿಶ್ಚಯಮಾಡಿ ಅದರಂತೆ ಆ ತಪಸ್ಸಿನಲ್ಲೇ ತೊಡಗಿದ್ದಳು. ಹೀಗಿರಲೊಂದು ದಿನ ಹಿಮವಂತನು ಹೆಂಡತಿ ಮಕ್ಕಳು ಮತ್ತು ಸಚಿವರು ಇವರೊಡನೆ ಆ ಪಾರ್ವತಿಯ ಬಳಿಗೆ ಬಂದು ಅವಳನ್ನು ಕುರಿತು,

॥ ಹಿಮಾಲಯ ಉವಾಚ ॥

ಮಾ ಖಿದ್ಯತಾಂ ಮಹಾಭಾಗೇ ತಪಸಾನೇನ ಪಾರ್ವತಿ ।
ರುದ್ರೋ ನ ದೃಶ್ಯತೇ ಬಾಲೇ ವಿರಕ್ತೋ ನಾತ್ರ ಸಂಶಯಃ ॥ ೩ ॥

ತ್ವಂ ತನ್ವೀ ಸುಕುಮಾರಾಂಗೀ ತಪಸಾ ಚ ವಿಮೋಹಿತಾ ।
ಭವಿಷ್ಯಸಿ ನ ಸಂದೇಹಃ ಸತ್ಯಂ ಸತ್ಯಂ ವದಾಮ್ಯಹಂ ॥ ೪ ॥

ತಸ್ಮಾದುತ್ತಿಷ್ಠ ಚೈಹಿ ತ್ವಂ ಸ್ವಗೃಹಂ ವರವರ್ಣಿನಿ ।
ಕಿಂ ತೇನ ತವ ರುದ್ರೇಣ ಯೇನ ದಗ್ಧಃ ಪುರಾ ಸ್ಮರಃ ॥ ೫ ॥

ಅತೋ ಹಿ ನಿರ್ವಿಕಾರತ್ವಾತ್ತ್ವಾಮಾದಾತುಂ ವರಾಂ ಹರಃ ।
ನಾಗಮಿಷ್ಯತಿ ದೇವೇಶಿ ತಂ ಕಥಂ ಪ್ರಾರ್ಥಯಿಷ್ಯಸಿ ॥ ೬ ॥

ಗಗನಸ್ಥೋ ಯಥಾ ಚಂದ್ರೋ ಗ್ರಹೀತುಂ ಶಕ್ಯತೇ ನ ಹಿ ।
ತಥೈವ ದುರ್ಗಮಂ ಶಂಭುಂ ಜಾನೀಹಿ ತ್ವಮಿಹಾಽನಘೇ ॥ ೭ ॥

---

೩. ಮಹಾಮಹಿಮಳಾದ ಎಲೌ ಪಾರ್ವತಿ, ಈ ತಪಸ್ಸನ್ನು ಮಾಡುತ್ತಾ ದುಃಖಪಡಬೇಡ. ರುದ್ರನು ವಿರಕ್ತನು ಎಂದರೆ ಸ್ತ್ರೀಯಲ್ಲಾಸಕ್ತಿಯಿಲ್ಲದ ಯೋಗಿಯು. ಇದರಲ್ಲಿ ಸಂಶಯವಿಲ್ಲ.

೪. ನಿನ್ನ ಶರೀರವು ಬಹು ಕೋಮಲವಾದುದು. ಕಾಯಕ್ಲೇಶಗಳನ್ನು ಸಹಿಸಿ ಮಾಡಬೇಕಾದ ಈ ತಪಸ್ಸು ನಿನಗೆ ಯೋಗ್ಯವಲ್ಲ. ಇದರಿಂದ ನಿನಗೆ ಮತ್ತಷ್ಟು ದುಃಖವು ಹೆಚ್ಚುವುದು.

೫. ಆದುದರಿಂದ ಎಲೌ ಗಿರಿಜೆ, ಏಳು ಮನಗೆ ಹೋಗೋಣ. ಆ ರುದ್ರನಿಂದ ನಿನಗೇನು? ಅವನು ಮಹಾವಿರಕ್ತನು. ಅಂತೆ ಅವನು ಕಾಮವಿಕಾರಕ್ಕೊಳಗಾಗದೆ ಮನ್ಮಥನನ್ನು ಭಸ್ಮಮಾಡಿದನು.

೬. ಆ ಶಿವನು ಮಹಾ ವೈರಾಗ್ಯಶಾಲಿಯಾದುದರಿಂದ ನಿನ್ನನ್ನು ಅವನು ಮದುವೆಯಾಗಲು ಇಲ್ಲಿಗೆ ಬರುವಂತೆ ಕಾಣುವುದಿಲ್ಲ. ಇಂಥಹವನನ್ನು ಪತಿಯಾಗೆಂದು ಏಕೆ ಪ್ರಾರ್ಥಿಸುವೆ?

೭. ಎಲೌ ಶಿವೆ; ಆಕಾಶದಲ್ಲಿರುವ ಚಂದ್ರನನ್ನು ಹಿಡಿಯಲು ಹೇಗೆ ಸಾಧ್ಯವಿಲ್ಲವೋ ಅದರಂತೆ ಶಂಕರನನ್ನೂ ಪಡೆಯಲು ಸಾಧ್ಯವಿಲ್ಲ ಎಂದು ತಿಳಿ ಎಂದನು.

॥ ಬ್ರಹ್ಮೋವಾಚ ॥

ತಥೈವ ಮೇನಾಯಾ ಪ್ರೋಕ್ತಾ ತಥಾ ಸಹ್ಯಾದ್ರಿಣಾ ಸತೀ ।
ಮೇರುಣಾ ಮಂದರೇಣೈವ ಮೈನಾಕೇನ ತಥೈವ ಸಾ ॥ ೮ ॥

ಏವಮನ್ಯೈಃ ಕ್ಷಿತಿಧ್ರೈಶ್ಚ ಕ್ರೌಂಚಾದಿಭಿರನಾತುರಾ ।
ತಥೈವ ಗಿರಿಜಾ ಪ್ರೋಕ್ತಾ ನಾನಾವಾದವಿಧಾಯಿಭಿಃ ॥ ೯ ॥

ಏವಂ ಪ್ರೋಕ್ತಾ ಯದಾ ತನ್ವೀ ಸರ್ವೈಸ್ತಪಸಿ ಸಂಸ್ಥಿತಾ ।
ಉವಾಚ ಪ್ರಹಸಂತ್ಯೇವ ಹಿಮವಂತಂ ಶುಚಿಸ್ಮಿತಾ ॥ ೧೦ ॥

॥ ಪಾರ್ವತ್ಯುವಾಚ ॥

ಪುರಾ ಪ್ರೋಕ್ತಂ ಮಯಾ ತಾತ ಮಾತಃ ಕಿಂ ವಿಸ್ಮೃತಂ ತ್ವಯಾ ।
ಅಧುನಾಪಿ ಪ್ರತಿಜ್ಞಾಂ ಚ ಶೃಣುಧ್ವಂ ಮಮ ಬಾಂಧವಾಃ ॥ ೧೧ ॥

ವಿರಕ್ತೋಽಸೌ ಮಹಾದೇವೋ ಯೇನ ದಗ್ಧಃ ಪುರಾ ಸ್ಮರಃ ।
ತಂ ತೋಷಯಾಮಿ ತಪಸಾ ಶಂಕರಂ ಭಕ್ತವತ್ಸಲಂ ॥ ೧೨ ॥

---

೮-೯. ಬ್ರಹ್ಮನು ಹೇಳಿದನು:--ಇದೇ ರೀತಿಯಲ್ಲಿ ಮೇನಾದೇವಿ, ಸಹ್ಯಾದ್ರಿ, ಮೇರುಗಿರಿ, ಮಂದರಗಿರಿ, ಮೈನಾಕ, ಕ್ರೌಂಚ ಮುಂತಾದ ಎಲ್ಲಾ ಬಂಧುಗಳೂ ಅನೇಕ ಯುಕ್ತಿಯುಕ್ತವಾದ ಮಾತುಗಳನ್ನಾಡಿ ಗಿರಿಜೆಯನ್ನು ಮನೆಗೆ ಹಿಂತಿರುಗು ವಂತೆ ತಿಳಿಸಿದರು.

೧೦. ಎಲ್ಲರ ಹಿತವಚನಗಳನ್ನು ಕೇಳಿ ಆ ಪಾರ್ವತಿಯು ನಕ್ಕು ಶುಭ್ರವಾದ ಮಂದಹಾಸವನ್ನು ಬೀರುತ್ತಾ ಇಂತೆಂದಳು.

೧೧. ಓ ತಂದೆಯೇ, ಹಿಂದೆಯೇ ನಾನೊಂದು ಮಾತನ್ನು ಹೇಳಿರುವೆನು. ಅದನ್ನು ಮರೆತಿರುವಿರಾ? ಈಗಲೂ ಸಹ ಆ ಮಾತನ್ನೇ ಹೇಳುವೆನು ಕೇಳಿ.

೧೨. ಆ ಮಹಾದೇವನು ವಿರಕ್ತನು. ಅಲ್ಲದೆ, ಅವನು ಮನ್ಮಥನನ್ನು ಭಸ್ಮ ಮಾಡಿರುವನು. ಆದರೂ ಅವನು ಭಕ್ತವತ್ಸಲನು. ಅವನನ್ನು ತಪಸ್ಸಿನಿಂದ ಪ್ರಸನ್ನಗೊಳಿಸುವೆನು.

ಸರ್ವೇ ಭವಂತೋ ಗಚ್ಛಂತು ಸ್ವಂ ಸ್ವಂ ಧಾಮ ಪ್ರಹರ್ಷಿತಾಃ ।
ಭವಿಷ್ಯತ್ಯೇವ ತುಷ್ಟೋಽಸೌ ನಾತ್ರ ಕಾರ್ಯಾ ವಿಚಾರಣಾ ॥ ೧೩ ॥

ದಗ್ಧೋ ಹಿ ಮದನೋ ಯೇನ ಯೇನ ದಗ್ಧಂ ಗಿರೇರ್ವನಂ ।
ತಮಾನಯಿಷ್ಯೇ ಚಾತ್ರೈವ ತಪಸಾ ಕೇವಲೇನ ಹಿ ॥ ೧೪ ॥

ತಪೋಬಲೇನ ಮಹತಾ ಸುಸೇವ್ಯೋ ಹಿ ಸದಾಶಿವಃ ।
ಜಾನೀಧ್ವಂ ಹಿ ಮಹಾಭಾಗಾಃ ಸತ್ಯಂ ಸತ್ಯಂ ವದಾಮ್ಯಹಂ ॥ ೧೫ ॥

ಆಭಾಷ್ಯ ಚೈವಂ ಗಿರಿಜಾ ಚ ಮೇನಕಾಂ
ಮೈನಾಕಬಂಧೂಂ ಪಿತರಂ ಹಿಮಾಲಯಂ ।
ತೂಷ್ಣೀಂ ಬಭೂವಾಶು ಸುಭಾಷಿಣೀ ಶಿವಾ
ಸಮಂದರಂ ಪರ್ವತರಾಜಬಾಲಿಕಾ ॥ ೧೬ ॥

ಜಗ್ಮುಸ್ತಥೋಕ್ತಾಃ ಶಿವಯಾ ಹಿ ಪರ್ವತಾ
ಯಥಾಗತೇನಾಪಿ ವಿಚಕ್ಷಣಾಸ್ತೇ ।

---

೧೩. ಈಗ ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ತೆರಳಿರಿ. ಆ ಪರಮೇಶ್ವರನು ನನ್ನ ತಪಸ್ಸಿಗೆ ಪ್ರಸನ್ನನಾಗಿಯೇ ಆಗುವನು. ಇದರಲ್ಲಿ ವಿಚಾರಮಾಡತಕ್ಕದ್ದೇನಿಲ್ಲ.

೧೪. ಯಾವನು ಮನ್ಮಥನನ್ನು ಭಸ್ಮಮಾಡಿದನೋ ಮತ್ತು ಈ ಗಿರಿವನವನ್ನೂ ಭಸ್ಮಮಾಡಿದನೋ ಅಂತಹ ಶಿವನನ್ನು ಕೇವಲ ತಪಸ್ಸಿನಿಂದಲೇ ಇಲ್ಲಿಗೆ ಕರೆದುಕೊಂಡು ಬರುವೆನು.

೧೫. ಓ ಬಂಧುಗಳೇ, ಮಹತ್ತಾದ ತಪೋಬಲದಿಂದ ಆ ಸದಾಶಿವನನ್ನು ಸೇವಿಸಬಹುದು ಎಂಬುದನ್ನು ತಿಳಿಯಿರಿ. ಸತ್ಯವಾದುದನ್ನೇ ಹೇಳುತ್ತಲಿರುವೆನು.

೧೬. ಮೇನಕೆ, ಮೈನಾಕ, ಹಿಮವಂತ, ಮೇರು ಮಂದರ ಮುಂತಾದ ಬಂಧುಗಳಿಗೆ ಹೀಗೆ ಹೇಳಿ ಗಿರಿಜೆಯು ಸುಮ್ಮನಾದಳು.

೧೭. ಗಿರಿಜೆಯ ಯುಕ್ತವಾದ ಮಾತನ್ನು ಕೇಳಿ ಮೇರು ಮತ್ತು ಹಿಮಾಲಯ, ಮೊದಲಾದ ಬಂಧುಗಳು ಆಶ್ಚರ್ಯಗೊಂಡು ಪಾರ್ವತಿಯನ್ನು ಪ್ರಶಂಸಿಸುತ್ತಾ ಬಂದಂತೆಯೇ ಹಿಂತಿರುಗಿದರು.

ಪ್ರಶಂಸಮಾನಾ ಗಿರಿಜಾಂ ಮುಹುರ್ಮುಹುಃ
ಸುವಿಸ್ಮಿತಾ ಹೇಮನಗೇಶ್ವರಾದ್ಯಾಃ ॥ ೧೭ ॥

ಗತೇಷು ತೇಷು ಸರ್ವೇಷು ಸಖೀಭಿಃ ಪರಿವಾರಿತಾ ।
ತಪಸ್ತೇಪೇ ತದಧಿಕಂ ಪರಮಾರ್ಥಸುನಿಶ್ಚಯಾ ॥ ೧೮ ॥

ತಪಸಾ ಮಹತಾ ತೇನ ತಪ್ತಮಾಸೀಚ್ಚರಾಚರಂ ।
ತ್ರೈಲೋಕ್ಯಂ ಹಿ ಮುನಿಶ್ರೇಷ್ಠ ಸದೇವಾಸುರಮಾನುಷಂ ॥ ೧೯ ॥

ತದಾ ಸುರಾಸುರಾಸ್ಸರ್ವೇ ಯಕ್ಷಕಿನ್ನರಚಾರಣಾಃ ।
ಸಿದ್ಧಾಃ ಸಾಧ್ಯಾಶ್ಚ ಮುನಯೋ ವಿದ್ಯಾಧರಮಹೋರಗಾಃ ॥ ೨೦ ॥

ಸಪ್ರಜಾಪತಯಶ್ಚೈವ ಗುಹ್ಯಕಾಶ್ಚ ತಥಾ ಪರೇ ।
ಕಷ್ಟಾತ್ಕಷ್ಟತರಂ ಪ್ರಾಪ್ತಾಃ ಕಾರಣಂ ನ ವಿದುಃ ಸ್ಮ ತತ್ ॥ ೨೧ ॥

ಸರ್ವೇ ಮಿಲಿತ್ವಾ ಶಕ್ರಾದ್ಯಾ ಗುರುಮಾಮಂತ್ರ್ಯ ವಿಹ್ವಲಾಃ ।
ಸುಮೇರೌ ತಪ್ತಸರ್ವಾಂಗಾ ವಿಧಿಂ ಮಾಂ ಶರಣಂ ಯಯುಃ ॥ ೨೨ ॥

---

೧೮. ತನ್ನ ಬಂಧುಗಳೆಲ್ಲರೂ ಹೊರಟುಹೋಗಲು ಗಿರಿಜೆಯು ಸಖಿಯರೊಡಸೆರುತ್ತಾ ಮುಂಚೆಗಿಂತಲೂ ಘೋರವಾದ ತಪಸ್ಸನ್ನು ಸ್ಥಿರಪ್ರತಿಜ್ಞೆಯಿಂದ ಮಾಡತೊಡಗಿದಳು.

೧೯. ಪಾರ್ವತಿಯ ಆ ಘೋರತಪಸ್ಸಿನಿಂದ ದೇವ, ಮನುಷ್ಯ, ದೈತ್ಯ, ಪಶು ಮುಂತಾದ ಜಗತ್ತೆಲ್ಲವೂ ತಾಪಗೊಂಡು ತಲ್ಲಣಿಸಿಹೋಯಿತು.

೨೦-೨೧. ಆಗ ದೇವತೆಗಳು, ಅಸುರರು, ಯಕ್ಷ, ಕಿನ್ನರ ಮತ್ತು ಚಾರಣರು ಸಿದ್ಧರು, ಸಾಧ್ಯರು, ಮುನಿಗಳು, ವಿದ್ಯಾಧರರು, ಸರ್ಪಕುಲಗಳು, ಪ್ರಜಾಪತಿಗಳು, ಗುಹ್ಯಕರು ಇವರೆಲ್ಲರೂ ತುಂಬಾ ದುಃಖಿತರಾದರು. ಅದರ ಕಾರಣವನ್ನು ಮಾತ್ರ ತಿಳಿಯದಾದರು.

೨೨. ಪಾರ್ವತಿಯ ತಪೋಜ್ವಾಲೆಯಿಂದ ಮೇಲೆ ಹೇಳಿದ ದೇವತೆಗಳು ಮೊದಲಾದವರೆಲ್ಲರೂ ಸೇರಿ ಬೃಹಸ್ಪತಿಯೊಡನೆ ಬ್ರಹ್ಮನಾದ ನನ್ನ ಬಳಿಗೆ ಶರಣು ಬಂದರು.

ತತ್ರ ಗತ್ವಾ ಪ್ರಣಮ್ಯಾಶು ವಿಹ್ವಲಾ ನಷ್ಟಸುತ್ವಿಷಃ ।
ಊಚುಸ್ಸರ್ವೇ ಚ ಸಂಸ್ತೂಯ ಹ್ಯೈಕಪದ್ಯೇನ ಮಾಂ ಹಿ ತೇ ॥ ೨೩ ॥

॥ ದೇವಾ ಊಚುಃ ॥

ತ್ವಯಾ ಸೃಷ್ಟಮಿದಂ ಸರ್ವಂ ಜಗದೇತಚ್ಚರಾಚರಂ ।
ಸಂತಪ್ತಮತಿ ಕಸ್ಮಾದ್ವೈ ನ ಜ್ಞಾತಂ ಕಾರಣಂ ವಿಭೋ ॥ ೨೪ ॥

ತತ್ಬ್ರೂಹಿ ಕಾರಣಂ ಬ್ರಹ್ಮನ್ ಜ್ಞಾತುಮರ್ಹಸಿ ನಃ ಪ್ರಭೋ ।
ತಗ್ಧಭೂತತನೂರ್ದೇವಾನ್ ತ್ವತ್ತೋ ನಾನ್ಯೋಽಸ್ತಿ ರಕ್ಷಕಃ ॥ ೨೫ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಮಹಂ ಸ್ಮೃತ್ವಾ ಶಿವಂ ಹೃದಾ ।
ವಿಚಾರ್ಯ ಮನಸಾ ಸರ್ವಂ ಗಿರಿಜಾಯಾಸ್ತಪಃಫಲಂ ॥ ೨೬ ॥

ದಗ್ಧಂ ವಿಶ್ವಮಿತಿ ಜ್ಞಾತ್ವಾ ತೈಃ ಸರ್ವೈರಿಹ ಸಾದರಾತ್ ।
ಹರಯೇ ತತ್ಕಥಯಿತುಂ ಕ್ಷೀರಾಬ್ಧಿಮಗಮಂ ದ್ರುತಂ ॥ ೨೭ ॥

---

೨೩. ಅವರ ಮುಖವು ಕಾಂತಿಹೀನವಾಗಿ ಬಾಡಿಹೋಗಿದ್ದಿತು. ದುಃಖಿಸುವಂತೆ ಕಾಣುತ್ತಿತ್ತು. ಆಗ ಅವರೆಲ್ಲರೂ ನನ್ನನ್ನು ಸ್ತುತಿಸಿ ಹೀಗೆ ಹೇಳಿದರು.

೨೪. ದೇವತೆಗಳು ಹೇಳಿದರು:—ಓ ಸ್ವಾಮಿಯೆ, ಸ್ಥಿರಚರಾತ್ಮಕವಾದ ಈ ಜಗತ್ತು ನಿನ್ನಿಂದಲೇ ಸೃಷ್ಟವಾದುದು. ಇದು ಈಗ ತುಂಬಾ ಸಂತಪ್ತವಾಗಿದೆ. ಇದಕ್ಕೆ ಕಾರಣವು ನಮಗೆ ತಿಳಿಯದು.

೨೫. ಓ ಬ್ರಹ್ಮನೆ, ಇದಕ್ಕೆ ಕಾರಣವೇನೆಂಬುದನ್ನು ಯೋಚಿಸಿ ಹೇಳು. ಹೀಗೆ ಸಂತಾಪಗೊಡಿರುವ ದೇವತೆಗಳನ್ನು ನಿನ್ನ ಹೊರತು ಇನ್ನಾರೂ ರಕ್ಷಿಸಲಾರರು ಎಂದರು.

೨೬-೨೭. ಬ್ರಹ್ಮನು ಹೇಳಿದನು :—ಈ ಪ್ರಕಾರವಾದ ದೇವತೆಗಳ ಮಾತನ್ನು ಕೇಳಿ ನಾನು ಶಿವನನ್ನು ಸ್ಮರಿಸಿ ಮನಸ್ಸಿನಲ್ಲಿ ವಿಚಾರಮಾಡಿ "ಸಂತಾಪಕ್ಕೆ ಕಾರಣವು ಪಾರ್ವತಿಯ ತಪಸ್ಸೇ" ಎಂದು ತಿಳಿದು, ನಾರಾಯಣನಿಗೆ ಅದನ್ನು ತಿಳಿಸಲೋಸುಗ ಆ ದೇವತೆಗಳೊಡನೆ ಕ್ಷೀರಸಮುದ್ರಕ್ಕೆ ತೆರಳಿದೆನು.

ತತ್ರ ಗತ್ವಾ ಹರಿಂ ದೃಷ್ಟ್ವಾ ನಿಲಸಂತಂ ಸುಖಾಸನೇ ।
ಸುಪ್ರಣಮ್ಯ ಸುಸಂಸ್ತೂಯ ಪ್ರಾವೋಚಂ ಸಾಂಜಲಿಸ್ಸುರೈಃ ॥ ೨೮ ॥

ತ್ರಾಹಿ ತ್ರಾಹಿ ಮಹಾವಿಷ್ಣೋ ತಪ್ತಾನ್ ನಃ ಶರಣಾಗತಾನ್ ।
ತಪಸೋಗ್ರೇಣ ಪಾರ್ವತ್ಯಾಸ್ತ್ರಪಂತ್ಯಾಃ ಪರಮೇಣ ಹಿ ॥ ೨೯ ॥

ಇತ್ಯಾಕರ್ಣ್ಯ ವಚಸ್ತೇಷಾಮಸ್ಮದಾದಿದಿವೌಕಸಾಂ ।
ಶೇಷಾಸನೇ ಸಮಾವಿಷ್ಟೋಽಸ್ಮಾನುವಾಚ ರಮೇಶ್ವರಃ ॥ ೩೦ ॥

॥ ವಿಷ್ಣುರುವಾಚ ॥

ಜ್ಞಾತಂ ಸರ್ವನಿದಾನಂ ಮೇ ಪಾರ್ವತೀತಪಸೋಽದ್ಯ ವೈ ।
ಯುಷ್ಮಾಭಿಸ್ಸಹಿತಸ್ತ್ವದ್ಯ ವ್ರಜಾಮಿ ಪರಮೇಶ್ವರಂ ॥ ೩೧ ॥

ಮಹಾದೇವಂ ಪ್ರಾರ್ಥಯಾಮೋ ಗಿರಿಜಾಪ್ರಾಪಣಾಯ ತಂ ।
ಪಾಣಿಗ್ರಹಾರ್ಥಮಧುನಾ ಲೋಕಾನಾಂ ಸ್ವಸ್ತಯೇ ಸುರಾಃ ॥ ೩೨ ॥

---

೨೮. ಅಲ್ಲಿಗೆ ಹೋಗಿ ಹರಿಯನ್ನು ನೋಡಿ ಸುಖಾಸನದಲ್ಲಿ ಮಂಡಿಸಿರುವ ಅವನನ್ನು ನಮಸ್ಕರಿಸಿ, ಸ್ತೋತ್ರಮಾಡಿ ದೇವತೆಗಳೊಡನೆ, ಅಂಜಲಿಯನ್ನು ಧರಿಸಿ

೨೯. ಓ ಮಹಾವಿಷ್ಣು, ನಮ್ಮನ್ನು ಕಾಪಾಡು ಕಾಪಾಡು, ನಾವು ನಿನ್ನ ಮರೆ ಹೊಕ್ಕಿರುವೆವು. ಗಿರಿಜೆಯ ಘೋರತಪಸ್ಸಿನ ಜ್ವಾಲೆಯಿಂದ ನಾವೆಲ್ಲರೂ ಬೆಂದು ಹೋಗುತ್ತಲಿರುವೆವು.

೩೦. ಹೀಗೆ ನಾನು ಮೊದಲುಗೊಂಡು ದೇವತೆಗಳು ಪ್ರಾರ್ಥಿಸುತ್ತಿರಲು ಅವನ್ನು ಕೇಳಿ ಶೇಷಶಾಯಿಯಾದ ಲಕ್ಷ್ಮೀಪತಿಯು ಹೀಗೆ ಹೇಳಿದನು.

೩೧. ವಿಷ್ಣುವು ಹೇಳಿದನು :—ಎಲೈ ದೇವತೆಗಳಿರಾ, ನಿಮ್ಮ ಈ ಸಂತಾಪಕ್ಕೆ ಪಾರ್ವತಿಯ ಉಗ್ರತಪಸ್ಸೇ ಕಾರಣವೆಂದು ತಿಳಿಯಿತು. ನಡೆಯಿರಿ ಈಗ ನಿಮ್ಮೊಡನೆ ನಾನೂ ಪರಮೇಶ್ವರನ ಬಳಿಗೆ ಬರುವೆನು.

೩೨. ಲೋಕಕ್ಷೇಮಕ್ಕಾಗಿ ಗಿರಿಜೆಯನ್ನು ಮದುವೆಯಾಗುವಂತೆ ಪರಮೇಶ್ವರನನ್ನು ಪ್ರಾರ್ಥಿಸೋಣ.

ವರಂ ದಾತುಂ ಶಿವಾಯೈ ಹಿ ದೇವದೇವಃ ಪಿನಾಕಧೃಕ್ ।
ಯಥಾ ಚೇಷ್ಯತಿ ತತ್ರೈವ ಕರಿಷ್ಯಾಮೋಽಧುನಾ ಹಿ ತತ್ ॥ ೩೩ ॥

ತಸ್ಮಾದ್ವಯಂ ಗಮಿಷ್ಯಾಮೋ ಯತ್ರ ರುದ್ರೋ ಮಹಾಪ್ರಭುಃ ।
ತಪಸೋಗ್ರೇಣ ಸಂಯುಕ್ತೋಽದ್ಯಾಸ್ತೇ ಪರಮಮಂಗಲಃ ॥ ೩೪ ॥

॥ ಬ್ರಹ್ಮೋವಾಚ ॥

ವಿಷ್ಣೋಸ್ತದ್ವಚನಂ ಶ್ರುತ್ವಾ ಸರ್ವ ಊಚುಸ್ಸುರಾದಯಃ ।
ಮಹಾಭೀತಾ ಹಠಾತ್ಕ್ರುದ್ಧಾದ್ದಗ್ಧಕಾಮಾಲ್ಲಯಂಕರಾತ್ ॥ ೩೫ ॥

॥ ದೇವಾ ಊಚುಃ ॥

ಮಹಾಭಯಂಕರಂ ಕ್ರುದ್ಧಂ ಕಾಲಾನಲಸಮಪ್ರಭಂ ।
ನ ಯಾಸ್ಯಾಮೋ ವಯಂ ಸರ್ವೇ ವಿರೂಪಾಕ್ಷಂ ಮಹಾಪ್ರಭುಂ ॥ ೩೬ ॥

ಯಥಾ ದಗ್ಧಃ ಪುರಾ ತೇನ ಮದನೋ ದುರತಿಕ್ರಮಃ ।
ತಥೈವ ಕ್ರೋಧಯುಕ್ತೋ ನಃ ಸ ಧಕ್ಷ್ಯತಿ ನ ಸಂಶಯಃ ॥ ೩೭ ॥

---

೩೩. ಪಾರ್ವತಿಗೆ ವರವನ್ನು ಕೊಡಲು ದೇವದೇವನಾದ ಈಶ್ವರನು ಉದ್ಯುಕ್ತನಾಗುವಂತೆ ಅಲ್ಲಿಯೇ ಪ್ರಯತ್ನಿಸೋಣ.

೩೪. ಮಹಾಪ್ರಭುವೂ ಮಂಗಳರೂಪನೂ ಆದ ರುದ್ರನು ಉಗ್ರವಾದ ತಪಸ್ಸನ್ನು ಮಾಡುತ್ತಿರುವಲ್ಲಿಗೆ ನಾವೆಲ್ಲರೂ ತೆರಳೋಣ ಎಂದನು.

೩೫-೩೬. ಬ್ರಹ್ಮನು ಹೇಳಿದನು:—ವಿಷ್ಣುವಿನ ಆ ಮಾತನ್ನು ಕೇಳಿ ದೇವತೆಗಳು ಹೆದರಿದರು. ಆ ರುದ್ರನು ಪ್ರಳಯಕರ್ತನು. ಕ್ರೋಧಮೂರ್ತಿಯು. ಇದಲ್ಲದೆ ಮನ್ಮಥನನ್ನು ಹಿಂದೆ ಭಸ್ಮಮಾಡಿರುವನು. ಓ ಹರಿ, ಆ ರುದ್ರನು ಮಹಾಭಯಂಕರನು, ಕ್ರೋಧಮೂರ್ತಿಯು, ಪ್ರಳಯಕಾಲದ ಅಗ್ನಿಯಂತೆ ಸದಾ ಜ್ವಲಿಸುತ್ತಿರುವನು, ಅವನ ಮೂರನೆಯ ಕಣ್ಣು ಸದಾ ಅಗ್ನಿಯನ್ನು ಕಾರುತ್ತಿರುವುದು. ಇಂತಹ ವಿರೂಪಾಕ್ಷನ ಬಳಿಗೆ ನಾವು ಬರಲಾರೆವು.

೩೭. ಅವನು ಮಹಾವೀರನಾದ ಮದನನ್ನು ಹಿಂದೆ ಹೇಗೆ ಭಸ್ಮಮಾಡಿದನೋ ಅದರಂತೆ ಈಗಲೂ ನಮ್ಮನ್ನು ಕ್ರೋಧದಿಂದ ದಹಿಸಿಬಿಡುವನು ಎಂದರು.

॥ ಬ್ರಹ್ಮೋವಾಚ ॥

ತದಾಕರ್ಣ್ಯ ವಚಸ್ತೇಷಾಂ ಶಕ್ರಾದೀನಾಂ ರಮೇಶ್ವರಃ ।
ಸಾಂತ್ವಯಂಸ್ತಾನ್ ಸುರಾನ್ ಸರ್ವಾನ್ ಪ್ರೋವಾಚ ಸ ಹರಿರ್ಮುನೇ ॥ ೩೮ ॥

॥ ಹರಿರುವಾಚ ॥

ಹೇ ಸುರಾ ಮದ್ವಚಃ ಪ್ರೀತ್ಯಾ ಶೃಣುತಾದರತೋಽಖಿಲಾಃ ।
ನ ವೋ ಧಕ್ಷ್ಯತಿ ಸ ಸ್ವಾಮೀ ದೇವಾನಾಂ ಭಯನಾಶನಃ ॥ ೩೯ ॥

ತಸ್ಮಾದ್ಭವದ್ಭಿರ್ಗಂತವ್ಯಂ ಮಯಾ ಸಾರ್ಧಂ ವಿಚಕ್ಷಣೈಃ ।
ಶಂಭುಂ ಶುಭಕರಂ ಮತ್ವಾ ಶರಣಂ ತಸ್ಯ ಸುಪ್ರಭೋಃ ॥ ೪೦ ॥

ಶಿವಂ ಪುರಾಣಂ ಪುರುಷಂ ಹ್ಯಧೀಶಂ
ವರೇಣ್ಯರೂಪಂ ಹಿ ಪರಂಪರಾಣಾಂ ।
ತಪೋ ಜುಷಾಣಂ ಪರಮಾತ್ಮರೂಪಂ
ಪರಾತ್ಪರಂ ತ್ವಂ ಶರಣಂ ವ್ರಜಾಮಃ ॥ ೪೧ ॥

---

೩೮-೩೯. ಬ್ರಹ್ಮನು ಹೇಳಿದನು:—ಹೀಗೆ ಇಂದ್ರನೇ ಮೊದಲಾದವರ ಮಾತನ್ನು ಕೇಳಿ ಹರಿಯು ಅವರೆಲ್ಲರನ್ನೂ ಸಮಾಧಾನಗೊಳಿಸುತ್ತಾ, ಎಲೈ ದೇವತೆಗಳೇ, ಎಲ್ಲರೂ ನನ್ನ ಮಾತನ್ನು ಆದರದಿಂದ ಕೇಳಿರಿ. ಆ ರುದ್ರನು ನಿಮ್ಮನ್ನು ದಹಿಸುವುದಿಲ್ಲ. ಅವನು ದೇವತೆಗಳ ಭಯವನ್ನು ಹೋಗಲಾಡಿಸುವನು.

೪೦. ಆದುದರಿಂದ ಬುದ್ಧಿವಂತರಾದ ನೀವೆಲ್ಲರೂ ನನ್ನೊಡನೆ ಶಿವನ ಬಳಿಗೆ ಬರಬೇಕು. ಅವನು ಮಂಗಳಕರನೆಂದು ತಿಳಿದು ಅವನನ್ನು ಶರಣು ಹೊಂದಬೇಕು.

೪೧. ಆ ಶಿವನು ಆದಿಪುರುಷನು, ಪರಮೇಶ್ವರನು, ಶ್ರೇಷ್ಠಮೂರ್ತಿಯು, ಸಂಪ್ರದಾಯಗಳ ಕರ್ತನವನು, ಪರಮಾತ್ಮಸ್ವರೂಪನು. ಇಂತಹವನು ಈಗ ತಪವನ್ನಾಚರಿಸುತ್ತಲಿರುವನು. ಸರ್ವೋತ್ಕೃಷ್ಟನಾದ ಅವನನ್ನು ಶರಣು ಪಡೆಯೋಣ, ನಡೆಯಿರಿ ಎಂದನು.

॥ ಬ್ರಹ್ಮೋವಾಚ ॥

ಏವಮುಕ್ತಾಸ್ತದಾದೇವಾ ವಿಷ್ಣುನಾ ಪ್ರಭವಿಷ್ಣುನಾ ।
ಜಗ್ಮುಸ್ಸರ್ವೇ ತೇನ ಸಹ ದ್ರಷ್ಟುಕಾಮಾಃ ಪಿನಾಕಿನಂ ॥ ೪೧ ॥

ಪ್ರಥಮಂ ಶೈಲಪುತ್ರ್ಯಾಸ್ತೇ ತಪೋ ದ್ರಷ್ಟುಂ ತದಾಶ್ರಮಂ ।
ಜಗ್ಮುರ್ಮಾರ್ಗವಶಾತ್ಸರ್ವೇ ವಿಷ್ಣ್ವಾದ್ಯಾಸ್ಸಕುತೂಹಲಾಃ ॥ ೪೨ ॥

ಪಾರ್ವತ್ಯಾಸ್ಸುತಪೋ ದೃಷ್ಟ್ವಾ ತೇಜಸಾ ವ್ಯಾಪೃತಾಸ್ತದಾ ।
ಪ್ರಣೇಮುಸ್ತಾಂ ಜಗದ್ಧಾತ್ರೀಂ ತೇಜೋರೂಪಾಂ ತಪಃಸ್ಥಿತಾಂ ॥ ೪೪ ॥

ಪ್ರಶಂಸಂತಸ್ತಪಸ್ತಸ್ಯಾಸ್ಸಾಕ್ಷಾತ್ಸಿದ್ಧಿತನೋಸ್ಸುರಾಃ ।
ಜಗ್ಮುಸ್ತತ್ರ ತದಾ ತೇ ಚ ಯತ್ರಾಸ್ತೇ ವೃಷಭಧ್ವಜಃ ॥ ೪೫ ॥

ತತ್ರ ಗತ್ವಾ ಚ ತೇ ದೇವಾಸ್ತ್ವಾಂ ಮುನೇ ಪ್ರೇಷಯಂಸ್ತದಾ ।
ಪಶ್ಯಂತೋ ದೂರತಸ್ತಸ್ಥುಃ ಕಾಮಭಸ್ಮಕೃತೋ ಹರಾತ್ ॥ ೪೬ ॥

ನಾರದ ತ್ವಂ ಶಿವಸ್ಥಾನಂ ತದಾ ಗತ್ವಾಽಭಯಸ್ತದಾ ।
ಶಿವಭಕ್ತೋ ವಿಶೇಷೇಣ ಪ್ರಸನ್ನಂ ದೃಷ್ಟವಾನ್ ಪ್ರಭುಂ ॥ ೪೭ ॥

---

೪೧. ಬ್ರಹ್ಮನು ಹೇಳಿದನು :—ಹೀಗೆ ಹರಿಯು ಹೇಳಲು, ಆಗ ದೇವತೆಗಳು ಜಗದೀಶ್ವರನಾದ ಆ ವಿಷ್ಣುವಿನೊಡನೆ ಶಂಕರನನ್ನು ನೋಡಲು ಹೊರಟರು.

೪೨-೪೫. ಅವರು ಹೋಗುವ ಮಾರ್ಗದಲ್ಲಿ ಗಿರಿಜೆಯ ತಪೋವನವು ಸಿಕ್ಕಿತು. ಮೊದಲು ಅವಳ ತಪಸ್ಸನ್ನು ನೋಡುವ ಕುತೂಹಲದಿಂದ ಆ ದೇವತೆಗಳೆಲ್ಲರೂ ಅವಳ ಆಶ್ರಮಕ್ಕೆ ಹೋಗಿ ಅಲ್ಲಿ ಪಾರ್ವತಿಯ ಉಗ್ರತಪಸ್ಸನ್ನು ನೋಡಿದರು. ಮತ್ತು ಅವಳ ತೇಜಸ್ಸಿನಿಂದ ಆವರಿಸಲ್ಪಟವರಾಗಿ ಆ ದೇವತೆಗಳು, ತೇಜೋರೂಪಳೂ, ತಪಸ್ವಿನಿಯೂ, ಆದ ಆ ಮಹೇಶ್ವರಿಯನ್ನು ಭಕ್ತಿಯಿಂದ ನಮಸ್ಕಾರ ಮಾಡಿ ಸಿದ್ಧಿರೂಪಳಾದ ಪಾರ್ವತಿಯ ತಪಸ್ಸನ್ನು ಪ್ರಶಂಸಿಸುತ್ತಾ ನಂದಿವಾಹನನಾದ ಪರಮೇಶ್ವರನಿರುವಲ್ಲಿಗೆ ತೆರಳಿದರು.

೪೬. ಅಲ್ಲಿಗೆ ಹೋಗಿ ದೇವತೆಗಳು ಮನ್ಮಥದಾಹಿಯಾದ ಪರಮೇಶ್ವರನಿಂದ ದೂರದಲ್ಲೇ ನಿಂತು ಅವನ ಬಳಿಗೆ ಎಲೈ ನಾರದ, ನಿನ್ನನ್ನು ಕಳುಹಿಸಿದರು.

೪೭-೪೮. ಎಲೈ ನಾರದ, ನೀನು ಮಹಾಶಿವಭಕ್ತನು. ನಿನಗೆ ಸದಾ ಭಯವಿಲ್ಲವು. ಇಂತಹ ನೀನು ಶಿವನ ಬಳಿಗೆ ಹೋಗಿ ಅಲ್ಲಿ ಪ್ರಸನ್ನನಾಗಿರುವ ಶಿವನನ್ನು

ಪುನರಾಗತ್ಯ ಯತ್ನೇನ ದೇವಾನಾಹೂಯ ತಾಂಸ್ತತಃ ।
ನಿನಾಯ ಶಂಕರಸ್ಥಾನಂ ತದಾ ವಿಷ್ಣ್ವಾದಿಕಾನ್ ಮುನೇ ॥ ೪೮ ॥

ಅಥ ವಿಷ್ಣ್ವಾದಯಸ್ಸರ್ವೇ ತತ್ರ ಗತ್ವಾ ಶಿವಂ ಪ್ರಭುಂ ।
ದದೃಶುಸ್ಸುಖಮಾಸೀನಂ ಪ್ರಸನ್ನಂ ಭಕ್ತವತ್ಸಲಂ ॥ ೪೯ ॥

ಯೋಗಪಟ್ಟಸ್ಥಿತಂ ಶಂಭುಂ ಗಣೈಶ್ಚ ಪರಿವಾರಿತಂ ।
ತಪೋರೂಪಂ ದಧಾನಂ ಚ ಪರಮೇಶ್ವರರೂಪಿಣಂ ॥ ೫೦ ॥

ತತೋ ವಿಷ್ಣುರ್ಮಯಾನ್ಯೇ ಚ ಸುರಸಿದ್ಧಮುನೀಶ್ವರಾಃ ।
ಪ್ರಣಮ್ಯ ತುಷ್ಟುವುಸ್ಸೂಕ್ತೈರ್ವೇದೋಪನಿಷದನ್ವಿತೈಃ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ತ್ರಯೋವಿಂಶೋಽಧ್ಯಾಯಃ

---

ನೋಡಿ ತಿರುಗಿ ದೇವತೆಗಳ ಬಳಿಗೆ ಬಂದು ಅವರೆಲ್ಲರನ್ನೂ ಪ್ರಯತ್ನದಿಂದ ಶಂಕರನ ಬಳಿಗೆ ಕರೆದುಕೊಂಡು ಹೋದೆಯಷ್ಟೆ.

೪೯. ಆಗ ಹರಿಯೇ ಮೊದಲಾದ ದೇವತೆಗಳೆಲ್ಲರೂ ಶಿವಸ್ಥಾನಕ್ಕೆ ತೆರಳಿ ಅಲ್ಲಿ ಪ್ರಸನ್ನಮುದ್ರೆಯಿಂದ ಸುಖಾಸನದಲ್ಲಿ ಕುಳಿತಿರುವ ಭಕ್ತವತ್ಸಲನಾದ ಶಂಕರನನ್ನು ನೋಡಿದರು.

೫೦. ಆಗ ಶಿವನು ಯೋಗಾಸನದಲ್ಲಿ ಕುಳಿತಿದ್ದನು. ಪ್ರಮಥಗಣಗಳು ಅವನ ಸುತ್ತಲೂ ಕುಳಿತಿದ್ದರು. ಅವನು ತಪಸ್ವಿಯ ರೂಪದಿಂದೊಪ್ಪುತ್ತಿದ್ದನು.

೫೧. ಆಮೇಲೆ, ವಿಷ್ಣುವೂ, ನಾನೂ, ದೇವತೆಗಳೂ ಮಿಕ್ಕ ಸಿದ್ಧರು, ಮುನಿಗಳು ಎಲ್ಲರೂ ಸಹ ನಮಸ್ಕರಿಸಿ ವೇದಾರ್ಥಗಳನ್ನೊಳಗೊಂಡ ಸೂಕ್ತಗಳಿಂದ ಹೀಗೆ ಸ್ತುತಿಸಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಚತುರ್ವಿಂಶೋಽಧ್ಯಾಯಃ

॥ ದೇವಾ ಊಚುಃ ॥

ನಮೋ ರುದ್ರಾಯ ದೇವಾಯ ಮದನಾಂತಕರಾಯ ಚ ।
ಸ್ತುತ್ಯಾಯ ಭೂರಿಭಾಸಾಯ ತ್ರಿನೇತ್ರಾಯ ನಮೋ ನಮಃ ॥ ೧ ॥

ಶಿಪಿವಿಷ್ಟಾಯ ಭೀಮಾಯ ಭೀಮಾಕ್ಷಾಯ ನಮೋ ನಮಃ ।
ಮಹಾದೇವಾಯ ಪ್ರಭವೇ ತ್ರಿವಿಷ್ಟಪತಯೇ ನಮಃ ॥ ೨ ॥

ತ್ವಂ ನಾಥಃ ಸರ್ವಲೋಕಾನಾಂ ಪಿತಾ ಮಾತಾ ತ್ವಮೀಶ್ವರಃ ।
ಶಂಭುರೀಶಃ ಶಂಕರೋಽಸಿ ದಯಾಲುಸ್ತ್ವಂ ವಿಶೇಷತಃ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ದೇವತೆಗಳು ಸ್ತುತಿಸಿದರು:—ಮದನಾರಿಯಾದ ರುದ್ರನಿಗೆ ನಮಸ್ಕಾರವು. ಮಹಾಪ್ರಕಾಶಸ್ವರೂಪನೂ ಸ್ತೋತ್ರಪಾತ್ರನೂ ಆದ ಮುಕ್ಕಣ್ಣನಿಗೆ ನಮಸ್ಕಾರವು.

೨. ಭಯಂಕರನೂ, ಭಯಂಕರವಾದ ತೃತೀಯನೇತ್ರವುಳ್ಳವನೂ ಆದ ನಂದಿವಾಹನನಿಗೆ ನಮಸ್ಕಾರವು. ದೇವದೇವನೂ ಜಗದೀಶ್ವರನೂ ಆದ ಪರಮೇಶ್ವರನಿಗೆ ನಮಸ್ಕಾರವು.

೩. ಓ ದೇವ, ನೀನು ಎಲ್ಲ ಜನಗಳಿಗೂ ನಾಥನು. ತಂದೆತಾಯಿಯೂ ನೀನೆ. ನೀನು ಸುಖವನ್ನುಂಟುಮಾಡುವವನು. ದಯಾಲುವು, ಪರಮೇಶ್ವರನು.

ತ್ವಂ ಧಾತಾ ಸರ್ವಜಗತಾಂ ತ್ರಾತುಮರ್ಹಸಿ ನಃ ಪ್ರಭೋ ।
ತ್ವಾಂ ವಿನಾ ಕಸ್ಸಮರ್ಥೋಽಸ್ತಿ ದುಃಖನಾಶೇ ಮಹೇಶ್ವರ ॥ ೪ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಸುರಾಣಾಂ ನಂದಿಕೇಶ್ವರಃ ।
ಕೃಪಯಾ ಪರಯಾ ಯುಕ್ತೋ ವಿಜ್ಞಪ್ತುಂ ಶಂಭುಮಾದರಾತ್ ॥ ೫ ॥

॥ ನಂದಿಕೇಶ್ವರ ಉವಾಚ ॥

ವಿಷ್ಣ್ವಾದಯಸ್ಸುರಗಣಾ ಮುನಿಸಿದ್ಧಸಂಘಾ-
ಸ್ತ್ವಾಂ ದ್ರಷ್ಟುಮೇವ ಸುರವರ್ಯ ವಿಶೇಷಯಂತಿ ।
ಕಾರ್ಯಾರ್ಥಿನೋಽಸುರವರೈಃ ಪರಿಭರ್ತ್ಸ್ಯಮಾನಾಃ
ಸಮ್ಯಕ್ಪರಾಭವಪದಂ ಪರಮಂ ಪ್ರಸನ್ನಾಃ ॥ ೬ ॥

ತಸ್ಮಾತ್ತ್ವಯಾ ಹಿ ಸರ್ವೇಶ ತ್ರಾತವ್ಯಾ ಮುನಯಸ್ಸುರಾ ।
ದೀನಬಂಧುರ್ವಿಶೇಷೇಣ ತ್ವಮುಕ್ತೋ ಭಕ್ತವತ್ಸಲಃ ॥ ೭ ॥

---

೪. ಎಲೈ ಸ್ವಾಮಿಯೆ, ನೀನೇ ಈ ಜಗತ್ತಿಗೆ ಕರ್ತನು. ನಮ್ಮನ್ನು ಸಲಹಬೇಕು. ನಿನ್ನ ಹೊರತು ಇನ್ನಾವನೂ ನಮ್ಮ ದುಃಖವನ್ನು ಹೋಗಲಾಡಿಸತಕ್ಕವನಿಲ್ಲ ಎಂದರು.

೫. ಬ್ರಹ್ಮನು ಹೇಳಿದನು:—ಈ ಪ್ರಕಾರವಾಗಿ ದೇವತೆಗಳು ಸ್ತುತಿಮಾಡುತ್ತಿರುವುದನ್ನು ನೋಡಿ ನಂದಿಕೇಶ್ವರನು ತುಂಬಾ ಕನಿಕರಪಟ್ಟು, ಶಂಕರನನ್ನು ಕುರಿತು ಹೀಗೆ ವಿಜ್ಞಾಪಿಸಿಕೊಂಡನು.

೬. ನಂದಿಕೇಶ್ವರನು ಹೇಳಿದನು:—ಓ ಪರಮೇಶ್ವರ, ಹರಿಯೇ ಮೊದಲಾದ ದೇವತೆಗಳು, ಮುನಿಗಳು, ಸಿದ್ಧರು ಮೊದಲಾದವರು ನಿನ್ನ ದರ್ಶನಕ್ಕಾಗಿ ಇಲ್ಲಿ ಬಂದು ನಿನ್ನನ್ನು ಸ್ತುತಿಸುತ್ತಿರುವರು. ಅವರು ರಾಕ್ಷಸರಿಂದ ಪೀಡಿತರಾಗಿ ಪರಾಜಯವನ್ನು ಹೊಂದಿ ಕಾರ್ಯಾರ್ಥಿಗಳಾಗಿ ನಿನ್ನಲ್ಲಿಗೆ ಬಂದಿರುವರು.

೭ ಆದುದರಿಂದ ಓ ಪರಮೇಶ್ವರ, ದೇವತೆಗಳು ಮುನಿಗಳು ಮೊದಲಾದವರನ್ನು ನೀನು ರಕ್ಷಿಸಬೇಕು. ನೀನು ದೀನಬಂಧುವೆಂತಲೂ ಭಕ್ತವತ್ಸಲನೆಂತಲೂ ಕರೆಯಲ್ಪಡುತ್ತೀಯೆ ಎಂದನು.

॥ ಬ್ರಹ್ಮೋವಾಚ ॥

ಏವಂ ದಯಾವತಾ ಶಂಭುರ್ವಿಜ್ಞಪ್ತೋ ನಂದಿನಾ ಭೃಶಂ ।
ಶನೈಶ್ಶನೈರುಪರಮದ್ಧ್ಯಾನಾದುನ್ಮೀಲ್ಯ ಚಾಕ್ಷಿಣೀ ॥ ೮ ॥

ಈಶೋಽಥೋಪರತಶ್ಶಂಭುಸ್ತದಾ ಪರಮಕೋವಿದಃ ।
ಸಮಾಧೇಃ ಪರಮಾತ್ಮಾಸೌ ಸುರಾನ್ ಸರ್ವಾನುವಾಚ ಹ ॥ ೯ ॥

॥ ಶಂಭುರುವಾಚ ॥

ಕಸ್ಮಾದ್ಯೂಯಂ ಸಮಾಯಾತಾ ಮತ್ಸಮೀಪಂ ಸುರೇಶ್ವರಾಃ ।
ಹರಿಬ್ರಹ್ಮಾದಯಸ್ಸರ್ವೇ ಬ್ರೂತ ಕಾರಣಮಾಶು ತತ್ ॥ ೧೦ ॥

॥ ಬ್ರಹ್ಮೋವಾಚ ॥

ಇತಿ ಶ್ರುತ್ವಾ ವಚಶ್ಶಂಭೋಸ್ಸರ್ವೇ ದೇವಾ ಮುದಾನ್ವಿತಾಃ ।
ವಿಷ್ಣೋರ್ವಿಲೋಕಯಾಮಾಸುರ್ಮುಖಂ ವಿಜ್ಞಪ್ತಿಹೇತವೇ ॥ ೧೧ ॥

ಅಥ ವಿಷ್ಣುರ್ಮಹಾಭಕ್ತೋ ದೇವಾನಾಂ ಹಿತಕಾರಕಃ ।
ಮದೀರಿತಮುವಾಚೇದಂ ಸುರಕಾರ್ಯಂ ಮಹತ್ತರಂ ॥ ೧೨ ॥

---

೮. ಬ್ರಹ್ಮನು ಹೇಳಿದನು:—ಹೀಗೆ ದಯಾವಂತನಾದ ನಂದಿಯು ವಿಜ್ಞಾಪಿಸಲು ಶಂಕರನು ಕಣ್ಣುಗಳನ್ನು ತೆರೆದು ಮೆಲ್ಲಮೆಲ್ಲಗೆ ಧ್ಯಾನದಿಂದ ಬಹಿರ್ಮುಖನಾದನು.

೯-೧೦. ಪರಮಜ್ಞಾನಿಯಾದ ಈಶ್ವರನು ಆಗ ಸಮಾಧಿಯನ್ನು ಬಿಟ್ಟೆದ್ದು ದೇವತೆಗಳೆಲ್ಲರನ್ನು ಕುರಿತು ಹರಿಬ್ರಹ್ಮ ಮೊದಲಾದ ದೇವಶ್ರೇಷ್ಠರೇ, ಈಗ ನೀವು ನನ್ನ ಬಳಿಗೆ ಬಂದಿರುವ ಕಾರಣವೇನು ? ಬೇಗನೆ ತಿಳಿಸಿ ಎಂದನು.

೧೧. ಬ್ರಹ್ಮನು ಹೇಳಿದನು :—ಈ ಪ್ರಕಾರವಾದ ಶಂಕರನ ಮಾತನ್ನು ಕೇಳಿ ದೇವತೆಗಳೆಲ್ಲರೂ ವಿಜ್ಞಾಪಿಸುವುದಕ್ಕಾಗಿ ಹರಿಯ ಮುಖವನ್ನು ನೋಡಿದರು.

೧೨-೧೩. ಬಳಿಕ ಮಹಾಶಿವಭಕ್ತನೂ ದೇವತೆಗಳ ಹಿತವನ್ನು ಮಾಡುವವನೂ ಆದ ಹರಿಯು ಮಹತ್ತರವಾದ ದೇವಕಾರ್ಯವನ್ನು ಸಾಧಿಸುವ ಉದ್ದೇಶದಿಂದ ಹೀಗೆ ಹೇಳಿದನು—ಓ ಶಂಕರ, ತಾರಕಾಸುರನೆಂಬ ದೈತ್ಯನು ದೇವತೆಗಳಿಗೆ

॥ ಹರಿರುವಾಚ ॥

ತಾರಕೇಣ ಕೃತಂ ಶಂಭೋ ದೇವಾನಾಂ ಪರಮಾದ್ಭುತಂ ।
ಕಷ್ಟಾತ್ಕಷ್ಟತರಂ ದೇವಾ ವಿಜ್ಞಪ್ತುಂ ಸರ್ವ ಆಗತಾಃ ॥ ೧೩ ॥

ಹೇ ಶಂಭೋ ತವ ಪುತ್ರೇಣೌರಸೇನ ಭವಿಷ್ಯತಿ ।
ನಿಹತಸ್ತಾರಕೋ ದೈತ್ಯೋ ನಾನ್ಯಥಾ ಮಮ ಭಾಷಿತಂ ॥ ೧೪ ॥

ವಿಚಾರ್ಯೇತ್ಥಂ ಮಹಾದೇವ ಕೃಪಾಂ ಕುರು ನಮೋಽಸ್ತು ತೇ ।
ದೇವಾನ್ ಸಮುದ್ಧರ ಸ್ವಾಮಿನ್ ಕಷ್ಟಾತ್ತಾರಕನಿರ್ಮಿತಾತ್ ॥ ೧೫ ॥

ತಸ್ಮಾತ್ತ್ವಯಾ ಗಿರಿಜಾ ದೇವ ಶಂಭೋ
ಗ್ರಹೀತವ್ಯಾ ಪಾಣಿನಾ ದಕ್ಷಿಣೇನ ।
ಪಾಣಿಗ್ರಹೇಣೈವ ಮಹಾನುಭಾವಾಂ
ದತ್ತಾಂ ಗಿರೀಂದ್ರೇಣ ಚ ತಾಂ ಕುರುಷ್ವ ॥ ೧೬ ॥

ವಿಷ್ಣೋಸ್ತದ್ವಚನಂ ಶ್ರುತ್ವಾ ಪ್ರಸನ್ನೋಽಹ್ಯಬ್ರವೀಚ್ಛಿವಃ ।
ದರ್ಶಯನ್ ಸದ್ಗತಿಂ ತೇಷಾಂ ಸರ್ವೇಷಾಂ ಯೋಗತತ್ಪರಃ ॥ ೧೭ ॥

---

ಮಹಾಕಷ್ಟವನ್ನು ಕೊಡುತ್ತಲಿರುವನು. ಅದನ್ನು ವಿಜ್ಞಾಪಿಸಲು ಈ ದೇವತೆಗಳೆಲ್ಲರೂ ನಿನ್ನ ಬಳಿಗೆ ಬಂದಿರುವರು.

೧೪. ಆ ತಾರಕಾಸುರನು ನಿನ್ನ ಔರಸಪುತ್ರನಿಂದಲೇ ಮರಣಹೊಂದುವನು. ಅಂತೆಯೇ ಬ್ರಹ್ಮನು ಅವನಿಗೆ ವರವನ್ನಿತ್ತಿರುವನು. ಅದು ವ್ಯತ್ಯಾಸವಾಗಲಾರದು. ಇದು ಸತ್ಯವಾಮದು.

೧೫. ಓ ಮಹಾದೇವ, ಈಗ ವಿಚಾರಮಾಡಿ ತಾರಕಾಸುರನ ಬಾಧೆಯಿಂದ ದೇವತೆಗಳನ್ನು ಉದ್ಧಾರಮಾಡಿ ನಮ್ಮನ್ನು ಅನುಗ್ರಹಿಸು, ನಿನಗೆ ನಮಿಸುವೆವು.

೧೬. ಓ ಶಂಕರ, ನೀನು ಗಿರಿಜೆಯ ಪಾಣಿಗ್ರಹಣವನ್ನು ಮಾಡಬೇಕು. ವಿವಾಹವಿಧಿಯಂತೆ ಗಿರಿರಾಜನು ಧಾರೆಯೆರೆದುಕೊಟ್ಟ ಪಾರ್ವತಿಯನ್ನು ನೀನು ಮದುವೆಯಾಗಬೇಕು ಎಂದನು.

೧೭. ವಿಷ್ಣುವಿನ ಈಪ್ರಕಾರವಾದ ಮಾತನ್ನು ಕೇಳಿ ಯೋಗಿರಾಜನಾದ ಶಿವನು ಪ್ರಸನ್ನನಾಗಿ ಆ ದೇವತೆಗಳಿಗೆ ಸುಖಮಾರ್ಗವನ್ನು ತೋರಿಸುತ್ತಾ ಹೀಗೆ ಹೇಳಿದನು.

॥ ಶಿವ ಉವಾಚ ॥

ಯದಾ ಮೇ ಸ್ವೀಕೃತಾ ದೇವೀ ಗಿರಿಜಾ ಸರ್ವಸುಂದರೀ ।
ತದಾ ಸರ್ವೇ ಸುರೇಂದ್ರಾಶ್ಚ ಋಷಯೋ ಮುನಯಸ್ತ್ರದಾ ॥ ೧೮ ॥

ಸಕಾಮಾಶ್ಚ ಭವಿಷ್ಯಂತಿ ನ ಕ್ಷಮಾಶ್ಚ ಪರೇ ಪಥಿ ।
ಜೀವಯಿಷ್ಯತಿ ಸಾ ದುರ್ಗಾ ಪಾಣಿಗ್ರಹಣತಃ ಸ್ಮರಂ ॥ ೧೯ ॥

ಮದನೋ ಹಿ ಮಯಾ ದಗ್ಧಃ ಸರ್ವೇಷಾಂ ಕಾರ್ಯಸಿದ್ಧಯೇ ।
ಬ್ರಹ್ಮಣೋ ವಚನಾದ್ವಿಷ್ಣೋ ನಾತ್ರ ಕಾರ್ಯಾ ವಿಚಾರಣಾ ॥ ೨೦ ॥

ಏವಂ ವಿಮೃಶ್ಯ ಮನಸಾ ಕಾರ್ಯಾಕಾರ್ಯವ್ಯವಸ್ಥಿತೌ ।
ಸುಧೀಃ ಸರ್ವೈಶ್ಚ ದೇವೇಂದ್ರ ಹಠಂ ನೋ ಕರ್ತುಮರ್ಹಸಿ ॥ ೨೧ ॥

ದಗ್ಧೇ ಕಾಮೇ ಮಯಾ ವಿಷ್ಣೋ ಸುರಕಾರ್ಯಂ ಮಹತ್ಕೃತಂ ।
ಸರ್ವೇ ತಿಷ್ಠಂತು ನಿಷ್ಕಾಮಾ ಮಯಾ ಸಹ ಸುನಿಶ್ಚಿತಂ ॥ ೨೨ ॥

---

೧೮. ಶಿವನು ಹೇಳಿದನು:—ಎಲೈ ದೇವತೆಗಳಿರಾ, ಯಾವಾಗ ನಾನು ಮಹಾಸುಂದರಿಯಾದ ಆ ಗಿರಿಜೆಯನ್ನು ಮದುವೆಯಾಗುವೆನೋ ಆ ಮುಂದೆ ನಿಮ್ಮೆಲ್ಲರಿಗೂ ಕ್ಷೇಮವಾಗುವುದು. ನಿಮ್ಮಿಷ್ಟವು ಪೂರ್ತಿಯಾಗುವುದು. ನಿಮ್ಮ ಶತ್ರುಗಳು ನಿಮ್ಮನ್ನು ಏನೂ ಮಾಡಲಾರರು.

೧೯-೨೦. ಮದುವೆಯಾದಮೇಲೆ ನಾನು ಭಸ್ಮಮಾಡಿದ ಮದನನನ್ನು ಗಿರಿಜೆಯೇ ಎಲ್ಲರ ಕ್ಷೇಮಕ್ಕಾಗಿ ಬ್ರಹ್ಮನ ಮಾತಿನಂತೆ ಬದುಕಿಸುವಳು. ಇದರಲ್ಲಿ ಸಂಶಯವಿಲ್ಲ.

೨೧. ಹೀಗೆ ನಡೆಯಲಿರುವುದು. ಇದರಲ್ಲಿ ಮಾಡಬೇಕಾದುದು ಯಾವುದು? ಬಿಡಬೇಕಾದುದು ಯಾವುದು? ಎಂದು ವಿಮರ್ಶೆಮಾಡಬೇಕು. ಎಲೈ ದೇವೇಂದ್ರ, ಸುಮ್ಮನೇ ಹಠವನ್ನು ಮಾಡಲಾಗದು.

೨೨. ಎಲೈ ಹರಿ, ನಾನು ಮನ್ಮಥನನ್ನು ದಹನಮಾಡಿದುದರಿಂದ ದೇವತೆಗಳಿಗೆ ಮಹೋಪಕಾರವಾಯಿತು. ಈಗ ನೀವು ಆ ಕಾಮನ ಬಾಧೆಯಿಲ್ಲದೆ ನನ್ನಂತೆ ಚಿಂತೆಯಿಲ್ಲದವರಾಗಿರುವಿರಿ.

ಯಥಾಹಂ ಚ ಸುರಾಸ್ಸರ್ವೇ ತಥಾ ಯೂಯಮಯತ್ನತಃ ।
ತಪಃ ಪರಮಸಂಯುಕ್ತಾಃ ಕರಿಷ್ಯಧ್ವಂ ಸುದುಷ್ಕರಂ ॥ ೨೩ ॥

ಯೂಯಂ ಸಮಾಧಿನಾ ತೇನ ಮದನೇನ ವಿನಾ ಸುರಾಃ ।
ಪರಮಾನಂದಸಂಯುಕ್ತಾ ನಿರ್ವಿಕಾರಾ ಭವಂತು ವೈ ॥ ೨೪ ॥

ಪುರಾವೃತ್ತಂ ಸ್ಮರಕೃತಂ ವಿಸ್ಮೃತಂ ಯದ್ವಿಧೇ ಹರೇ ।
ಮಹೇಂದ್ರ ಮುನಯೋ ದೇವಾ ಯತ್ತತ್ಸರ್ವಂ ವಿಮೃಶ್ಯತಾಂ ॥ ೨೫ ॥

ಮಹಾಧನುರ್ಧರೇಣೈವ ಮದನೇನ ಹಠಾತ್ಸುರಾಃ ।
ಸರ್ವೇಷಾಂ ಧ್ಯಾನವಿಧ್ವಂಸಃ ಕೃತಸ್ತೇನ ಪುರಾ ಸುರಾಃ ॥ ೨೬ ॥

ಕಾಮೋ ಹಿ ನರಕಾಯೈವ ತಸ್ಮಾತ್ಕ್ರೋಧೋಽಭಿಜಾಯತೇ ।
ಕ್ರೋಧಾದ್ಭವತಿ ಸಮ್ಮೋಹೋ ಮೋಹಾಚ್ಚ ಭ್ರಂಶತೇ ತಪಃ ॥ ೨೭ ॥

---

೨೩. ಎಲೈ ದೇವತೆಗಳೇ, ಈಗ ನೀವೂ ಸಹ ನನ್ನಂತೆ ಜಿತೇಂದ್ರಿಯರಾಗಿ ಮಹಾತಪಸ್ಸನ್ನು ಅನಾಯಾಸವಾಗಿ ಆಚರಿಸಿ.

೨೪. ಆ ಮನ್ಮಥನ ಬಾಧೆಯಿಲ್ಲದುದರಿಂದ ನೀವು ಈಗ ಯಾವ ವಿಕಾರವೂ ಇಲ್ಲದೇ ಸಮಾಧಿಯಲ್ಲಿ ಕುಳಿತು ಶ್ರೇಷ್ಠವಾದ ಆತ್ಮಾನಂದವನ್ನು ಅನುಭವಿಸ ಬಹುದು.

೨೫. ಎಲೈ ಹರಿ, ಬ್ರಹ್ಮ, ದೇವೇಂಧ್ರ, ಮತ್ತು ದೇವಮುನಿಗಳೇ, ಮನ್ಮಥನು ನಿಮಗೆ ಹಿಂದೆ ತುಂಬಾ ತೊಂದರೆಯನ್ನುಂಟುಮಾಡಿರುವನು. ಅದನ್ನು ಮರೆತಿರು ವಿರಿ. ಈಗ ಅದನ್ನು ಪುನಃ ವಿಮರ್ಶೆಮಾಡಿದರೆ ನಿಮಗೇ ತಿಳಿಯುವುದು.

೨೬. ಮಹಾಧನುರ್ಧಾರಿಯಾದ ಮನ್ಮಥನು ಬಲಾತ್ಕಾರದಿಂದ ನಿಮ್ಮೆಲ್ಲರ ಧ್ಯಾನವನ್ನೂ ಭಂಗಗೊಳಿಸಿರುವನು.

೨೭. ಕಾಮೇಚ್ಛೆಯು ಕೆಟ್ಟದು. ಅದರಿಂದ ನರಕವು ಲಭಿಸುವುದು. ಆ ಕಾಮವು ಪೂರ್ತಿಯಾಗದಿದ್ದರೆ ಅದರಿಂದ ಕ್ರೋಧವುಂಟಾಗುವುದು. ಕ್ರೋಧದಿಂದ ಮೋಹವುತ್ಪನ್ನವಾಗುವುದು. ಮೋಹದಿಂದ ತಪಸ್ಸು ಹಾಳಾಗುವುದು.

ಕಾಮಕ್ರೋಧೌ ಪರಿತ್ಯಾಜ್ಯೌ ಭವದ್ಭಿಃ ಸುರಸತ್ತಮೈಃ ।
ಸರ್ವೈರೇವ ಚ ಮಂತವ್ಯಂ ಮದ್ವಾಕ್ಯಂ ನಾನ್ಯಥಾ ಕ್ವಚಿತ್ ॥ ೨೮ ॥

॥ ಬ್ರಹ್ಮೋವಾಚ ॥

ಏವಂ ವಿಶ್ರಾವ್ಯ ಭಗವಾರ್ನ್ ಮಹಾದೇವೋ ವೃಷಧ್ವಜಃ ।
ಸುರಾರ್ನ್ ಪ್ರವಾಚಯಾಮಾಸ ವಿಧಿವಿಷ್ಣೂ ತಥಾ ಮುನೀರ್ನ್ ॥ ೨೯ ॥

ತೂಷ್ಣೀಂಭೂತೋಽಭವಚ್ಛಂಭುರ್ಧ್ಯಾನಮಾಶ್ರಿತ್ಯ ವೈ ಪುನಃ ।
ಆಸ್ತೇ ಪುರಾ ಸ ಯಃ ಸ್ಥಾಣುರ್ಗಣೈಶ್ಚ ಪರಿವಾರಿತಃ ॥ ೩೦ ॥

ಸ್ವಾತ್ಮಾನಮಾತ್ಮನಾ ಶಂಭುರಾತ್ಮನ್ಯೇವ ವ್ಯಚಿಂತಯತ್ ।
ನಿರಂಜನಂ ನಿರಾಭಾಸಂ ನಿರ್ವಿಕಾರಂ ನಿರಾಮಯಂ ॥ ೩೧ ॥

ಪರಾತ್ಪರತರಂ ನಿತ್ಯಂ ನಿರ್ಮಮಂ ನಿರವಗ್ರಹಂ ।
ಶಬ್ದಾತೀತಂ ನಿರ್ಗುಣಂ ಚ ಜ್ಞಾನಗಮ್ಯಂ ಪರಾತ್ಪರಂ ॥ ೩೨ ॥

---

೨೮. ಆದುದರಿಂದ ಕಾಮಕ್ರೋಧಗಳನ್ನು ನೀವೆಲ್ಲರೂ ಬಿಡಬೇಕು. ನನ್ನ ಮಾತು ಹಿತಕರವಾದುದು, ಸತ್ಯವಾದುದು, ಎಂದನು.

೨೯. ಬ್ರಹ್ಮನು ಹೇಳಿದನು:—ಹೀಗೆ ಭಗವಂತನೂ ಧರ್ಮಮೂರ್ತಿಯೂ ಆದ ಮಹಾದೇವನು ದೇವತೆಗಳಿಗೆ ಉಪದೇಶಿಸಿ, ಹರಿ, ಬ್ರಹ್ಮ, ಮುನಿಗಳು ಮತ್ತು ದೇವತೆಗಳು ಇವರೆಲ್ಲರಿಗೂ ಮನದಟ್ಟಾಗುವಂತೆ ಮಾಡಿದನು.

೩೦. ಹೀಗೆ ಹೇಳಿ ಶಂಭುವು ಧ್ಯಾನಮಾಡುತ್ತಾ ತನ್ನ ಆತ್ಮಸ್ವರೂಪವನ್ನು ಆತ್ಮನಲ್ಲಿಯೇ ನೋಡುತ್ತಾ ಚಿಂತಿಸುತ್ತಿದ್ದನು. ಗಣಗಳೆಲ್ಲವೂ ಮೊದಲಿನಂತೆ ಅವನ ಸುತ್ತಲೂ ಸೇರದಿದ್ದುವು.

೩೧-೩೨. ಜಗತ್ಕರ್ತೃವಾದ ಆ ಶಿವನು ಪರಿಶುದ್ಧನೂ, ಸಾಮಾನ್ಯ ತೇಜಸ್ಸುಗಳಿಂದ ಪ್ರಕಾಶಿಸಲ್ಪಡದಿರುವ ಜ್ಯೋತಿರ್ಮಯನೂ, ವಿಕಾರಗಳಿಲ್ಲದುದೂ, ಸುಖಸ್ವರೂಪನೂ, ಸರ್ವೋತ್ಕೃಷ್ಟನೂ, ಅಹಂಕಾರಸಂಬಂಧವಿಲ್ಲದುದೂ, ಯಾವ ತಡೆಯಿಲ್ಲದುದೂ, ಶಬ್ದಗಳಿಗೆ ಸಿಲುಕದುದೂ, ಗುಣಗಳಿಲ್ಲದುದೂ, ಜ್ಞಾನದಿಂದ ಮಾತ್ರ

ಏವಂ ಸ್ವರೂಪಂ ಪರಮಂ ಚಿಂತಯರ್ಙ್ಧ್ಯಾನಮಾಸ್ಥಿತಃ ।
ಪರಮಾನಂದಸಮ್ಮಗ್ನೋ ಬಭೂವ ಬಹುಸೂತಿಕೃತ್ ॥ ೩೩ ॥

ಧ್ಯಾನಸ್ಥಿತಂ ಚ ಸರ್ವೇಶಂ ದೃಷ್ಟ್ವಾ ಸರ್ವೇ ದಿವೌಕಸಃ ।
ಹರಿಶಕ್ರಾದಯಸ್ಸರ್ವೇ ನಂದಿನಂ ಪ್ರೋಚುರಾನತಾಃ ॥ ೩೪ ॥

॥ ದೇವಾ ಊಚುಃ ॥

ಕಿಂ ವಯಂ ಕರವಾಮಾದ್ಯ ವಿರಕ್ತೋ ಧ್ಯಾನಮಾಸ್ಥಿತಃ ।
ಶಂಭುಸ್ತ್ವಂ ಶಂಕರಸಖಸ್ಸರ್ವಜ್ಞಃ ಶುಚಿಸೇವಕಃ ॥ ೩೫ ॥

ಕೇನೋಪಾಯೇನ ಗಿರಿಶಃ ಪ್ರಸನ್ನಸ್ಸ್ಯಾದ್ಗಣಾಧಿಪ ।
ತದುಪಾಯಂ ಸಮಾಚಕ್ಷ್ವ ವಯಂ ತ್ವಚ್ಛರಣಂ ಗತಾಃ ॥ ೩೬ ॥

॥ ಬ್ರಹ್ಮೋವಾಚ ॥

ಇತಿ ವಿಜ್ಞಾಪಿತೋ ದೇವೈರ್ಮುನೇ ಹರ್ಯಾದಿಭಿಸ್ತದಾ ।
ಪ್ರತ್ಯುವಾಚ ಸುರಾಂಸ್ತಾನ್ ಸ ನಂದೀ ಶಂಭುಪ್ರಿಯೋ ಗಣಃ ॥ ೩೭ ॥

---

ಪಡೆಯಬಲ್ಲದುದೂ ಆದಂತಹ ಪರಮಾತ್ಮವಸ್ತುವನ್ನು ಚಿಂತಿಸುತ್ತಾ ಆತ್ಮಾನಂದವನ್ನನುಭವಿಸತೊಡಗಿದನು.

೩೪. ಹೀಗೆ ಪರಮೇಶ್ವರನು ಧ್ಯಾನಮಗ್ನನಾದುದನ್ನು ನೋಡಿ ಹರಿ, ಇಂದ್ರ ಮೊದಲಾದ ದೇವತೆಗಳೆಲ್ಲರೂ ವಿನಯದಿಂದ ನಂದಿಯನ್ನು ಕುರಿತು ಹೀಗೆ ಹೇಳಿದರು.

೩೫. ದೇವತೆಗಳು ಹೇಳಿದರು:—ಎಲೈ ನಂದಿ, ಈಗ ನಾವೇನು ಮಾಡಬೇಕು? ಶಂಕರನು ವೈರಾಗ್ಯದಿಂದ ಧ್ಯಾನದಲ್ಲಿ ಕುಳಿತಿರುವನು, ನೀನು ಶಂಕರನ ಸ್ನೇಹಿತನು. ಎಲ್ಲವನ್ನೂ ಬಲ್ಲವನು. ಶಂಕರನ ಪವಿತ್ರಸೇವಕನು.

೩೬. ಓ ಪ್ರಮಥಶ್ರೇಷ್ಠ, ಶಂಕರನು ಯಾವ ಉಪಾಯದಿಂದ ಪ್ರಸನ್ನನಾಗುವನು? ಅದನ್ನು ಹೇಳು. ನಾವು ನಿನ್ನ ಮರೆಹೊಕ್ಕಿರುವೆವು ಎಂದರು.

೩೭-೩೮. ಬ್ರಹ್ಮನು ಹೇಳಿದನು:—ಹೀಗೆ ದೇವತೆಗಳು ವಿಜ್ಞಾಪಿಸಲು ಶಂಕರಪ್ರಿಯನಾದ ನಂದಿಯು ಹರಿಯೇ ಮೊದಲಾದ ಆ ದೇವತೆಗಳನ್ನು ಕುರಿತು

॥ ನಂದೀಶ್ವರ ಉವಾಚ ॥

ಹೇ ಹರೇ ಹೇ ವಿಧೇ ಶಕ್ರ ನಿರ್ಜರಾ ಮುನಯಸ್ತಥಾ ।
ಶೃಣುಧ್ವಂ ವಚನಂ ಮೇ ಹಿ ಶಿವಸಂತೋಷಕಾರಕಂ ॥ ೩೮ ॥

ಯದಿ ವೋ ಹಠ ಏವಾದ್ಯ ಶಿವದಾರಪರಿಗ್ರಹೇ ।
ಅತಿದೀನತಯಾ ಸರ್ವೇ ನುತಿಂ ಕುರುತ ಸಾದರಾಃ ॥ ೩೯ ॥

ಭಕ್ತೇರ್ವಶ್ಯೋ ಮಹಾದೇವೋ ನ ಸಾಧಾರಣತಸ್ಸುರಾಃ ।
ಅಕಾರ್ಯಮಪಿ ಸದ್ಭಕ್ತ್ಯಾ ಕರೋತಿ ಪರಮೇಶ್ವರಃ ॥ ೪೦ ॥

ಏವಂ ಕುರುತ ಸರ್ವೇ ಹಿ ವಿಧಿವಿಷ್ಣುಮುಖಾಸ್ಸುರಾಃ ।
ಯಥಾಗತೇನ ಮಾರ್ಗೇಣಾಸ್ಯಥಾ ಗಚ್ಛತ ಮಾ ಚಿರಂ ॥ ೪೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಮುನೇ ವಿಷ್ಣ್ವಾದಯಸ್ಸುರಾಃ ।
ತಥೇತಿ ಮತ್ವಾ ಸುಪ್ರೀತ್ಯಾ ಶಂಕರಂ ತುಷ್ಟುವುರ್ಹಿ ತಂ ॥ ೪೨ ॥

---

ಎಲೈ ಹರಿ, ಬ್ರಹ್ಮ, ಇಂದ್ರನೇ ಮೊದಲಾದ ದೇವತೆಗಳೇ ಮತ್ತು ಮುನಿಗಳೇ, ಶಿವನಿಗೆ ಸಂತೋಷಕರವಾದ ಮಾತನ್ನು ಹೇಳುವೆನು ಕೇಳಿರಿ.

೩೯. ಶಿವನು ಮದುವೆಯಾಗಲೇಬೇಕೆಂಬ ಹಠವನ್ನೇ ನೀವು ಕೈಗೊಳ್ಳುವಿರಾದರೆ, ಭಕ್ತಿಯಿಂದಲೂ, ದೀನತೆಯಿಂದಲೂ ಶಿವನನ್ನು ಚನ್ನಾಗಿ ಸ್ತುತಿಸಿರಿ.

೪೦. ಮಹಾದೇವನು ಅಸಾಧಾರಣವಾದ ಭಕ್ತಿಗೆ ವಶನಾಗುವನು, ಸಾಮಾನ್ಯ ಭಕ್ತಿಗೆ ಅವನು ವಶನಾಗನು. ಸದ್ಭಕ್ತಿಯಿಂದ ಅವನು ತನಗಿಷ್ಟವಲ್ಲದುದನ್ನೂ ಸಹ ಮಾಡುವನು.

೪೧. ಆದುದರಿಂದ ಎಲೈ ಹರಿಬ್ರಹ್ಮಾದಿಗಳೇ, ನಾನು ಹೇಳಿದಂತೆ ಮಾಡಿರಿ. ಅದು ಸಾಧ್ಯವಿಲ್ಲದಿದ್ದರೆ ಬಂದಂತೆ ಹಿಂತಿರುಗಿ ನಡೆಯಿರಿ ಎಂದನು.

೪೨. ಬ್ರಹ್ಮನು ಹೇಳಿದನು :—ಹೀಗೆ ನಂದಿಯ ಮಾತನ್ನು ಕೇಳಿ ಹರಿಯೇ ಮೊದಲಾದ ದೇವತೆಗಳು ಹಾಗೆಯೇ ಆಗಲೆಂದು ಅಂಗೀಕರಿಸಿ, ಮಹಾಭಕ್ತಿಯಿಂದ ಶಿವನನ್ನು ಸ್ತುತಿಸಿದರು.

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಸಮುದ್ಧರ ಮಹಾಕ್ಲೇಶಾತ್ ತ್ರಾಹಿ ನಃ ಶರಣಾಗತಾನ್ ॥ ೪೩ ॥

॥ ಬ್ರಹ್ಮೋವಾಚ ॥

ಇತ್ಯೇವಂ ಬಹುದೀನೋಕ್ತ್ಯಾ ತುಷ್ಟುವುಶ್ಶಂಕರಂ ಸುರಾಃ ।
ರುರುದುಸ್ಸುಸ್ವರಂ ಸರ್ವೇ ಪ್ರೇಮವ್ಯಾಕುಲಮಾನಸಾಃ ॥ ೪೪ ॥

ಹರಿರ್ಮಯಾ ಸುದೀನೋಕ್ತ್ಯಾ ಸುವಿಜ್ಞಪ್ತಂ ಚಕಾರ ಹ ।
ಸಂಸ್ಮರನ್ ಮನಸಾ ಶಂಭುಂ ಭಕ್ತ್ಯಾ ಪರಮಯಾನ್ವಿತಃ ॥ ೪೫ ॥

॥ ಬ್ರಹ್ಮೋವಾಚ ॥

ಸುರೈರೇವಂ ಸ್ತುತಶ್ಶಂಭುರ್ಹರಿಣಾ ಚ ಮಯಾ ಭೃಶಂ ।
ಭಕ್ತಿವಾತ್ಸಲ್ಯತೋ ಧ್ಯಾನಾದ್ವಿರತೋಽಭೂನ್ಮಹೇಶ್ವರಃ ॥ ೪೬ ॥

ಉವಾಚ ಸುಪ್ರಸನ್ನಾತ್ಮಾ ಹರ್ಯಾದೀನ್ ಹರ್ಷಯನ್ ಹರಃ ।
ವಿಲೋಕ್ಯ ಕರುಣಾದೃಷ್ಟ್ಯಾ ಶಂಕರೋ ಭಕ್ತವತ್ಸಲಃ ॥ ೪೭ ॥

---

೪೩. ದೇವದೇವನೂ ಕರುಣಾಸಮುದ್ರನೂ ಆದ ಓ ಮಹಾದೇವ, ಓ ಪರಮೇಶ್ವರ, ನಾವು ಮಹಾದುಃಖಕ್ಕೆ ಸಿಲುಕಿ ನಿನ್ನ ಶರಣು ಬಂದಿರುವೆವು. ಇಂತಹ ನಮ್ಮನ್ನು ಉದ್ಧರಿಸುವವನಾಗು ಎಂದು ಪರಿಪರಿಯಾಗಿ ಸ್ತೋತ್ರಮಾಡಿದರು.

೪೪. ಬ್ರಹ್ಮನು ಹೇಳಿದನು:—ಹೀಗೆ ದೇವತೆಗಳೆಲ್ಲರೂ ಬಹು ದೀನವಾದ ಮಾತಿನಿಂದ ಭಕ್ತಿಯುಕ್ತರಾಗಿ ಇಂಪಾದ ಸ್ವರದಿಂದ ಸ್ತುತಿಸಿದರು.

೪೫. ಹರಿಯೂ ನಾನೂ ಸಹ ಮನಸ್ಸಿನಲ್ಲಿ ಶಿವನನ್ನು ಸ್ಮರಿಸುತ್ತಾ ದೀನವಾದ ಮಾತಿನಿಂದ ಭಕ್ತಿಪೂರ್ವಕವಾಗಿ ಶಂಕರನಿಗೆ ವಿಜ್ಞಾಪಿಸಿಕೊಂಡೆವು.

೪೬. ಹರಿ ನಾನು ಮತ್ತು ದೇವತೆಗಳೆಲ್ಲರೂ ಹೀಗೆ ಸ್ತುತಿಸಲು ಭಕ್ತವತ್ಸಲನಾದ ಪರಮೇಶ್ವರನು ಧ್ಯಾನದಿಂದ ಬಹಿರ್ಮುಖನಾದನು.

೪೭. ಬಳಿಕ ಪ್ರಸನ್ನನಾಗಿ, ಕೃಪಾದೃಷ್ಟಿಯಿಂದ ಹರಿ ಮೊದಲಾದವರನ್ನು ನೋಡಿ ಅವರನ್ನು ಹರ್ಷಗೊಳಿಸುತ್ತಾ ಇಂತೆಂದನು.

॥ ಶಂಕರ ಉವಾಚ ॥

ಹೇ ಹರೇ ಹೇ ವಿಧೇ ದೇವಾಶ್ಶಕ್ರಾದ್ಯಾ ಯುಗಪತ್ಸಮೇ ।
ಕಿಮರ್ಥಮಾಗತಾ ಯೂಯಂ ಸತ್ಯಂ ಬ್ರೂತ ಮಮಾಗ್ರತಃ ॥ ೪೮ ॥

॥ ಹರಿರುವಾಚ ॥

ಸರ್ವಜ್ಞಸ್ತ್ವಂ ಮಹೇಶಾನ ತ್ವಂತರ್ಯಾಮ್ಯಖಿಲೇಶ್ವರಃ ।
ಕಿಂ ನ ಜಾನಾಸಿ ಚಿತ್ತಸ್ಥಂ ತಥಾ ವಚ್ಮ್ಯಪಿ ಶಾಸನಾತ್ ॥ ೪೯ ॥

ತಾರಕಾಸುರತೋ ದುಃಖಂ ಸಂಭೂತಂ ವಿವಿಧಂ ಮೃಡ ।
ಸರ್ವೇಷಾಂ ನಸ್ತದರ್ಥಂ ಹಿ ಪ್ರಸನ್ನೋಽಕಾರಿ ವೈ ಸುರೈಃ ॥ ೫೦ ॥

ಶಿವಾ ಸಾ ಜನಿತಾ ಶೈಲಾತ್ತ್ವದರ್ಥಂ ಹಿ ಹಿಮಾಲಯಾತ್ ।
ತಸ್ಯಾಂ ತ್ವದುದ್ಭವಾತ್ಪುತ್ರಾತ್ತಸ್ಯ ಮೃತ್ಯುರ್ನ ಚಾನ್ಯಥಾ ॥ ೫೧ ॥

---

೪೮. ಶಂಕರನು ಹೇಳಿದನು:—ಎಲೈ ಹರಿ, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳಿರಾ, ನೀವು ಎಲ್ಲರೂ ಸೇರಿ ಬಂದುದು ಏಕೆ? ಸತ್ಯವಾದುದನ್ನು ಹೇಳಿರಿ, ಎನ್ನಲು,

೪೯. ಹರಿಯು ಹೇಳಿದನು:—ಓ ಮಹೇಶ್ವರ, ನೀನು ಸರ್ವಜ್ಞನು. ಅಣುರೇಣುತೃಣಕಾಷ್ಠಗಳಲ್ಲಿಯೂ ನೀನು ವ್ಯಾಪಿಸಿರುವೆ. ಇಂತಹ ನಿನಗೆ ನಮ್ಮ ಮನೋಭಿಪ್ರಾಯವು ತಿಳಿಯದೇ? ಆದರೂ ನಿನ್ನಪ್ಪಣೆಯಂತೆ ನಿವೇದಿಸುವೆನು.

೫೦. ತಾರಕಾಸುರನಿಂದ ನಮಗೆ ಅನೇಕ ವಿಧವಾಗಿ ದುಃಖವುಂಟಾಗಿರುವುದು. ಓ ಶಿವ, ಅದಕ್ಕಾಗಿ ನಾವೆಲ್ಲರೂ ನಿನ್ನನ್ನು ಸ್ತುತಿಸಿ ಪ್ರಸನ್ನಗೊಳಿಸಿರುವೆವು.

೫೧. ನಿನಗಾಗಿಯೇ ದೇವಿಯು ಹಿಮಾಲಯನಿಂದ ಜನಿಸಿರುವಳು. ಅವಳಲ್ಲಿ ನಿನ್ನಿಂದ ಜನಿಸಿದ ಕುಮಾರನಿಂದಲೇ ಆ ತಾರಕಾಸುರನಿಗೆ ಮೃತ್ಯುವು. ಇಲ್ಲದಿದ್ದರೆ, ಇಲ್ಲ.

ಇತಿ ದತ್ತೋ ಬ್ರಹ್ಮಣಾ ಹಿ ತಸ್ಮೈ ದೈತ್ಯಾಯ ಯದ್ವರಃ ।
ತದನ್ಯಸ್ಮಾದಮೃತ್ಯುಸ್ಸ ಬಾಧತೇ ನಿಖಿಲಂ ಜಗತ್ ॥ ೫೨ ॥

ನಾರದಸ್ಯ ನಿದೇಶಾತ್ಸಾ ಕರೋತಿ ಕಠಿಣಂ ತಪಃ ।
ತತ್ತೇಜಸಾಖಿಲಂ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ॥ ೫೩ ॥

ವರಂ ದಾತುಂ ಶಿವಾಯೈ ಹಿ ಗಚ್ಛ ತ್ವಂ ಪರಮೇಶ್ವರ ।
ದೇವದುಃಖಂ ಜಹಿ ಸ್ವಾಮಿನ್ನಸ್ಮಾಕಂ ಸುಖಮಾವಹ ॥ ೫೪ ॥

ದೇವಾನಾಂ ಮೇ ಮಹೋತ್ಸಾಹೋ ಹೃದಯೇ ಚಾಸ್ತಿ ಶಂಕರ ।
ವಿವಾಹಂ ತವ ಸಂದ್ರಷ್ಟುಂ ತತ್ತ್ವಂ ಕುರು ಯಥೋಚಿತಂ ॥ ೫೫ ॥

ರತ್ಯೈ ಯದ್ಭವತಾ ದತ್ತೋ ವರಸ್ತಸ್ಯ ಪರಾತ್ಪರ ।
ಪ್ರಾಪ್ತೋಽವಸರ ಏವಾಽಽಶು ಸಫಲಂ ಸ್ವಪಣಂ ಕುರು ॥ ೫೬ ॥

---

೫೨. ಹೀಗೆ ಬ್ರಹ್ಮನು ಆ ದೈತ್ಯನಿಗೆ ವರವನ್ನು ಕೊಟ್ಟಿರುವನು. ಮಿಕ್ಕವರಿಂದ ಆ ದುಷ್ಟನಿಗೆ ಮರಣವಿಲ್ಲ. ಆದಕಾರಣ ಅವನು ಜಗತ್ತೆಲ್ಲವನ್ನೂ ಬಾಧಿಸುತ್ತಲಿರುವನು.

೫೩. ನಾರದನ ಉಪದೇಶದಂತೆ ಆ ಗಿರಿಜೆಯು ಘೋರತಪಸ್ಸನ್ನಾಚರಿಸುತ್ತಲಿರುವಳು. ಅವಳ ತಪೋಜ್ವಾಲೆಯಿಂದ ಜಗತ್ತೆಲ್ಲವೂ ದಹಿಸಿಹೋಗುತ್ತಿರುವುದು.

೫೪. ಓ ಪರಮೇಶ್ವರ, ಆ ಗಿರಿಜೆಗೆ ವರವನ್ನು ಕೊಡಲು ಅಲ್ಲಿಗೆ ತೆರಳಿ ನಮ್ಮ ದುಃಖವನ್ನು ಹೋಗಲಾಡಿಸಿ, ಸುಖವನ್ನುಂಟುಮಾಡು.

೫೫. ದೇವತೆಗಳಾದ ನಮಗೆ ನಿನ್ನ ವಿವಾಹಮಹೋತ್ಸವವನ್ನು ನೋಡಬೇಕೆಂದು ತುಂಬಾ ಆಶೆಯಿರುವುದು. ಅದನ್ನು ನೀನು ಸಫಲಗೊಳಿಸು.

೫೬. ಓ ಪರಮಾತ್ಮ, ರತೀದೇವಿಗೆ ನೀನು ಕೊಟ್ಟ ವರವು ನೆರವೇರುವ ಕಾಲವು ಈಗ ಬಂದಿದೆ. ರತಿಗೆ ಕೊಟ್ಟ ನಿನ್ನ ಪ್ರತಿಜ್ಞೆಯನ್ನು ಸಫಲವನ್ನಾಗಿ ಮಾಡು ಎಂದರು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತಂ ಪ್ರಣಮ್ಯೈವ ವಿಷ್ಣುರ್ದೇವಾ ಮಹರ್ಷಯಃ ।
ಸಂಸ್ತೂಯ ವಿವಿಧೈಸ್ತೋತ್ರೈಃ ಸಂತಸ್ಥುಃ ಪುರತೋಽಖಿಲಾಃ ॥ ೫೭ ॥

ಭಕ್ತಾಧೀನಃ ಶಂಕರೋಽಪಿ ಶ್ರುತ್ವಾ ದೇವವಚಸ್ತದಾ ।
ವಿಹಸ್ಯ ಪ್ರತ್ಯುವಾಚಾಶು ವೇದಸೀಮ್ನೋಽಭಿರಕ್ಷಕಃ ॥ ೫೮ ॥

॥ ಶಂಕರ ಉವಾಚ ॥

ಹೇ ಹರೇ ಹೇ ವಿಧೇ ದೇವಾಃ ಶೃಣುತಾದರತೋಽಖಿಲಾಃ ।
ಯಥೋಚಿತಮಹಂ ವಚ್ಮಿ ಸವಿಶೇಷಂ ವಿವೇಕತಃ ॥ ೫೯ ॥

ನೋಚಿತಂ ಹಿ ವಿಧಾನಂ ವೈ ವಿವಾಹಕರಣಂ ನೃಣಾಂ ।
ಮಹಾನಿಗಡಸಂಜ್ಞೋ ಹಿ ವಿವಾಹೋ ದೃಢಬಂಧನಃ ॥ ೬೦ ॥

ಕುಸಂಗಾ ಬಹವೋ ಲೋಕೇ ಸ್ತ್ರೀಸಂಗಸ್ತತ್ರ ಚಾಧಿಕಃ ।
ಉದ್ಧರೇತ್ಸಕಲೈರ್ಬಂಧೈರ್ನ ಸ್ತ್ರೀಸಂಗಾತ್ಪ್ರಮುಚ್ಯತೇ ॥ ೬೧ ॥

---

೫೭. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಶಿವನನ್ನು ನಮಿಸಿ, ಹರಿ ಮೊದಲಾದ ದೇವತೆಗಳು ಬಹುವಿಧವಾಗಿ ಸ್ತುತಿಸಿ ಅವನೆದುರಿಗೆ ನಮ್ರರಾಗಿ ನಿಂತಿದ್ದರು.

೫೮. ಭಕ್ತಪರಾಧೀನನೂ ವೇದಮರ್ಯಾದೆಯನ್ನು ರಕ್ಷಿಸುವವನೂ ಆದ ಆ ಶಂಕರನು ದೇವತೆಗಳ ಆ ಮಾತನ್ನು ಕೇಳಿ ಮಂದಹಾಸದಿಂದ ಮತ್ತಿಂತೆಂದನು.

೫೯. ಶಂಕರನು ಹೇಳಿದನು :—ಎಲೈ ವಿಷ್ಣು, ಎಲೈ ಬ್ರಹ್ಮ, ಮತ್ತು ದೇವತೆಗಳೇ, ನಾನು ವಿವೇಕವಾದುದೂ ಯೋಗ್ಯವಾದುದೂ ಆದ ಮಾತನ್ನು ಹೇಳುವೆನು. ಆದರದಿಂದ ಕೇಳಿರಿ.

೬೦. ಮನುಷ್ಯನು ವಿವಾಹವಾಗುವುದು ಒಳ್ಳೆಯದಲ್ಲ. ವಿವಾಹವು ಮನುಷ್ಯನ ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂತಹದು. ಮತ್ತು ಅದು ದುಃಖದಾಯಕವಾದ ಬಲವಾದ ಬಂಧನಸರಪಣಿಯು.

೬೧. ಲೋಕದಲ್ಲಿ ಅನೇಕ ಕೆಟ್ಟ ಸಂಬಂಧಗಳಿರುವುವು. ಅವುಗಳೆಲ್ಲೆಲ್ಲಾ ಸ್ತ್ರೀಸಂಬಂಧವು ತುಂಬಾ ಕೆಟ್ಟದು. ಮಿಕ್ಕಸಂಬಂಧಗಳಿಂದ ಬಿಡುಗಡೆ ಹೊಂದಬಹುದು. ಆದರೆ ಸ್ತ್ರೀಸಂಬಂಧದಿಂದ ಬಿಡುಗಡೆ ಹೊಂದುವುದು ಅಸಾಧ್ಯವು.

ಲೋಹದಾರಮಯೈಃ ಪಾಶೈರ್ದೃಢಂ ಬದ್ಧೋಽಪಿ ಮುಚ್ಯತೇ ।
ಸ್ತ್ರ್ಯಾದಿಪಾಶಸುಸಂಬದ್ಧೋ ಮುಚ್ಯತೇ ನ ಕದಾಚನ　　॥ ೬೨ ॥

ವರ್ಧಂತೇ ವಿಷಯಾಸ್ಸರ್ವೇ ಮಹಾಬಂಧನಕಾರಿಣಃ ।
ವಿಷಯಾಕ್ರಾಂತಮನಸಃ ಸ್ವಪ್ನೇ ಮೋಕ್ಷೋಽಪಿ ದುರ್ಲಭಃ　　॥ ೬೩ ॥

ಸುಖಮಿಚ್ಛತಿ ಚೇತ್ಪ್ರಾಜ್ಞೋ ವಿಧಿವದ್ವಿಷಯಾಂಸ್ತ್ಯಜೇತ್ ।
ವಿಷವದ್ವಿಷಯಾನಾಹುರ್ವಿಷಯೈಸ್ತೈರ್ನಿಹನ್ಯತೇ　　॥ ೬೪ ॥

ಜನೋ ವಿಷಯಿಣಾ ಸಾಕಂ ವಾರ್ತಾತಃ ಪತತಿ ಕ್ಷಣಾತ್ ।
ವಿಷಯಂ ಪ್ರಾಹುರಾಚಾರ್ಯಾಸ್ಸಿತಾಲಿಪ್ತೇಂದ್ರವಾರುಣೀಂ　　॥ ೬೫ ॥

ಯದ್ಯಪ್ಯೇವಂ ಹಿ ಜಾನಾಮಿ ಸರ್ವಂ ಜ್ಞಾನಂ ವಿಶೇಷತಃ ।
ತಥಾಪ್ಯಹಂ ಕರಿಷ್ಯಾಮಿ ಪ್ರಾರ್ಥನಾಂ ಸಫಲಾಂ ಚ ವಃ　　॥ ೬೬ ॥

---

೬೨. ಕಬ್ಬಿಣ ಮುಂತಾದ ಲೋಹಗಳಿಂದ ಮಾಡಿದ ಸರಪಣಿಗಳ ಬಂಧನವನ್ನು ಹೇಗಾದರೂ ಮಾಡಿ ಬಿಡಿಸಿಕೊಳ್ಳಬಹುದು. ಆದರೆ ಸ್ತ್ರೀಯೆಂಬ ಸರಪಣಿಯಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ.

೬೩. ಸ್ತ್ರೀಸಂಬಂಧದಿಂದ ಸಂಸಾರಬಂಧನವನ್ನುಂಟುಮಾಡುವ ಶಬ್ದ, ಸ್ಪರ್ಶ ಮೊದಲಾದ ವಿಷಯಗಳಲ್ಲಿ ಅಭಿಲಾಷವು ಹೆಚ್ಚಾಗುವುದು. ಆರೀತಿ ವಿಷಯಸುಖಗಳಲ್ಲೇ ನಿರತರಾದವರಿಗೆ ಸ್ವಪ್ನದಲ್ಲಿಯೂ ಮೋಕ್ಷವು ಸಿಗಲಾರದು.

೬೪. ಸುಖವು ಬೇಕೆಂದಿದ್ದರೆ ಕ್ರಮಕ್ರಮವಾಗಿ ವಿಷಯಗಳನ್ನು ಬಿಟ್ಟುಬಿಡಬೇಕು. “ವಿಷಯಗಳು ವಿಷದಂತೆ” ಎಂದು ತಿಳಿದವರು ಹೇಳುವರು. ಅಂತಹ ವಿಷಯಗಳನ್ನು ಸೇವಿಸುವವನು ವಿಷಕುಡಿದವನಂತೆ ಅಧೋಗತಿಗಿಳಿಯುವನು.

೬೫. ಕಾಮುಕನಾದ ಮನುಷ್ಯನೊಂದಿಗೆ ಮಾತನಾಡಿದವನೂ ಹಾಳಾಗುವನು. ವಿಷಯಗಳು ಸಕ್ಕರೆಯನ್ನು ಸೇರಿಸಿದ ಸಿಹಿ ಮದ್ಯದಂತೆ ಎಂದು ತಿಳಿದವರು ಹೇಳುವರು.

೬೬. ಇದೆಲ್ಲವನ್ನೂ ನಾನು ಚನ್ನಾಗಿ ತಿಳಿದಿರುವೆನು. ಎಲೈ ದೇವತೆಗಳೇ, ಆದರೂ ಈಗ ನಿಮ್ಮೆಲ್ಲರ ಪ್ರಾರ್ಥನೆಯನ್ನು ಸಫಲವಾಗಿ ಮಾಡುವೆನು.

ಭಕ್ತಾಧೀನೋಽಹಮೇವಾಸ್ಮಿ ತದ್ವಶಾತ್ಸರ್ವಕಾರ್ಯಕೃತ್ ।
ಅಯಥೋಚಿತಕರ್ತಾ ಹಿ ಪ್ರಸಿದ್ಧೋ ಭುವನತ್ರಯೇ ॥ ೬೭ ॥

ಕಾಮರೂಪಾಧಿಪಸ್ಯೈವ ಪಣಶ್ಚ ಸಫಲಃ ಕೃತಃ ।
ಸುದಕ್ಷಿಣಸ್ಯ ಭೂಪಸ್ಯ ಭೌಮಬಂಧಗತಸ್ಯ ಹಿ ॥ ೬೮ ॥

ಗೌತಮಕ್ಲೇಶಹರ್ತಾಹಂ ತ್ರ್ಯಂಬಕಾತ್ಮಾ ಸುಖಾವಹಃ ।
ತತ್ಕಷ್ಟಪ್ರದದುಷ್ಟಾನಾಂ ಶಾಪದಾಯೀ ವಿಶೇಷತಃ ॥ ೬೯ ॥

ವಿಷಂ ಪೀತಂ ಸುರಾರ್ಥಂ ಹಿ ಭಕ್ತವತ್ಸಲಭಾವಧೃಕ್ ।
ದೇವಕಷ್ಟಂ ಹೃತಂ ಯತ್ನಾತ್ಸರ್ವದೈವ ಮಯಾ ಸುರಾಃ ॥ ೭೦ ॥

ಭಕ್ತಾರ್ಥಮಸಹಂ ಕಷ್ಟಂ ಬಹುಶೋ ಬಹುಯತ್ನತಃ ।
ವಿಶ್ವಾನರಮುನೇರ್ದುಃಖಂ ಹೃತಂ ಗೃಹಪತಿರ್ಭವನ್ ॥ ೭೧ ॥

---

೬೭. ನಾನು ಭಕ್ತರಿಗೆ ಅಧೀನನು. ಆದಕಾರಣ ನಾನು ಭಕ್ತರಿಗಾಗಿ ನನಗಿಷ್ಟವಾಗದಂತಹ ಕಾರ್ಯವನ್ನೂ ಮಾಡುವೆನು. ಇದು ಜಗತ್ತಿನಲ್ಲಿ ಪ್ರಸಿದ್ಧವಾಗಿದೆ.

೬೮. ಕಾಮರೂಪದೇಶದ ರಾಜನಾದ ಸುದಕ್ಷಿಣಭೂಪತಿಯು ನರಕಾಸುರನ ಸೆರೆಗೆ ಸಿಕ್ಕಿದ್ದನು. ಅವನು ನನ್ನ ಭಕ್ತನು. ಆದಕಾರಣ ಅವನನ್ನು ಸೆರೆಯಿಂದ ಬಿಡಿಸಿದೆನು.

೬೯. ಮುಕ್ಕಣ್ಣನಾದ ನಾನು ಗೌತಮಮುನಿಯ ದುಃಖವನ್ನು ಹೋಗಲಾಡಿಸಿ ಸುಖವನ್ನುಂಟುಮಾಡಿದೆನು. ಅವನಿಗೆ ಕಷ್ಟವನ್ನುಂಟುಮಾಡಿದಂತಹ ದುಷ್ಟರಿಗೆ ಶಾಪವನ್ನು ಕೊಟ್ಟು ಶಿಕ್ಷಿಸಿದೆನು.

೭೦. ಭಕ್ತವತ್ಸಲನಾದ ನಾನು ದೇವತೆಗಳಿಗಾಗಿ ಸಮುದ್ರಮಥನಕಾಲದಲ್ಲಿ ವಿಷವನ್ನು ಕುಡಿದೆನು. ಮಿಕ್ಕ ಕಾಲಗಳಲ್ಲಿ ದೇವತೆಗಳಿಗೆ ಬಂದಂತಹ ಕಷ್ಟಗಳನ್ನೆಲ್ಲಾ ಯತ್ನದಿಂದ ಹೋಗಲಾಡಿಸಿರುವೆನು.

೭೧. ಭಕ್ತರಿಗಾಗಿ ಅನೇಕಸಾರಿ ಬಹುಯತ್ನದಿಂದ ದುಃಖವನ್ನು ಸಹಿಸಿದೆನು. ಗೃಹಸ್ಥನಾಗಿ " ವಿಶ್ವಾನರ " ನೆಂಬ ಮುನಿಯ ಕಷ್ಟವನ್ನು ಹೋಗಲಾಡಿಸಿದೆನು.

ಕಿಂ ಬಹೂಕ್ತೇನ ಚ ಹರೇ ವಿಧೇ ಸತ್ಯಂ ಬ್ರವೀಮ್ಯಹಂ ।
ಮತ್ಪಣೋಽಸ್ತೀತಿ ಯೂಯಂ ವೈ ಸರ್ವೇ ಜಾನೀಥ ತತ್ತ್ವತಃ ॥ ೭೨ ॥

ಯದಾ ಯದಾ ವಿಪತ್ತಿರ್ಹಿ ಭಕ್ತಾನಾಂ ಭವತಿ ಕ್ವಚಿತ್ ।
ತದಾ ತದಾ ಹರಾಮ್ಯಾಶು ತತ್ಕ್ಷಣಾತ್ಸರ್ವಶಸ್ಸದಾ ॥ ೭೩ ॥

ಜಾನೇಽಹಂ ತಾರುಕಾದ್ದುಃಖಂ ಸರ್ವೇಷಾಂ ವಸ್ಸಮುತ್ಥಿತಂ ।
ಅಸುರಾತ್ತದ್ಧರಿಷ್ಯಾಮಿ ಸತ್ಯಂ ಸತ್ಯಂ ವದಾಮ್ಯಹಂ ॥ ೭೪ ॥

ನಾಸ್ತಿ ಯದ್ಯಪಿ ಮೇ ಕಶ್ಚಿದ್ವಿವಾಹಕರಣೇ ರುಚಿಃ ।
ವಿವಾಹಯಿಷ್ಯೇ ಗಿರಿಜಾಂ ಪುತ್ರೋತ್ಪಾದನಹೇತವೇ ॥ ೭೫ ॥

ಗಚ್ಛತ ಸ್ವಗೃಹಾಣ್ಯೇವ ನಿರ್ಭಯಾಸ್ಸಕಲಾಸ್ಸುರಾಃ ।
ಕಾರ್ಯಂ ವಸ್ಸಾಧಯಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥ ೭೬ ॥

---

೭೨. ಎಲೈ ಹರಿಬ್ರಹ್ಮರೇ, ಹೆಚ್ಚು ಹೇಳಿ ಏನು ಪ್ರಯೋಜನ? ಒಟ್ಟಿನಲ್ಲಿ ನಿಮ್ಮ ದುಃಖವನ್ನು ಹೋಗಲಾಡಿಸಲು ಪ್ರತಿಜ್ಞೆಯನ್ನು ಮಾಡಿರುವೆನೆಂದು ತಿಳಿಯಿರಿ.

೭೩. ನನ್ನ ಭಕ್ತರಿಗೆ ವಿಪತ್ತುಗಳು ಯಾವಾಗ ಬಂದರೂ ಆಕೂಡಲೇ ಆ ವಿಪತ್ತುಗಳೆಲ್ಲವನ್ನೂ ಹೋಗಲಾಡಿಸುವೆನು.

೭೪. ನಿಮ್ಮೆಲ್ಲರಿಗೂ ತಾರಕಾಸುರನಿಂದ ದುಃಖವು ಬಂದಿರುವುದೆಂಬುದನ್ನು ನಾನು ತಿಳಿದಿರುವೆನು. ಆ ದುಃಖವನ್ನು ಹೋಗಲಾಡಿಸುವೆನು. ನಿಜವಾದುದನ್ನೇ ಹೇಳುವೆನು.

೭೫. ನನಗೆ ಮದುವೆಮಾಡಿಕೊಳ್ಳುವ ಇಷ್ಟವು ಇಲ್ಲವೇ ಇಲ್ಲ. ಆದರೂ ಕುಮಾರನನ್ನು ಉತ್ಪತ್ತಿಮಾಡಲು ಗಿರಿಜೆಯನ್ನು ಮದುವೆಯಾಗುವೆನು.

೭೬. ಎಲೈ ದೇವತೆಗಳೇ, ನಿಮ್ಮ ಮನೆಗಳಿಗೆ ಧೈರ್ಯದಿಂದ ನಡೆಯಿರಿ. ನಿಮ್ಮ ಕಾರ್ಯವನ್ನು ಸಾಧಿಸುವೆನು. ಈ ವಿಷಯದಲ್ಲಿ ಇನ್ನು ಚಿಂತೆಯನ್ನು ಮಾಡಬೇಡಿರಿ ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಮೌನಮಾಸ್ಥಾಯ ಸಮಾಧಿಸ್ಥೋಽಭವದ್ಧರಃ ।
ಸರ್ವೇ ವಿಷ್ಣ್ವಾದಯೋ ದೇವಾಃ ಸ್ವಧಾಮಾನಿ ಯಯುರ್ಮುನೇ ॥ ೭೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಚತುರ್ವಿಂಶೋಽಧ್ಯಾಯಃ



---

೭೭. ಬ್ರಹ್ಮನು ಹೇಳಿದನು:—ಎಲೈ ನಾರದಮುನಿ, ಹೀಗೆ ಹೇಳಿ ಹರನು ಮೌನವನ್ನು ತಾಳಿ ಸಮಾಧಿಯಲ್ಲಿ ಕುಳಿತನು. ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಪಂಚವಿಂಶೋಽಧ್ಯಾಯಃ

॥ ನಾರದ ಉವಾಚ ॥

ಗತೇಷು ತೇಷು ದೇವೇಷು ವಿಧಿವಿಷ್ಣ್ವಾದಿಕೇಷು ಚ ।
ಸರ್ವೇಷು ಮುನಿಷು ಪ್ರೀತ್ಯಾ ಕಿಂ ಬಭೂವ ತತಃ ಪರಂ ॥ ೧ ॥

ಕಿಂ ಕೃತಂ ಶಂಭುನಾ ತಾತ ವರಂ ದಾತುಂ ಸಮಾಗತಃ ।
ಕಿಯತ್ಕಾಲೇನ ಚ ಕಥಂ ತದ್ವದ ಪ್ರೀತಿಮಾವಹ ॥ ೨ ॥

॥ ಬ್ರಹ್ಮೋವಾಚ ॥

ಗತೇಷು ತೇಷು ದೇವೇಷು ಬ್ರಹ್ಮಾದಿಷು ನಿಜಾಶ್ರಮಂ
ತತ್ತಪಃ ಸುಪರೀಕ್ಷಾರ್ಥಂ ಸಮಾಧಿಸ್ಥೋಽಭವದ್ಭವಃ । ॥ ೩ ॥

---

### ಇಪ್ಪತ್ತೈದನೆಯ ಅಧ್ಯಾಯವು

೧. ನಾರದಮುನಿಯು ಪ್ರಶ್ನಿಸಿದನು :—ಹರಿ ಬ್ರಹ್ಮ ಮುಂತಾದ ದೇವತೆಗಳು ಮತ್ತು ಮುನಿಗಳು ತಮ್ಮ ತಮ್ಮ ಮನೆಗಳಿಗೆ ತೆರಳಲು ಮುಂದೇನಾಯಿತು?

೨. ಓ ಪಿತಾಮಹ, ಮುಂದೆ ಶಂಕರನು ಏನು ಮಾಡಿದನು? ಗಿರಿಜೆಗೆ ವರವನ್ನು ಕೊಡಲು ಅವನು ಯಾವಾಗ ಬಂದನು? ನನ್ನಮೇಲೆ ವಿಶ್ವಾಸವಿಟ್ಟು ಇದೆಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಸು ಎನ್ನಲು,

೩. ಬ್ರಹ್ಮನು ಹೇಳಿದನು :—ಎಲೈ ನಾರದ, ಬ್ರಹ್ಮ ಮೊದಲಾದ ದೇವತೆಗಳು ತಮ್ಮ ಸ್ಥಾನಗಳಿಗೆ ತೆರಳಲು, ಶಂಕರನು ಗಿರಿಜೆಯ ತಪಸ್ಸನ್ನು ಪರೀಕ್ಷೆ ಮಾಡಲೋಸ್ಕರ ಸಮಾಧಿಯಲ್ಲಿ ಕುಳಿತನು.

ಸ್ವಾತ್ಮಾನಮಾತ್ಮನಾ ಕೃತ್ವಾ ಸ್ವಾತ್ಮನ್ಯೇವ ವ್ಯಚಿಂತಯತ್ ।
ಪರಾತ್ಪರತರಂ ಸ್ವಸ್ಥಂ ನಿರ್ಮಾಯಂ ನಿರವಗ್ರಹಂ ॥ ೪ ॥

ತದ್ವಸ್ತುಭೂತೋ ಭಗವಾನೀಶ್ವರೋ ವೃಷಭಧ್ವಜಃ ।
ಅವಿಜ್ಞಾತಗತಿಸ್ಸೂತಿಸ್ಸ ಹರಃ ಪರಮೇಶ್ವರಃ ॥ ೫ ॥

॥ ಬ್ರಹ್ಮೋವಾಚ ॥

ಗಿರಿಜಾ ಹಿ ತದಾ ತಾತ ತತಾಪ ಪರಮಂ ತಪಃ ।
ತಪಸಾ ತೇನ ರುದ್ರೋಽಪಿ ಪರಂ ವಿಸ್ಮಯಮಾಗತಃ ॥ ೬ ॥

ಸಮಾಧೇಶ್ಚಲಿತಸ್ಸೋಽಭೂದ್ಭಕ್ತಾಧೀನೋಽಪಿ ನಾನ್ಯಥಾ ।
ವಸಿಷ್ಠಾದೀನ್ ಮುನೀನ್ ಸಪ್ತ ಸಸ್ಮಾರ ಸೂತಿಕೃದ್ಧರಃ ॥ ೭ ॥

ಸಪ್ತಾಪಿ ಮುನಯಶ್ಶೀಘ್ರಮಾಯಯುಃ ಸ್ಮೃತಿಮಾತ್ರತಃ ।
ಪ್ರಸನ್ನವದನಾಸ್ಸರ್ವೇ ವರ್ಣಯಂತೋ ವಿಧಿಂ ಬಹು ॥ ೮ ॥

---

೪. ಆ ಸಮಾಧಿಯಲ್ಲಿ ಶಂಕರನು ತನ್ನ ಆತ್ಮನಲ್ಲಿ, ಸರ್ವೋತ್ಕೃಷ್ಟವೂ, ಶಾಂತವೂ, ಮಾಯೆಯ ಸಂಬಂಧವಿಲ್ಲದುದೂ, ಪ್ರಕಾಶರೂಪವೂ ಆದ ಪರಮಾತ್ಮ ವಸ್ತುವನ್ನು ಅಭೇದಭಾವದಿಂದ ಚಿಂತಿಸಿದನು.

೫. ಇಂದ್ರಿಯಗಳಿಗೆ ಅಗೋಚರನೂ ಜಗತ್ಕರ್ತನೂ ಆದ ಆ ಪರಮೇಶ್ವರನು ಹಾಗೆ ಅಭೇದಭಾವದಿಂದ ಧ್ಯಾನಿಸುತ್ತಾ ಆ ಪರಮಾತ್ಮವಸ್ತುವಿನಲ್ಲಿ ಲೀನನಾಗಿ ಆ ಪರಮಾತ್ಮವಸ್ತುವೇ ಆದನು.

೬. ಬ್ರಹ್ಮನು ಹೇಳಿದನು:—ಎಲೈ ನಾರದ, ಆಗ ಗಿರಿಜೆಯೂ ಸಹ ಘೋರ ತಪಸ್ಸನ್ನಾಚರಿಸಿದಳು. ಅವಳ ಆ ತಪಸ್ಸಿನಿಂದ ರುದ್ರನೂ ಆಶ್ಚರ್ಯಗೊಂಡನು.

೭. ಕೆಲವು ಕಾಲಾನಂತರ ಭಕ್ತವತ್ಸಲನಾದ ಆ ರುದ್ರನು ಸಮಾಧಿಯಿಂದ ಬಹಿರ್ಮುಖನಾಗಿ ವಸಿಷ್ಠಮುನಿ ಮೊದಲಾದ ಸಪ್ತಋಷಿಗಳನ್ನು ಸ್ಮರಿಸಿದನು.

೮. ಹರನು ಸ್ಮರಿಸಿದ ಮಾತ್ರದಿಂದಲೇ ಸಪ್ತಋಷಿಗಳು ತಮ್ಮ ಅದೃಷ್ಟವನ್ನು ಹೊಗಳಿಕೊಳ್ಳುತ್ತಾ ಸಂತೋಷದಿಂದ ಶಿವನ ಬಳಿಗೆ ಬಂದು,

ಪ್ರಣಮ್ಯ ತಂ ಮಹೇಶಾನಂ ತುಷ್ಟುವುರ್ಹರ್ಷನಿರ್ಭರಾಃ ।
ವಾಣ್ಯಾ ಗದ್ಗದಯಾ ಬದ್ಧಕರಾ ವಿನತಕಂಧರಾಃ ॥ ೯ ॥

॥ ಸಪ್ತರ್ಷಯ ಊಚುಃ ॥
ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಜಾತಾ ವಯಂ ಸುಧನ್ಯಾ ಹಿ ತ್ವಯಾ ಯದಧುನಾ ಸ್ಮೃತಾಃ ॥ ೧೦ ॥

ಕಿಮರ್ಥಂ ಸಂಸ್ಮೃತಾ ನಾಥ ಶಾಸನಂ ದೇಹಿ ತದ್ಧಿ ನಃ ।
ಸ್ವದಾಸಸದೃಶೀಂ ಸ್ವಾಮಿನ್ ಕೃಪಾಂ ಕುರು ನಮೋಽಸ್ತು ತೇ ॥ ೧೧ ॥

॥ ಬ್ರಹ್ಮೋವಾಚ ॥
ಇತ್ಯಾಽಽಕರ್ಣ್ಯ ಮುನೀನಾಂ ತು ವಿಜ್ಞಪ್ತಿಂ ಕರುಣಾನಿಧಿಃ ।
ಪ್ರೋವಾಚ ವಿಹಸನ್ ಪ್ರೀತ್ಯಾ ಪ್ರೋತ್ಫುಲ್ಲನಯನಾಂಬುಜಃ ॥ ೧೨ ॥

॥ ಮಹೇಶ್ವರ ಉವಾಚ ॥
ಹೇ ಸಪ್ತಮುನಯಸ್ತಾತಾಃ ಶೃಣುತಾರಂ ವಚೋ ಮಮ ।
ಅಸ್ಮದ್ಧಿತಕರಾ ಯೂಯಂ ಸರ್ವಜ್ಞಾನವಿಚಕ್ಷಣಾಃ ॥ ೧೩ ॥

---

೯. ಮಹೇಶ್ವರನನ್ನು ಹರ್ಷದಿಂದ ಸ್ತುತಿಸುತ್ತಾ ವಿನಯದಿಂದ ಕತ್ತನ್ನು ಬಗ್ಗಿಸಿ ಕೈಕಟ್ಟಿಕೊಂಡು ಹರ್ಷಗದ್ಗದಸ್ವರದಿಂದ ಇಂತೆಂದರು.

೧೦. ದೇವದೇವನಾದ ಓ ಮಹಾದೇವನೆ, ನೀನು ಕರುಣಾಸಮುದ್ರನು, ಪರಮೇಶ್ವರನು, ಇಂತಹ ನೀನು ಸ್ಮರಿಸಿದುದರಿಂದ ನಾವು ಧನ್ಯರಾದೆವು.

೧೧. ನಮ್ಮನ್ನು ಯಾವ ಕಾರ್ಯಕ್ಕಾಗಿ ಸ್ಮರಿಸಿದೆಯೋ ಆ ಕಾರ್ಯಕ್ಕೆ ನಮ್ಮನ್ನು ನಿಯಮಿಸು. ನಾವು ನಿನ್ನ ಸೇವಕರು. ನಮ್ಮಲ್ಲಿ ಕರುಣೆಯನ್ನು ತೋರು. ನಿನಗೆ ನಮಸ್ಕಾರವು ಎಂದರು.

೧೨. ಬ್ರಹ್ಮನು ಹೇಳಿದನು:—ಈ ಪ್ರಕಾರವಾದ ಮುನಿಗಳ ವಿಜ್ಞಾಪನೆಯನ್ನು ಕೇಳಿ ಕರುಣಾನಿಧಿಯಾದ ಶಿವನು ಸಂತೋಷದಿಂದ ಅರಳಿದ ಕಣ್ಣುಗಳುಳ್ಳವನಾಗಿ ಮಂದಹಾಸವನ್ನು ಸೂಸುತ್ತಾ ಇಂತೆಂದನು.

೧೩. ಎಲೈ ಪ್ರೀತಿಪಾತ್ರರಾದ ಸಪ್ತಋಷಿಗಳೇ, ನನ್ನ ಮಾತನ್ನು ಕೇಳಿರಿ. ನೀವು ನನ್ನ ಹಿತಚಿಂತಕರು. ನಿಮಗೆ ಎಲ್ಲಾ ತಿಳಿವಳಿಕೆಯೂ ಇರುವುದು.

ತಪಶ್ಚರತಿ ದೇವೇಶೀ ಪಾರ್ವತೀ ಗಿರಿಜಾಧುನಾ ।
ಗೌರೀಶಿಖರಸಂಜ್ಞೇ ಹಿ ಪರ್ವತೇ ದೃಢಮಾನಸಾ ॥ ೧೪ ॥

ಮಾಂ ಪತಿಂ ಪ್ರಾಪ್ತುಕಾಮಾ ಹಿ ಸಾ ಸಖೀಸೇವಿತಾ ದ್ವಿಜಾಃ ।
ಸರ್ವಾನ್ ಕಾಮಾನ್ ವಿಹಾಯಾಸ್ಯಾಃ ಪರಂ ನಿಶ್ಚಯಮಾಗತಾ ॥ ೧೫ ॥

ತತ್ರ ಗಚ್ಛತ ಯೂಯಂ ಮಚ್ಛಾಸನಾನ್ಮುನಿಸತ್ತಮಾಃ ।
ಪರೀಕ್ಷಾಂ ದೃಢತಾಯಾಸ್ತತ್ಕುರುತ ಪ್ರೇಮಚೇತಸಃ ॥ ೧೬ ॥

ಸರ್ವಥಾ ಛಲಸಂಯುಕ್ತಂ ವಚನೀಯಂ ವಚಶ್ಚ ವಃ ।
ನ ಸಂಶಯಃ ಪ್ರಕರ್ತವ್ಯಃ ಶಾಸನಾನ್ಮಮ ಸುವ್ರತಾಃ ॥ ೧೭ ॥

॥ ಬ್ರಹ್ಮೋವಾಚ ॥

ಇತ್ಯಾಜ್ಞಪ್ತಾಶ್ಚ ಮುನಯೋ ಜಗ್ಮುಸ್ತತ್ರ ದ್ರುತಂ ಹಿ ತೇ ।
ಯತ್ರ ರಾಜತಿ ಸಾ ದೀಪ್ತಾ ಜಗನ್ಮಾತಾ ನಗಾತ್ಮಜಾ ॥ ೧೮ ॥

---

೧೪. ಮಹಾದೇವಿಯಾದ ಪಾರ್ವತಿಯು ಹಿಮವತ್ಪರ್ವತದ "ಗೌರೀಶಿಖರ"ವೆಂಬ ಶಿಖರದಲ್ಲಿ ಸ್ಥಿರಮನಸ್ಸಿನಿಂದ ತಪಸ್ಸನ್ನಾಚರಿಸುತ್ತಲಿರುವಳು.

೧೫. ಆ ಗಿರಿಜೆಯು ನನ್ನನ್ನೇ ಪತಿಯನ್ನಾಗಿ ಪಡೆಯಬೇಕೆಂದು ಮಿಕ್ಕ ಸುಖಸಾಧನಗಳನ್ನೆಲ್ಲಾ ಬಿಟ್ಟು ಸಖಿಯರೊಡನೆ ಸ್ಥಿರಮನಸ್ಸಿನಿಂದ ತಪವನ್ನಾಚರಿಸುತ್ತಲಿರುವಳು.

೧೬. ಎಲೈ ಮುನಿಗಳೇ ಆ ಗಿರಿಜೆಯು ತಪಸ್ಸು ಮಾಡುತ್ತಿರುವಲ್ಲಿಗೆ ಹೋಗಿ ಪಾರ್ವತಿಗೆ ನನ್ನಲ್ಲಿ ಅನುರಾಗವು ಎಷ್ಟು ದೃಢವಾಗಿರುವುದೆಂಬುದನ್ನು ಪರೀಕ್ಷೆಮಾಡಿರಿ.

೧೭. ಕಪಟವಾದಂತಹ ಮಾತನ್ನೇ ಅವಳಿಗೆ ನೀವು ಹೇಳಬೇಕು. ಸಂಶಯವನ್ನು ಮಾಡಬಾರದು. ಇದು ನನ್ನ ಆಜ್ಞೆಯು ಎಂದನು.

೧೮. ಹೀಗೆ ಶಂಕರನು ಅಪ್ಪಣೆಮಾಡಲು ಸಪ್ತಋಷಿಗಳು ಜಗನ್ಮಾತೆಯಾದ ಗಿರಿಜೆಯು ತಪಸ್ಸುಮಾಡುತ್ತಿರುವಲ್ಲಿಗೆ ಕೂಡಲೇ ತೆರಳಿದರು.

ತತ್ರ ದೃಷ್ಟ್ವಾ ಶಿವಾ ಸಾಕ್ಷಾತ್ತಪಸ್ಸಿದ್ಧಿರಿವಾಪರಾ ।
ಮೂರ್ತಾ ಪರಮತೇಜಸ್ಕಾ ವಿಲಸಂತೀ ಸುತೇಜಸಾ ॥ ೧೯ ॥

ಹೃದಾ ಪ್ರಣಮ್ಯ ತಾಂ ತೇ ತು ಋಷಯಸ್ಸಪ್ತ ಸುವ್ರತಾಃ ।
ಸನ್ನತಾ ವಚನಂ ಪ್ರೋಚುಃ ಪೂಜಿತಾಶ್ಚ ವಿಶೇಷತಃ ॥ ೨೦ ॥

॥ ಋಷಯ ಊಚುಃ ॥

ಶೃಣು ಶೈಲಸುತೇ ದೇವಿ ಕಿಮರ್ಥಂ ತಪ್ಯತೇ ತಪಃ ।
ಇಚ್ಛಸಿ ತ್ವಂ ಸುರಂ ಕಂ ಚ ಕಿಂ ಫಲಂ ತದ್ವದಾಧುನಾ ॥ ೨೧ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸಾ ಶಿವಾ ದೇವೀ ಗಿರೀಂದ್ರತನಯಾ ದ್ವಿಜೈಃ ।
ಪ್ರತ್ಯುವಾಚ ವಚಸ್ಸತ್ಯಂ ಸುಗೂಢಮಪಿ ತತ್ಪುರಃ ॥ ೨೨ ॥

॥ ಪಾರ್ವತ್ಯುವಾಚ ॥

ಮುನೀಶ್ವರಾಃ ಸಂಶೃಣುತ ಮದ್ವಾಕ್ಯಂ ಪ್ರೀತಿತೋ ಹೃದಾ ।
ಬ್ರವೀಮಿ ಸ್ವವಿಚಾರಂ ವೈ ಚಿಂತಿತೋ ಯೋ ಧಿಯಾ ಸ್ವಯಾ ॥ ೨೩ ॥

---

೧೯-೨೦. ಅಲ್ಲಿ ಗಿರಿಜೆಯು ಮೂರ್ತಿಮತ್ತಾದ ಸಾಕ್ಷಾತ್ ತಪಸ್ಸಿದ್ಧಿಯಂತೆ ಮಹಾತೇಜಸ್ಸಿನಿಂದ ಪ್ರಕಾಶಿಸುತ್ತಿದ್ದಳು. ಅವಳನ್ನು ಮುನಿಗಳು ನೋಡಿ, ಆ ದೇವಿಯನ್ನು ಮನಸ್ಸಿನಿಂದಲೇ ವಂದಿಸಿದರು. ಗಿರಿಜೆಯು ಆ ಮುನಿಗಳಿಗೆ ಸತ್ಕಾರವನ್ನು ಮಾಡಿದಳು. ಆಗ ಆ ಮುನಿಗಳು ಶಾಂತತೆಯಿಂದ ಗಿರಿಜೆಯನ್ನು ಕುರಿತು,

೨೧. ಎಲೌ ಪಾರ್ವತಿದೇವಿ, ಈಗ ನೀನು ತಪಸ್ಸನ್ನು ಮಾಡುತ್ತಿರುವುದೇಕೆ? ಯಾವನಾದರೂ ದೇವನನ್ನು ಪತಿಯನ್ನಾಗಿ ಪಡೆಯಲು ಇಚ್ಛಿಸುವಿಯಾ? ಒಟ್ಟಿನಲ್ಲಿ ಈ ತಪಸ್ಸಿನಿಂದ ಏನು ಫಲವನ್ನು ಪಡೆಯಬೇಕೆಂದಿರುವೆ? ಹೇಳು ಎಂದರು.

೨೨. ಹೀಗೆ ಸಪ್ತಋಷಿಗಳು ಕೇಳಲು, ಗಿರಿಜೆಯು ಗುಟ್ಟಾಗಿದ್ದರೂ ನಿಜವಾದಂತಹ ತನ್ನ ಅಭಿಪ್ರಾಯವನ್ನೇ ಹೇಳಿದಳು.

೨೩. ಓ ಮುನಿಶ್ರೇಷ್ಠರೇ, ಪ್ರೀತಿಯಿಂದ ನನ್ನ ಮಾತನ್ನು ಕೇಳಿರಿ, ನನ್ನ ಮನಸ್ಸಿನ ಅಭಿಪ್ರಾಯವನ್ನು ನಿಮಗೆ ಹೇಳುವೆನು.

ಕರಿಷ್ಯಥ ಪ್ರಹಾಸಂ ಮೇ ಶ್ರುತ್ವಾ ವಾಚೋ ಹ್ಯಸಂಭವಾಃ ।
ಸಂಕೋಚೋ ವರ್ಣನಾದ್ವಿಪ್ರಾ ಭವತ್ಯೇವ ಕರೋಮಿ ಕಿಂ ॥ ೨೪ ॥

ಇದಂ ಮನೋ ಹಿ ಸುದೃಢಮವಶಂ ಪರಕರ್ಮಕೃತ್ ।
ಜಲೋಪರಿ ಮಹಾಭಿತ್ತಿಂ ಚಿಕೀರ್ಷತಿ ಮಹೋನ್ನತಾಂ ॥ ೨೫ ॥

ಸುರರ್ಷೇಶ್ಯಾಸನಂ ಪ್ರಾಪ್ಯ ಕರೋಮಿ ಸುದೃಢಂ ತಪಃ ।
ರುದ್ರಃ ಪತಿರ್ಭವನ್ಮೇ ಹಿ ವಿಧಾಯೇತಿ ಮನೋರಥಂ ॥ ೨೬ ॥

ಅಪಕ್ಷೋ ಮನ್ಮನಃಪಕ್ಷೀ ವ್ಯೋಮ್ನಿ ಉಡ್ಡೀಯತೆ ಹಠಾತ್ ।
ತದಾಶಾಂ ಶಂಕರಸ್ವಾಮೀ ಪಿಪರ್ತು ಕರುಣಾನಿಧಿಃ ॥ ೨೭ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾ ವಿಹಸ್ಯ ಮುನಯಶ್ಚ ತೇ ।
ಸಮ್ಮಾನ್ಯ ಗಿರಿಜಾಂ ಪ್ರೀತ್ಯಾ ಪ್ರೋಚುಶ್ಛಲವಚೋ ಮೃಷಾ ॥ ೨೮ ॥

---

೨೪. ನನ್ನ ಅಸಂಬದ್ಧವಾದ ಮಾತನ್ನು ಕೇಳಿ ನೀವು ನಗಬಹುದು. ನನ್ನ ವಿಷಯವನ್ನು ವರ್ಣಿಸಲು ನನಗೇ ಸಂಕೋಚವಾಗುತ್ತಿರುವುದು. ಏನು ಮಾಡಲಿ?

೨೫. ನನ್ನ ಮನಸ್ಸು ಪರಾಧೀನವಾಗಿ ಏನೇನೋ ಮಾಡುತ್ತಲಿರುವುದು. ನೀರಿನ ಮೇಲೆ ದೊಡ್ಡ ಗೋಡೆಯನ್ನು ಕಟ್ಟಲು ಪ್ರಯತ್ನಿಸುತ್ತಿರುವುದು.

೨೬. ನಾರದಮುನಿಯ ಅಪ್ಪಣೆಯಂತೆ ದೃಢವಾಗಿ ತಪಸ್ಸನ್ನು ಮಾಡುತ್ತಿರುವೆನು. ರುದ್ರನೇ ನನಗೆ ಪತಿಯಾಗಲೆಂದು ನನ್ನ ಮನೋರಥವಿರುವುದು.

೨೭. ನನ್ನ ಮನಸ್ಸು ರೆಕ್ಕೆಯಿಲ್ಲದ ಹಕ್ಕಿಯಂತಿರುವುದು. ಅದು ಆಕಾಶಗಗನದಲ್ಲಿ ಹಠದಿಂದ ಹಾರುತ್ತಲಿರುವುದು. ಅದರ ಆಶೆಯನ್ನು ಕರುಣಾಮೂರ್ತಿಯಾದ ಶಂಕರಸ್ವಾಮಿಯು ಪೂರ್ಣಮಾಡಲಿ ಎಂದಳು.

೨೮. ಬ್ರಹ್ಮನು ಹೇಳಿದನು:—ಗಿರಿಜೆಯ ಈ ಪ್ರಕಾರವಾದ ಮಾತನ್ನು ಕೇಳಿ ಸಪ್ತಋಷಿಗಳು ಸಂತೋಷಗೊಂಡು ಅಂತರಂಗದಲ್ಲಿ ಅವಳ ಮಾತನ್ನು ಮೆಚ್ಚಿ ಗೌರವಿಸಿದರೂ, ಪ್ರಕಾಶವಾಗಿ ಮೋಸಮಾಡುವುದಕ್ಕಾಗಿ ಸುಳ್ಳುಮಾತುಗಳನ್ನಾಡಿದರು.

॥ ಋಷಯ ಊಚುಃ ॥
ನ ಜ್ಞಾತಂ ತಸ್ಯ ಚರಿತಂ ವೃಥಾಪಂಡಿತಮಾನಿನಃ ।
ದೇವರ್ಷೇಃ ಕ್ರೂರಮನಸಃ ಸುಜ್ಞಾ ಭೂತ್ವಾಪ್ಯಗಾತ್ಮಜೇ ॥ ೨೯ ॥

ನಾರದಃ ಕೂಟವಾದೀ ಚ ಪರಚಿತ್ತಪ್ರಮಂಥಕಃ ।
ತಸ್ಯ ವಾರ್ತಾಶ್ರವಣತೋ ಹಾನಿರ್ಭವತಿ ಸರ್ವಥಾ ॥ ೩೦ ॥

ತತ್ರ ತ್ವಂ ಶೃಣು ಸದ್ಬುದ್ಧ್ಯಾ ಚೇತಿಹಾಸಂ ಸುಶೋಭಿತಂ ।
ಕ್ರಮಾತ್ತ್ವಾಂ ಬೋಧಯಂತೋ ಹಿ ಪ್ರೀತ್ಯಾ ತಮುಪಧಾರಯ ॥ ೩೧ ॥

ಬ್ರಹ್ಮಪುತ್ರೋ ಹಿ ಯೋ ದಕ್ಷಸ್ಸುಷುವೇ ಪಿತುರಾಜ್ಞಯಾ ।
ಸ್ವಪತ್ನ್ಯಾಮಯುತಂ ಪುತ್ರಾನಯುಂಕ್ತ ತಪಸಿ ಪ್ರಿಯಾ ॥ ೩೨ ॥

ತೇ ಸುತಾಃ ಪಶ್ಚಿಮದಿಶಿ ನಾರಾಯಣಸರೋ ಗತಾಃ ।
ತಪೋಽಥ ತೇ ಪ್ರತಿಜ್ಞಾಯ ನಾರದಸ್ತತ್ರ ವೈ ಯಯೌ ॥ ೩೩ ॥

---

೨೯. ಋಷಿಗಳು ಹೇಳಿದರು:—ಎಲೌ ಗಿರಿಜೆ, ನೀನು ತಿಳಿವಳಿಕೆಯುಳ್ಳವಳು. ಹೀಗಿದ್ದೂ ಮೋಸಗಾರನಾದ ಆ ನಾರದನ ಸ್ವಭಾವವು ನಿನಗೆ ತಿಳಿಯಲಿಲ್ಲವೆ? ಅವನು ತಾನು ಪಂಡಿತನೆಂದು ತಿಳಿದುಕೊಂಡಿರುವನು. ಅವನಿಗೇನೂ ತಿಳಿವಳಿಕೆಯಿಲ್ಲ. ಮತ್ತು ಅವನ ಮನಸ್ಸು ತುಂಬಾ ಕ್ರೂರವಾದುದು.

೩೦. ನಾರದನು ಸುಳ್ಳುಗಾರನು, ಮೋಸಗಾರನು. ಮೋಸದ ಮಾತನ್ನು ಹೇಳಿ ಪರರ ಮನಸ್ಸನ್ನು ಚಂಚಲಗೊಳಿಸುವನು. ಅವನ ಸುದ್ದಿಯನ್ನು ಕೇಳಿದರೆ ಸಾಕು, ಖಂಡಿತವಾಗಿ ಹಾನಿಯಾಗುವುದು.

೩೧. ಈ ವಿಷಯದಲ್ಲಿ ಒಂದು ಸುಂದರವಾದ ಇತಿಹಾಸವನ್ನು ಹೇಳುವೆವು. ಅದನ್ನು ಸದ್ಬುದ್ಧಿಯಿಂದ ಕೇಳಿ ತಿಳಿದುಕೋ.

೩೨. ಬ್ರಹ್ಮಪುತ್ರನಾದ ದಕ್ಷಬ್ರಹ್ಮನು ತಂದೆಯ ಆಜ್ಞೆಯಂತೆ ತನ್ನ ಹೆಂಡತಿಯಲ್ಲಿ ಹತ್ತುಸಾವಿರ ಮಕ್ಕಳನ್ನು ಪಡೆದನು. ಅವರೆಲ್ಲರನ್ನೂ ಪ್ರಜೋತ್ಪಾದನೆಗಾಗಿ ತಪಸ್ಸುಮಾಡಿರೆಂದು ನಿಯಮಿಸಿದನು.

೩೩. ಆ ದಕ್ಷಪುತ್ರರು ಪಶ್ಚಿಮದಿಕ್ಕಿನಲ್ಲಿರುವ ನಾರಾಯಣ ಸರೋವರಕ್ಕೆ ತಪಸ್ಸುಮಾಡಲು ತೆರಳಿದರು. ಆಗ ಅಲ್ಲಿಗೆ ನಾರದಮುನಿಯೂ ಹೋಗಿ,

ಕೃತೋಪದೇಶಮಾಶ್ರಾವ್ಯ ತತ್ರ ತಾನ್ನಾರದೋ ಮುನಿಃ ।
ತದಾಜ್ಞಯಾ ಚ ತೇ ಸರ್ವೇ ಪಿತುರ್ನ ಗೃಹಮಾಯಯುಃ ॥ ೩೪ ॥

ತಚ್ಛ್ರುತ್ವಾ ಕುಪಿತೋ ದಕ್ಷಃ ಪಿತ್ರಾಶ್ವಾಸಿತಮಾನಸಃ ।
ಉತ್ಪಾದ್ಯ ಪುತ್ರಾನ್ ಪ್ರಾಯುಂಕ್ತ ಸಹಸ್ರಪ್ರಮಿತಾಂಸ್ತತಃ ॥ ೩೫ ॥

ತೇಽಪಿ ತತ್ರ ಗತಾಃ ಪುತ್ರಾಸ್ತಪೋಽರ್ಥಂ ಪಿತುರಾಜ್ಞಯಾ ।
ನಾರದೋಽಪಿ ಯಯೌ ತತ್ರ ಪುನಸ್ತತ್ಸೋಪದೇಶಕೃತ್ ॥ ೩೬ ॥

ದದೌ ತದುಪದೇಶಂ ತೇ ತೇಭ್ಯೋ ಭ್ರಾತೃಪಥಂ ಯಯುಃ ।
ಆಯಯುರ್ನ ಪಿತುರ್ಗೇಹಂ ಭಿಕ್ಷುವೃತ್ತಿರತಾಶ್ಚ ತೇ ॥ ೩೭ ॥

ಇತ್ಥಂ ನಾರದಸದ್ವೃತ್ತಿರ್ವಿಶ್ರುತಾ ಶೈಲಕನ್ಯಕೇ ।
ಅನ್ಯಾಂ ಶೃಣು ಹಿ ತದ್ವೃತ್ತಿಂ ವೈರಾಗ್ಯಕರಣೀಂ ನೃಣಾಂ ॥ ೩೮ ॥

---

೩೪. ಆ ದಕ್ಷಪುತ್ರರಿಗೆ ಇಲ್ಲದಿದ್ದುದನ್ನು ಉಪದೇಶಿಸಿದನು. ಅದರಿಂದ ಅವರು ತಂದೆಯ ಮನೆಗೇ ಹಿಂತಿರುಗಿ ಬರಲೇ ಇಲ್ಲ.

೩೫. ಈ ಸಂಗತಿಯು ದಕ್ಷನಿಗೆ ತಿಳಿಯಲು ಅವನು ತುಂಬಾ ಕೋಪಗೊಂಡನು. ಬ್ರಹ್ಮನು ಸಮಾಧಾನಮಾಡಿದನು. ತಿರುಗಿ ದಕ್ಷನು ಸಾವಿರ ಮಕ್ಕಳನ್ನು ಉತ್ಪಾದನೆಮಾಡಿ ಅವರನ್ನೂ ತಪಸ್ಸಿಗೆ ಕಳುಹಿಸಿದನು.

೩೬. ಆ ದಕ್ಷಕುಮಾರರೂ ಸಹ ತಂದೆಯ ಅಪ್ಪಣೆಯಂತೆ ನಾರಾಯಣ ಸರೋವರಕ್ಕೆ ತಪಸ್ಸಿಗಾಗಿ ನಡೆದರು. ನಾರದನೂ ಸಹ ಮತ್ತೆ ಅಲ್ಲಿಗೆ ಹೋಗಿ,

೩೭. ಆ ದಕ್ಷಸುತರಿಗೂ ಉಪದೇಶಿಸಿದನು. ಅವರೂ ತಮ್ಮ ಅಣ್ಣಂದಿರ ದಾರಿಯನ್ನೇ ಹಿಡಿದರು. ತಿರುಗಿ ತಂದೆಯ ಮನೆಗೆ ಬರಲಿಲ್ಲ. ಭಿಕ್ಷುಗಳಾದರು.

೩೮. ಎಲೌ ಗಿರಿಜೆ, ಹೀಗೆ ನಾರದನ ಕೆಟ್ಟವೃತ್ತಿಯು ಜಗತ್ತಿಗೇ ಪ್ರಸಿದ್ಧವಾಗಿರುವುದು. ಇನ್ನೂ ಒಂದು ಇತಿಹಾಸವನ್ನು ಹೇಳುವೆನು. ಅದನ್ನು ಕೇಳಿದರೆ ನಾರದನ ವಿಷಯದಲ್ಲಿ ಎಲ್ಲರಿಗೂ ವೈರಾಗ್ಯ ಹುಟ್ಟುವುದು.

ವಿದ್ಯಾಧರಶ್ಚಿತ್ರಕೇತುರ್ಯೋ ಬಭೂವ ಪುರಾಕರೋತ್ ।
ಸ್ತೋಪದೇಶಮಯಂ ದತ್ವಾ ತಸ್ಮೈ ಶೂನ್ಯಂ ಚ ತದ್ಗೃಹಂ ॥ ೩೯ ॥

ಪ್ರಹ್ಲಾದಾಯ ಸ್ತೋಪದೇಶಾನ್ ಹಿರಣ್ಯಕಶಿಪೋಃ ಪರಂ ।
ದತ್ವಾ ದುಃಖಂ ದದೌ ಚಾಯಂ ಪರಬುದ್ಧಿಪ್ರಭೇದಕಃ ॥ ೪೦ ॥

ಮುನಿನಾ ನಿಜವಿದ್ಯಾ ಯಚ್ಛ್ರಾವಿತಾ ಕರ್ಣರೋಚನಾ ।
ಸಾ ಸ್ವಗೇಹಂ ವಿಹಾಯಾಶು ಭಿಕ್ಷಾಂ ಚರತಿ ನಿತ್ಯಶಃ ॥ ೪೧ ॥

ನಾರದೋ ಮಲಿನಾತ್ಮಾ ಹಿ ಸರ್ವದೋಜ್ಜ್ವಲದೇಹವಾನ್ ।
ಜಾನೀಮಸ್ತಂ ವಿಶೇಷೇಣ ವಯಂ ತತ್ಸಹವಾಸಿನಃ ॥ ೪೨ ॥

ಬಕಂ ಸಾಧುಂ ವರ್ಣಯಂತಿ ನ ಮತ್ಸ್ಯಾನತ್ತಿ ಸರ್ವಥಾ ।
ಸಹವಾಸೀ ವಿಜಾನೀಯಾಚ್ಚರಿತ್ರಂ ಸಹವಾಸಿನಾಂ ॥ ೪೩ ॥

---

೩೯. ಹಿಂದೆ ಚಿತ್ರಕೇತುವೆಂಬ ವಿದ್ಯಾಧರನಿದ್ದನು. ಅವನಿಗೆ ಈ ನಾರದನು ಉಪದೇಶಿಸಿದನು. ಅದರಿಂದ ಆ ಗಂಧರ್ವನಿಗೆ ಅವನ ಮನೆಯೇ ಬೇಡವಾಯಿತು.

೪೦. ಮತ್ತು ಈ ನಾರದನು ಪ್ರಹ್ಲಾದನಿಗೆ ಉಪದೇಶಮಾಡಿದನು. ಅದರಿಂದ ಆ ಪ್ರಹ್ಲಾದನು ಹಿರಣ್ಯಕಶಿಪುವಿನಿಂದ ತುಂಬಾ ದುಃಖವನ್ನನುಭವಿಸಿದನು. ಹೀಗೆ ಈ ನಾರದನು ಪರರ ಬುದ್ಧಿಯನ್ನು ಹಾಳುಮಾಡುವನು.

೪೧. ಆ ನಾರದನು ತನ್ನ ವಿದ್ಯೆಯನ್ನು ಕಿವಿಗಿಂಪಾಗುವಂತೆ ಉಪದೇಶಿಸುವನು. ಅದನ್ನು ಕೇಳಿದವನು ತನ್ನ ಮನೆಯನ್ನೇ ಬಿಟ್ಟು ಸನ್ಯಾಸಿಯಾಗುವನು.

೪೨. ಆ ನಾರದನು ನೋಡಲು ಉಜ್ವಲವಾದ ಶರೀರವುಳ್ಳವನಾದರೂ ಒಳಗೆ ಕಪಟವಾದ ಸ್ವಭಾವವುಳ್ಳವನು. ನಾವು ಯಾವಾಗಲೂ ಅವನ ಸಹವಾಸದಲ್ಲಿರುವುದರಿಂದ ಅವನನ್ನು ಚೆನ್ನಾಗಿ ಬಲ್ಲೆವು.

೪೩. ಬಕಪಕ್ಷಿಯು ಸಾಧುವೆಂದೂ ಅದು ಮೀನುಗಳನ್ನು ತಿನ್ನುವುದಿಲ್ಲವೆಂದೂ ಗೊತ್ತಿಲ್ಲದವರು ಅದರ ಗುಣಗಳನ್ನು ವರ್ಣಿಸಬಹುದು. ಆಯಾಯ ಪ್ರಾಣಿಗಳ ಸಹವಾಸವುಳ್ಳವನು ಅವುಗಳ ಸ್ವಭಾವವನ್ನು ತಿಳಿದೇ ಇರುವನು.

ಲಬ್ಧ್ವಾ ತದುಪದೇಶಂ ಹಿ ತ್ವಮಪಿ ಪ್ರಾಜ್ಞಸಮ್ಮತಾ ।
ವೃಥೈವ ಮೂರ್ಖೀಭೂತಾ ತ್ವಂ ತಪಶ್ಚರಸಿ ದುಷ್ಕರಂ ॥ ೪೪ ॥

ಯದರ್ಥಮೀದೃಶಂ ಬಾಲೇ ಕರೋಷಿ ವಿಪುಲಂ ತಪಃ ।
ಸದೋದಾಸೀ ನಿರ್ವಿಕಾರೋ ಮದನಾರಿರ್ನ ಸಂಶಯಃ ॥ ೪೫ ॥

ಅಮಂಗಲವಪುರ್ಧಾರೀ ನಿರ್ಲಜ್ಜೋಽಸದನೋಽಕುಲೀ ।
ಕುವೇಷೀ ಪ್ರೇತಭೂತಾದಿಸಂಗೀ ನಗ್ನೋ ಹಿ ಶೂಲಭೃತ್ ॥ ೪೬ ॥

ಸ ಧೂರ್ತಸ್ತವ ವಿಜ್ಞಾನಂ ವಿನಾಶ್ಯ ನಿಜಮಾಯಯಾ ।
ಮೋಹಯಾಮಾಸ ಸದ್ಯುಕ್ತ್ಯಾ ಕಾರಯಾಮಾಸ ವೈ ತಪಃ ॥ ೪೭ ॥

ಈದೃಶಂ ಹಿ ವರಂ ಲಬ್ಧ್ವಾ ಕಿಂ ಸುಖಂ ಸಂಭವಿಷ್ಯತಿ ।
ವಿಚಾರಂ ಕುರು ದೇವೇಶಿ ತ್ವಮೇವ ಗಿರಿಜಾತ್ಮಜೇ ॥ ೪೮ ॥

---

೪೪. ಹೀಗಿರುವಲ್ಲಿ ಅಂತಹ ಕಪಟಿಯಾದ ನಾರದನ ಉಪದೇಶವನ್ನು ಪಡೆದು ನೀನು ತಿಳಿದವಳಾದರೂ ಈಗ ವಿವೇಕವಿಲ್ಲದವಳಾಗಿ ವೃಥಾ ಘೋರತಪಸ್ಸನ್ನು ಮಾಡುತ್ತಲಿರುವೆ.

೪೫. ಎಲೌ ಬಾಲಿಕೆ, ಯಾವನಿಗಾಗಿ ನೀನು ಇಂತಹ ಘೋರ ತಪಸ್ಸನ್ನು ಮಾಡುತ್ತಲಿರುವೆಯೋ ಆ ಶಿವನು, ಸದಾ ಉದಾಸೀನನು. ಅವನಿಗೆ ಯಾವ ವಿಕಾರಗಳೂ ಇಲ್ಲ. ಅವನು ಮನ್ಮಥನ ಶತ್ರುವು.

೪೬. ಆ ಶಿವನ ಶರೀರವು ಅಮಂಗಳವಾದುದು. ಅವನಿಗೆ ಮನೆಯಿಲ್ಲ, ಕುಲವಿಲ್ಲ, ನೀಚವೇಷವುಳ್ಳವನು. ಸದಾ ಪ್ರೇತಭೂತಗಳೊಡನೆ ಇರುವನು. ದಿಗಂಬರನು. ಆದರೂ ಅವನಿಗೆ ಲಜ್ಜೆಯೇ ಇಲ್ಲ.

೪೭. ಮೋಸಗಾರನಾದ ಆ ಶಿವನು ತನ್ನ ಮಾಯೆಯಿಂದ ನಿನ್ನ ಜ್ಞಾನವನ್ನು ಹಾಳುಮಾಡಿ ಮೋಹವನ್ನುಂಟುಮಾಡಿರುವನು. ಒಳ್ಳೇ ಯುಕ್ತಿಯನ್ನುಪಯೋಗಿಸಿ ನೀನು ತಪಸ್ಸು ಮಾಡುವಂತೆ ಪ್ರೇರಿಸಿರುವನು.

೪೮. ಇಂತಹ ವರನನ್ನು ಪಡೆದು ನಿನಗೇನು ಸುಖವು ಲಭಿಸುವುದು? ಎಲೌ ಗಿರಿಜೆ, ಇದನ್ನು ಚೆನ್ನಾಗಿ ವಿಚಾರಮಾಡು.

ಪ್ರಥಮಂ ದಕ್ಷಜಾಂ ಸಾಧ್ವೀಂ ವಿವಾಹ್ಯ ಸುಧಿಯಾ ಸತೀಂ ।
ನಿರ್ವಾಹಂ ಕೃತವಾನ್ನೈವ ಮೂಢಃ ಕಿಂಚಿದ್ದಿನಾನಿ ಚ ॥ ೪೯ ॥

ತಾಂ ತಥೈವ ಸ ವೈ ದೋಷಂ ದತ್ವಾತ್ಯಾಕ್ಷೀತ್ಸ್ವಯಂ ಪ್ರಭುಃ ।
ಧ್ಯಾಯನ್ ಸ್ವರೂಪಕಮಲಮಶೋಕಮರಮತ್ಸುಖೀ ॥ ೫೦ ॥

ಅಕಲಃ ಪರನಿರ್ವಾಣೋ ಹ್ಯಸಂಗೋsದ್ವಯ ಏವ ಚ ।
ತೇನ ನಾರ್ಯಾಃ ಕಥಂ ದೇವಿ ನಿರ್ವಾಹಃ ಸಂಭವಿಷ್ಯತಿ ॥ ೫೧ ॥

ಅದ್ಯಾಪಿ ಶಾಸನಂ ಪ್ರಾಪ್ಯ ಗೃಹಮಾಯಾಹಿ ದುರ್ಮತಿಂ ।
ತ್ಯಜಾಸ್ಮಾಕಂ ಮಹಾಭಾಗೇ ಭವಿಷ್ಯತಿ ಚ ಶಂ ತವ ॥ ೫೨ ॥

ತ್ವದ್ಯೋಗ್ಯೋ ಹಿ ವರೋ ವಿಷ್ಣುಸ್ಸರ್ವಸದ್ಗುಣವಾನ್ ಪ್ರಭುಃ ।
ವೈಕುಂಠವಾಸೀ ಲಕ್ಷ್ಮೀಶೋ ನಾನಾಕ್ರೀಡಾವಿಶಾರದಃ ॥ ೫೩ ॥

---

೪೯. ಈ ಶಿವನು ಮೊದಲು ಮಹಾಸಾಧ್ವಿಯಾದ ದಕ್ಷಸುತೆ ಸತೀದೇವಿಯನ್ನು ಮದುವೆಯಾಗಿದ್ದನು. ಆದರೀಮೂಢನು ಕೆಲವುದಿನಗಳವರೆಗಾದರೂ ಅವಳೊಡನೆ ಸರಿಯಾಗಿ ಸಂಸಾರಮಾಡಲಿಲ್ಲ.

೫೦. ಆ ಸತೀದೇವಿಯ ಮೇಲೂ ಇಲ್ಲದಿದ್ದ ದೋಷವನ್ನು ಹೊರಿಸಿ, ಬಿಟ್ಟುಬಿಟ್ಟನು. ನಿರ್ಗುಣವೂ ದುಃಖವಿಲ್ಲದುದೂ ಆದಂತಹ ಆತ್ಮಸ್ವರೂಪವನ್ನು ಚಿಂತಿಸುತ್ತಾ ಸತಿಯ ವಿಷಯವನ್ನೇ ಮರೆತು ಸುಖವಾಗಿದ್ದನು.

೫೧. ಆ ಶಿವನು ಯಾವ ಗುಣಗಳೂ ಇಲ್ಲದವನು, ಮಹಾವಿರಕ್ತನು, ಯಾರ ಸಹವಾಸವೂ ಅವನಿಗೆ ಸೇರದು. ಒಬ್ಬಂಟಿಗನವನು. ಇಂತಹವನೊಡನೆ ಸ್ತ್ರೀಯ ಜೀವನವು ಸಾಗುವ ಬಗೆ ಹೇಗೆ?

೫೨. ಎಲೌ ಭಾಗ್ಯವತಿ, ಈಗಲಾದರೂ ನಮ್ಮ ಉಪದೇಶದಿಂದ ನಿನ್ನ ಕೆಟ್ಟ ಬುದ್ಧಿಯನ್ನು ಬಿಟ್ಟು ಮನೆಗೆ ತೆರಳು. ಆಗ ನಿನಗೆ ಸುಖವಾಗುವುದು.

೫೩. ವಿಷ್ಣುವು ನಿನಗೆ ಯೋಗ್ಯನಾದ ವರನು. ಅವನು ಸಕಲ ಸದ್ಗುಣಗಳಿಂದ ಶೋಭಿಸುತ್ತಲಿರುವನು. ಪವಿತ್ರವಾದ ವೈಕುಂಠದಲ್ಲಿ ಅವನ ವಾಸವು. ಸುಂದರಿಯಾದ ಲಕ್ಷ್ಮಿಯು ಅವನ ಮಡದಿಯು. ಅವನು ಅನೇಕ ಕ್ರೀಡೆಗಳನ್ನು ಬಲ್ಲವನು.

ತೇನ ತೇ ಕಾರಯಿಷ್ಯಾಮೋ ವಿವಾಹಂ ಸರ್ವಸೌಖ್ಯದಂ ।
ಇತೀದೃಶಂ ತ್ಯಜ ಹಠಂ ಸುಖಿತಾ ಭವ ಪಾರ್ವತಿ ॥ ೫೪ ॥

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಶ್ರುತ್ವಾ ಪಾರ್ವತೀ ಜಗದಂಬಿಕಾ ।
ವಿಹಸ್ಯ ಚ ಪುನಃ ಪ್ರಾಹ ಮುನೀನ್ ಜ್ಞಾನವಿಶಾರದಾನ್ ॥ ೫೫ ॥

॥ ಪಾರ್ವತ್ಯುವಾಚ ॥

ಸತ್ಯಂ ಭವದ್ಭಿಃ ಕಥಿತಂ ಸ್ವಜ್ಞಾನೇನ ಮುನೀಶ್ವರಾಃ ।
ಪರಂತು ಮೇ ಹಠೋ ನೈವ ಮುಕ್ತೋ ಭವತಿ ಹೇ ದ್ವಿಜಾಃ ॥ ೫೬ ॥

ಸ್ವತನೋಃ ಶೈಲಜಾತತ್ವಾತ್ಕಾಠಿಣ್ಯಂ ಸಹಜಂ ಸ್ಥಿರಂ ।
ಇತ್ಥಂ ವಿಚಾರ್ಯ ಸುಧಿಯಾ ಮಾಂ ನಿಷೇದ್ಧುಂ ನ ಚಾರ್ಹಥ ॥ ೫೭ ॥

ಸುರರ್ಷೇರ್ವಚನಂ ಪಥ್ಯಂ ತ್ಯಕ್ಷ್ಯೇ ನೈವ ಕದಾಚನ ।
ಗುರೂಣಾಂ ವಚನಂ ಪಥ್ಯಮಿತಿ ವೇದವಿದೋ ವಿದುಃ ॥ ೫೮ ॥

---

೫೪. ಆ ಹರಿಯೊಡನೆ ನಿನಗೆ ಮದುವೆಯನ್ನು ಮಾಡಿಸುವೆವು. ನಿನಗೆ ಆಗ ಚೆನ್ನಾಗಿ ಸುಖವಾಗುವುದು. ಈ ನಿನ್ನ ಹಠವನ್ನು ಬಿಡು. ನಮ್ಮ ಮಾತನ್ನು ಕೇಳಿ ಸುಖವಾಗಿರು ಎಂದರು.

೫೫. ಹೀಗೆ ಸಪ್ತಋಷಿಗಳು ಹೇಳಿದುದನ್ನು ಕೇಳಿ ಜಗನ್ಮಾತೆಯಾದ ಗಿರಿಜೆಯು ನಕ್ಕು ತಿರುಗಿ ಜ್ಞಾನಿಗಳಾದ ಆ ಮುನಿಗಳನ್ನು ಕುರಿತು,

೫೬. ಓ ಮುನಿಗಳೇ, ನೀವು ಹೇಳಿದುದು ನ್ಯಾಯವಾದುದೇ. ಆದರೆ ನನ್ನ ಹಠವನ್ನು ಮಾತ್ರ ನಾನು ಬಿಡಲಾರೆನು.

೫೭. ನನ್ನ ಶರೀರವು ಪರ್ವತದಿಂದ ಜನಿಸಿದುದು. ಆದಕಾರಣ ಅದು ಸ್ವಭಾವವಾಗಿ ಕಠಿಣವಾದುದು. ಅದು ತನ್ನ ಹಠವನ್ನು ಎಂದಿಗೂ ಬಿಡಲಾರದು. ಹೀಗೆ ತಿಳಿದು ನೀವು ನನ್ನನ್ನು ತಡೆಯಬೇಡಿರಿ.

೫೮. ನಾರದಮುನಿಯ ಮಾತು ನನಗೆ ಹಿತವಾಗಿದೆ. ಅದನ್ನು ನಾನು ಬಿಡಲಾರೆನು. ಗುರುಗಳ ಮಾತು ಹಿತವಾದುದು ಎಂದು ವೇದವನ್ನು ಬಲ್ಲವರು ಹೇಳುವರು.

ಗುರೂಣಾಂ ವಚನಂ ಸತ್ಯಮಿತಿ ಯೇಷಾಂ ದೃಢಾ ಮತಿಃ ।
ಇಹಾಮುತ್ರಾಪಿ ತೇಷಾಂ ಹಿ ಸುಖಂ ದುಃಖಂ ತು ನ ಕ್ವಚಿತ್ ॥ ೫೯ ॥

ಗುರೂಣಾಂ ವಚನಂ ಸತ್ಯಮಿತಿ ಯದ್ಧೃದಯೇ ನ ಧೀಃ ।
ಇಹಾಮುತ್ರಾಪಿ ತೇಷಾಂ ಹಿ ದುಃಖಂ ನ ಚ ಸುಖಂ ಕ್ವಚಿತ್ ॥ ೬೦ ॥

ಸರ್ವಥಾ ನ ಪರಿತ್ಯಾಜ್ಯಂ ಗುರೂಣಾಂ ವಚನಂ ದ್ವಿಜಾಃ ।
ಗೃಹಂ ವಸೇದ್ವಾ ಶೂನ್ಯಂ ಸ್ಯಾನ್ಮೇ ಹಠಸ್ಸುಖದಸ್ಸದಾ ॥ ೬೧ ॥

ಯದ್ಭವದ್ಭಿಃ ಸುಭಣಿತಂ ವಚನಂ ಮುನಿಸತ್ತಮಾಃ ।
ತದನ್ಯಥಾ ತದ್ವಿವೇಕಂ ವರ್ಣಯಾಮಿ ಸಮಾಸತಃ ॥ ೬೨ ॥

ಗುಣಾಲಯೋ ವಿಹಾರೀ ಚ ವಿಷ್ಣುಸ್ಸತ್ಯಂ ಪ್ರಕೀರ್ತಿತಃ ।
ಸದಾಶಿವೋಽಗುಣಃ ಪ್ರೋಕ್ತಸ್ತತ್ರ ಕಾರಣಮುಚ್ಯತೇ ॥ ೬೩ ॥

---

೫೯. ಗುರುಗಳ ಮಾತು ಸತ್ಯವೆಂದು ತಿಳಿಯುವವನಿಗೆ ಇಹಪರಗಳೆರಡರಲ್ಲಿಯೂ ಸುಖವು ಲಭಿಸುವುದು. ದುಃಖವು ಬರಲಾರದು.

೬೦. ಗುರುಗಳ ಮಾತಿನಲ್ಲಿ ಯಾವನಿಗೆ ನಂಬಿಕೆಯಿಲ್ಲವೋ ಅವನಿಗೆ ಇಹಪರಗಳೆರಡರಲ್ಲೂ ದುಃಖವೇ ಉಂಟಾಗುವುದು. ಸುಖವು ಲಭಿಸದು.

೬೧. ಆದುದರಿಂದ ಗುರುಗಳ ಮಾತನ್ನು ಮೀರಬಾರದು. ಮನೆಯಲ್ಲಿರಲಿ ಅಥವಾ ಇಲ್ಲದಿರಲಿ, ಅದರಿಂದ ನನಗೆ ಸುಖವಾಗಲಿ ಅಥವಾ ಆಗದಿರಲಿ, ನನ್ನ ಹಠವನ್ನು ಮಾತ್ರ ನಾನು ಬಿಡಲಾರೆನು.

೬೨. ಎಲೈ ಮುನಿಗಳೇ, ನೀವೀಗ ಹೇಳಿದುದು ಸರಿಯಾದುದಲ್ಲ. ಅದರ ಯುಕ್ತಾಯುಕ್ತ ವಿವೇಕವನ್ನು ಸಂಕ್ಷೇಪವಾಗಿ ಹೇಳುವೆನು.

೬೩. ವಿಷ್ಣುವು ಗುಣಗಳುಳ್ಳವನು. ಅದರಿಂದ ಅವನು ವಿಹಾರಮಾಡುವನು. ಆದರೆ ಶಿವನು, ನಿರ್ಗುಣನು. ಏತಕ್ಕೆಂದರೆ,

ಶಿವೋ ಬ್ರಹ್ಮಾ ವಿಕಾರಃ ಸ ಭಕ್ತಹೇತೋರ್ಧೃತಾಕೃತಿಃ ।
ಪ್ರಭುತಾಂ ಲೌಕಿಕೀಂ ನೈವ ಸಂದರ್ಶಯಿತುಮಿಚ್ಛತಿ ॥ ೬೪ ॥

ಅತಃ ಪರಮಹಂಸಾನಾಂ ಧಾರ್ಯತೇ ಸುಪ್ರಿಯಾ ಗತಿಃ ।
ಅವಧೂತಸ್ವರೂಪೇಣ ಪರಾನಂದೇನ ಶಂಭುನಾ ॥ ೬೫ ॥

ಭೂಷಣಾದಿರುಚಿರ್ಮಾಯಾಲಿಪ್ತಾನಾಂ ಬ್ರಹ್ಮಣೋ ನ ಚ ।
ಸ ಪ್ರಭುರ್ನಿರ್ಗುಣೋಽಜೋ ನಿರ್ಮಾಯೋಽಲಕ್ಷ್ಯಗತಿರ್ವಿರಾಟ್ ॥ ೬೬ ॥

ಧರ್ಮಜಾತ್ಯಾದಿಭಿಶ್ಶಂಭುರ್ನಾನುಗೃಹ್ಣಾತಿ ವೈ ದ್ವಿಜಾಃ ।
ಗುರೋರನುಗ್ರಹೇಣೈವ ಶಿವಂ ಜಾನಾತಿ ತತ್ತ್ವತಃ ॥ ೬೭ ॥

ಚೇಚ್ಛಿವಸ್ಸ ಹಿ ಮೇ ವಿಪ್ರಾ ವಿವಾಹಂ ನ ಕರಿಷ್ಯತಿ ।
ಅವಿವಾಹಾ ಸದಾಹಂ ಸ್ಯಾಂ ಸತ್ಯಂ ಸತ್ಯಂ ವದಾಮ್ಯಹಂ ॥ ೬೮ ॥

---

೬೪. ಶಿವನು ಪರಬ್ರಹ್ಮಸ್ವರೂಪನು. ಅವನಿಗೆ ವಿಕಾರಗಳಿಲ್ಲ. ಭಕ್ತರಿಗಾಗಿ ಅವನು ಸಗುಣರೂಪವನ್ನು ಕೈಗೊಳ್ಳುವನು. ಆದರೂ ಅವನು ನಿಜವಾದ ಪ್ರಭುತ್ವವನ್ನು ತೋರಿಸಲಿಚ್ಛಿಸುವುದಿಲ್ಲ.

೬೫. ಆ ಶಿವನು ಅವಧೂತ (ದಿಗಂಬರ) ರ ಸ್ವರೂಪವನ್ನು ಧರಿಸಿ ಆತ್ಮಾನಂದವನ್ನು ಅನುಭವಿಸುತ್ತಾ ಪರಮಹಂಸ (ಸನ್ಯಾಸಿ) ರ ಮಾರ್ಗವನ್ನನುಸರಿಸಿರುವನು.

೬೬. ವೇಷಭೂಷಣ ಮೊದಲಾದ ಅಲಂಕಾರಗಳಲ್ಲಿ ಅಜ್ಞಾನಿಗಳಿಗೆ ಮಾತ್ರ ಪ್ರೀತಿಯುಂಟಾಗುವುದು. ಆದರೆ ಜ್ಞಾನರೂಪನಾದ ಪರಮೇಶ್ವರನಿಗೆ ಆರೀತಿ ಇಲ್ಲ. ಅವನು ನಿರ್ಗುಣನು, ಉತ್ಪತ್ತಿಯಿಲ್ಲದವನು, ಮಾಯೆಗಧೀನನಲ್ಲ. ಅವನ ಗತಿಯನ್ನು ತಿಳಿಯಲಸಾಧ್ಯವು. ಅವನು ವಿರಾಟ್ಪುರುಷನು.

೬೭. ಧರ್ಮ ಜಾತಿ ಮುಂತಾದುವುಗಳಿಂದ ಶಿವನು ಸಂತುಷ್ಟನಾಗುವುದಿಲ್ಲ. ಗುರುವಿನ ಅನುಗ್ರಹದಿಂದಲೇ ಶಿವನನ್ನು ನಿಜವಾಗಿ ತಿಳಿಯಬಹುದು.

೬೮. ಎಲೈ ಬ್ರಾಹ್ಮಣೋತ್ತಮರೇ, ಕೇಳಿ ಆ ಶಿವನು ನನ್ನನ್ನು ಮದುವೆಯಾಗಲಿಚ್ಛಿಸದಿದ್ದರೆ ನಾನು ಸದಾ ವಿವಾಹವಿಲ್ಲದೇ ಬ್ರಹ್ಮಚಾರಿಣಿಯಾಗಿಯೇ ಇರುವೆನು. ಈ ಮಾತು ನಿಶ್ಚಯವು.

ಉದಯತಿ ಯದಿ ಭಾನುಃ ಪಶ್ಚಿಮೇ ದಿಗ್ವಿಭಾಗೇ
ಪ್ರಚಲತಿ ಯದಿ ಮೇರುಃ ಶೀತತಾಂ ಯಾತಿ ವಹ್ನಿಃ ।
ವಿಕಸತಿ ಯದಿ ಪದ್ಮಂ ಪರ್ವತಾಗ್ರೇ ಶಿಲಾಯಾಂ
ನ ಹಿ ಚಲತಿ ಹಠೋ ಮೇ ಸತ್ಯಮೇತದ್ಬ್ರವೀಮಿ ॥ ೧೯ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತಾನ್ ಪ್ರಣಮ್ಯಾಶು ಮುನೀನ್ ಸಾ ಪರ್ವತಾತ್ಮಜಾ ।
ವಿರರಾಮ ಶಿವಂ ಸ್ಮೃತ್ವಾ ನಿರ್ವಿಕಾರೇಣ ಚೇತಸಾ ॥ ೨೦ ॥

ಋಷಯೋಽಪೀತ್ಥಮಾಜ್ಞಾಯ ಗಿರಿಜಾಯಾಸ್ಸುನಿಶ್ಚಯಂ ।
ಪ್ರೋಚುರ್ಜಯಗಿರಂ ತತ್ರ ದದೌ ಚಾಶಿಷಮುತ್ತಮಾಂ ॥ ೨೧ ॥

ಅಥ ಪ್ರಣಮ್ಯ ತಾಂ ದೇವೀಂ ಮುನಯೋ ಹೃಷ್ಟಮಾನಸಾಃ ।
ಶಿವಸ್ಥಾನಂ ದ್ರುತಂ ಜಗ್ಮುಃ ತತ್ಪರೀಕ್ಷಕರಾ ಮುನೇ ॥ ೨೨ ॥

---

೧೯. ಸೂರ್ಯನು ಪಶ್ಚಿಮದಿಕ್ಕಿನಲ್ಲಿ ಉದಯಿಸಿದರೂ ನಾನು ನನ್ನ ಪ್ರತಿಜ್ಞೆಯನ್ನು ಬಿಡಲಾರೆನು. ಮೇರುಪರ್ವತವು ಚಲಿಸಿದರೂ, ಅಗ್ನಿಯು ಶೀತಸ್ವಭಾವವುಳ್ಳದುದಾದರೂ, ಕಮಲವು ಬೆಟ್ಟದ ಶಿಖರದ ಕಲ್ಲಿನಮೇಲೆ ಹುಟ್ಟಿದರೂ ಸಹ ನಾನು ನನ್ನ ಹಠವನ್ನು ಬಿಡಲಾರೆನು. ಇದು ಸತ್ಯವಾದ ಮಾತು ಎಂದಳು.

೨೦. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಪಾರ್ವತಿಯು ಆ ಸಪ್ತಋಷಿಗಳನ್ನು ನಮಸ್ಕರಿಸಿ ಶಿವನನ್ನು ಸ್ಮರಿಸುತ್ತಾ ನಿಶ್ಚಂಚಲವಾದ ಮನಸ್ಸಿನಿಂದ ಸುಮ್ಮನಾದಳು.

೨೧. ಆಗ ಸಪ್ತಋಷಿಗಳು ಗಿರಿಜೆಯ ಆರೀತಿಯಾದ ನಿಶ್ಚಯವನ್ನು ತಿಳಿದು ಸಂತೋಷದಿಂದ ಜಯಧ್ವನಿಯನ್ನು ಮಾಡಿ ಆ ಗಿರಿಜೆಗೆ ಉತ್ತಮವಾದ ಆಶೀರ್ವಾದವನ್ನು ಮಾಡಿದರು.

೨೨-೨೩. ಬಳಿಕ ಆ ಮುನಿಗಳು ಗಿರಿಜಾದೇವಿಯನ್ನು ನಮಸ್ಕರಿಸಿ, ಸಂತೋಷದಿಂದ ಶಿವನ ಬಳಿಗೆ ಹೋಗಿ ಶಿವನನ್ನು ನಮಸ್ಕರಿಸಿ ಅವನಿಗೆ ನಡೆದ ಸಮಾಚಾರ

ತತ್ರ ಗತ್ವಾ ಶಿವಂ ನತ್ವಾ ವೃತ್ತಾಂತಂ ವಿನಿವೇದ್ಯ ತತ್ ।
ತದಾಜ್ಞಾಂ ಸಮನುಪ್ರಾಪ್ಯ ಸ್ವರ್ಲೋಕಂ ಜಗ್ಮುರಾದರಾತ್ ॥ ೭೩॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಪಂಚವಿಂಶೋಽಧ್ಯಾಯಃ



---

ವನ್ನೆಲ್ಲಾ ತಿಳಿಸಿ ಅವನಪ್ಪಣೆಯನ್ನು ಪಡೆದು ಹರ್ಷದಿಂದ ತಮ್ಮ ಸ್ಥಾನವಾದ ಸ್ವರ್ಗ ಲೋಕಕ್ಕೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಷಡ್ವಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಗತೇಷು ತೇಷು ಮುನಿಷು ಸ್ವಂ ಲೋಕಂ ಶಂಕರಃ ಸ್ವಯಂ ।
ಪರೀಕ್ಷಿತುಂ ತಪೋ ದೇವ್ಯಾ ಐಚ್ಛತ್ಸೂತಿಕರಃ ಪ್ರಭುಃ ॥ ೧ ॥

ಪರೀಕ್ಷಾಛದ್ಮನಾಃ ಶಂಭುರ್ದ್ರಷ್ಟುಂ ತಾಂ ತುಷ್ಟಮಾನಸಃ ।
ಜಾಟಿಲಂ ರೂಪಮಾಸ್ಥಾಯ ಸ ಯಯೌ ಪಾರ್ವತೀವನಂ ॥ ೨ ॥

ಅತೀವ ಸ್ಥವಿರೋ ವಿಪ್ರದೇಹಧಾರೀ ಸ್ವತೇಜಸಾ ।
ಪ್ರಜ್ವಲನ್ಮನಸಾ ಹೃಷ್ಟೋ ದಂಡೀ ಛತ್ರೀ ಬಭೂವ ಹ ॥ ೩ ॥

---

### ಇಪ್ಪತ್ತಾರನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು :—ಎಲೈ ನಾರದ, ಹಾಗೆ ಸಪ್ತಋಷಿಗಳು ತಮ್ಮ ಲೋಕಕ್ಕೆ ತೆರಳಿದಮೇಲೆ ಜಗತ್ಕರ್ತನಾದ ಶಂಕರನು ಪಾರ್ವತಿಯ ತಪಸ್ಸನ್ನು ತಾನೇ ಪರೀಕ್ಷೆಮಾಡಲು ಯೋಚಿಸಿ ಅದಕ್ಕಾಗಿ ವೃದ್ಧಬ್ರಹ್ಮಚಾರಿಯ ವೇಷವನ್ನು ಧರಿಸಿ ಪಾರ್ವತಿಯ ತಪೋವನಕ್ಕೆ ತೆರಳಿದನು.

೩. ಆ ಶಿವನು ತುಂಬಾ ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿದನು. ಆದರೂ ತನ್ನ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದನು. ಛತ್ರಿಯನ್ನು ಹಿಡಿದು ಕೋಲನ್ನೂರಿಕೊಂಡು ನಡೆಯುತ್ತಿದ್ದನು.

ತತ್ರಾಪಶ್ಯತ್ಸ್ಥಿತಾಂ ದೇವೀಂ ಸಖೀಭಿಃ ಪರಿವಾರಿತಾಂ ।
ವೇದಿಕೋಪರಿ ಶುದ್ಧಾಂ ತಾಂ ಶಿವಾಮಿವ ವಿಧೋಃ ಕಲಾಂ ॥ ೪ ॥

ಶಂಭುರ್ನಿರೀಕ್ಷ್ಯ ತಾಂ ದೇವೀಂ ಬ್ರಹ್ಮಚಾರಿಸ್ವರೂಪವಾನ್ ।
ಉಪಕಂಠಂ ಯಯೌ ಪ್ರೀತ್ಯಾ ತದಾಸೌ ಭಕ್ತವತ್ಸಲಃ ॥ ೫ ॥

ಆಗತಂ ತಂ ತದಾ ದೃಷ್ಟ್ವಾ ಬ್ರಾಹ್ಮಣಂ ತೇಜಸಾದ್ಭುತಂ ।
ಅಪೂಜಯಚ್ಛಿವಾ ದೇವೀ ಸರ್ವಪೂಜೋಪಕಾರಕೈಃ ॥ ೬ ॥

ಸುಸತ್ಕೃತಂ ಸಂವಿಧಾಭಿಃ ಪೂಜಿತಂ ಪರಯಾ ಮುದಾ ।
ಪಾರ್ವತೀ ಕುಶಲಂ ಪ್ರೀತ್ಯಾ ಪಪ್ರಚ್ಛ ದ್ವಿಜಮಾದರಾತ್ ॥ ೭ ॥

॥ ಪಾರ್ವತ್ಯುವಾಚ ॥

ಬ್ರಹ್ಮಚಾರಿಸ್ವರೂಪೇಣ ಕಸ್ತ್ವಂ ಹಿ ಕುತ ಆಗತಃ ।
ಇದಂ ವನಂ ಭಾಸಯಸೇ ವದ ವೇದವಿದಾಂ ವರ ॥ ೮ ॥

---

೪. ಆ ತಪೋವನಕ್ಕೆ ಹೋಗಿ ಅಲ್ಲಿ ಸಖಿಯರೊಡಸಿರುವ ದೇವಿಯನ್ನು ಶಿವನು ಕಂಡನು. ಆ ಗಿರಿಜೆಯು ವೇದಿಕೆಯಲ್ಲಿ ಕುಳಿತಿದ್ದಳು. ಬಿದಿಗೆಯ ಚಂದ್ರನಂತೆ ಅವಳ ಶರೀರವು ತಪಸ್ಸಿನಿಂದ ತುಂಬಾ ಕೃಶವಾಗಿದ್ದಿತು.

೫. ಬ್ರಹ್ಮಚಾರಿವೇಷವನ್ನು ಧರಿಸಿದ ಭಕ್ತವತ್ಸಲನಾದ ಶಂಕರನು ಹಾಗಿರುವ ಗಿರಿಜೆಯನ್ನು ನೋಡಿ ಪ್ರೀತಿಯಿಂದ ಅವಳ ಬಳಿಗೆ ಹೋಗಲು,

೬. ಆ ಮಹಾತೇಜಸ್ವಿಯಾದ ಬ್ರಾಹ್ಮಣನನ್ನು ನೋಡಿ ಗಿರಿಜೆಯು ಆದರಪೂರ್ವಕವಾಗಿ ಪೂಜಾಸಾಮಗ್ರಿಗಳಿಂದ ಅವನನ್ನು ಪೂಜಿಸಿದಳು.

೭. ಪೂಜೋಪಚಾರಗಳಿಂದ ಬ್ರಾಹ್ಮಣನನ್ನು ಸತ್ಕರಿಸಿದಮೇಲೆ ಪ್ರೀತಿಯಿಂದ ಅವನನ್ನು ಕುರಿತು ಕುಶಲಪ್ರಶ್ನೆಯನ್ನು ಮಾಡಿದಳು.

೮. ಪಾರ್ವತಿಯು ಹೇಳಿದಳು:—ಓ ಬ್ರಾಹ್ಮಣೋತ್ತಮ, ನಿನ್ನ ಬ್ರಹ್ಮವರ್ಚಸ್ಸಿನಿಂದ ಈ ವನವು ಪ್ರಕಾಶಿಸುತ್ತಲಿದೆ. ವೇದಾಧ್ಯಯನಸಂಪನ್ನನಾಗಿರುವೆ, ನೀನು ಯಾರು? ಎಲ್ಲಿಂದ ಬಂದೆ?. ಇದೆಲ್ಲವನ್ನೂ ನನಗೆ ಹೇಳೆನಲು,

॥ ವಿಪ್ರ ಉವಾಚ ॥
ಅಹಮಿಚ್ಛಾಭಿಗಾಮೀ ಚ ವೃದ್ಧೋ ವಿಪ್ರತನುಸ್ಸುಧೀಃ ।
ತಪಸ್ವೀ ಸುಖದೋಽನ್ಯೇಷಾಮುಪಕಾರೀ ನ ಸಂಶಯಃ ॥ ೯ ॥

ಕಾ ತ್ವಂ ಕಸ್ಯಾಸಿ ತನಯಾ ಕಿಮರ್ಥಂ ವಿಜನೇ ವನೇ ।
ತಪಶ್ಚರಸಿ ದುರ್ಧರ್ಷಂ ಮುನಿಭಿಃ ಪ್ರಪದ್ಯೈರಪಿ ॥ ೧೦ ॥

ನ ಬಾಲಾ ನ ಚ ವೃದ್ಧಾಸಿ ತರುಣೀ ಭಾಸಿ ಶೋಭನಾ ।
ಕಥಂ ಪತಿಂ ವಿನಾ ತೀಕ್ಷ್ಣಂ ತಪಶ್ಚರಸಿ ವೈ ವನೇ ॥ ೧೧ ॥

ಕಿಂ ತ್ವಂ ತಪಸ್ವಿನೀ ಭದ್ರೇ ಕಸ್ಯಚಿತ್ಸಹಚಾರಿಣೀ ।
ತಪಸ್ವೀ ಸ ನ ಪುಷ್ಣಾತಿ ದೇವಿ ತ್ವಾಂ ಚ ಗತೋಽನ್ಯತಃ ॥ ೧೨ ॥

ವದ ಕಸ್ಯ ಕುಲೇ ಜಾತಾ ಕಃ ಪಿತಾ ತವ ಕಾ ವಿಧಾ ।
ಮಹಾಸೌಭಾಗ್ಯರೂಪಾ ತ್ವಂ ವೃಥಾ ತವ ತಪೋರತಿಃ ॥ ೧೩ ॥

---

೯. ವಿಪ್ರನಿಂತೆಂದನು :—ನಾನು ಬ್ರಾಹ್ಮಣತಪಸ್ವಿಯು. ಚೆನ್ನಾಗಿ ತಿಳಿದವನು. ಬೇಕಾದೆಡೆ ಸಂಚರಿಸುವೆನು. ಪರರಿಗೆ ಉಪಕಾರವನ್ನೂ ಸುಖವನ್ನೂ ಉಂಟುಮಾಡುವುದೇ ನನ್ನ ಉದ್ದೇಶವು.

೧೦. ಎಲೌ ತಪಸ್ವಿನಿ, ನಿನ್ನ ಹೆಸರೇನು ? ಯಾರ ಮಗಳು ? ಈ ನಿರ್ಜನವಾದ ಅರಣ್ಯದಲ್ಲಿ ಮಹಾಮುನಿಗಳೂ ಮಾಡದಂತಹ ಘೋರ ತಪಸ್ಸನ್ನೇಕೆ ಮಾಡುತ್ತಲಿರುವೆ ?

೧೧. ನೀನು ಬಾಲಿಕೆಯೂ ಅಲ್ಲ. ಮುದುಕಿಯೂ ಅಲ್ಲ. ತರುಣಿಯಾಗಿರುವೆ. ಇಷ್ಟರಲ್ಲಿ ನಿನಗೆ ಬಹುಶಃ ಮದುವೆಯಾಗಿರಬೇಕು. ಹೀಗಿದ್ದೂ ಪತಿಯನ್ನು ಬಿಟ್ಟು ಈ ವನದಲ್ಲಿ ಘೋರವಾಗಿ ತಪಸ್ಸನ್ನೇಕೆ ಆಚರಿಸುತ್ತಲಿರುವೆ ?

೧೨. ಎಲೌ ಭದ್ರೇ, ನೀನು ಯಾವನೊಬ್ಬ ತಪಸ್ವಿಯ ಮಡದಿಯೇ ? ಆ ತಪಸ್ವಿಯು ನಿನ್ನನ್ನು ಸಲಹದೇ ತಪಸ್ಸಿಗಾಗಿ ಬೇರೆಡೆಗೆ ಹೋಗಿರುವನೇ ?

೧೩. ನೀನು ಯಾವ ಕುಲದಲ್ಲಿ ಜನಿಸಿರುವೆ ? ನಿನ್ನ ತಂದೆ ಯಾರು ? ನಿನ್ನ ಅವಸ್ಥೆ ಏನು ? ನಿನ್ನನ್ನು ನೋಡಿದರೆ ಮಹಾಭಾಗ್ಯವತಿಯಾಗಿ ಕಾಣುವೆ. ಇಂತಹ ನೀನು ತಪಸ್ಸು ಮಾಡುತ್ತಲಿರುವುದು ವ್ಯರ್ಥವು.

ಕಿಂ ತ್ವಂ ವೇದಪ್ರಸೂರ್ಲಕ್ಷ್ಮೀಃ ಕಿಂ ಸುರೂಪಾ ಸರಸ್ವತೀ ।
ಏತಾಸು ಮಧ್ಯೇ ಕಾ ವಾ ತ್ವಂ ನಾಹಂ ತರ್ಕಿತುಮುತ್ಸಹೇ ॥ ೧೪ ॥

॥ ಪಾರ್ವತ್ಯುವಾಚ ॥

ನಾಹಂ ವೇದಪ್ರಸೂರ್ವಿಪ್ರ ನ ಲಕ್ಷ್ಮೀಶ್ಚ ಸರಸ್ವತೀ ।
ಅಹಂ ಹಿಮಾಚಲಸುತಾ ಸಾಂಪ್ರತಂ ನಾಮ ಪಾರ್ವತೀ ॥ ೧೫ ॥

ಪುರಾ ದಕ್ಷಸುತಾ ಜಾತಾ ಸತೀ ನಾಮಾನ್ಯಜನ್ಮನಿ ।
ಯೋಗೇನ ತ್ಯಕ್ತದೇಹಾಹಂ ಯತ್ಪಿತ್ರಾ ನಿಂದಿತಃ ಪತಿಃ ॥ ೧೬ ॥

ಅತ್ರ ಜನ್ಮನಿ ಸಂಪ್ರಾಪ್ತಶ್ಶಿವೋಽಪಿ ವಿಧಿವೈಭವಾತ್ ।
ಮಾಂ ತ್ಯಕ್ತ್ವಾ ಭಸ್ಮಸಾತ್ಕೃತ್ಯ ಮನ್ಮಥಂ ಸ ಜಗಾಮ ಹ ॥ ೧೭ ॥

ಪ್ರಯಾತೇ ಶಂಕರೇ ತಾಪೋದ್ವಿಗ್ನಾ ಚಾಹಂ ಪಿತುರ್ಗೃಹಾತ್ ।
ಆಗತಾ ತಪಸೇ ವಿಪ್ರ ಸುದೃಢಾ ಸ್ವರ್ಣದೀತಟೇ ॥ ೧೮ ॥

---

೧೪. ಅಥವಾ ನೀನು ವೇದಮಾತೆಯೇ? ಲಕ್ಷ್ಮೀದೇವಿಯೇ? ಇಲ್ಲವೇ ಸರಸ್ವತೀದೇವಿಯೇ? ಈ ಸುಂದರಿಯರ ಮಧ್ಯದಲ್ಲಿ ಬೆಳಗುತ್ತಿರುವ ನೀನಾರು? ಮುದಕನಾದ ನನಗೆ ಊಹಿಸಲೂ ಶಕ್ತಿಯಿಲ್ಲ ಎಂದನು.

೧೫. ಪಾರ್ವತಿಯು ಹೇಳಿದಳು:—ಓ ವಿಪ್ರೋತ್ತಮ, ನಾನು ವೇದಮಾತೆಯೂ ಅಲ್ಲ. ಲಕ್ಷ್ಮೀಸರಸ್ವತಿಯರೂ ಅಲ್ಲ. ಹಿಮವಂತನ ಪುತ್ರಿಯು. ಈಗಿನ ನನ್ನ ಹೆಸರು "ಪಾರ್ವತೀ" ಎಂದು.

೧೬. ಹಿಂದಿನ ಜನ್ಮದಲ್ಲಿ ನಾನು ದಕ್ಷಪುತ್ರಿಯಾಗಿದ್ದೆನು. ಆಗ ನನ್ನ ಹೆಸರು ಸತೀದೇವಿಯೆಂದು. ಆ ಜನ್ಮದಲ್ಲಿ ನನ್ನ ಪತಿಯನ್ನು ತಂದೆಯು ನಿಂದಿಸಲು ಅದರಿಂದ ಅಪಮಾನಗೊಂಡು ಯೋಗದಿಂದ ಶರೀರವನ್ನು ಬಿಟ್ಟೆನು.

೧೭. ಈಜನ್ಮದಲ್ಲಿ ಶಿವನ ಸೇವೆಯು ಪುನಃ ಅದೃಷ್ಟವಶಾತ್ ನನಗೆ ಲಭಿಸಿತು. ಆದರೆ ಅಷ್ಟರಲ್ಲಿಯೇ ಆ ಶಿವನು ಮನ್ಮಥನನ್ನು ಭಸ್ಮಮಾಡಿ ನನ್ನನ್ನು ಬಿಟ್ಟು ಹೋದನು.

೧೮. ಶಂಕರನು ಹೊರಟುಹೋಗಲು ನಾನು ತುಂಬಾ ದುಃಖಗೊಂಡು ತಂದೆಯ ಮನೆಯಿಂದ ಹೊರಟುಬಂದು ಸ್ಥಿರನಿಶ್ಚಯದಿಂದ ಈ ಗಂಗಾದಡಕ್ಕೆ ತಪಸ್ಸಿಗಾಗಿ ಬಂದಿರುವೆನು.

ಕೃತ್ವಾ ತಪಃ ಕಠೋರಂ ಚ ಸುಚಿರಂ ಪ್ರಾಣವಲ್ಲಭಂ ।
ನ ಪ್ರಾಪ್ಯಾಗ್ನೌ ವಿವಿಕ್ಷಂತೀ ತ್ವಾಂ ದೃಷ್ಟ್ವಾ ಸಂಸ್ಥಿತಾ ಕ್ಷಣಂ　॥ ೧೯ ॥

ಗಚ್ಛ ತ್ವಂ ಪ್ರವಿಶಾಮ್ಯಗ್ನೌ ಶಿವೇನಾಂಗೀಕೃತಾ ನ ಹಿ ।
ಯತ್ರ ಯತ್ರ ಜನುರ್ಲಪ್ಸ್ಯೇ ವರಿಷ್ಯಾಮಿ ಶಿವಂ ವರಂ .　॥ ೨೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪಾರ್ವತೀ ವಹ್ನೌ ತತ್ಪುರಃ ಪ್ರವಿವೇಶ ಸಾ ।
ನಿಷಿಧ್ಯಮಾನಾ ಪುರತೋ ಬ್ರಾಹ್ಮಣೇನ ಪುನಃ ಪುನಃ　॥ ೨೧ ॥

ವಹ್ನಿಪ್ರವೇಶಂ ಕುರ್ವತ್ಯಾಃ ಪಾರ್ವತ್ಯಾಸ್ತತ್ಪ್ರಭಾವತಃ ।
ಬಭೂವ ತತ್ಕ್ಷಣಂ ಸದ್ಯೋ ವಹ್ನಿಶ್ಚಂದನಪಂಕವತ್　॥ ೨೨ ॥

ಕ್ಷಣಂ ತದಂತರೇ ಸ್ಥಿತ್ವಾ ಹ್ಯುತ್ಪತಂತೀಂ ದಿವಂ ದ್ವಿಜಃ
ಪುನಃ ಪಪ್ರಚ್ಛ ಸಹಸಾ ವಿಹಸನ್ ಸುತನುಂ ಶಿವಃ　॥ ೨೩ ॥

---

೧೯. ಬಹಳಕಾಲ, ಕಠೋರ ತಪಸ್ಸನ್ನು ಮಾಡಿದರೂ ಪ್ರಾಣಕಾಂತನಾದ ಶಿವನು ನನಗೆ ಇನ್ನೂ ಪ್ರಸನ್ನನಾಗಿಲ್ಲ. ಆದಕಾರಣ ಅಗ್ನಿಪ್ರವೇಶಮಾಡಬೇಕೆಂದಿದ್ದೆನು. ಅಷ್ಟರಲ್ಲಿಯೇ ನಿನ್ನನ್ನು ನೋಡಿದ್ದರಿಂದ ಸುಮ್ಮನಿರಬೇಕಾಯಿತು.

೨೦. ಓ ಬ್ರಾಹ್ಮಣ. ನೀನು ಹೊರಡು. ಶಿವನು ಅಂಗೀಕರಿಸದಿದ್ದುದರಿಂದ ನಾನು ಅಗ್ನಿಪ್ರವೇಶವನ್ನು ಮಾಡುವೆನು. ತಿರುಗಿ ಎಲ್ಲೆಲ್ಲಿ ಜನ್ಮಪಡೆದರೂ ಅಲ್ಲೆಲ್ಲಾ ಶಿವನನ್ನೇ ಪತಿಯನ್ನಾಗಿ ಪಡೆಯುವೆನು ಎಂದಳು.

೨೧. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಗಿರಿಜೆಯು ಆ ಬ್ರಾಹ್ಮಣನೆದುರಿಗೇ ಅಗ್ನಿಯನ್ನು ಪ್ರವೇಶಿಸಿದಳು. ಅವನೆಷ್ಟು ತಡೆದರೂ ನಿಲ್ಲಲಿಲ್ಲ.

೨೨. ಪಾರ್ವತಿಯು ಅಗ್ನಿಪ್ರವೇಶವನ್ನು ಮಾಡಿದರೂ ಅವಳ ತಪಃಪ್ರಭಾವದಿಂದ ಅಗ್ನಿಯು ದಹಿಸದೆ ಆಕೂಡಲೇ ಚಂದನದಂತೆ ಶೀತಲವಾಯಿತು.

೨೩. ಸ್ವಲ್ಪಹೊತ್ತು ಅಗ್ನಿಯಲ್ಲಿ ನಿಂತು ಅದು ಸುಡದಿರಲು ಪಾರ್ವತಿಯು ಮೇಲೆ ಬಂದಳು. ಅವಳನ್ನು ನೋಡಿ ನಗುತ್ತಾ ಬ್ರಾಹ್ಮಣರೂಪಿಯಾದ ಶಿವನು ಮತ್ತೆ ಕೇಳಿದನು.

॥ ದ್ವಿಜ ಉವಾಚ ॥

ಅಹೋ ತಪಸ್ತೇ ಕಿಂ ಭದ್ರೇ ನ ಬುದ್ಧಂ ಕಿಂಚಿದೇವ ಹಿ ।
ನ ದಗ್ಧೋ ವಹ್ನಿನಾ ದೇಹೋ ನ ಚ ಪ್ರಾಪ್ತಂ ಮನೀಷಿತಂ ॥ ೨೪ ॥

ಅತಸ್ಸತ್ಯಂ ನಿಕಾಮಂ ವೈ ವದ ದೇವಿ ಮನೋರಥಂ ।
ಮಮಾಗ್ರೇ ವಿಪ್ರವರ್ಯಸ್ಯ ಸರ್ವಾನಂದಪ್ರದಸ್ಯ ಹಿ ॥ ೨೫ ॥

ಯಥಾವಿಧಿ ತ್ವಯಾ ದೇವಿ ಕೀರ್ತ್ಯತಾಂ ಸರ್ವಥಾತ್ಮನಾ ।
ತಸ್ಮಾನ್ಮೈತ್ರೀ ಚ ಸಂಜಾತಾ ಕಾರ್ಯಂ ಗೋಪ್ಯಂ ತ್ವಯಾ ನ ಹಿ ॥ ೨೬ ॥

ಕಿಮಿಚ್ಛಸಿ ವರಂ ದೇವಿ ಪ್ರಷ್ಟುಮಿಚ್ಛಾಮ್ಯತಃ ಪರಂ ।
ತ್ವಯ್ಯೇವ ತದಸೌ ದೇವಿ ಫಲಂ ಸರ್ವಂ ಪ್ರದೃಶ್ಯತೇ ॥ ೨೭ ॥

ಪರಾರ್ಥೇ ಚ ತಪಶ್ಚೇದ್ವೈ ತಿಷ್ಠೇತ್ತು ತಪ ಏವ ತತ್ ।
ರತ್ನಂ ಹಸ್ತೇ ಸಮಾದಾಯ ಹಿತ್ವಾ ಕಾಚಸ್ತು ಸಂಚಿತಃ ॥ ೨೮ ॥

---

೨೪. ಎಲೌ ಭದ್ರೇ, ನಿನ್ನ ತಪಸ್ಸು ಆಶ್ಚರ್ಯಕರವಾದುದು. ನಿನ್ನ ಶರೀರವು ಸುಟ್ಟುಹೋಗಲೂ ಇಲ್ಲ. ನಿನ್ನಿಷ್ಟಸಿದ್ಧಿಯೂ ಆಗಲಿಲ್ಲ. ಇದರ ವಿಚಾರವೇ ಹೀಗೆಂದು ತಿಳಿಯಲಿಲ್ಲವಲ್ಲಾ?

೨೫. ಆದುದರಿಂದ ನಿನ್ನ ನಿಜವಾದ ಮನೋರಥವನ್ನು ಬ್ರಾಹ್ಮಣೋತ್ತಮನಾದ ನನ್ನೆದುರಿಗೆ ಹೇಳು. ಇದರಿಂದ ನಿನಗೆ ಕೆಡುಕಾಗಲಾರದು. ಸುಖವೇ ಲಭಿಸುವುದು.

೨೬. ನಿನ್ನ ಇಷ್ಟಾರ್ಥವನ್ನು ನನಗೆ ಸ್ಪಷ್ಟವಾಗಿ ಹೇಳು. ಮಾತನಾಡುತ್ತಾ ಈಗ ನಮ್ಮಿಬ್ಬರಿಗೂ ಸ್ನೇಹವುಂಟಾಗಿದೆ. ಸ್ನೇಹಿತನಲ್ಲಿ ಮುಚ್ಚಿಡಬೇಕಾದಂತಹ ಕಾರ್ಯವು ಯಾವುದೂ ಇಲ್ಲವಷ್ಟೆ?

೨೭. ಮುಂದೆ ನೀನು ಯಾವ ವರವನ್ನಿಚ್ಛಿಸುವೆ? ಎಂದು ತಿಳಿಯಲಿಷ್ಟಪಡುವೆನು. ಏಕೆಂದರೆ ನಿನ್ನಲ್ಲಿಯೇ ಎಲ್ಲಾ ಫಲಗಳೂ ಕಾಣುತ್ತಿರುವುವು.

೨೮. ಬೇರೆ ಫಲಕ್ಕಾಗಿ ತಪಸ್ಸು ಮಾಡುವುದಾದರೆ ಅಂತಹ ತಪಸ್ಸು ಬೇಡವೇ ಬೇಡ. ಕೈಯಲ್ಲಿದ್ದ ರತ್ನವನ್ನು ಬಿಸುಟು ಗಾಜನ್ನು ಹುಡುಕುವುದುಂಟೇ?

ಈದೃಶಂ ತವ ಸೌಂದರ್ಯಂ ಕಥಂ ವ್ಯರ್ಥೀಕೃತಂ ತ್ವಯಾ ।
ಹಿತ್ವಾ ವಸ್ತ್ರಾಣ್ಯನೇಕಾನಿ ಧೃತಂ ಚರ್ಮಾದಿಕಂ ತ್ವಯಾ ॥ ೨೯ ॥

ತತ್ಸರ್ವಂ ಕಾರಣಂ ಬ್ರೂಹಿ ತಪಸಸ್ತ್ವಸ್ಯ ಸತ್ಯತಃ ।
ತಚ್ಛ್ರುತ್ವಾ ವಿಪ್ರವರ್ಯೋಽಹಂ ಯಥಾ ಹರ್ಷಮವಾಪ್ನುಯಾತ್ ॥೩೦॥

॥ ಬ್ರಹ್ಮೋವಾಚ ॥
ಇತಿ ಪೃಷ್ಟಾ ತದಾ ತೇನ ಸಖೀಂ ಪ್ರೈರಯತಾಂಬಿಕಾ ।
ತನ್ಮುಖೇನೈವ ತತ್ಸರ್ವಂ ಕಥಯಾಮಾಸ ಸುವ್ರತಾ ॥ ೩೧ ॥

ತಯಾ ಚ ಪ್ರೇರಿತಾ ತತ್ರ ಪಾರ್ವತ್ಯಾ ವಿಜಯಾಭಿಧಾ ।
ಪ್ರಾಣಪ್ರಿಯಾ ಸುವ್ರತಜ್ಞಾ ಸಖೀ ಜಟಿಲಮಬ್ರವೀತ್ ॥ ೩೨ ॥

॥ ಸಖ್ಯುವಾಚ ॥
ಶೃಣು ಸಾಧೋ ಪ್ರವಕ್ಷ್ಯಾಮಿ ಪಾರ್ವತೀಚರಿತಂ ಪರಂ ।
ಹೇತುಂ ಚ ತಪಸಸ್ಸರ್ವಂ ಯದಿ ತ್ವಂ ಶ್ರೋತುಮಿಚ್ಛಸಿ ॥ ೩೩ ॥

---

೨೯. ಇಷ್ಟು ರಮಣೀಯವಾದ ನಿನ್ನ ಸೌಂದರ್ಯವನ್ನು ಏಕೆ ವ್ಯರ್ಥ ಮಾಡಿರುವೆ? ಸುಂದರವಾದ ವಸ್ತ್ರಗಳನ್ನು ಬಿಟ್ಟು, ಚರ್ಮ ಮುಂತಾದುವನ್ನು ಧರಿಸಿರುವೆಯಲ್ಲಾ ?

೩೦ ಈ ನಿನ್ನ ತಪಸ್ಸಿಗೆ ನಿಜವಾದ ಕಾರಣವನ್ನು ಹೇಳು. ಅದನ್ನು ಕೇಳಿ ನಾನು ಸಂತೋಷಗೊಳ್ಳುವೆನು ಎಂದನು.

೩೧. ಬ್ರಹ್ಮನು ಹೇಳಿದನು:—ಹೀಗೆ ವೃದ್ಧಬ್ರಾಹ್ಮಣನು ಕೇಳಲು ಪಾರ್ವತಿಯು ತನ್ನ ಸಖಿಯನ್ನು ಹೇಳುವಂತೆ ಪ್ರೇರಿಸಿ ಆ ಸಖಿಯ ಮುಖದಿಂದಲೇ ಹೇಳಿಸಿದಳು.

೩೨. "ವಿಜಯಾ" ಎಂಬ ಸಖಿಯು ಗಿರಿಜೆಗೆ ತುಂಬಾ ಪ್ರಿಯಳು. ನಿಯಮಗಳನ್ನು ಬಲ್ಲವಳು. ಇಂತಹ ವಿಜಯೆಯು ಪಾರ್ವತಿಯ ಸೂಚನೆಯಂತೆ ವೃದ್ಧವಿಪ್ರನನ್ನು ಕುರಿತು,

೩೩. ಸಖಿಯು ಹೇಳಿದಳು:—ಎಲೈ ಸಾಧುವೆ, ಪಾರ್ವತೀಚರಿತ್ರವನ್ನು ಹೇಳುವೆನು. ಮತ್ತು ಅವಳ ತಪಸ್ಸಿಗೆ ಕಾರಣವನ್ನೂ ಹೇಳುವೆನು. ಇಷ್ಟವಿದ್ದರೆ ಕೇಳು.

ಸಖೀ ಮೇ ಗಿರಿರಾಜಸ್ಯ ಸುತೇಯಂ ಹಿಮಭೂಭೃತಃ ।
ಖ್ಯಾತಾ ವೈ ಪಾರ್ವತೀ ನಾಮ್ನಾ ಸಾ ಕಾಲೀತಿ ಚ ಮೇನಕಾ ॥ ೩೪ ॥

ಊಢೇಯಂ ನ ಚ ಕೇನಾಪಿ ನ ವಾಂಛತಿ ಶಿವಾತ್ಪರಂ ।
ತ್ರೀಣಿ ವರ್ಷಸಹಸ್ರಾಣಿ ತಪಶ್ಚರಣಸಾಧಿನೀ ॥ ೩೫ ॥

ತದರ್ಥಂ ಮೇಽನಯಾ ಸಖ್ಯಾ ಪ್ರಾರಬ್ಧಂ ತಪ ಈದೃಶಂ ।
ತದತ್ರ ಕಾರಣಂ ವಕ್ಷ್ಯೇ ಶೃಣು ಸಾಧೋ ದ್ವಿಜೋತ್ತಮ ॥ ೩೬ ॥

ಹಿತ್ವೇಂದ್ರಪ್ರಮುಖಾರ್ನ್ ದೇವಾರ್ನ್ ಹರಿಂ ಬ್ರಹ್ಮಾಣಮೇವ ಚ ।
ಪತಿಂ ಪಿನಾಕಪಾಣಿಂ ವೈ ಪ್ರಾಪ್ತುಮಿಚ್ಛತಿ ಪಾರ್ವತೀ ॥ ೩೭ ॥

ಇಯಂ ಸಖೀ ಮದೀಯಾ ವೈ ವೃಕ್ಷಾನಾರೋಪಯತ್ಪುರಾ ।
ತೇಷು ಸರ್ವೇಷು ಸಂಜಾತಂ ಫಲಪುಷ್ಪಾದಿಕಂ ದ್ವಿಜ ॥ ೩೮ ॥

---

೩೪. ಈ ನನ್ನ ಸಖಿಯು ಗಿರಿರಾಜನಾದ ಹಿಮವಂತನ ಮಗಳು. ಇವಳ ಹೆಸರು ಪಾರ್ವತಿಯೆಂದು. "ಕಾಲೀ" ಎಂದು ಮೇನಕೆಯು ಕರೆಯುವಳು.

೩೫. ಇವಳಿಗಿನ್ನೂ ಮದುವೆಯಾಗಿಲ್ಲ. ಶಿವನನ್ನು ಹೊರತು ಇನ್ನಾರನ್ನೂ ಇವಳು ವರಿಸಲಿಚ್ಛಿಸುವುದಿಲ್ಲ. ಅದಕ್ಕಾಗಿ ಈ ಗಿರಿಜೆಯು ಮೂರು ಸಾವಿರ ವರ್ಷಗಳಿಂದ ತಪಸ್ಸನ್ನು ಮಾಡುತ್ತಲಿರುವಳು.

೩೬. ಆ ಶಿವನಿಗಾಗಿಯೇ ಈ ನನ್ನ ಸಖಿಯು ಇಂತಹ ಘೋರತಪಸ್ಸನ್ನು ಮಾಡುತ್ತಲಿರುವಳು. ಈ ವಿಷಯದಲ್ಲಿ ಇನ್ನೂ ಒಂದು ಕಾರಣವನ್ನು ಹೇಳುವೆನು. ಕೇಳು.

೩೭. ಈ ಪಾರ್ವತಿಯು ಇಂದ್ರನೇ ಮೊದಲಾದ ದೇವತೆಗಳನ್ನೂ, ಹರಿಬ್ರಹ್ಮರನ್ನೂ ಬಿಟ್ಟು ಶಿವನನ್ನೇ ಪತಿಯನ್ನಾಗಿ ಪಡೆಯಲು ಇಚ್ಛಿಸುವಳು.

೩೮. ಈ ನನ್ನ ಸಖಿಯು ಹಿಂದೆ ಅನೇಕ ಮರಗಳನ್ನು ಬೆಳಸಿದಳು. ಅವೆಲ್ಲವೂ ಬೇಕಾದಷ್ಟು ಹಣ್ಣು, ಹೂವು, ಮುಂತಾದುವುಗಳನ್ನು ಕೊಟ್ಟವು.

ರೂಪಸಾರ್ಥ್ಯಾಯ ಜನಕಕುಲಾಲಂಕರಣಾಯ ಚ ।
ಸಮುದ್ದಿಶ್ಯ ಮಹೇಶಾನಂ ಕಾಮುಸ್ಯಾನುಗ್ರಹಾಯ ಚ ॥ ೩೯ ॥

ಮತ್ಸಖೀ ಚಾದರಾದ್ದೇಶಾತ್ತಪಸ್ತಪತಿ ದಾರುಣಂ ।
ಮನೋರಥಂ ಕುತಸ್ತಸ್ಯಾ ನ ಫಲಿಷ್ಯತಿ ತಾಪಸ ॥ ೪೦ ॥

ಯತ್ತ್ವೇ ಪೃಷ್ಟಂ ದ್ವಿಜಶ್ರೇಷ್ಠ ಮತ್ಸಖ್ಯಾ ಮನಸೀಪ್ಸಿತಂ ।
ಮಯಾ ಖ್ಯಾತಂ ತತ್ಪ್ರೀತ್ಯಾ ಕಿಮನ್ಯಚ್ಛ್ರೋತುಮಿಚ್ಛಸಿ ॥ ೪೧ ॥

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಶ್ರುತ್ವಾ ವಿಜಯಾಯಾ ಯಥಾರ್ಥತಃ ।
ಮುನೇ ಸ ಜಟಿಲೋ ರುದ್ರೋ ವಿಹಸ್ಯ ವಾಕ್ಯಮಬ್ರವೀತ್ ॥ ೪೨ ॥

॥ ಜಟಿಲ ಉವಾಚ ॥

ಸಖ್ಯೇದಂ ಕಥಿತಂ ತತ್ರ ಪರಿಹಾಸೋಽನುಮೀಯತೇ ।
ಯಥಾರ್ಥಂ ಚೇತ್ತದಾ ದೇವೀ ಸ್ವಮುಖೇನಾಭಿಭಾಷತಾಂ ॥ ೪೩ ॥

---

೩೯-೪೦. ತನ್ನ ರೂಪದ ಫಲತೆಗೂ, ತಂದೆಯ ಕುಲವನ್ನು ಉದ್ಧರಿಸುವುದಕ್ಕೂ ಮತ್ತು ಮನ್ಮಥನನ್ನು ಅನುಗ್ರಹಿಸುವುದಕ್ಕೂ ಸಹ ಈ ಗಿರಿಜೆಯು ಶಿವನನ್ನುದ್ದೇಶಿಸಿ ಘೋರತಪಸ್ಸನ್ನಾಚರಿಸುತ್ತಲಿರುವಳು. ಇಂತಹವಳ ಮನೋರಥವು ಏಕೆ ಫಲಿಸಲಾರದು ?

೪೧. ಓ ವಿಪ್ರೋತ್ತಮ, ನೀನು ಪ್ರಶ್ನಿಸಿದ ನನ್ನ ಸಖಿಯ ಮನೋಭಿಪ್ರಾಯವನ್ನು ಹೇಳಿರುವೆನು. ಇನ್ನೇನನ್ನು ಕೇಳಲಿಚ್ಛಿಸುವೆ? ಎಂದಳು.

೪೨. ಹೀಗೆ ವಿಜಯೆಯು ಸತ್ಯವಾಗಿ ಹೇಳಿದ ಮಾತನ್ನು ಕೇಳಿ ವೃದ್ಧ ಬ್ರಾಹ್ಮಣರೂಪಿಯಾದ ರುದ್ರನು ನಗುತ್ತಾ ಮತ್ತಿಂತೆಂದನು.

೪೩. ವೃದ್ಧಬ್ರಾಹ್ಮಣನು ಹೇಳಿದನು:—ಈ ಮಾತನ್ನು ಸಖಿಯು ಹೇಳಿದುದರಿಂದ ಪರಿಹಾಸ್ಯವಾಗಿ ಕಾಣುತ್ತದೆ. ಇದೇ ನಿಜವಾಗಿದ್ದರೆ ಗಿರಿಜೆಯೇ ಅದನ್ನು ಬಾಯಿಬಿಟ್ಟು ಹೇಳಲಿ ಎಂದನು.

॥ ಬ್ರಹ್ಮೋವಾಚ ॥
ಇತ್ಯುಕ್ತೇ ಚ ತದಾ ತೇನ ಜಟಿಲೇನ ದ್ವಿಜನ್ಮನಾ ।
ಉವಾಚ ಪಾರ್ವತೀದೇವೀ ಸ್ವಮುಖೇನೈವ ತಂ ದ್ವಿಜಂ ॥ ೪೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಷಡ್ವಿಂಶೋಽಧ್ಯಾಯಃ



---

೪೪. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ವೃದ್ಧಬ್ರಾಹ್ಮಣನು ಹೇಳಲು ಪಾರ್ವತಿಯು ತನ್ನ ಮುಖದಿಂದಲೇ ಹೀಗೆ ಹೇಳಿದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಸಪ್ತವಿಂಶೋಽಧ್ಯಾಯಃ

॥ ಪಾರ್ವತ್ಯುವಾಚ ॥

ಶೃಣು ದ್ವಿಜೇಂದ್ರ ಜಟಿಲ ಮದ್ವೃತ್ತಂ ನಿಖಿಲಂ ಖಲು ।
ಸಖ್ಯುಕ್ತಂ ಮೇಽದ್ಯ ಯತ್ಸತ್ಯಂ ತತ್ತಥೈವ ನ ಚಾನ್ಯಥಾ ॥ ೧ ॥

ಮನಸಾ ವಚಸಾ ಸಾಕ್ಷಾತ್ಕರ್ಮಣಾ ಯತಿಭಾವತಃ ।
ಸತ್ಯಂ ಬ್ರವೀಮಿ ನೋಽಸತ್ಯಂ ವೃತೋ ವೈ ಶಂಕರೋ ಮಯಾ ॥ ೨ ॥

ಜಾನಾಮಿ ದುರ್ಲಭಂ ವಸ್ತು ಕಥಂ ಪ್ರಾಪ್ಯಂ ಮಯಾ ಭವೇತ್ ।
ತಥಾಪಿ ಮನಔತ್ಸುಕ್ಯಾತ್ತಪ್ಯತೇಽದ್ಯ ತಪೋ ಮಯಾ ॥ ೩ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು:—ಓ ಬ್ರಾಹ್ಮಣೋತ್ತಮ, ಕೇಳು ಸಖಿಯು ಹೇಳಿದ ನನ್ನ ವೃತ್ತಾಂತವೆಲ್ಲವೂ ನಿಜವಾದುದೇ, ಸುಳ್ಳಲ್ಲ.

೨. ಮನಸ್ಸು, ವಾಕ್ಕು, ಕರ್ಮ ಮತ್ತು ತಪಸ್ವಿಭಾವ ಈ ನಾಲ್ಕರಿಂದಲೂ ಪರಿಶುದ್ಧಿಯಾಗಿ ಸತ್ಯವಾದುದನ್ನೇ ಹೇಳುವೆನು. ಅನೃತವನ್ನು ಹೇಳುವುದಿಲ್ಲ. ಶಂಕರನನ್ನೇ ನಾನು ತ್ರಿಕರಣಪೂರ್ವಕವಾಗಿ ವರಿಸಿರುವೆನು.

೩. ಶಂಕರನು ಎಲ್ಲರಿಗೂ ದುರ್ಲಭನು. ಹೀಗಿರಲು ಅವನನ್ನು ನಾನು ಪಡೆಯುವುದು ಅಸಾಧ್ಯ ಎಂದು ನಾನು ತಿಳಿದಿರುವೆನು. ಆದರೂ ಮನಸ್ಸಿನ ಕುತೂಹಲದಿಂದ ನಾನು ತಪಸ್ಸನ್ನು ಮಾಡುತ್ತಿರುವೆನು ಎಂದಳು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಚನಂ ತಸ್ಮೈ ಸ್ಥಿತಾ ಸಾ ಗಿರಿಜಾ ತದಾ ।
ಉವಾಚ ಬ್ರಾಹ್ಮಣಸ್ತತ್ರ ತಚ್ಛ್ರುತ್ವಾ ಪಾರ್ವತೀವಚಃ ॥ ೪ ॥

॥ ಬ್ರಾಹ್ಮಣ ಉವಾಚ ॥

ಏತಾವತ್ಕಾಲಪರ್ಯಂತಂ ಮಮೇಚ್ಛಾ ಮಹತೀ ಹ್ಯಭೂತ್ ।
ಕಿಂ ವಸ್ತು ಕಾಂಕ್ಷತೀ ದೇವೀ ಕುರುತೇ ಸುಮಹತ್ತಪಃ ॥ ೫ ॥

ತಜ್ಜ್ಞಾತ್ವಾ ನಿಖಿಲಂ ದೇವಿ ಶ್ರುತ್ವಾ ತ್ವನ್ಮುಖಪಂಕಜಾತ್ ।
ಇತೋ ಗಚ್ಛಾಮ್ಯಹಂ ಸ್ಥಾನಾದ್ಯಥೇಚ್ಛಸಿ ತಥಾ ಕುರು ॥ ೬ ॥

ನ ಕಥ್ಯತೇ ತ್ವಯಾ ಮಹ್ಯಂ ಮಿತ್ರತ್ವಂ ನಿಷ್ಫಲಂ ಭವೇತ್ ।
ಯಥಾ ಕಾರ್ಯಂ ತಥಾ ಭಾವಿ ಕಥನೀಯಂ ಸುಖೇನ ಚ ॥ ೭ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಚನಂ ತಸ್ಯ ಯಾವದ್ಗಂತುಮಿಯೇಷ ಸಃ ।
ತಾವಚ್ಚ ಪಾರ್ವತೀದೇವೀ ಪ್ರಣಮ್ಯೋವಾಚ ತಂ ದ್ವಿಜಂ ॥ ೮ ॥

---

೪-೫. ಬ್ರಹ್ಮನು ಹೇಳಿದನು :—ಹೀಗೆ ಪಾರ್ವತಿಯು ಹೇಳಿ ಸುಮ್ಮನಾದಳು. ಅದನ್ನು ಕೇಳಿ ಬ್ರಾಹ್ಮಣನು ತಿರುಗಿ ಹೇಳಿದನು—ಇಷ್ಟುಹೊತ್ತು ನನಗೊಂದು ಮಹಾ ಆಸೆಯಿತ್ತು. ದೇವಿಯು ಯಾವ ವಸ್ತುವನ್ನಪೇಕ್ಷಿಸಿ ತಪಸ್ಸನ್ನು ಮಾಡುತ್ತಿರುವಳು? ಅದನ್ನು ತಿಳಿಯಬೇಕೆಂದು ಅಪೇಕ್ಷೆಯಿತ್ತು.

೬. ಆ ವಿಷಯವು ನಿನ್ನ ಮುಖದಿಂದಲೇ ಕೇಳಿ ತಿಳಿದಂತಾಯಿತು. ಈಗ ನಾನು ಹೊರಡುವೆನು. ನಿನ್ನಿಷ್ಟಬಂದಂತೆ ಮಾಡು.

೭. ಈಗ ನಾನು ನಿನಗೇನೂ ಹೇಳುವುದಿಲ್ಲ. ಆಗಬೇಕಾಗಿರುವುದು ಆಗಿಯೇ ಆಗುವುದು. ಹಿತವಾದುದನ್ನು ಮರೆಮಾಚದೆ ನಿಜಸ್ಥಿತಿಯನ್ನೇ ಹೇಳಿದರೆ ಸ್ನೇಹಕ್ಕೆ ಭಂಗವುಂಟಾದೀತು. ಆದುದರಿಂದ ನಿನ್ನಿಷ್ಟಬಂದಂತೆ ಮಾಡು ಎಂದನು.

೮. ಬ್ರಹ್ಮನು ಹೇಳಿದಳು:—ಹೀಗೆ ಹೇಳಿ ಆ ವೃದ್ಧಬ್ರಾಹ್ಮಣನು ಹೊರಡಲುದ್ಯುಕ್ತನಾದನು. ಅಷ್ಟರಲ್ಲಿಯೇ ಪಾರ್ವತಿಯು ಅವನಿಗೆ ನಮಸ್ಕರಿಸಿ,

॥ ಪಾರ್ವತ್ಯುವಾಚ ॥

ಕಿಂ ಗಮಿಷ್ಯಸಿ ವಿಪ್ರೇಂದ್ರ ಸ್ಥಿತೋ ಭವ ಹಿತಂ ವದ ।
ಇತ್ಯುಕ್ತೇ ಚ ತಯಾ ತತ್ರ ಸ್ಥಿತ್ವೋವಾಚ ಸ ದಂಡಧೃಕ್ ॥ ೯ ॥

॥ ದ್ವಿಜ ಉವಾಚ ॥

ಯದಿ ಶ್ರೋತುಮನಾ ದೇವಿ ಮಾಂ ಸ್ಥಾಪಯಸಿ ಭಕ್ತಿತಃ ।
ವದಾಮಿ ತತ್ತ್ವಂ ತತ್ಸರ್ವಂ ಯೇನ ತೇ ವಯುನಂ ಭವೇತ್ ॥ ೧೦ ॥

ಜಾನಾಮ್ಯಹಂ ಮಹಾದೇವಂ ಸರ್ವಥಾ ಗುರುಧರ್ಮತಃ ।
ಪ್ರವದಾಮಿ ಯಥಾರ್ಥಂ ಹಿ ಸಾವಧಾನತಯಾ ಶೃಣು ॥ ೧೧ ॥

ವೃಷಧ್ವಜೋ ಮಹಾದೇವೋ ಭಸ್ಮದಿಗ್ಧೋ ಜಟಾಧರಃ ।
ವ್ಯಾಘ್ರಚರ್ಮಾಂಬರಧರಃ ಸಂವೀತೋ ಗಜಕೃತ್ತಿನಾ ॥ ೧೨ ॥

ಕಪಾಲಧಾರೀ ಸರ್ಪೌಘೈಸ್ಸರ್ವಗಾತ್ರೇಷು ವೇಷ್ಟಿತಃ ।
ವಿಷದಿಗ್ಧೋಽಭಕ್ಷ್ಯಭಕ್ಷೋ ವಿರೂಪಾಕ್ಷೋ ವಿಭೀಷಣಃ ॥ ೧೩ ॥

---

೯-೧೦. ಪಾರ್ವತಿಯು ಹೇಳಿದಳು:—ಓ ಬ್ರಾಹ್ಮಣೋತ್ತಮ, ಆಗಲೇ ಹೊರಟೆಯಾ? ಹೋಗಬೇಡ, ಸ್ವಲ್ಪ ನಿಂತು ನನಗೆ ಹಿತವಾದುದನ್ನು ಹೇಳು ಎನ್ನಲು, ಆ ವೃದ್ಧನು ನಿಂತು, ಎಲೌ ದೇವಿ, ನನ್ನ ಮಾತನ್ನು ಕೇಳಲೋಸುಗ ಆದರದಿಂದ ನನ್ನನ್ನು ನಿಲ್ಲಿಸುವೆಯಾದರೆ ನಿಜಾಂಶವೆಲ್ಲವನ್ನೂ ನಿನಗೆ ಹೇಳುವೆನು. ಅದರಿಂದ ನಿನಗೆ ಮಂಗಳವಾಗುವುದು.

೧೧. ಮಹಾದೇವನನ್ನು ನಾನು ಬಲ್ಲೆನು. ಎಲ್ಲ ವರ್ಣದವರಿಗೂ ಗುರುವಾದ ನಾನು ನಿಜವಾದುದನ್ನೇ ಹೇಳುವೆನು, ಸಾವಧಾನತೆಯಿಂದ ಕೇಳು.

೧೨. ಆ ಮಹಾದೇವನು ಮುದಿಎತ್ತನ್ನು ಏರಿ ಸಂಚರಿಸುವನು. ಮೈತುಂಬ ಬೂದಿಬಳಿದುಕೊಳ್ಳುವನು. ಜಟೆಯನ್ನು ಧರಿಸುವನು. ಬಟ್ಟೆಯಿಲ್ಲದೆ ಹುಲಿಯ ಚರ್ಮವನ್ನುಡುವನು. ಆನೆಯ ಚರ್ಮವನ್ನು ಹೊದೆದುಕೊಳ್ಳುವನು.

೧೩. ಅವನು ಅಶುದ್ಧವಾದ ನರಶಿರಸ್ಸನ್ನು ಧರಿಸುವನು. ಮೈತುಂಬಾ ಹಾವುಗಳನ್ನು ಸುತ್ತಿಕೊಳ್ಳುವನು. ಅವನ ಕತ್ತಿನಲ್ಲಿ ವಿಷವು ಹತ್ತಿಕೊಂಡಿರುವುದು. ತಿನ್ನಬಾರದುದನ್ನು ತಿನ್ನುವನು. ಎಲ್ಲರಂತಿರದೆ ಅವನಿಗೆ ವಿಕಾರವಾದ ಕಣ್ಣುಗಳಿವೆ. ಅದರಿಂದ ಅವನು ಭಯಂಕರನಾಗಿ ಕಾಣುವನು.

ಅವ್ಯಕ್ತಜನ್ಮಾ ಸತತಂ ಗೃಹಭೋಗವಿವರ್ಜಿತಃ ।
ದಿಗಂಬರೋ ದಶಭುಜೋ ಭೂತಪ್ರೇತಾನ್ವಿತಃ ಸದಾ ॥ ೧೪ ॥

ಕೇನ ವಾ ಕಾರಣೇನ ತ್ವಂ ತಂ ಭರ್ತಾರಂ ಸಮೀಹಸೇ ।
ಕ್ವಂ ಜ್ಞಾನಂ ತೇ ಗತಂ ದೇವಿ ತದ್ವದಾದ್ಯ ವಿಚಾರತಃ ॥ ೧೫ ॥

ಪೂರ್ವಂ ಶ್ರುತಂ ಮಯಾ ಚೈವ ವೃತ್ತಂ ತಸ್ಯ ಭಯಂಕರಂ ।
ಶೃಣು ತೇ ನಿಗದಾಮ್ಯದ್ಯ ಯದಿ ತೇ ಶ್ರವಣೇ ರುಚಿಃ ॥ ೧೬ ॥

ದಕ್ಷಸ್ಯ ದುಹಿತಾ ಸಾಧ್ವೀ ಸತೀ ವೃಷಭವಾಹನಂ ।
ವವ್ರೇ ಪತಿಂ ಪುರಾ ದೈವಾತ್ತತ್ಸಂಭೋಗಃ ಪರಿಶ್ರುತಃ ॥ ೧೭ ॥

ಕಪಾಲಿಜಾಯೇತಿ ಸತೀ ದಕ್ಷೇಣ ಪರಿವರ್ಜಿತಾ ।
ಯಜ್ಞೇ ಭಾಗಪ್ರದಾನಾಯ ಶಂಭುಶ್ಚ ಪರಿವರ್ಜಿತಃ ॥ ೧೮ ॥

---

೧೪. ಅವನೆಲ್ಲಿ ಹುಟ್ಟಿದನೋ ಯಾರಿಗೂ ತಿಳಿಯದು. ಸಂಸಾರಸುಖವು ಅವನ ಪಾಲಿಗಿಲ್ಲವೇ ಇಲ್ಲ. ದಿಗಂಬರನಾಗಿ ಬೆತ್ತಲೆ ತಿರುಗಾಡುತ್ತಿರುವನು. ಹತ್ತು ಕೈಗಳವನಿಗಿರುವುವು. ಸದಾ ಅವನ ಹಿಂದೆ ಮುಂದೆ ಭೂತಪ್ರೇತಗಳು ಓಡಾಡಿ ಕೊಂಡಿರುವವು.

೧೫. ಹೀಗಿರುವಲ್ಲಿ ಯಾವ ಕಾರಣದಿಂದ ನೀನು ಆ ಶಿವನೇ ಪತಿಯಾಗ ಬೇಕೆಂದು ಇಚ್ಛಿಸುವೆ? ಎಲೌ ದೇವಿ, ನಿನ್ನ ಜ್ಞಾನವು ಎಲ್ಲಿ ಹೋಯಿತು? ಚೆನ್ನಾಗಿ ವಿಚಾರಮಾಡಿ ನೋಡು.

೧೬. ಹಿಂದೆಯೇ ನಾನು ಆ ಶಿವನ ಭಯಂಕರವಾದ ವರ್ತಮಾನವನ್ನು ಕೇಳಿರುವೆನು. ಕೇಳಬೇಕೆಂದಿದ್ದರೆ ನಿನಗೂ ಹೇಳುವೆನು, ಕೇಳು.

೧೭. ದಕ್ಷಪುತ್ರಿಯೂ ಸಾಧ್ವಿಯೂ ಆದ ಸತೀದೇವಿಯು ಹಿಂದೆ ಅದೃಷ್ಟ ವಶಾತ್ ಶಿವನನ್ನು ವರಿಸಿದಳು. ಅವರೀರ್ವರ ಸಂಸಾರಸುಖವು ಹೇಗಿತ್ತೆಂದು ಎಲ್ಲ ರಿಗೂ ತಿಳಿದೇ ಇದೆ.

೧೮. ಆಮೇಲೆ ದಕ್ಷನು ತನ್ನ ಯಜ್ಞದಲ್ಲಿ ಶಿವನು ಅಸ್ಪೃಶ್ಯನೆಂದು ಅವನಿಗೆ ಯಜ್ಞಭಾಗವನ್ನೇ ಕೊಡಲಿಲ್ಲ. ಆ ಶಿವನ ಪತ್ನಿಯೆಂದು ಸತಿಯನ್ನೂ ಕರೆಯಲಿಲ್ಲ.

ಸಾ ತಥೈವಾಪಮಾನೇನ ಭೃಶಂ ಕೋಪಾಕುಲಾ ಸತೀ ।
ತತ್ಯಾಜಾಸೂರ್ ಪ್ರಿಯಾಂಸ್ತತ್ರ ತಯಾ ತ್ಯಕ್ತಶ್ಚ ಶಂಕರಃ ॥ ೧೯ ॥

ತ್ವಂ ಸ್ತ್ರೀರತ್ನಂ ತವ ಪಿತಾ ರಾಜಾ ನಿಖಿಲಭೂಭೃತಾಂ ।
ತಥಾವಿಧಂ ಪತಿಂ ಕಸ್ಮಾದುಗ್ರೇಣ ತಪಸೇಹಸೇ ॥ ೨೦ ॥

ದತ್ವಾ ಸುವರ್ಣಮುದ್ರಾಂ ಚ ಗ್ರಹೀತುಂ ಕಾಚಮಿಚ್ಛಸಿ ।
ಹಿತ್ವಾ ಚ ಚಂದನಂ ಶುಭ್ರಂ ಕರ್ದಮಂ ಲೇಪ್ತುಮಿಚ್ಛಸಿ ॥ ೨೧ ॥

ಸೂರ್ಯತೇಜಃ ಪರಿತ್ಯಜ್ಯ ಖದ್ಯೋತದ್ಯುತಿಮಿಚ್ಛಸಿ ।
ಚೀನಾಂಶುಕಂ ವಿಹಾಯೈವ ಚರ್ಮಾಂಬರಮಿಹೇಚ್ಛಸಿ ॥ ೨೨ ॥

ಗೃಹವಾಸಂ ಪರಿತ್ಯಜ್ಯ ವನವಾಸಮಿಹೇಚ್ಛಸಿ ।
ಲೋಹಮಿಚ್ಛಸಿ ದೇವೇಶಿ ತ್ಯಕ್ತ್ವಾ ಶೇವಧಿಮುತ್ತಮಾಂ ॥ ೨೩ ॥

---

೧೯. ಈ ಅಪಮಾನವನ್ನು ಸಹಿಸಲಾರದೆ, ಸತೀದೇವಿಯು ತುಂಬಾ ಕೋಪಗೊಂಡು ತನ್ನ ಪ್ರಾಣಗಳನ್ನೇ ಬಿಟ್ಟಳು. ಹೀಗೆ ಆ ಸತಿಯು ಶಿವನನ್ನು ತ್ಯಜಿಸಿದಳು.

೨೦. ನೀನು ಸ್ತ್ರೀರತ್ನವು. ನಿನ್ನ ತಂದೆಯು ಪರ್ವತರಾಜನು. ಹೀಗಿದ್ದೂ ದರಿದ್ರನಾದ ಆ ಶಿವನನ್ನು ಪತಿಯನ್ನಾಗಿ ಪಡೆಯಲು ಉಗ್ರತಪಸ್ಸನ್ನೇಕೆ ಆಚರಿಸುವೆ?

೨೧. ನೀನು ಚಿನ್ನದುಂಗರವನ್ನು ಕೊಟ್ಟು ಗಾಜನ್ನು ತೆಗೆದುಕೊಳ್ಳಬೇಕೆಂದಿರುವೆ? ಚಂದನವನ್ನು ಬಿಟ್ಟು ಕೆಸರನ್ನು ಹಚ್ಚಿಕೊಳ್ಳಬೇಕೆಂದಿರುವೆಯಲ್ಲಾ,

೨೨. ಸೂರ್ಯತೇಜಸ್ಸನ್ನು ಬಿಟ್ಟು ದೀಪದಹುಳುವಿನ ಪ್ರಕಾಶವನ್ನು ಅಪೇಕ್ಷಿಸುತ್ತಿರುವೆ. ರೇಶಿಮೆ ಬಟ್ಟೆಯನ್ನು ಬಿಟ್ಟು ಚರ್ಮಾಂಬರವನ್ನಪೇಕ್ಷಿಸುತ್ತಿರುವೆ.

೨೩. ಮನೆಯ ವಾಸವನ್ನು ಬಿಟ್ಟು ವನವಾಸವನ್ನಪೇಕ್ಷಿಸುತ್ತಿರುವೆ. ರತ್ನನಿಧಿಯನ್ನು ಬಿಟ್ಟು ಕ್ಷುದ್ರಲೋಹವನ್ನಪೇಕ್ಷಿಸುತ್ತಿರುವೆ.

ಇಂದ್ರಾದಿಲೋಕಪಾಲಾಂಶ್ಚ ಹಿತ್ವಾ ಶಿವಮನುವ್ರತಾ ।
ನೈತತ್ಸೂಕ್ತಂ ಹಿ ಲೋಕೇಷು ವಿರುದ್ಧಂ ದೃಶ್ಯತೇಽಧುನಾ ॥ ೨೪ ॥

ಕ್ವ ತ್ವಂ ಕಮಲಪತ್ರಾಕ್ಷೀ ಕ್ವಾಸೌ ವೈ ತ್ರಿವಿಲೋಚನಃ ।
ಶಶಾಂಕವದನಾ ಚ ತ್ವಂ ಪಂಚವಕ್ತ್ರಃ ಶಿವಃ ಸ್ಮೃತಃ ॥ ೨೫ ॥

ಚಂದನಂ ಚ ತ್ವದೀಯಾಂಗೇ ಚಿತಾಭಸ್ಮ ಶಿವಸ್ಯ ಚ ।
ಕ್ವ ದುಕೂಲಂ ತ್ವದೀಯಂ ವೈ ಶಾಂಕರಂ ಕ್ವ ಗಜಾಜಿನಂ ॥ ೨೬ ॥

ವೇಣೀ ಶಿರಸಿ ತೇ ದಿವ್ಯಾ ಸರ್ಪಿಣೀವ ವಿಭಾಸಿತಾ ।
ಜಟಾಜೂಟಂ ಶಿವಸ್ಯೈವ ಪ್ರಸಿದ್ಧಂ ಪರಿಚಕ್ಷತೇ ॥ ೨೭ ॥

ಕ್ವ ಭೂಷಣಾನಿ ದಿವ್ಯಾನಿ ಕ್ವ ಸರ್ಪಾಃ ಶಂಕರಸ್ಯ ಚ ।
ಕ್ವ ಚರಾ ದೇವತಾಸ್ಸರ್ವಾಃ ಕ್ವ ಚ ಭೂತಬಲಿಪ್ರಿಯಃ ॥ ೨೮ ॥

---

೨೪. ಇಂದ್ರ ಮೊದಲಾದ ಲೋಕಪಾಲರನ್ನು ಬಿಟ್ಟು ಶಿವನನ್ನು ವರಿಸಿರುವೆ. ಲೋಕದಲ್ಲಿ ಇದು ಬಹಳ ವಿರುದ್ಧವಾಗಿ ತೋರುವುದು. ಮತ್ತು ಇದು ನ್ಯಾಯವಾದುದಲ್ಲ.

೨೫. ತಾವರೆಯಂತೆ ಸುಂದರವಾದ ಮುಖವುಳ್ಳ ನೀನೆಲ್ಲಿ? ವಿಕಾರವಾದ ಮೂರು ಕಣ್ಣುಗಳುಳ್ಳ ಆ ಶಿವನೆಲ್ಲಿ? ಚಂದ್ರನಂತೆ ಸುಂದರವಾದ ಮುಖವುಳ್ಳ ನೀನೆಲ್ಲಿ? ಐದು ಮುಖಗಳುಳ್ಳ ಆ ಶಿವನೆಲ್ಲಿ? ನಿಮ್ಮಿಬ್ಬರಿಗೂ ವಧೂವರಸಾಮ್ಯ ಸರಿಹೋಗುವುದೇ?

೨೬. ನಿನ್ನ ಅಂಗದಲ್ಲಿಯಾದರೋ ಘಮಘಮಿಸುವ ಚಂದನವಿರುವುದು. ಶಿವನ ಅಂಗದಲ್ಲಿ ಚಿತೆಯ ಬೂದಿ, ನಿನ್ನ ಮೃದುವಾದ ರೇಶಿಮೆ ಬಟ್ಟೆಯೆಲ್ಲಿ? ಶಂಕರನ ಗಜಚರ್ಮವೆಲ್ಲಿ?

೨೭. ಎಲೌ ಗಿರಿಜೆ, ನಿನ್ನ ಶಿರಸ್ಸಿನಲ್ಲಿ ಸುಂದರವಾದ ಜಡೆಯು ನಾಗಿಣಿಯಂತೆ ನೀಳವಾಗಿ ಶೋಭಿಸುತ್ತಿದೆ. ಆದರಾಶಿವನಲ್ಲಿ ಕೆಂಜೆಡೆಯ ಜಟಾಜೂಟವು ವಿಕಾರವಾಗಿ ಕಾಣುತ್ತಿರುವುದು.

೨೮. ಈ ನಿನ್ನ ದಿವ್ಯಾಭರಣಗಳೆಲ್ಲಿ? ಶಂಕರನ ಸರ್ಪಗಳೆಲ್ಲಿ? ಸುಂದರವಾದ ದೇವತೆಗಳೆಲ್ಲಿ? ಭೂತಬಲಿಯನ್ನಪೇಕ್ಷಿಸುವ ರುದ್ರನೆಲ್ಲಿ?

ಕ್ವ ವಾ ಮೃದಂಗವಾದಶ್ಚ ಕ್ವ ಚ ತಡ್ಡಮರುಸ್ತಥಾ ।
ಕ್ವ ಚ ಭೇರೀಕಲಾಪಶ್ಚ ಕ್ವಚ ಶೃಂಗರವೋಽಶುಭಃ ॥ ೨೯ ॥

ಕ್ವ ಚ ಢಕ್ಕಾಮಯತ್ಯಬ್ದೋ ಗಲನಾದಃ ಕ್ವ ಚಾಶುಭಃ ।
ಭವತ್ಯಾಶ್ಚ ಶಿವಸ್ಯೈವ ನ ಯುಕ್ತಂ ರೂಪಮುತ್ತಮಂ ॥ ೩೦ ॥

ಯದಿ ದ್ರವ್ಯಂ ಭವೇತ್ತಸ್ಯ ಕಥಂ ಸ್ಯಾತ್ಸ ದಿಗಂಬರಃ ।
ವಾಹನಂ ಚ ಬಲೀವರ್ದಃ ಸಾಮಗ್ರೀ ಕಾಪಿ ತಸ್ಯ ನ ॥ ೩೧ ॥

ವರೇಷು ಯೇ ಗುಣಾಃ ಪ್ರೋಕ್ತಾ ನಾರೀಣಾಂ ಸುಖದಾಯಕಾಃ ।
ತನ್ಮಧ್ಯೇ ಹಿ ವಿರೂಪಾಕ್ಷೇ ಏಕೋಽಪಿ ನ ಗುಣಃ ಸ್ಮೃತಃ ॥ ೩೨ ॥

ತವಾಪಿ ಕಾಮೋ ದಯಿತೋ ದಗ್ಧಸ್ತೇನ ಹರೇಣ ಚ ।
ಅನಾದರಸ್ತದಾ ದೃಷ್ಟೋ ಹಿತ್ವಾ ತ್ವಾಮನ್ಯತೋ ಗತಃ ॥ ೩೩ ॥

---

೨೯. ನಿಮ್ಮಲ್ಲಿಯ ಮದ್ದಳೆಯ ಶುಭಧ್ವನಿಯೆಲ್ಲಿ? ಶಿವನ ಡಮರುಧ್ವನಿಯೆಲ್ಲಿ? ನಿಮ್ಮ ನಗಾರಿ ಧ್ವನಿಯೆಲ್ಲಿ? ಶಿವನ ಅಮಂಗಲವಾದ ಕೊಂಬಿನ ಕೂಗೆಲ್ಲಿ?

೩೦. ನಿಮ್ಮ ಮನೋಹರವಾದ ಢಕ್ಕಾಧ್ವನಿಯೆಲ್ಲಿ? ಶಿವನ ಅಮಂಗಲವಾದ ಗಳಧ್ವನಿಯೆಲ್ಲಿ? ಇದಲ್ಲದೆ ನಿನಗೂ ಶಿವನಿಗೂ ರೂಪಸಾದೃಶ್ಯವೂ ಇಲ್ಲ.

೩೧. ಆ ಶಿವನಿಗೆ ಧನವಿದ್ದರೆ ಅವನು ದಿಗಂಬರನೇಕಾಗುತ್ತಿದ್ದನು? ಅವನ ವಾಹನವೋ ಮುದಿ ಎತ್ತು. ಹೀಗೆ ಅವನಿಗೆ ಯಾವ ಸಾಮಗ್ರಿಯೂ ಇಲ್ಲ.

೩೨. ವಧುವಿಗೆ ಸುಖವನ್ನುಂಟುಮಾಡುವಂತಹ ಗುಣಗಳು ಯಾವುವೂ ಆ ಶಿವನಲ್ಲಿ ಇಲ್ಲವೇ ಇಲ್ಲ.

೩೩. ನಿನಗೆ ಸಹಾಯಕನಾದ ಮನ್ಮಥನನ್ನು ಆ ಹರನು ಸುಟ್ಟು ಭಸ್ಮ ಮಾಡಿರುವನು. ಆದರಿಂದಲೇ ನಿನ್ನ ಮೇಲೆ ಅವನಿಗೆ ಇರುವ ಅನಾದರವು ಗೊತ್ತಾಗುವುದು. ಆದಕಾರಣವೇ ಆ ಶಿವನು ನಿನ್ನನ್ನು ಬಿಟ್ಟು ಬೇರೆಕಡೆಗೆ ಹೊರಟು ಹೋದನು.

ಜಾತಿರ್ನ ದೃಶ್ಯತೇ ತಸ್ಯ ವಿದ್ಯಾ ಜ್ಞಾನಂ ತಥೈವ ಚ ।
ಸಹಾಯಾಶ್ಚ ಪಿಶಾಚಾಹಿ ವಿಷಂ ಕಂಠೇ ಹಿ ದೃಶ್ಯತೇ ॥ ೩೪ ॥

ಏಕಾಕೀ ಚ ಸದಾ ನಿತ್ಯಂ ವಿರಾಗೀ ಚ ವಿಶೇಷತಃ ।
ತಸ್ಮಾತ್ತ್ವಂ ಚ ಹರೇಣೈವ ಮನೋ ಯೋಕ್ತುಂ ನ ಚಾರ್ಹಸಿ ॥ ೩೫ ॥

ಕ್ವ ಚ ಹಾರಸ್ತ್ವದೀಯೋ ವೈ ಕ್ವ ಚ ತನ್ಮುಂಡಮಾಲಿಕಾ ।
ಅಂಗರಾಗಃ ಕ್ವ ತೇ ದಿವ್ಯಃ ಚಿತಾಭಸ್ಮ ಕ್ವ ತತ್ತನೌ ॥ ೩೬ ॥

ಸರ್ವಂ ವಿರುದ್ಧಂ ರೂಪಾದಿ ತವ ದೇವಿ ಹರಸ್ಯ ಚ ।
ಮಹ್ಯಂ ನ ರೋಚತೇ ಹ್ಯೇತದ್ಯದಿಚ್ಛಸಿ ತಥಾ ಕುರು ॥ ೩೭ ॥

ಅಸದ್ವಸ್ತು ಚ ಯತ್ಕಿಂಚಿತ್ತತ್ಸರ್ವಂ ಸ್ವಯಮಿಹಾಹಸೇ ।
ನಿವರ್ತಯ ಮನಸ್ತಸ್ಮಾನ್ನೋ ಚೇದಿಚ್ಛಸಿ ತತ್ಕುರು ॥ ೩೮ ॥

---

೩೪. ಅವನಿಗೆ ಜಾತಿಯಿಲ್ಲ, ವಿದ್ಯವನ್ನು ಓದಿಲ್ಲ, ಜ್ಞಾನವೂ ಆ ಶಿವನಿಗೆ ಇಲ್ಲ. ಪಿಶಾಚಿಗಳೇ ಅವನ ಪರಿವಾರ. ಕತ್ತಿನಲ್ಲಿ ಸದಾ ವಿಷವನ್ನಿಟ್ಟುಕೊಂಡಿರುವನು.

೩೫. ಆ ಹರನು ಸದಾ ಒಬ್ಬಂಟಿಗನು, ಮೇಲಾಗಿ ವಿರಕ್ತನು. ಆದುದರಿಂದ ಎಲೌ ಗಿರಿಜೆ, ನೀನು ಆ ಹರನಲ್ಲಿ ಅನುರಾಗವುಳ್ಳವಳಾಗಬೇಡ.

೩೬. ನಿನ್ನ ಸುಂದರವಾದ ಈ ಹಾರವೆಲ್ಲಿ? ಶಿವನ ಆ ರುಂಡಮಾಲೆಯೆಲ್ಲಿ? ನಿನ್ನ ದಿವ್ಯಚಂದನ ಲೇಪವೆಲ್ಲಿ? ರುದ್ರನ ಶರೀರದಲ್ಲಿರುವ ಚಿತೆಯ ಭಸ್ಮವೆಲ್ಲಿ?

೩೭. ಎಲೌ ದೇವಿ, ಹೀಗೆ ಹರನಿಗೂ ನಿನಗೂ ರೂಪಮೊದಲಾದುವುಗಳಲ್ಲಿ ಸಾದೃಶ್ಯವೇ ಇಲ್ಲ. ಎಲ್ಲವೂ ವಿರುದ್ಧವಾಗಿವೆ. ನನಗೇಕೋ ಈ ನಿಮ್ಮ ಸಂಬಂಧವು ಸರಿಯಾಗಿ ತೋರುವುದಿಲ್ಲ. ಇನ್ನು ನಿನ್ನಿಷ್ಟಬಂದಂತೆ ಮಾಡು.

೩೮. ಆ ಶಿವನನ್ನು ವರಿಸಿ ಕೆಟ್ಟವಸ್ತುಗಳೆಲ್ಲವನ್ನೂ ಕಟ್ಟಿಕೊಳ್ಳಬೇಕೆಂದಿರುವೆ ಬೇಡ, ಆ ಶಿವನಿಂದ ಮನಸ್ಸನ್ನು ಹಿಂತಿರುಗಿಸು. ಯಾವುದೂ ನಿನ್ನಿಷ್ಟಬಂದಂತೆ ಮಾಡು ಎಂದನು.

॥ ಬ್ರಹ್ಮೋವಾಚ ॥
ಇತ್ಯೇವಂ ವಚನಂ ಶ್ರುತ್ವಾ ತಸ್ಯ ವಿಪ್ರಸ್ಯ ಪಾರ್ವತೀ ।
ಉವಾಚ ಕ್ರುದ್ಧಮನಸಾ ಶಿವನಿಂದಾಪರಂ ದ್ವಿಜಂ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಸಪ್ತವಿಂಶೋಽಧ್ಯಾಯಃ



---

೩೯. ಬ್ರಹ್ಮನು ಹೇಳಿದನು:—ಹೀಗೆ ಬ್ರಾಹ್ಮಣನು ಹೇಳಿದ ಮಾತನ್ನು ಕೇಳಿ ಪಾರ್ವತಿಯು, ಅವನು ಮಾಡಿದ ಶಿವನಿಂದೆಗಾಗಿ ತುಂಬಾ ಕೋಪಗೊಂಡು ಹೀಗೆ ಹೇಳಿದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಅಷ್ಟಾವಿಂಶೋಽಧ್ಯಾಯಃ

---

॥ ಪಾರ್ವತ್ಯುವಾಚ ॥

ಏತಾವದ್ಧಿ ಮಯಾ ಜ್ಞಾತಂ ಕಶ್ಚಿದನ್ಯೋಽಯಮಾಗತಃ ।
ಇದಾನೀಂ ಸಕಲಂ ಜ್ಞಾತಮವಧ್ಯಸ್ತ್ವಂ ವಿಶೇಷತಃ ॥ ೧ ॥

ತ್ವಯೋಕ್ತಂ ವಿದಿತಂ ದೇವ ತದಲೀಕಂ ನ ಚಾನ್ಯಥಾ ।
ಯದಿ ತ್ವಯೋದಿತಂ ಸ್ಯಾದ್ವೈ ವಿರುದ್ಧಂ ನೋಚ್ಯತೇ ತ್ವಯಾ ॥ ೨ ॥

ಕದಾಚಿದ್ದೃಶ್ಯತೇ ತಾದೃಗ್ವೇಷಧಾರೀ ಮಹೇಶ್ವರಃ ।
ಸ್ವಲೀಲಯಾ ಪರಬ್ರಹ್ಮ ಸ್ವರಾಗೋಪಾತ್ತವಿಗ್ರಹಃ ॥ ೩ ॥

---

### ಇಪ್ಪತ್ತೆಂಟನೆಯ ಅಧ್ಯಾಯವು

೧. ಪಾರ್ವತಿಯು ಹೇಳಿದಳು :—ಓ ವಿಪ್ರೋತ್ತಮ, ಇಷ್ಟುಹೊತ್ತಿನವರೆಗೆ ನೀನು ಯಾವನೋ ಓರ್ವನು ಬಂದಿರುವನೆಂದು ತಿಳಿದಿದ್ದೆನು. ಈಗೆಲ್ಲವೂ ತಿಳಿಯಿತು. ಆದರೆ ನೀನು ಬ್ರಾಹ್ಮಣನು, ವಧೆಗೆ ಯೋಗ್ಯನಲ್ಲ.

೨. ನೀನು ಹೇಳಿದುದೆಲ್ಲವೂ ತಿಳಿಯಿತು. ಅದು ನಿಜವಾದುದಲ್ಲ. ಸಟೆಯು. ನೀನು ಹೇಳಿದಂತೆ ಆಗಲಾರದು. ಆದರೂ ನಿನ್ನ ಮಾತು ವಿರುದ್ಧವಾಗಲಾರದು.

೩. ಮಹೇಶ್ವರನು ನೀನು ಹೇಳಿದಂತೆ ವೇಷವನ್ನು ಒಮ್ಮೊಮ್ಮೆ ಧರಿಸುವನು. ಆ ಪರಬ್ರಹ್ಮನು ತನ್ನ ಮಾಯೆಯಿಂದ ಬೇಕಾದಂತಹ ಅದ್ಭುತವೇಷಗಳನ್ನು ಧರಿಸಬಲ್ಲನು.

ಬ್ರಹ್ಮಚಾರಿಸ್ವರೂಪೇಣ ಪ್ರತಾರಯಿತುಮುದ್ಯತಃ ।
ಆಗತಶ್ಛಲಸಂಯುಕ್ತಂ ವಚೋಽವಾದೀಃ ಕುಯುಕ್ತಿತಃ ॥ ೪ ॥

ಶಂಕರಸ್ಯ ಸ್ವರೂಪಂ ತು ಜಾನಾಮಿ ಸುವಿಶೇಷತಃ ।
ಶಿವತತ್ತ್ವಮತೋ ವಚ್ಮಿ ಸುವಿಚಾರ್ಯ ಯಥಾರ್ಹತಃ ॥ ೫ ॥

ವಸ್ತುತೋ ನಿರ್ಗುಣೋ ಬ್ರಹ್ಮಾ ಸಗುಣಃ ಕಾರಣೇನ ಸಃ ।
ಕುತೋ ಜಾತಿರ್ಭವೇತ್ತಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೬ ॥

ಸ ಸರ್ವಾಸಾಂ ಹಿ ವಿದ್ಯಾನಾಮಧಿಷ್ಠಾನಂ ಸದಾಶಿವಃ ।
ಕಿಂ ತಸ್ಯ ವಿದ್ಯಯಾ ಕಾರ್ಯಂ ಪೂರ್ಣಸ್ಯ ಪರಮಾತ್ಮನಃ ॥ ೭ ॥

ವೇದಾ ಉಚ್ಛ್ವಾಸರೂಪೇಣ ಪುರಾ ದತ್ತಾಶ್ಚ ವಿಷ್ಣವೇ ।
ಶಂಭುನಾ ತೇನ ಕಲ್ಪಾದೌ ತತ್ಸಮಃ ಕೋಽಸ್ತಿ ಸುಪ್ರಭುಃ ॥ ೮ ॥

---

೪. ಬ್ರಹ್ಮಚಾರಿರೂಪದಿಂದ ನನ್ನನ್ನು ಮೋಸಗೊಳಿಸಲು ಬಂದಿರುವೆ. ಕಪಟವಾದ ಮಾತನ್ನು ಕುಯುಕ್ತಿಯಿಂದ ನನಗೆ ಹೇಳುತ್ತಲಿರುವೆ.

೫. ಶಂಕರನ ಸ್ವರೂಪವನ್ನು ನಾನು ಚೆನ್ನಾಗಿ ತಿಳಿದಿರುವೆನು. ವಿಮರ್ಶೆಯಿಂದ ಯಥಾಕ್ರಮವಾಗಿ ಆ ಶಿವತತ್ವವನ್ನು ಹೇಳುವೆನು, ಕೇಳು.

೬. ಪರಬ್ರಹ್ಮನು ವಸ್ತುತಃ ನಿರ್ಗುಣನು. ಜಗತ್ಸೃಷ್ಟಿಕಾಲದಲ್ಲಿ ಮಾಯೆಯಿಂದ ಅವನು ಸಗುಣನಾದ ಪರಮೇಶ್ವರನಾಗುವನು. ಇಂತಹ ನಿರ್ಗುಣವಸ್ತುವಿಗೆ ಜಾತಿಯೆಲ್ಲಿಯದು ?

೭. ಆ ಸದಾಶಿವನು ಎಲ್ಲಾ ವಿದ್ಯೆಗಳಿಗೂ ಆಶ್ರಯನು. ಮತ್ತು ಅವನೇ ವಿದ್ಯಾಸ್ವರೂಪನು. ಇಂತಹ ಪೂರ್ಣಪರಮಾತ್ಮನಿಗೆ ವಿದ್ಯೆಯಿಂದ ಆಗಬೇಕಾದುದೇನು ?

೮. ಕಲ್ಪದ ಆದಿಯಲ್ಲಿ ಶಂಕರನು ವೇದಗಳನ್ನು ನಿಟ್ಟುಸಿರಿನ ರೂಪದಲ್ಲಿ ವಿಷ್ಣುವಿಗೆ ಕೊಟ್ಟನು. ಎಂದಮೇಲೆ, ಆ ಶಿವನಂತಹ ಪ್ರಭುವು ಯಾವನಿರುವನು ?

ಸರ್ವೇಷಾಮಾದಿಭೂತಸ್ಯ ವಯೋಮಾನಂ ಕುತಸ್ತತಃ ।
ಪ್ರಕೃತಿಸ್ತು ತತೋ ಜಾತಾ ಕಿಂ ಶಕ್ತೇಸ್ತಸ್ಯ ಕಾರಣಂ ॥ ೯ ॥

ಯೇ ಭಜಂತಿ ಚ ತಂ ಪ್ರೀತ್ಯಾ ಶಕ್ತೀಶಂ ಶಂಕರಂ ಸದಾ ।
ತಸ್ಮೈ ಶಕ್ತಿತ್ರಯಂ ಶಂಭುಃ ಸ ದದಾತಿ ಸದಾವ್ಯಯಂ ॥ ೧೦ ॥

ತಸ್ಯೈವ ಭಜನಾಜ್ಜೀವೋ ಮೃತ್ಯುಂ ಜಯತಿ ನಿರ್ಭಯಃ ।
ತಸ್ಮಾನ್ಮೃತ್ಯುಂಜಯಂ ನಾಮ ಪ್ರಸಿದ್ಧಂ ಭುವನತ್ರಯೇ ॥ ೧೧ ॥

ತಸ್ಯೈವ ಪಕ್ಷಪಾತೇನ ವಿಷ್ಣುರ್ವಿಷ್ಣುತ್ವಮಾಪ್ತವಾನ್ ।
ಬ್ರಹ್ಮತ್ವಂ ಚ ಯಥಾ ಬ್ರಹ್ಮಾ ದೇವಾ ದೇವತ್ವಮೇವ ಚ ॥ ೧೨ ॥

ದರ್ಶನಾರ್ಥಂ ಶಿವಸ್ಯಾದೌ ಯಥಾಗಚ್ಛತಿ ದೇವರಾಟ್ ।
ಭೂತಾದಯಸ್ತತ್ಪರಸ್ಯ ದ್ವಾರಪಾಲಾಶ್ಶಿವಸ್ಯ ಚ ॥ ೧೩ ॥

---

೯. ಎಲ್ಲರಿಗೂ ಮೊದಲನೆಯವನಾದ ಈಶ್ವರನಿಗೆ ವಯಸ್ಸಿನ ಗಣನೆಯು ಎಲ್ಲಿಯದು ? ಪ್ರಕೃತಿಯು ಅವನಿಂದಲೇ ಜನಿಸಿರುವುದು. ಅವನಿಗೆ ಸಾಮರ್ಥ್ಯವು ಯಾವುದರಿಂದಲೂ ಬರಬೇಕಾಗಿಲ್ಲ. ಸ್ವಯಂಸಮರ್ಥನವನು.

೧೦. ಶಕ್ತಿಗೆ ಒಡೆಯನಾದ ಆ ಶಂಕರನನ್ನು ಯಾವನು ಭಜಿಸುವನೋ ಅವನಿಗೆ ಶಂಕರನು ಸೃಷ್ಟಿಶಕ್ತಿ, ಪಾಲನಶಕ್ತಿ, ಸಂಹಾರಶಕ್ತಿ ಈ ಮೂರು ಶಕ್ತಿಗಳನ್ನೂ ಕೊಡುವನು.

೧೧. ಆ ಶಿವನನ್ನು ಭಜಿಸಿದರೆ ಮಾತ್ರ ಜೀವನು ನಿರ್ಭಯವಾಗಿ ಮೃತ್ಯುವನ್ನು ಜಯಿಸುವನು. ಆದುದರಿಂಲೇ ಆ ಶಿವನಿಗೆ "ಮೃತ್ಯುಂಜಯ" ನೆಂಬ ಹೆಸರು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ.

೧೨. ಆ ಶಿವನ ಅನುಗ್ರಹದಿಂದಲೇ ವಿಷ್ಣುವು ವಿಷ್ಣುಪದವಿಯನ್ನು ಪಡೆದನು. ಬ್ರಹ್ಮನು ಬ್ರಹ್ಮಪದವಿಯನ್ನು ಪಡೆದನು. ದೇವತೆಗಳು ದೇವತ್ವವನ್ನು ಪಡೆದಿರುವರು.

೧೩. ದಿನವೂ ದೇವೇಂದ್ರನು ಆ ಶಿವನ ದರ್ಶನಕ್ಕೆ ಬರುವನು. ಬರುವಾಗ ಶಿವನ ದ್ವಾರಪಾಲಕರಾದ ಭೂತಾದಿಗಳ ದೊಣ್ಣೆಯ ಹೊಡೆತಗಳಿಂದ ಇಂದ್ರನ ಕಿರೀಟವು ಗಾಯಗೊಂಡು ಸವೆದುಹೋಗುವುದು.

ದಂಡೈಶ್ಚ ಮುಕುಟಂ ವಿದ್ಧಂ ನೃಷ್ಟಂ ಭವತಿ ಸರ್ವತಃ ।
ಕಿಂ ತಸ್ಯ ಬಹುಪಕ್ಷೇಣ ಸ್ವಯಮೇವ ಮಹಾಪ್ರಭುಃ ॥ ೧೪ ॥

ಕಲ್ಯಾಣರೂಪಿಣಸ್ತಸ್ಯ ಸೇವಯೇಹ ನ ಕಿಂ ಭವೇತ್ ।
ಕಿಂ ನ್ಯೂನಂ ತಸ್ಯ ದೇವಸ್ಯ ಮಾಮಿಚ್ಛತಿ ಸದಾಶಿವಃ ॥ ೧೫ ॥

ಸಪ್ತಜನ್ಮದರಿದ್ರಃ ಸ್ಯಾತ್ಸೇವೇದ್ಯೋ ಯದಿ ಶಂಕರಂ ।
ತಸ್ಯೈತತ್ಸೇವನಾಲ್ಲೋಕೇ ಲಕ್ಷ್ಮೀಃ ಸ್ಯಾದನಪಾಯಿನೀ ॥ ೧೬ ॥

ಯದಗ್ರೇ ಸಿದ್ಧಯೋಽಷ್ಟೌ ಚ ನಿತ್ಯಂ ನೃತ್ಯಂತಿ ತೋಷಿತುಂ ।
ಅವಾಙ್ಮುಖಾಃ ಸದಾ ತತ್ರ ತದ್ಧಿತಂ ದುರ್ಲಭಂ ಕುತಃ ॥ ೧೭ ॥

ಯದ್ಯಸ್ಯ ಮಂಗಲಾನೀಹ ಸೇವತೇ ಶಂಕರಸ್ಯ ನ ।
ತಥಾಪಿ ಮಂಗಲಂ ತಸ್ಯ ಸ್ಮರಣಾದೇವ ಜಾಯತೇ ॥ ೧೮ ॥

---

೧೪-೧೫. ಹೆಚ್ಚು ಪರಿವಾರಗಳಿಂದ ಅವನಿಗೇನು? ಅವನು ಸ್ವಯಂ ಮಹಾಪ್ರಭುವು. ಎಲ್ಲವನ್ನೂ ಮಾಡಲು ಸಮರ್ಥನು. ಮಂಗಳರೂಪಿಯಾದ ಆ ಶಿವನನ್ನು ಸೇವಿಸಿದರೆ ಏನು ತಾನೇ ಆಗಲಾರದು? ನನ್ನನ್ನು ಅಪೇಕ್ಷಿಸಲು ಆ ಶಿವನಿಗೆ ಕನ್ಮಿಯಾದುದೇನು?

೧೬. ಆ ಶಿವನನ್ನು ಪೂಜಿಸಿದರೆ ಏಳೇಳು ಜನ್ಮಗಳಿಂದ ದರಿದ್ರನಾದವನೂ ಸಹ ಮಹಾ ಐಶ್ವರ್ಯವಂತನಾಗಿ ಬಹಳಕಾಲ ಬಾಳುವನು.

೧೭. ಆ ಶಿವನೆದುರಿಗೆ ಅಣಿಮಾದಿ ಎಂಟು ಸಿದ್ಧಿಗಳೂ ಸಹ ಅವನನ್ನು ಸಂತೋಷಗೊಳಿಸಲು ತಲೆಬಗ್ಗಿಸಿಕೊಂಡು ನರ್ತನಮಾಡುವುವು. ಇಂತಹವನಿಗೆ ದುರ್ಲಭವಾದ ವಸ್ತುವು ಯಾವುದಿರುವುದು?

೧೮. ಒಂದುವೇಳೆ ಶಂಕರನು ಮಂಗಳವಸ್ತುಗಳನ್ನು ಸೇವಿಸುವುದಿಲ್ಲವಲ್ಲಾ ಎಂದರೆ, ಆ ಶಿವನನ್ನು ಸ್ಮರಣಮಾಡಿದುದರಿಂದಲೇ ಮಂಗಳವಾಗುವಾಗ ಅವನು ಹೇಗಿದ್ದರೇನು?

ಯಸ್ಯ ಪೂಜಾಪ್ರಭಾವೇಣ ಕಾಮಾಸ್ಸಿಧ್ಯಂತಿ ಸರ್ವಶಃ ।
ಕುತೋ ವಿಕಾರಸ್ತಸ್ಯಾಸ್ತಿ ನಿರ್ವಿಕಾರಸ್ಯ ಸರ್ವದಾ ॥ ೧೯ ॥

ಶಿವೇತಿ ಮಂಗಲಂ ನಾಮ ಮುಖೇ ಯಸ್ಯ ನಿರಂತರಂ ।
ತಸ್ಯೈವ ದರ್ಶನಾದನ್ಯೇ ಪವಿತ್ರಾಸ್ಸಂತಿ ಸರ್ವದಾ ॥ ೨೦ ॥

ಯದ್ಯಪೂತಂ ಭವೇದ್ಭಸ್ಮ ಚಿತಾಯಾಶ್ಚ ತ್ವಯೋದಿತಂ ।
ನಿತ್ಯಮಸ್ಯಾಂಗಗಂ ದೇವೈಶ್ಶಿರೋಭಿರ್ಧಾರ್ಯತೇ ಕಥಂ ॥ ೨೧ ॥

ಯೋ ದೇವೋ ಜಗತಾಂ ಕರ್ತಾ ಭರ್ತಾ ಹರ್ತಾ ಗುಣಾನ್ವಿತಃ ।
ನಿರ್ಗುಣಃ ಶಿವಸಂಜ್ಞಶ್ಚ ಸ ವಿಜ್ಞೇಯಃ ಕಥಂ ಭವೇತ್ ॥ ೨೨ ॥

ಅಗುಣಂ ಬ್ರಹ್ಮಣೋ ರೂಪಂ ಶಿವಸ್ಯ ಪರಮಾತ್ಮನಃ ।
ತತ್ಕಥಂ ಹಿ ವಿಜಾನಂತಿ ತ್ವಾದೃಶಸ್ತದ್ಬಹಿರ್ಮುಖಾಃ ॥ ೨೩ ॥

---

೧೯. ಆ ಶಂಕರನನ್ನು ಪೂಜಿಸಿದರೆ ಸಕಲಕಾಮುಗಳೂ ಸಿದ್ಧಿಸುವುವು. ಸದಾ ನಿರ್ವಿಕಾರನಾದ ಆ ಶಿವನಿಗೆ ವಿಕಾರವೆಂದರೇನು ?

೨೦. "ಶಿವ" ನೆಂಬ ಮಂಗಳನಾಮವನ್ನು ಯಾವನು ಸದಾ ಜಪಿಸುವನೋ ಅಂತಹವನ ದರ್ಶನದಿಂದಲೇ ಮಿಕ್ಕವರೂ ಪವಿತ್ರರಾಗುವರು.

೨೧. ಆ ಶಿವನು ಧರಿಸಿದ ಚಿತಾಭಸ್ಮವು, ನೀನು ಹೇಳಿದಂತೆ ಅಪವಿತ್ರವಾದ ದ್ದಾದರೆ ದೇವತೆಗಳು ನಿತ್ಯವೂ ಅದನ್ನು ಏಕೆ ಧರಿಸುವರು ?

೨೨. ಆ ದೇವನು ನಿರ್ಗುಣಸ್ವರೂಪನಾದರೂ ಸಗುಣವಾದ ಈಶ್ವರರೂಪ ದಿಂದ ಜಗತ್ತನ್ನು ಸೃಷ್ಟಿಸುವನು, ಪಾಲಿಸುವನು, ಕೊನೆಯಲ್ಲಿ ಸಂಹರಿಸುವನು. ಇಂತಹ ಶಿವನ ಸ್ವರೂಪವನ್ನು ತಿಳಿಯುವುದು ಹೇಗೆ?

೨೩. ಪರಬ್ರಹ್ಮರೂಪಿಯಾದ ಶಿವನ ರೂಪವು ನಿರ್ಗುಣವಾದುದು. ಇಂತಹ ಪರಮಾತ್ಮನ ಸ್ವರೂಪವನ್ನು ನಿನ್ನಂತಹ ಶಿವನಿಂದಕರು ತಿಳಿಯುವುದು ಹೇಗೆ ?

ದುರಾಚಾರಾಶ್ಚ ಪಾಪಾಶ್ಚ ದೇವೇಭ್ಯಸ್ತೇ ವಿನಿರ್ಗತಾಃ ।
ತತ್ತ್ವಂ ತೇ ನೈವ ಜಾನಂತಿ ಶಿವಸ್ಯಾಗುಣರೂಪಿಣಃ ॥ ೨೪ ॥

ಶಿವನಿಂದಾಂ ಕರೋತೀಹ ತತ್ತ್ವಮಜ್ಞಾಯ ಯಃ ಪುಮಾನ್ ।
ಆಜನ್ಮಸಂಚಿತಂ ಪುಣ್ಯಂ ಭಸ್ಮೀಭವತಿ ತಸ್ಯ ತತ್ ॥ ೨೫ ॥

ತ್ವಯಾ ನಿಂದಾ ಕೃತಾ ಯಾತ್ರ ಹರಸ್ಯಾಮಿತತೇಜಸಃ ।
ತ್ವತ್ಪೂಜಾ ಚ ಕೃತಾ ತನ್ಮೇ ತಸ್ಮಾತ್ಪಾಪಂ ಭಜಾಮ್ಯಹಂ ॥ ೨೬ ॥

ಶಿವವಿದ್ವೇಷಿಣಂ ದೃಷ್ಟ್ವಾ ಸಚೇಲಂ ಸ್ನಾನಮಾಚರೇತ್ ।
ಶಿವವಿದ್ವೇಷಿಣಂ ದೃಷ್ಟ್ವಾ ಪ್ರಾಯಶ್ಚಿತ್ತಂ ಸಮಾಚರೇತ್ ॥ ೨೭ ॥

ರೇ ರೇ ದುಷ್ಟ ತ್ವಯಾ ಚೋಕ್ತಮಹಂ ಜಾನಾಮಿ ಶಂಕರಂ ।
ನಿಶ್ಚಯೇನ ನ ವಿಜ್ಞಾತಶ್ಶಿವ ಏವ ಸನಾತನಃ ॥ ೨೮ ॥

ಯಥಾ ತಥಾ ಭವೇದ್ರುದ್ರೋ ಯಥಾ ವಾ ಬಹುರೂಪವಾನ್ ।
ಮಮಾಭೀಷ್ಟತಮೋ ನಿತ್ಯಂ ನಿರ್ವಿಕಾರೀ ಸತಾಂ ಪ್ರಿಯಃ ॥ ೨೯ ॥

---

೨೪. ದುರಾಚಾರಿಗಳೂ ಪಾಪಿಗಳೂ, ಅಸುರರೂ ಆದವರು ನಿರ್ಗುಣನಾದ ಶಿವನ ಸ್ವರೂಪವನ್ನು ತಿಳಿಯಲಾರರು.

೨೫. ತತ್ವವನ್ನು ತಿಳಿಯದೆ ಶಿವನಿಂದೆಯನ್ನು ಯಾವನು ಮಾಡುವನೋ ಅವನ ಜನ್ಮಜನ್ಮಾಂತರಗಳ ಪುಣ್ಯವೆಲ್ಲವೂ ನಾಶವಾಗುವುದು.

೨೬. ಮಹಾತೇಜಸ್ವಿಯಾದ ಹರನ ನಿಂದೆಯನ್ನು ನೀನು ಮಾಡಿರುವೆ. ಇಂತಹ ನಿನ್ನನ್ನು ನಾನು ಪೂಜಿಸಿದುದರಿಂದ ನನಗೂ ಪಾಪವುಂಟಾಗಿರುವುದು.

೨೭. ಶಿವದ್ವೇಷಿಯನ್ನು ನೋಡಿದೊಡನೆಯೇ ಉಟ್ಟ ಬಟ್ಟೆಯೊಡನೆಯೇ ಸ್ನಾನಮಾಡಬೇಕು. ಮತ್ತು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

೨೮. ಎಲೈ ದುಷ್ಟಬ್ರಾಹ್ಮಣ, ನೀನು ಹೇಳಿದ ಶಂಕರನನ್ನು ನಾನು ಚೆನ್ನಾಗಿ ಬಲ್ಲೆನು. ಆದಿಪುರುಷನಾದ ಆ ಶಿವನನ್ನು ನೀನೇ ತಿಳಿದಿಲ್ಲ.

೨೯. ರುದ್ರನು ಹೇಗೇ ಇರಲಿ, ಎಂತಹ ರೂಪವುಳ್ಳವನಾಗಲಿ, ಅವನೇ ನನಗೆ ಬೇಕಾದವನು. ಅವನಿಗೆ ಯಾವ ವಿಕಾರಗಳೂ ಇಲ್ಲ. ಸಂತರಿಗೆ ಅವನು ಬೇಕಾದವನು.

ವಿಷ್ಣುರ್ಬ್ರಹ್ಮಾಪಿ ನ ಸಮಸ್ತಸ್ಯ ಕ್ವಾಪಿ ಮಹಾತ್ಮನಃ ।
ಕುತೋಽನ್ಯೇ ನಿರ್ಜರಾದ್ಯಾಶ್ಚ ಕಾಲಾಧೀನಾಸ್ಸದೈವ ಹಿ ॥ ೩೦ ॥

ಇತಿ ಬುದ್ಧ್ವಾ ಸಮಾಲೋಚ್ಯ ಸ್ವಯಾ ಸತ್ಯಾ ಸುತತ್ತ್ವತಃ ।
ಶಿವಾರ್ಥಂ ವನಮಾಗತ್ಯ ಕರೋಮಿ ವಿಪುಲಂ ತಪಃ ॥ ೩೧ ॥

ಸ ಏವ ಪರಮೇಶಾನಸ್ಸರ್ವೇಶೋ ಭಕ್ತವತ್ಸಲಃ ।
ಸಂಪ್ರಾಪ್ತುಂ ಮೇಽಭಿಲಾಷೋ ಹಿ ದೀನಾನುಗ್ರಹಕಾರಕಂ ॥ ೩೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಗಿರಿಜಾ ಸಾ ಹಿ ಗಿರೀಶ್ವರಸುತಾ ಮುನೇ ।
ವಿರರಾಮ ಶಿವಂ ದಧ್ಯೌ ನಿರ್ವಿಕಾರೇಣ ಚೇತಸಾ ॥ ೩೩ ॥

ತದಾಕರ್ಣ್ಯ ವಚೋ ದೇವ್ಯಾ ಬ್ರಹ್ಮಚಾರೀ ಸ ವೈ ದ್ವಿಜಃ ।
ಪುನರ್ವಚನಮಾಖ್ಯಾತುಂ ಯಾವದೇವ ಪ್ರಚಕ್ರಮೇ ॥ ೩೪ ॥

---

೩೦. ವಿಷ್ಣುಬ್ರಹ್ಮರೂ ಸಹ ಮಹಾತ್ಮನಾದ ಆ ಶಿವನಿಗೆ ಸಮರಲ್ಲ. ಇನ್ನು ಮಿಕ್ಕ ದೇವತೆಗಳೆಲ್ಲಿಯವರು? ಅವರೆಲ್ಲರೂ ಕಾಲಾಧೀನರು ಎಂದರೆ ಕೆಲವುಕಾಲ ವಿದ್ದು ನಾಶವನ್ನೈದುವರು.

೩೧. ಈರೀತಿಯಾಗಿ ಸದ್ಬುದ್ಧಿಯಿಂದ ತತ್ವವನ್ನು ವಿಮರ್ಶಿಸಿ, ನಾನು ಅರಣ್ಯಕ್ಕೆ ಬಂದು ಶಿವನನ್ನುದ್ದೇಶಿಸಿ ಘೋರತಪಸ್ಸನ್ನು ಮಾಡುತ್ತಿರುವೆನು.

೩೨. ಆ ಪರಮೇಶ್ವರನೇ ಎಲ್ಲರಿಗೂ ಒಡೆಯನು, ಭಕ್ತವತ್ಸಲನು, ದೀನರನ್ನುದ್ಧರಿಸುವವನು. ಇಂತಹ ಶಿವನನ್ನು ಪಡೆಯಲು ನನಗೆ ಅಭಿಲಾಷೆಯಿರುವುದು ಎಂದಳು.

೩೩. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಆ ಗಿರಿಜೆಯು ಶಿವನನ್ನು ನಿಶ್ಚಲವಾದ ಮನಸ್ಸಿನಿಂದ ಧ್ಯಾನಿಸುತ್ತಾ ಸುಮ್ಮನಾದಳು.

೩೪-೩೫. ಗಿರಿಜೆಯ ಆ ಮಾತುಗಳನ್ನು ಕೇಳಿ ವೃದ್ಧಬ್ರಹ್ಮಚಾರಿಯು

ಉವಾಚ ಗಿರಿಜಾ ತಾವತ್ಸಖೀಂ ಸ್ವಾಂ ವಿಜಯಾಂ ದ್ರುತಂ ।
ಶಿವಸಕ್ತಮನೋವೃತ್ತಿಃ ಶಿವನಿಂದಾಪರಾಙ್ಮುಖಾ ॥ ೩೫ ॥

॥ ಗಿರಿಜೋವಾಚ ॥

ವಾರಣೀಯಃ ಪ್ರಯತ್ನೇನ ಸಖ್ಯಯಂ ಹಿ ದ್ವಿಜಾಧಮಃ ।
ಪುನರ್ವಕ್ತುಮನಾಶ್ಚೈವ ಶಿವನಿಂದಾಂ ಕರಿಷ್ಯತಿ ॥ ೩೬ ॥

ನ ಕೇವಲಂ ಭವೇತ್ಪಾಪಂ ನಿಂದಾಂ ಕರ್ತುಶ್ಶಿವಸ್ಯ ಹಿ ।
ಯೋ ವೈ ಶೃಣೋತಿ ತನ್ನಿಂದಾಂ ಪಾಪಭಾಕ್ಸ ಭವೇದಿಹ ॥ ೩೭ ॥

ಶಿವನಿಂದಾಕರೋ ವಧ್ಯಸ್ಸರ್ವಥಾ ಶಿವಕಿಂಕರೈಃ ।
ಬ್ರಾಹ್ಮಣಶ್ಚೇತ್ಸ ವೈ ತ್ಯಾಜ್ಯೋ ಗಂತವ್ಯಂ ತತ್ಸ್ಥಲಾದ್ದ್ರುತಂ ॥ ೩೮ ॥

ಅಯಂ ದುಷ್ಟಃ ಪುನರ್ನಿಂದಾಂ ಕರಿಷ್ಯತಿ ಶಿವಸ್ಯ ಹಿ ।
ಬ್ರಾಹ್ಮಣತ್ವಾದವಧ್ಯಶ್ಚೇತ್ತ್ಯಾಜ್ಯೋಽದೃಶ್ಯಶ್ಚ ಸರ್ವಥಾ ॥ ೩೯ ॥

---

ತಿರುಗಿ ಹೇಳಲು ಉದ್ಯುಕ್ತನಾದನು. ಅಷ್ಟರಲ್ಲಿಯೇ ಶಿವನಲ್ಲಿ ಅನುರಕ್ತಳಾದ ಗಿರಿಜೆಯು ಶಿವನಿಂದೆಯನ್ನು ಕೇಳಲಿಷ್ಟವಿಲ್ಲದೆ ತನ್ನ ಸಖಿ ವಿಜಯೆಯನ್ನು ಕುರಿತು,

೩೬. ಎಲೌ ಸಖಿ, ಈ ದುಷ್ಟಬ್ರಾಹ್ಮಣನು ಮಾತಾಡದಂತೆ ತಡಿ. ಇವನು ತಿರುಗಿ ಏನನ್ನೋ ಹೇಳಬೇಕೆಂದಿರುವನು. ಬಹುಶಃ ಮತ್ತೆ ಶಿವನಿಂದೆಯನ್ನು ಮಾಡಬಹುದು.

೩೭. ಶಿವನಿಂದೆಯನ್ನು ಮಾಡುವವನಿಗೆ ಮಾತ್ರ ಪಾಪಬರುವುದಿಲ್ಲ. ಆ ಶಿವನಿಂದೆಯನ್ನು ಕೇಳುವವನಿಗೂ ಪಾಪವುಂಟಾಗುವುದು.

೩೮. ಶಿವನಿಂದೆಮಾಡುವವನನ್ನು ಶಿವಭಕ್ತರು ವಧಿಸಬೇಕು. ಅವನು ಬ್ರಾಹ್ಮಣನಾದರೆ ಆ ಸ್ಥಳವನ್ನು ಬಿಟ್ಟು ಬೇರೆಡೆಗೆ ಹೊರಟುಹೋಗಬೇಕು.

೩೯-೪೦. ಈ ದುಷ್ಟನು ತಿರುಗಿ ಶಿವನಿಂದೆಯನ್ನು ಮಾಡಬೇಕೆಂದಿರುವನು. ಬ್ರಾಹ್ಮಣನಾದುದರಿಂದ ಇವನು ವಧ್ಯನಲ್ಲ. ಆದಕಾರಣ ಇವನ ಮುಖವನ್ನು

ಹಿತ್ವೈತತ್ಸ್ಥಲಮುದ್ಯೈವ ಯಾಸ್ಯಾಮೋಽನ್ಯತ್ರ ಮಾ ಚಿರಂ ।
ಅಥ ಸಂಭಾಷಣಂ ನ ಸ್ಯಾದನೇನಾವಿದುಷಾ ಪುನಃ ॥ ೪೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಚೋಮಯಾ ಯಾವತ್ಪಾದಮುತ್ಕ್ಷಿಪ್ಯತೇ ಮುನೇ ।
ಅಸೌ ತಾವಚ್ಛಿವಸ್ಸಾಕ್ಷಾದಾಲಂಬೇ ಪ್ರಿಯಯಾ ಸ್ವಯಂ ॥ ೪೧ ॥

ಕೃತ್ವಾ ಸ್ವರೂಪಂ ಸುಭಗಂ ಶಿವಾಧ್ಯಾನಂ ಯಥಾತಥಾ ।
ದರ್ಶಯಿತ್ವಾ ಶಿವಾಯೈ ತಾಮುವಾಚಾವಾಙ್ಮುಖೀಂ ಶಿವಃ ॥ ೪೨ ॥

॥ ಶಿವ ಉವಾಚ ॥

ಕುತ್ರ ಯಾಸ್ಯಸಿ ಮಾಂ ಹಿತ್ವಾ ನ ತ್ವಂ ತ್ಯಾಜ್ಯಾ ಮಯಾ ಪುನಃ ।
ಪ್ರಸನ್ನೋಽಸ್ಮಿ ವರಂ ಬ್ರೂಹಿ ನಾದೇಯಂ ವಿದ್ಯತೇ ತವ ॥ ೪೩ ॥

---

ನೋಡದೆ ಈ ಸ್ಥಳವನ್ನು ಬಿಟ್ಟು ಈಕೂಡಲೇ ಬೇರೆಕಡೆಗೆ ತೆರಳೋಣ. ತಿಳಿವಳಿಕೆಯಿಲ್ಲದ ಈ ಮೂರ್ಖನೊಡನೆ ತಿರುಗಿ ನಾನು ಮಾತನಾಡಲಿಚ್ಛಿಸುವುದಿಲ್ಲ ಎಂದಳು.

೪೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಹೇಳಿ ಗಿರಿಜೆಯು ಹೊರಡಲು ಒಂದು ಹೆಜ್ಜೆಯನ್ನು ಮುಂದಿಟ್ಟಳು. ಆಕೂಡಲೇ ಶಿವನು ಅವಳ ಕೈಯನ್ನು ಹಿಡಿದನು.

೪೨. ಅಷ್ಟರಲ್ಲಿಯೇ ಗಿರಿಜೆಯು ತನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಧ್ಯಾನಿಸುತ್ತಿರುವಂತಹ ಸುಂದರರೂಪವನ್ನೇ ಧರಿಸಿ ಶಿವನು ಪ್ರತ್ಯಕ್ಷನಾದನು. ಅವನನ್ನು ನೋಡಿ ಗಿರಿಜೆಯು ನಾಚಿಕೆಯಿಂದ ತಲೆಯನ್ನು ಬಗ್ಗಿಸಿ ನಿಂತಳು. ಆಗ ಗಿರಿಜೆಯನ್ನು ಕುರಿತು,

೪೩. ಶಿವನು ಹೇಳಿದನು:—ಎಲೌ ಗಿರಿಜೆ, ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ? ನಾನು ನಿನ್ನನ್ನು ಬಿಡಲಾರೆನು, ನಾನು ಪ್ರಸನ್ನನಾಗಿರುವೆನು, ವರವನ್ನು ಕೇಳು. ನಿನಗೆ ಕೊಡಬಾರದಂತಹ ವಸ್ತುವು ಯಾವುದೂ ಇಲ್ಲ.

ಅದ್ಯಪ್ರಭೃತಿ ತೇ ದಾಸಸ್ತಪೋಭಿಃ ಕ್ರೀತ ಏವ ತೇ ।
ಕ್ರೀತೋಽಸ್ಮಿ ತವ ಸೌಂದರ್ಯಾತ್ಕ್ಷಣಮೇಕಂ ಯುಗಾಯತೇ ॥ ೪೪ ॥

ತ್ಯಜ್ಯತಾಂ ಚ ತ್ವಯಾ ಲಜ್ಜಾ ಮಮ ಪತ್ನೀ ಸನಾತನೀ ।
ಗಿರಿಜೇ ತ್ವಂ ಹಿ ಸದ್ಬುದ್ಧ್ಯಾ ವಿಚಾರಯ ಮಹೇಶ್ವರಿ ॥ ೪೫ ॥

ಮಯಾ ಪರೀಕ್ಷಿತಾಸಿ ತ್ವಂ ಬಹುಧಾ ದೃಢಮಾನಸೇ ।
ತತ್ಕ್ಷಮಸ್ವಾಪರಾಧಂ ಮೇ ಲೋಕಲೀಲಾನುಸಾರಿಣಃ ॥ ೪೬ ॥

ನ ತ್ವಾದೃಶೀಂ ಪ್ರಣಯಿನೀಂ ಪಶ್ಯಾಮಿ ಚ ತ್ರಿಲೋಕಕೇ ।
ಸರ್ವಥಾಹಂ ತವಾಧೀನಃ ಸ್ವಕಾಮಃ ಪೂರ್ಯತಾಂ ಶಿವೇ ॥ ೪೭ ॥

ಏಹಿ ಪ್ರಿಯೇ ಮತ್ಸಕಾಶಂ ಪತ್ನೀ ತ್ವಂ ಮೇ ವರಸ್ತವ ।
ತ್ವಯಾ ಸಾಕಂ ದ್ರುತಂ ಯಾಸ್ಯೇ ಸ್ವಗೃಹಂ ಪರ್ವತೋತ್ತಮಂ ॥ ೪೮ ॥

---

೪೪. ಇದು ಮೊದಲುಗೊಂಡು ನಾನು ನಿನ್ನ ದಾಸನು, ನೀನು ತಪಸ್ಸಿನಿಂದಲೂ ಸೌಂದರ್ಯದಿಂದಲೂ ನನ್ನನ್ನು ಕೊಂಡುಕೊಂಡುಬಿಟ್ಟಿರುವೆ. ಈಗ ನನಗೆ ಒಂದು ಕ್ಷಣವೂ ಒಂದು ಯುಗದಂತಾಗಿದೆ.

೪೫. ಎಲೌ ಗಿರಿಜೆ, ಮೊದಲಿನಿಂದಲೂ ನೀನು ನನ್ನ ಅನಾದಿಪತ್ನಿಯು. ಹೀಗಿರಲು ಲಜ್ಜೆಯೇಕೆ? ಬಿಡು. ಸೂಕ್ಷ್ಮಬುದ್ಧಿಯಿಂದ ವಿಚಾರಮಾಡು. ಆಗ ನಾನು ಹೇಳಿದುದರ ನಿಜಾಂಶವು ತಿಳಿಯುವುದು.

೪೬. ಲೋಕಲೀಲೆಯನ್ನನುಸರಿ ನಿನ್ನನ್ನು ಬಹುವಿಧವಾಗಿ ಪರೀಕ್ಷಿಸಿದೆನು. ಆದರೂ ಸ್ಥಿರಮನಸ್ಸಿನವಳಾದ ನೀನು ನಿನ್ನ ಪ್ರತಿಜ್ಞೆಯನ್ನು ಬಿಡಲಿಲ್ಲ. ಆ ನನ್ನ ಅಪರಾಧವನ್ನು ಕ್ಷಮಿಸು.

೪೭. ನನಗೆ ನಿನ್ನಷ್ಟು ಪ್ರೀತಿಪಾತ್ರಳಾದವಳು ಮೂರು ಲೋಕಗಳಲ್ಲಿ ಯಾವಳೂ ಇಲ್ಲ. ಸರ್ವವಿಧದಿಂದಲೂ ನಾನು ನಿನ್ನ ಅಧೀನನು. ನಿನ್ನ ಮನೋರಥವೇನಿದ್ದರೂ ಅದನ್ನು ನೆರವೇರಿಸುವೆನು.

೪೮. ಎಲೌ ಪ್ರಿಯೆ, ನನ್ನ ಬಳಿಗೆ ಬಾ, ನೀನು ನನ್ನ ಪತ್ನಿಯು. ನಾನು ನಿನ್ನ ವರನು (ಪತಿಯು). ನಿನ್ನೊಡನೆ ಈ ಕೂಡಲೇ ನನ್ನ ಸ್ಥಾನವಾದ ಕೈಲಾಸಕ್ಕೆ ತೆರಳುವೆನು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತೇ ದೇವದೇವೇನ ಪಾರ್ವತೀ ಮುದಮಾಪ ಸಾ ।
ತಪೋಜಾತಂ ತು ಯತ್ಕಷ್ಟಂ ತಜ್ಜಹೌ ಚ ಪುರಾತನಂ ॥ ೪೯ ॥

ಸರ್ವಃ ಶ್ರಮೋ ವಿನಷ್ಟೋಽಭೂತ್ಸತ್ಯಾಸ್ತು ಮುನಿಸತ್ತಮ ।
ಫಲೇ ಜಾತೇ ಶ್ರಮಃ ಪೂರ್ವೋ ಜಂತೋರ್ನಾಶಮವಾಪ್ನುಯಾತ್ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಅಷ್ಟವಿಂಶೋಽಧ್ಯಾಯಃ



---

೪೯. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ದೇವದೇವನಾದ ಮಹಾದೇವನು ಹೇಳಲು, ಪಾರ್ವತಿಯು ತುಂಬಾ ಹರ್ಷಗೊಂಡಳು. ತಪಸ್ಸಿನಿಂದುಂಟಾದ ಕ್ಲೇಶವು ಆಕೂಡಲೇ ಮಾಯವಾಯಿತು.

೫೦. ಮತ್ತು ಆ ಗಿರಿಜೆಯ ಶ್ರಮವೆಲ್ಲವೂ ನಷ್ಟವಾಯಿತು. ಮಾಡಿದ ಕಾರ್ಯಕ್ಕೆ ತಕ್ಕ ಫಲವು ಲಭಿಸಿದರೆ ಅದಕ್ಕಾಗಿ ಪಟ್ಟಶ್ರಮವೆಲ್ಲವೂ ನಾಶವಾಗುವುದು ಸಹಜವಷ್ಟೆ.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಏಕೋನತ್ರಿಂಶೋಽಧ್ಯಾಯಃ

---

॥ ನಾರದ ಉವಾಚ ॥

ಬ್ರಹ್ಮನ್ ವಿಧೇ ಮಹಾಭಾಗ ಕಿಂ ಜಾತಂ ತದನಂತರಂ ।
ತತ್ಸರ್ವಂ ಶ್ರೋತುಮಿಚ್ಛಾಮಿ ಕಥಯ ತ್ವಂ ಶಿವಾಯಶಃ ॥ ೧ ॥

॥ ಬ್ರಹ್ಮೋವಾಚ ॥

ದೇವರ್ಷೇ ಶ್ರೂಯತಾಂ ಸಮ್ಯಕ್ಕಥಯಾಮಿ ಕಥಾಂ ಮುದಾ ।
ತಾಂ ಮಹಾಪಾಪಸಂಹರ್ತ್ರೀಂ ಶಿವಭಕ್ತಿವಿವರ್ಧಿನೀಂ ॥ ೨ ॥

---

### ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ನಾರದನು ಕೇಳಿದನು:—ಜಗತ್ಕರ್ತನೂ ಮಹಾನುಭಾವನೂ ಆದ ಓ ಬ್ರಹ್ಮನೇ, ಮುಂದೇನಾಯಿತು? ದೇವೀಚರಿತ್ರವೆಲ್ಲವನ್ನೂ ಕೇಳಬೇಕೆಂದಿರುವೆನು. ದಯವಿಟ್ಟು ಹೇಳೆನಲು,

೨. ಬ್ರಹ್ಮನು ಹೇಳಿದನು:—ಎಲೈ ದೇವಮುನಿ, ಕೇಳು. ಮಹಾಪಾಪಗಳನ್ನು ಹೋಗಲಾಡಿಸುವಂತಹುದೂ, ಶಿವಭಕ್ತಿಯನ್ನು ಹೆಚ್ಚಿಸುವುದೂ ಆದಂತಹ ಆ ಕಥೆಯನ್ನು ಹೇಳುವೆನು, ಆದರದಿಂದ ಕೇಳು.

ಪಾರ್ವತೀವಚನಂ ಶ್ರುತ್ವಾ ಹರಸ್ಯ ಪರಮಾತ್ಮನಃ ।
ದೃಷ್ಟ್ವಾಽಽನಂದಕರಂ ರೂಪಂ ಜಹರ್ಷಾತೀವ ಚ ದ್ವಿಜ ॥ ೩ ॥

ಪ್ರತ್ಯುವಾಚ ಮಹಾಸಾಧ್ವೀ ಸ್ವೋಪಕಂಠಸ್ಥಿತಂ ವಿಭುಂ ।
ಅತೀವ ಸುಖಿತಾ ದೇವೀ ಪ್ರೀತ್ಯುತ್ಫಲ್ಲಾನನಾ ಶಿವಾ ॥ ೪ ॥

॥ ಪಾರ್ವತ್ಯುವಾಚ ॥

ತ್ವಂ ನಾಥೋ ಮಮ ದೇವೇಶ ತ್ವಯಾ ಕಿಂ ವಿಸ್ಮೃತಂ ಪುರಾ ।
ದಕ್ಷಯಜ್ಞವಿನಾಶಂ ಹಿ ಯದರ್ಥಂ ಕೃತವಾನ್ ಹಠಾತ್ ॥ ೫ ॥

ಸ ತ್ವಂ ಸಾಹಂ ಸಮುತ್ಪನ್ನಾ ಮೇನಾಯಾಂ ಕಾರ್ಯಸಿದ್ಧಯೇ ।
ದೇವಾನಾಂ ದೇವದೇವೇಶ ತಾರಕಾಪ್ತಾಸುಖಾತ್ಮನಾಂ ॥ ೬ ॥

ಯದಿ ಪ್ರಸನ್ನೋ ದೇವೇಶ ಕರೋಷಿ ಚ ಕೃಪಾಂ ಯದಿ ।
ಪತಿರ್ಭವ ಮಮೇಶಾನ ಮಮ ವಾಕ್ಯಂ ಕುರು ಪ್ರಭೋ ॥ ೭ ॥

---

೩. ಪಾರ್ವತಿಯು ಪರಮಾತ್ಮನಾದ ಶಂಕರನ ಆ ಮಾತನ್ನು ಕೇಳಿ ಮತ್ತು ಆನಂದಕರವಾದ ಅವನ ರೂಪವನ್ನು ನೋಡಿ ತುಂಬಾ ಹರ್ಷಗೊಂಡಳು.

೪. ತನ್ನ ಎದುರಿನಲ್ಲಿಯೇ ನಿಂತಿರುವ ಸ್ವಾಮಿಯನ್ನು ನೋಡಿ ಮಹಾಸಾಧ್ವಿಯಾದ ಗಿರಿಜೆಯು ಪ್ರೀತಿಯಿಂದ ಅರಳಿದ ಮುಖವುಳ್ಳವಳಾಗಿ ಹೀಗೆ ಹೇಳಿದಳು.

೫. ಪಾರ್ವತಿಯು ಹೇಳಿದಳು:—ಓ ಮಹಾದೇವ, ನೀನು ನನ್ನ ಸ್ವಾಮಿಯು. ಈ ವಿಷಯವನ್ನು ಮರೆತುಬಿಟ್ಟಿದ್ದೀಯೇನು ? ನನಗಾಗಿಯೇ ನೀನು ದಕ್ಷಬ್ರಹ್ಮನ ಯಾಗವನ್ನು ಹಿಂದೆ ಕೋಪದಿಂದ ನಾಶಮಾಡಿದೆಯಲ್ಲವೆ ?

೬. ಆ ರುದ್ರನೇ ನೀನು. ಆ ಸತಿಯೇ ನಾನು. ಈಗ ಮೇನಾದೇವಿಯಲ್ಲಿ ಜನಿಸಿರುವೆನು. ತಾರಕಾಸುರನಿಂದ ದುಃಖಗೊಂಡ ದೇವತೆಗಳ ಕಾರ್ಯಸಿದ್ಧಿಗಾಗಿ ಹೀಗೆ ಅವತರಿಸಿರುವೆನು.

೭. ಓ ದೇವದೇವ, ನೀನು ನನ್ನಲ್ಲಿ ಪ್ರಸನ್ನನಾಗಿ ಅನುಗ್ರಹವನ್ನು ಮಾಡಬೇಕೆಂದಿದ್ದರೆ ನೀನು ನನಗೆ ಪತಿಯಾಗಬೇಕು. ನನ್ನ ಈ ಮಾತನ್ನು ನಡೆಸಿಕೊಡು.

ಪಿತುರ್ಗೇಹೇ ಮಯಾ ಸಮ್ಯಗ್ಗಮ್ಯತೇ ತ್ವದನುಜ್ಞಯಾ ।
ಪ್ರಸಿದ್ಧಂ ಕ್ರಿಯತಾಂ ತದ್ವೈ ವಿಶುದ್ಧಂ ಪರಮಂ ಯಶಃ ॥ ೮ ॥

ಗಂತವ್ಯಂ ಭವತಾ ನಾಥ ಹಿಮವತ್ಪಾರ್ಶ್ವತಃ ಪ್ರಭೋ ।
ಯಾಚಸ್ವ ಮಾಂ ತತೋ ಭಿಕ್ಷುರ್ಭೂತ್ವಾ ಲೀಲಾವಿಶಾರದಃ ॥ ೯ ॥

ತಥಾ ತ್ವಯಾ ಪ್ರಕರ್ತವ್ಯಂ ಲೋಕೇಷು ಖ್ಯಾಪಯ ಯಶಃ ।
ಪಿತುರ್ಮೇ ಸಫಲಂ ಸರ್ವಂ ಕುರುಷ್ವೇವಂ ಗೃಹಾಶ್ರಮಂ ॥ ೧೦ ॥

ಋಷಿಭಿರ್ಬೋಧಿತಃ ಪ್ರೀತ್ಯಾ ಸ್ವಬಂಧುಪರಿವಾರಿತಃ ।
ಕರಿಷ್ಯತಿ ನ ಸಂದೇಹಸ್ತವ ವಾಕ್ಯಂ ಪಿತಾ ಮಮ ॥ ೧೧ ॥

ದಕ್ಷಕನ್ಯಾ ಪುರಾಹಂ ವೈ ಪಿತ್ರಾ ದತ್ತಾ ಯದಾ ತವ ।
ಯಥೋಕ್ತವಿಧಿನಾ ತತ್ರ ವಿವಾಹೋ ನ ಕೃತಸ್ತ್ವಯಾ ॥ ೧೨ ॥

---

೮. ಈಗ ನಾನು ತಂದೆಯಮನೆಗೆ ತೆರಳುವೆನು. ಅನುಜ್ಞೆಯನ್ನು ಕೊಡು. ನನ್ನ ಇಷ್ಟಾರ್ಥವನ್ನು ನೆರವೇರಿಸಿಕೊಟ್ಟು ಭಕ್ತವತ್ಸಲನೆಂಬ ನಿನ್ನ ಯಶಸ್ಸು ಪ್ರಸಿದ್ಧ ವಾಗುವಂತೆ ಮಾಡು.

೯. ಲೀಲಾಮಯನಾದ ಓ ಸ್ವಾಮಿಯೇ, ಈಗ ನೀನು ಹಿಮವಂತನ ಮನೆಗೆ ಹೋಗಿ ಅಲ್ಲಿ ನನ್ನ ಪಾಣಿಗ್ರಹಣಕ್ಕಾಗಿ ನನ್ನ ತಂದೆಯ ಅನುಮತಿಯನ್ನು ಯಾಚಿಸ ಬೇಕು.

೧೦. ಓ ನಾಥ, ನೀನಾರೀತಿಮಾಡಿ ಲೋಕದಲ್ಲಿ ಯಶಸ್ಸನ್ನು ಹರಡಬೇಕು. ನನ್ನ ತಂದೆಯ ಗೃಹಸ್ಥಾಶ್ರಮವನ್ನು ಸಾರ್ಥಕಗೊಳಿಸಬೇಕು.

೧೧. ನನ್ನ ತಂದೆಯು ಋಷಿಗಳ ಮತ್ತು ಬಂಧುಗಳ ಮಾತನ್ನು ಮನ್ನಿಸಿ ನಿನ್ನ ಮಾತನ್ನಂಗೀಕರಿಸುವನು.

೧೨. ಹಿಂದೆ ನಾನು ದಕ್ಷಕನ್ಯೆಯಾಗಿದ್ದೆನು. ನನ್ನ ತಂದೆಯು ನನ್ನನ್ನು ನಿನಗೆ ಕೊಟ್ಟನು. ಆಗ ನೀನು ವಿಧಿವತ್ತಾಗಿ ನನ್ನೊಡನೆ ಮದುವೆಮಾಡಿಕೊಳ್ಳಲಿಲ್ಲ.

ನ ಗ್ರಹಾಃ ಪೂಜಿತಾಸ್ತೇನ ದಕ್ಷೇಣ ಜನಕೇನ ಮೇ ।
ಗ್ರಹಾಣಾಂ ವಿಷಯಸ್ತೇನ ಸಚ್ಛಿದ್ರೋ೽ಯಂ ಮಹಾನಭೂತ್ ॥ ೧೩ ॥

ತಸ್ಮಾದ್ಯಥೋಕ್ತವಿಧಿನಾ ಕರ್ತುಮರ್ಹಸಿ ಮೇ ಪ್ರಭೋ ।
ವಿವಾಹಂ ತ್ವಂ ಮಹಾದೇವ ದೇವಾನಾಂ ಕಾರ್ಯಸಿದ್ಧಯೇ ॥ ೧೪ ॥

ವಿವಾಹಸ್ಯ ಯಥಾ ರೀತಿಃ ಕರ್ತವ್ಯಾ ಸಾ ತಥಾ ಧ್ರುವಂ ।
ಜಾನಾತು ಹಿಮವಾನ್ ಸಮ್ಯಕ್ಕೃತಂ ಪುತ್ರ್ಯಾ ಶುಭಂ ತಪಃ ॥ ೧೫ ॥

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಶ್ರುತ್ವಾ ಸುಪ್ರಸನ್ನಸ್ಸದಾಶಿವಃ ।
ಪ್ರೋವಾಚ ವಚನಂ ಪ್ರೀತ್ಯಾ ಗಿರಿಜಾಂ ಪ್ರಹಸನ್ನಿವ ॥ ೧೬ ॥

॥ ಶಿವ ಉವಾಚ ॥

ಶೃಣು ದೇವಿ ಮಹೇಶಾನಿ ಪರಮಂ ವಚನಂ ಮಮ ।
ಯಥೋಚಿತಂ ಸುಮಾಂಗಲ್ಯಮವಿಕಾರಿ ತಥಾ ಕುರು ॥ ೧೭ ॥

---

೧೩. ಮತ್ತು ನಮ್ಮ ತಂದೆಯು ಆಗ ಗ್ರಹಗಳನ್ನು ಪೂಜಿಸಲೇ ಇಲ್ಲ. ಹೀಗೆ ಆಗ ಮಹತ್ತಾದ ಗ್ರಹದೋಷವು ಉಂಟಾಯಿತು.

೧೪. ಆದುದರಿಂದ ಓ ಮಹಾದೇವ, ವಿಧಿವತ್ತಾಗಿಯೇ ನನ್ನನ್ನು ನೀನು ಮದುವೆಯಾಗಬೇಕು. ಅದರಿಂದ ದೇವಕಾರ್ಯಸಿದ್ಧಿಯೂ ಆಗುವುದು.

೧೫. ವಿವಾಹದಲ್ಲಿ ಯಾವಾವ ನಿಯಮಗಳಿರುವವೋ ಅವುಗಳಂತೆಯೇ ಮಾಡಬೇಕು. ತನ್ನ ಮಗಳು ತಪಸ್ಸನ್ನು ಚನ್ನಾಗಿ ಮಾಡಿರುವಳೆಂದು ಹಿಮವಂತನು ತಿಳಿದುಕೊಳ್ಳಲಿ ಎಂದಳು.

೧೬-೧೭. ಬ್ರಹ್ಮನು ಹೇಳಿದನು:—ಹೀಗೆ ಗಿರಿಜೆಯು ಹೇಳಲು ಅದನ್ನು ಕೇಳಿ ಸದಾಶಿವನು ಪ್ರಸನ್ನನಾಗಿ ಮಂದಹಾಸವನ್ನು ಬೀರುತ್ತಾ ಪ್ರೀತಿಯಿಂದ ಎಲೌ ಪಾರ್ವತೀದೇವಿ, ನನ್ನ ಮಾತನ್ನು ಕೇಳು. ವಿವಾಹಸಂಬಂಧವಾದ ಮಂಗಳಕಾರ್ಯಗಳೆಲ್ಲವೂ ವಿಧಿವತ್ತಾಗಿ ನಡೆಯುವಂತೆ ಮಾಡು, ವ್ಯತ್ಯಾಸವಾಗಬಾರದು.

ಬ್ರಹ್ಮಾದಿಕಾನಿ ಭೂತಾನಿ ಹ್ಯನಿತ್ಯಾನಿ ವರಾನನೇ ।
ದೃಷ್ಟಂ ಯತ್ಸರ್ವಮೇತಚ್ಚ ನಶ್ವರಂ ವಿದ್ಧಿ ಭಾಮಿನಿ ॥ ೧೮ ॥

ಏಕೋಽನೇಕತ್ವಮಾಪನ್ನೋ ನಿರ್ಗುಣೋ ಹಿ ಗುಣಾನ್ವಿತಃ ।
ಸ್ವಜ್ಯೋತ್ಸ್ನಯಾ ಯೋ ವಿಭಾತಿ ಪರಜ್ಯೋತ್ಸ್ನಾನ್ವಿತೋಽಭವತ್ ॥ ೧೯ ॥

ಸ್ವತಂತ್ರಃ ಪರತಂತ್ರಶ್ಚ ತ್ವಯಾ ದೇವೀ ಕೃತೋಽಹ್ಯಹಂ ।
ಸರ್ವಕರ್ತ್ರೀ ಚ ಪ್ರಕೃತಿರ್ಮಹಾಮಾಯಾ ತ್ವಮೇವ ಹಿ ॥ ೨೦ ॥

ಮಾಯಾಮಯಂ ಕೃತಮಿದಂ ಚ ಜಗತ್ಸಮಗ್ರಂ
ಸರ್ವಾತ್ಮನಾ ಹಿ ವಿಧೃತಂ ಪರಯಾ ಸ್ವಬುದ್ಧ್ಯಾ ।
ಸರ್ವಾತ್ಮಭಿಸ್ಸುಕೃತಿಭಿಃ ಪರಮಾತ್ಮಭಾವೈಃ
ಸಂಸಿಕ್ತಮಾತ್ಮನಿ ಗುಣೈಃ ಪರಿವೇಷ್ಟಿತಂ ಚ ॥ ೨೧ ॥

---

೧೮. ಬ್ರಹ್ಮನು ಮೊದಲುಗೊಂಡು ಎಲ್ಲಾ ಪ್ರಾಣಿಗಳೂ ಅನಿತ್ಯವಾದುವು. ಕಣ್ಣಿಗೆ ಕಾಣಿಸುತ್ತಿರುವುದೆಲ್ಲವೂ ಕಾಲಾನುಕಾಲದಲ್ಲಿ ನಾಶವಾಗುವುದು.

೧೯. ನಾನು ಓರ್ವನೇ ಆದರೂ ಪ್ರಕೃತಿಯಾದ ನಿನ್ನ ಮಹಿಮೆಯಿಂದ ಅನೇಕ ರೂಪಗಳಿಂದ ಪ್ರಕಟವಾಗಿರುವೆನು. ನಿರ್ಗುಣನಾದರೂ ಸಗುಣನಾದ ಪರಮೇಶ್ವರನಾದೆನು. ಸ್ವಪ್ರಕಾಶದಿಂದ ಬೆಳಗುವವನಾದರೂ ಪರಪ್ರಕಾಶವುಳ್ಳವನಾದೆನು.

೨೦. ಎಲೌ ದೇವಿ, ನಿನ್ನಿಂದ ನಾನು ಸ್ವತಂತ್ರನೂ ಪರತಂತ್ರನೂ ಆಗಿರುವೆನು. ನೀನು ಜಗತ್ತೆಲ್ಲಕ್ಕೂ ಕರ್ತೃವು. ಪರಿಣಾಮಕಾರಳು. ನೀನು ಆದಿಮಾಯೆಯು. ನಿನ್ನಿಂದಲೇ ಜಗತ್ತು ನಡೆಯುತ್ತಲಿರುವುದು.

೨೧. ಈ ಜಗತ್ತೆಲ್ಲವೂ ಮಾಯಾಮಯವು. ಪರಮಾತ್ಮವಸ್ತುವೊಂದೇ ಸತ್ಯವು ಎಂದು ಎಲ್ಲೆಲ್ಲೂ ಪರಮಾತ್ಮವಸ್ತುವನ್ನೇ ನೋಡುವಂತಹ ಮಹನೀಯರು ತಿಳಿಯುವರು. ಆದರೆ ಮಾಯಾಮಯವಾದ ಗುಣಗಳಿಂದ ಕೂಡಿದ ಆತ್ಮನು, ಮಾಯೆಯು ನಷ್ಟವಾದ ಬಳಿಕ ಪರಮೇಶ್ವರನೂ ಆಗುವನು. ಜಗತ್ಕಾರ್ಯಗಳನ್ನು ಮಾಡುವನು.

ಕೇ ಗ್ರಹಾಃ ಕೇ ಋತುಗಣಾಃ ಕೇ ವಾನ್ಯೇಽಪಿ ತ್ವಯಾ ಗ್ರಹಾಃ ।
ಕಿಮುಕ್ತಂ ಚಾಧುನಾ ದೇವಿ ಶಿವಾರ್ಥಂ ವರವರ್ಣಿನಿ ॥ ೨೨ ॥

ಗುಣಕಾರ್ಯಪ್ರಭೇದೇನಾವಾಭ್ಯಾಂ ಪ್ರಾದುರ್ಭವಃ ಕೃತಃ ।
ಭಕ್ತಹೇತೋರ್ಜಗತ್ಯಸ್ಮಿನ್ ಭಕ್ತವತ್ಸಲಭಾವತಃ ॥ ೨೩ ॥

ತ್ವಂ ಹಿ ವೈ ಪ್ರಕೃತಿಸ್ಸೂಕ್ಷ್ಮಾ ರಜಸ್ಸತ್ತ್ವತಮೋಮಯೀ ।
ವ್ಯಾಪಾರದಕ್ಷಾ ಸತತಂ ಸಗುಣಾ ನಿರ್ಗುಣಾಪಿ ಚ ॥ ೨೪ ॥

ಸರ್ವೇಷಾಮಿಹ ಭೂತಾನಾಮಹಮಾತ್ಮಾ ಸುಮಧ್ಯಮೇ ।
ನಿರ್ವಿಕಾರೀ ನಿರೀಹಶ್ಚ ಭಕ್ತೇಚ್ಛೋಪಾತ್ತವಿಗ್ರಹಃ ॥ ೨೫ ॥

ಹಿಮಾಲಯಂ ನ ಗಚ್ಛೇಯಂ ಜನಕಂ ತವ ಶೈಲಜೇ ।
ತತಸ್ತ್ವಾಂ ಭಿಕ್ಷುಕೋ ಭೂತ್ವಾ ನ ಯಾಚೇಯಂ ಕಥಂಚನ ॥ ೨೬ ॥

---

೨೨. ಹೀಗಿರಲು ಗ್ರಹಗಳಾರು? ಋತುಗಳೆಂದರೇನು? ಮಂಗಳಾರ್ಥವಾಗಿ ನೀನು ಹೇಳಿದ ಕಾರ್ಯವಾದರೂ ಎಲ್ಲಿಯದು?

೨೩. ಭಕ್ತವತ್ಸಲರಾದ ನಾವೀರ್ವರೂ ಸಹ ಭಕ್ತರಿಗಾಗಿ ಗುಣಕರ್ಮಗಳ ಭೇದದಿಂದ ಬೇರೆಬೇರೆಯಾಗಿ ಆವಿರ್ಭವಿಸಿರುವೆವು.

೨೪. ನೀನು ಸೂಕ್ಷ್ಮಪ್ರಕೃತಿಯು, ನಿನ್ನಲ್ಲಿ ರಜಸ್ಸು, ತಮಸ್ಸು, ಸತ್ವ ಎಂಬ ಈ ಮೂರು ಗುಣಗಳಿರುವುವು. ಸದಾ ನೀನು ಕಾರ್ಯವನ್ನು ಮಾಡುತ್ತಿರುವೆ. ಸಗುಣರೂಪಳೂ ನಿರ್ಗುಣರೂಪಳೂ ಆಗಿರುವೆ.

೨೫. ಎಲೌ ಗಿರಿಜೆ, ನಾನು ಎಲ್ಲಾ ಪ್ರಾಣಿಗಳಿಗೂ ಆತ್ಮನು. ವಿಕಾರಗಳೇನ ಗಿಲ್ಲ. ನಿಸ್ಪೃಹನು, ಭಕ್ತರಿಗಾಗಿ ಲೀಲಾವಿಗ್ರಹವನ್ನು ಧರಿಸುವೆನು.

೨೬. ನಿನ್ನ ತಂದೆಯಾದ ಹಿಮವಂತನಲ್ಲಿಗೆ ನಾನು ಹೋಗಲಾರೆನು. ಅವನಲ್ಲಿ ಭಿಕ್ಷುಕನಾಗಿ ನಿನ್ನನ್ನು ಯಾಚಿಸಲಾರೆನು.

ಮಹಾಗುಣೈರ್ಗರಿಷ್ಠೋಽಪಿ ಮಹಾತ್ಮಾಪಿ ಗಿರೀಂದ್ರಜೇ ।
ದೇಹೀತಿ ವಚನಾತ್ಸದ್ಯಃ ಪುರುಷೋ ಯಾತಿ ಲಾಘವಂ ॥ ೨೭ ॥

ಇತ್ಥಂ ಜ್ಞಾತ್ವಾ ಕು ಕಲ್ಯಾಣಿ ಕಿಮಸ್ಮಾಕಂ ವದಸ್ಯಥ ।
ಕಾರ್ಯಂ ತ್ವದಾಜ್ಞಯಾ ಭದ್ರೇ ಯಥೇಚ್ಛಸಿ ತಥಾ ಕುರು ॥ ೨೮ ॥

॥ ಬ್ರಹ್ಮೋವಾಚ ॥

ತೇನೋಕ್ತಾಪಿ ಮಹಾದೇವೀ ಸಾ ಸಾಧ್ವೀ ಕಮಲೇಕ್ಷಣಾ ।
ಜಗಾದ ಶಂಕರಂ ಭಕ್ತ್ಯಾ ಸುಪ್ರಣಮ್ಯ ಪುನಃ ಪುನಃ ॥ ೨೯ ॥

॥ ಪಾರ್ವತ್ಯುವಾಚ ॥

ತ್ವಮಾತ್ಮಾ ಪ್ರಕೃತಿಶ್ಚಾಹಂ ನಾತ್ರ ಕಾರ್ಯಾ ವಿಚಾರಣಾ ।
ಸ್ವತಂತ್ರೌ ಭಕ್ತವಶಗೌ ನಿರ್ಗುಣೌ ಸಗುಣಾವಪಿ ॥ ೩೦ ॥

ಪ್ರಯತ್ನೇನ ತ್ವಯಾ ಶಂಭೋ ಕಾರ್ಯಂ ವಾಕ್ಯಂ ಮಮ ಪ್ರಭೋ ।
ಯಾಚಸ್ವ ಮಾಂ ಹಿಮಗಿರೇಃ ಸೌಭಾಗ್ಯಂ ದೇಹಿ ಶಂಕರ ॥ ೩೧ ॥

---

೨೭. ಪುರುಷನು ಮಹಾಗುಣವಂತನಾದರೂ ಮಹಾತ್ಮನಾಗಿದ್ದರೂ ಸರಿಯೆ, "ದೇಹಿ" (ಕೊಡು) ಎಂಬೊಂದು ಮಾತಿನಿಂದ ಅವನು ಲಾಘವವನ್ನು ಹೊಂದುವನು. ಎಂದರೆ ತನ್ನ ಮರ್ಯಾದೆಯನ್ನು ಕಳೆದುಕೊಳ್ಳುವನು.

೨೮. ಎಲೌ ಮಂಗಳೇ, ಇಷ್ಟು ನೀನು ತಿಳಿದಿದ್ದೂ ಹೀಗೆ ನನಗೆ ಹೇಳುವಿಯೇಕೆ? ನಿನ್ನಿಷ್ಟಬಂದಂತೆ ನೀನೇ ಆ ಕಾರ್ಯವನ್ನು ಸಾಧಿಸು ಎಂದನು.

೨೯. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಶಂಕರನು ಹೇಳಿದರೂ ಸಾಧ್ವಿಯಾದ ಗಿರಿಜೆಯು ಶಂಕರನನ್ನು ಭಕ್ತಿಯಿಂದ ಪುನಃ ಪುನಃ ನಮಸ್ಕರಿಸಿ ಮತ್ತಿಂತೆಂದಳು.

೩೦. ಓ ದೇವ, ನೀನು ಆತ್ಮನು. ನಾನು ಪ್ರಕೃತಿಯು. ಇದರಲ್ಲಿ ಸಂಶಯವಿಲ್ಲ. ನಾವು ಸ್ವತಂತ್ರರಾದರೂ ಭಕ್ತಪರಾಧೀನರು. ನಿರ್ಗುಣರಾದರೂ ಭಕ್ತರಿಗಾಗಿ ಸಗುಣರಾಗುವೆವು.

೩೧. ಓ ಶಂಕರ, ಪ್ರಯತ್ನದಿಂದಲಾದರೂ ನನ್ನ ಮಾತನ್ನು ನಡೆಸಬೇಕು. ಹಿಮವಂತನನ್ನು ನನಗಾಗಿ ನೀನು ಯಾಚಿಸು. ನನಗೆ ಸೌಭಾಗ್ಯವನ್ನು ಕರುಣಿಸು.

ಕೃಪಾಂ ಕುರು ಮಹೇಶಾನ ತವ ಭಕ್ತಾಸ್ಮಿ ನಿತ್ಯಶಃ ।
ತವ ಪತ್ನೀ ಸದಾ ನಾಥ ಹ್ಯಹಂ ಜನ್ಮನಿ ಜನ್ಮನಿ ॥ ೩೨ ॥

ತ್ವಂ ಬ್ರಹ್ಮ ಪರಮಾತ್ಮಾ ಹಿ ನಿರ್ಗುಣಃ ಪ್ರಕೃತೇಃ ಪರಃ ।
ನಿರ್ವಿಕಾರೀ ನಿರೀಹಶ್ಚ ಸ್ವತಂತ್ರಃ ಪರಮೇಶ್ವರಃ ॥ ೩೩ ॥

ತಥಾಪಿ ಸಗುಣೋಽಪೀಹ ಭಕ್ತೋದ್ಧಾರಪರಾಯಣಃ ।
ವಿಹಾರೀ ಸ್ವಾತ್ಮನಿ ರತೋ ನಾನಾಲೀಲಾವಿಶಾರದಃ ॥ ೩೪ ॥

ಸರ್ವಥಾ ತ್ವಾಮಹಂ ಜಾನೇ ಮಹಾದೇವ ಮಹೇಶ್ವರ ।
ಕಿಮುಕ್ತೇನ ಚ ಸರ್ವಜ್ಞ ಬಹುನಾ ಹಿ ದಯಾಂ ಕುರು ॥ ೩೫ ॥

ವಿಸ್ತಾರಯ ಯಶೋ ಲೋಕೇ ಕೃತ್ವಾ ಲೀಲಾಂ ಮಹಾದ್ಭುತಾಂ ।
ಯಾಂ ಸುಗೀಯ ಜನಾ ನಾಥಾಂಜಸೋತ್ತೀರ್ಣಾ ಭವಾಂಬುಧಿಂ ॥ ೩೬ ॥

---

೩೨. ಓ ಮಹೇಶ್ವರ, ನನ್ನಲ್ಲನುಗ್ರಹವನ್ನು ಮಾಡು. ನಾನು ಸದಾ ನಿನ್ನ ಭಕ್ತಳು. ಜನ್ಮಜನ್ಮಗಳಲ್ಲೂ ನಾನೇ ನಿನ್ನ ಪತ್ನಿಯು.

೩೩. ನೀನು ಪರಬ್ರಹ್ಮನು, ಪರಮಾತ್ಮನು, ನಿರ್ಗುಣನು, ಪ್ರಕೃತಿಗಿಂತಲೂ ಉತ್ಕೃಷ್ಟನು, ವಿಕಾರಗಳಿಲ್ಲದವನು, ನಿಸ್ಪೃಹನು, ಸ್ವತಂತ್ರನು, ಪರಮೇಶ್ವರನು.

೩೪. ಹಾಗಿದ್ದರೂ ನೀನು ಭಕ್ತರನ್ನುದ್ಧರಿಸಲು ಸಗುಣೇಶ್ವರನೂ ಆಗುವೆ ನಾನಾಲೀಲೆಗಳನ್ನು ಮಾಡುವೆ. ಆತ್ಮಾನಂದದಲ್ಲಿ ನಿರತನಾದರೂ ಹೊರಗೆ ಅನೇಕ ಕಾರ್ಯಗಳನ್ನು ಮಾಡುವೆ.

೩೫. ದೇವದೇವವಾದ ಎಲೈ ಮಹೇಶ್ವರನೆ, ನಾನು ನಿನ್ನ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದಿರುವೆನು. ಓ ಸರ್ವಜ್ಞಮೂರ್ತಿ, ಹೆಚ್ಚಿಗೆ ಹೇಳಿ ಪ್ರಯೋಜನವೇನು? ನನ್ನಲ್ಲಿ ಅನುಗ್ರಹವನ್ನು ಮಾಡು.

೩೬. ಎಲೈ ಸ್ವಾಮಿಯೇ, ಈಗ ಆಶ್ಚರ್ಯಕರವಾದ ಲೀಲೆಯನ್ನು ಪ್ರದರ್ಶಿಸಿ ನಿನ್ನ ಯಶಸ್ಸನ್ನು ವಿಸ್ತರಿಸು. ಆ ನಿನ್ನ ಯಶಸ್ಸನ್ನು ಗಾನಮಾಡಿ ಜನಗಳು ಸಂಸಾರಸಾಗರವನ್ನು ಜಾಗ್ರತೆ ದಾಟುವರು ಎಂದಳು.

॥ ಬ್ರಹ್ಮೋವಾಚ ॥

ಇತ್ಯೇವಮುಕ್ತ್ವಾ ಗಿರಿಜಾ ಸುಪ್ರಣಮ್ಯ ಪುನಃ ಪುನಃ ।
ವಿರರಾಮ ಮಹೇಶಾನಂ ನತಸ್ಕಂಧಾ ಕೃತಾಂಜಲಿಃ ॥ ೩೭ ॥

ಇತ್ಯೇವಮುಕ್ತಃ ಸ ತಯಾ ಮಹಾತ್ಮಾ
ಮಹೇಶ್ವರೋ ಲೋಕವಿಡಂಬನಾಯ ।
ತಥೇತಿ ಮತ್ವಾ ಪ್ರಹರ್ಷ ಬಭೂವ
ಮುದಾನ್ವಿತಃ ಕರ್ತುಮನಾಸ್ತದೇವ ॥ ೩೮ ॥

ತತ್ಯೋ ಹ್ಯಂತರ್ಹಿತಶ್ಶಂಭುರ್ಬಭೂವ ಸುಪ್ರಹರ್ಷಿತಃ ।
ಕೈಲಾಸಂ ಪ್ರಯಯೌ ಕಾಲ್ಯಾ ವಿರಹಾಕೃಷ್ಟಮಾನಸಃ ॥ ೩೯ ॥

ತತ್ರ ಗತ್ವಾ ಮಹೇಶಾನೋ ನಂದ್ಯಾದಿಭ್ಯಸ್ಸ ಉಚಿವಾ೯ ।
ವೃತ್ತಾಂತಂ ಸಕಲಂ ತಂ ವೈ ಪರಮಾನಂದನಿರ್ಭರಃ ॥ ೪೦ ॥

ತೇಽಪಿ ಶ್ರುತ್ವಾ ಗಣಾಸ್ಸರ್ವೇ ಭೈರವಾದ್ಯಾಶ್ಚ ಸರ್ವಶಃ ।
ಬಭೂವುಸ್ಸುಖಿನೋಽತ್ಯಂತಂ ವಿದಧುಃ ಪರಮೋತ್ಸವಂ ॥ ೪೧ ॥

---

೩೭. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಗಿರಿಜೆಯು ತಿರುಗಿ ಕೈಗಳನ್ನು ಮುಗಿದು ಶಿರಸ್ಸನ್ನು ಬಗ್ಗಿಸಿ, ವಿನಯದಿಂದ ಶಿವನನ್ನು ನಮಸ್ಕರಿಸಿ ಸುಮ್ಮನಾದಳು.

೩೮. ಪಾರ್ವತಿಯು ಹೇಳಿದುದನ್ನು ಕೇಳಿ ಮಹೇಶ್ವರನು ನಗುತ್ತಾ ಲೋಕಾಚಾರವನ್ನನುಸರಿಸಲೋಸುಗ ಹಾಗೆಯೇ ಆಗಲಿ ಎಂದು ಸಂತೋಷದಿಂದ ಅಂಗೀಕರಿಸಿ ಅದರಂತೆಯೇ ಮಾಡಲು ಸಿದ್ಧನಾದನು.

೩೯-೪೦. ಬಳಿಕ ಆ ಶಂಕರನು ಅಂತರ್ಧಾನನಾಗಿ, ಪಾರ್ವತಿಯ ವಿರಹದಿಂದ ದುಃಖಿತನಾಗಿ ಕೈಲಾಸಕ್ಕೆ ಹೋಗಿ ಅಲ್ಲಿ ನಂದಿ ಮೊದಲಾದ ಗಣಗಳಿಗೆ ಇಲ್ಲಿ ನಡೆದ ಸಮಾಚಾರವೆಲ್ಲವನ್ನೂ ಸಂತೋಷದಿಂದ ತಿಳಿಸಿದನು.

೪೧. ಭೈರವನೇ ಮೊದಲಾದ ಆ ಗಣಗಳು ಶಿವನ ಮುಖದಿಂದ ಆ ವೃತ್ತಾಂತವನ್ನು ಕೇಳಿ ತುಂಬಾ ಹರ್ಷಗೊಂಡುವು. ಮತ್ತು ಮಹತ್ತಾದ ಉತ್ಸವವನ್ನು ಮಾಡಿದುವು.

ಮಹತ್ಸುಮಂಗಲಂ ತತ್ರ ಬಭೂವಾತೀವ ನಾರದ ।
ಸರ್ವೇಷಾಂ ದುಃಖನಾಶೋಽಭೂದ್ರುದ್ರಃ ಪ್ರಾಪಾಪಿ ಸಂಮುದಂ ॥ ೪೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಏಕೋನತ್ರಿಂಶೋಽಧ್ಯಾಯಃ



---

೪೨. ಎಲೈ ನಾರದನೇ, ಆ ಕೈಲಾಸದಲ್ಲಿ ಮಹಾಮಂಗಳೋತ್ಸವವು ನಡೆಯಿತು. ಎಲ್ಲರೂ ಸುಖಿಗಳಾದರು. ರುದ್ರನೂ ಹರ್ಷಗೊಂಡನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ವಿಧೇ ತಾತ ಮಹಾಭಾಗ ಧನ್ಯಸ್ತ್ವಂ ಪರಮಾರ್ಥದೃಕ್ ।
ಅದ್ಭುತೇಯಂ ಕಥಾಽಽಶ್ರಾವಿ ತ್ವದನುಗ್ರಹತೋ ಮಯಾ ॥ ೧ ॥

ಗತೇ ಹರೇ ಸ್ವಶೈಲೇ ಹಿ ಪಾರ್ವತೀ ಸರ್ವಮಂಗಲಾ ।
ಕಿಂ ಚಕಾರ ಗತಾ ಕುತ್ರ ತನ್ಮೇ ವದ ಮಹಾಮತೇ ॥ ೨ ॥

---

### ಮೂವತ್ತನೆಯ ಅಧ್ಯಾಯವು

೧. ನಾರದನು ಕೇಳಿದನು:—ಮಹಾಮಹಿಮನಾದ ಓ ತಂದೆಯೆ, ಪರಮಾರ್ಥ ತತ್ವವನ್ನು ಬಲ್ಲ ನೀನೇ ಧನ್ಯನು. ನಿನ್ನ ಅನುಗ್ರಹದಿಂದ ನಾನು ಅದ್ಭುತವಾದ ಶಿವಕಥೆಯನ್ನು ಕೇಳಿದೆನು.

೨. ಶಂಕರನು ಕೈಲಾಸಕ್ಕೆ ತೆರಳಿದಮೇಲೆ ಸರ್ವಮಂಗಳೆಯಾದ ಪಾರ್ವತಿಯು ಏನು ಮಾಡಿದಳು? ಎಲ್ಲಿಗೆ ಹೋದಳು? ಎಲೈ ಪ್ರಾಜ್ಞನೇ, ಆ ಮುಂದಿನ ವಿಷಯವನ್ನು ನನಗೆ ಚೆನ್ನಾಗಿ ವಿವರಿಸು ಎನ್ನಲು,

॥ ಬ್ರಹ್ಮೋವಾಚ ॥

ಶೃಣು ಸುಪ್ರೀತಿತಸ್ತಾತ ಯಜ್ಜಾತಂ ತದನಂತರಂ ।
ಹರೇ ಗತೇ ನಿಜಸ್ಥಾನಂ ತದ್ವದಾಮಿ ಶಿವಂ ಸ್ಮರನ್ ॥ ೩ ॥

ಪಾರ್ವತ್ಯಪಿ ಸಖೀಯುಕ್ತಾ ರೂಪಂ ಕೃತ್ವಾ ತು ಸಾರ್ಥಕಂ ।
ಜಗಾಮ ಸ್ವಪಿತುರ್ಗೇಹಂ ಮಹಾದೇವೇತಿ ವಾದಿನೀ ॥ ೪ ॥

ಪಾರ್ವತ್ಯಾಽಽಗಮನಂ ಶ್ರುತ್ವಾ ಮೇನಾ ಚ ಸ ಹಿಮಾಚಲಃ ।
ದಿವ್ಯಂ ಯಾನಂ ಸಮಾರುಹ್ಯ ಪ್ರಯಯೌ ಹರ್ಷವಿಹ್ವಲಃ ॥ ೫ ॥

ಪುರೋಹಿತಶ್ಚ ಪೌರಾಶ್ಚ ಸಖ್ಯಶ್ಚೈವಾಪ್ಯನೇಕಶಃ ।
ಸಂಬಂಧಿನಸ್ತಥಾನ್ಯೇ ಚ ಸರ್ವೇ ತೇ ಚ ಸಮಾಯಯುಃ ॥ ೬ ॥

ಭ್ರಾತರಃ ಸಕಲಾ ಜಗ್ಮುರ್ಮೈನಾಕಪ್ರಮುಖಾಸ್ತದಾ ।
ಜಯಶಬ್ದಂ ಪ್ರಬ್ರುವಂತೋ ಮಹಾಹರ್ಷಸಮನ್ವಿತಾಃ ॥ ೭ ॥

---

೩. ಬ್ರಹ್ಮನು ಹೇಳಿದನು:—ಎಲೈ ನಾರದ, ಹರನು ಕೈಲಾಸಕ್ಕೆ ತೆರಳಿದ ಮೇಲೆ ನಡೆದ ಸಮಾಚಾರವನ್ನು ಶಿವನನ್ನು ಸ್ಮರಿಸಿ ಹೇಳುವೆನು ಆದರದಿಂದ ಕೇಳು.

೪. ಶಿವನನ್ನು ಒಲಿಸಿ ತನ್ನ ರೂಪವು ಸಾರ್ಥಕವಾಯಿತೆಂದು ತಿಳಿದುಕೊಂಡು ಪಾರ್ವತಿಯು ಶಿವನನ್ನು ಸ್ಮರಿಸುತ್ತಾ ಸಖಿಯರೊಡನೆ ತಂದೆಯ ಮನೆಗೆ ತೆರಳಿದಳು.

೫. ಪಾರ್ವತಿಯು ಬರುತ್ತಿರುವುದನ್ನು ಕೇಳಿ ಮೇನಾದೇವಿಯೂ ಹಿಮವಂತನೂ ಸಹ ದಿವ್ಯರಥವನ್ನೇರಿ ಹರ್ಷದಿಂದ ಗಿರಿಜೆಯನ್ನೆದುರುಗೊಳ್ಳಲು ಬಂದರು.

೬. ಆ ಹಿಮವಂತನ ಪುರೋಹಿತರು, ಪಟ್ಟಣಿಗರು, ದಾಸದಾಸಿಯರು, ಮಿಕ್ಕ ಸಂಬಂಧಿಗಳು ಎಲ್ಲರೂ ಪಾರ್ವತಿಯನ್ನೆದುರುಗೊಳ್ಳಲು ಬಂದರು.

೭. "ಮೈನಾಕ" ಮೊದಲಾದ ಪಾರ್ವತಿಯ ಸಹೋದರರೂ ಸಹ ಹರ್ಷದಿಂದ ಜಯಧ್ವನಿಯನ್ನು ಮಾಡುತ್ತಾ ಬಂದರು.

ಸಂಸ್ಥಾಪ್ಯ ಮಂಗಲಘಟಂ ರಾಜವರ್ತ್ಮನಿ ರಾಜಿತೇ ।
ಚಂದನಾಗರುಕಸ್ತೂರೀಫಲಶಾಖಾಸಮನ್ವಿತೇ ॥ ೮ ॥

ಸುಪುರೋಧಾ ಬ್ರಾಹ್ಮಣೈಶ್ಚ ಮುನಿಭಿರ್ಬ್ರಹ್ಮವಾದಿಭಿಃ ।
ನಾರೀಭಿರ್ನರ್ತಕೀಭಿಶ್ಚ ಗಜೇಂದ್ರಾದಿಸುಶೋಭಿತೈಃ ॥ ೯ ॥

ಪರಿತಃ ಪರಿತೋ ರಂಭಾಸ್ತಂಭವೃಂದಸಮನ್ವಿತೇ ।
ಪತಿಪುತ್ರವತೀಯೋಷಿತ್ಸಮೂಹೈರ್ದೀಪಹಸ್ತಕೈಃ ॥ ೧೦ ॥

ದ್ವಿಜವೃಂದೈಶ್ಚ ಸಂಯುಕ್ತೇ ಕುರ್ವದ್ಭಿರ್ಮಂಗಲಧ್ವನಿಂ ।
ನಾನಾಪ್ರಕಾರವಾದ್ಯೈಶ್ಚ ಶಂಖಧ್ವನಿಭಿರನ್ವಿತೇ ॥ ೧೧ ॥

ಏತಸ್ಮಿನ್ನಂತರೇ ದುರ್ಗಾ ಜಗಾಮ ಸ್ವಪುರಾಂತಿಕಂ ।
ವಿಶಂತೀ ನಗರಂ ದೇವೀ ದದರ್ಶ ಪಿತರೌ ಪುನಃ ॥ ೧೨ ॥

---

೮. ರಾಜಮಾರ್ಗವನ್ನು ತಳಿರುತೋರಣಗಳಿಂದ ಅಲಂಕರಿಸಿದ್ದರು. ಚಂದನ ಧೂಪ ಕಸ್ತೂರೀ ಮಂತಾದ ಸುಗಂದದ್ರವ್ಯಗಳಿಂದ ಸುವಾಸಿತವಾಗಿ ಮಾಡಿದ್ದರು. ಇಂತಹ ರಾಜಮಾರ್ಗದಲ್ಲಿ ಮಂಗಳವಾದ ಪೂರ್ಣಕಲಶವನ್ನು ಹಿಡಿದು ವಿಪ್ರರು ನಿಂತಿದ್ದರು.

೯. ಪುರೋಹಿತರು, ಬ್ರಾಹ್ಮಣರು, ಬ್ರಹ್ಮವಿತ್ತುಗಳಾದ ಮುನಿಗಳು ಎಲ್ಲರೂ ನೆರದಿದ್ದರು. ನಾರಿಯರು ನರ್ತಕಿಯರು ಎಲ್ಲರೂ ರಾಜಮಾರ್ಗವನ್ನಲಂಕರಿಸಿದ್ದರು. ಆನೆಗಳನ್ನು ಸಾಲುಸಾಲಾಗಿ ನಿಲ್ಲಿಸಿದ್ದರು.

೧೦. ಎಲ್ಲೆಲ್ಲಿಯೂ ಚಪ್ಪರಗಳನ್ನು ಹಾಕಿ ಬಾಳೆಮರಗಳನ್ನು ನೆಟ್ಟಿದ್ದರು. ಪತಿಪುತ್ರರುಳ್ಳ ಮುತ್ತೈದೆ ಹೆಂಗಸರು ಆರತಿಯನ್ನು ಹಿಡಿದು ನಿಂತಿದ್ದರು.

೧೧. ಮೂರುವರ್ಣದವರೂ ನೆರದಿದ್ದರು. ಅನೇಕ ವಿಧವಾದ ವಾದ್ಯಗಳು ಮಂಗಳಧ್ವನಿಯನ್ನು ಮಾಡುತ್ತಿದ್ದುವು. ಶಂಖಧ್ವನಿಯು ಗಂಭೀರವಾಗಿ ಕೇಳಿ ಸುತ್ತಲಿತ್ತು.

೧೨. ಈ ಸಮಯದಲ್ಲಿ ಗಿರಿಜೆಯು ತನ್ನ ನಗರದ ಸಮೀಪಕ್ಕೆ ಬಂದಳು. ನಗರವನ್ನು ಪ್ರವೇಶಿಸುತ್ತಾ ಅವಳು ಎದುರುಗೊಳ್ಳಲು ಬಂದಿರುವ ತಂದೆತಾಯಿಯರನ್ನು ನೋಡಿದಳು.

ಸುಪ್ರಸನ್ನೌ ಪ್ರಧಾವಂತೌ ಹರ್ಷವಿಹ್ವಲಮಾನಸೌ ।
ದೃಷ್ಟ್ವಾ ಕಾಲೀ ಸುಪ್ರಹೃಷ್ಟ್ವಾ ಸ್ವಾಲಿಭಿಃ ಪ್ರಣನಾಮ ತೌ ॥ ೧೩ ॥

ತೌ ಸಂಪೂರ್ಣಾಶಿಷಂ ದತ್ವಾ ಚಕ್ರತುಸ್ತೌ ಸ್ವವಕ್ಷಸಿ ।
ಹೇ ವತ್ಸೇ ತ್ವೇವಮುಚ್ಚಾರ್ಯ ರುದಂತೌ ಪ್ರೇಮವಿಹ್ವಲೌ ॥ ೧೪ ॥

ತತಃ ಸ್ವಕೀಯಾ ಅಪ್ಯಸ್ಯಾ ಅನ್ಯಾ ನಾರ್ಯೋಽಪಿ ಸಮ್ಮುದಾ ।
ಭ್ರಾತೃಸ್ತ್ರಿಯೋಽಪಿ ಸುಪ್ರೀತ್ಯಾ ದೃಢಾಲಿಂಗನಮಾದಧುಃ ॥ ೧೫ ॥

ಸಾಧಿತಂ ಹಿ ತ್ವಯಾ ಸಮ್ಯಕ್ ಸುಕಾರ್ಯಂ ಕುಲತಾರಣಂ ।
ತ್ವತ್ಸದಾಚರಣೇನಾಪಿ ಪಾವಿತಾಃ ಸ್ಮಾಖಿಲಾ ವಯಂ ॥ ೧೬ ॥

ಇತಿ ಸರ್ವೇ ಸುಪ್ರಶಂಸ್ಯ ಪ್ರಣೇಮುಸ್ತಾಂ ಪ್ರಹರ್ಷಿತಾಃ ।
ಚಂದನೈಃ ಸುಪ್ರಸೂನೈಶ್ಚ ಸಮಾನರ್ಚುಃ ಶಿವಾಂ ಮುದಾ ॥ ೧೭ ॥

---

೧೩. ಆ ಮೇನಾಹಿಮವಂತರು ಹರ್ಷದಿಂದ ಉಬ್ಬಿದವರಾಗಿ ಓಡೋಡಿ ಗಿರಿಜೆಯ ಬಳಿಗೆ ಬರುತ್ತಿದ್ದರು. ಇಂತಹ ತಂದೆತಾಯಿಗಳನ್ನು ನೋಡಿ ಗಿರಿಜೆಯು ಸಖಿಯರೊಡನೆ ಬಂದು ಹರ್ಷದಿಂದ ನಮಸ್ಕರಿಸಿದಳು.

೧೪. ಆಗ ಆ ಮೇನಾಹಿಮವಂತರು ಗಿರಿಜೆಗೆ ಪೂರ್ಣವಾದ ಆಶೀರ್ವಾದ ವನ್ನು ಮಾಡಿ ಎಲೌ ಮಗಳೆ? ಎಂದು ಪ್ರೇಮದಿಂದ ಎದೆಗಪ್ಪಿಕೊಂಡು ಆನಂದ ಬಾಷ್ಪವನ್ನು ಸುರಿಸಿದರು.

೧೫. ಆಮೇಲೆ ಗಿರಿಜೆಯ ಸಹೋದರರ ಹೆಂಡತಿಯರೂ ಸಂಬಂಧಿಗಳಾದ ಸ್ತ್ರೀಯರೂ ಸಹ ಪ್ರೀತಿಯಿಂದ ಅವಳನ್ನು ಆಲಂಗಿಸಿಕೊಂಡರು.

೧೬. ಎಲೌ ಗಿರಿಜೆ, ನೀನು ಕುಲವನ್ನುದ್ಧರಿಸುವಂತಹ ಮಹಾಕಾರ್ಯವನ್ನು ಸಾಧಿಸಿದೆಯಲ್ಲವೆ? ಈ ನಿನ್ನ ಸದಾಚಾರದಿಂದ ನಾವೆಲ್ಲರೂ ಪವಿತ್ರರಾದೆವು.

೧೭. ಹೀಗೆ ಎಲ್ಲರೂ ಗಿರಿಜೆಯನ್ನು ಹೊಗಳಿ ನಮಸ್ಕರಿಸಿದರು. ಮತ್ತು ಚಂದನ ಹೂವುಗಳಿಂದ ಅವಳನ್ನು ಅಲಂಕರಿಸಿ ಪೂಜಿಸಿದರು.

ತಸ್ಮಿನ್ನವಸರೇ ದೇವಾ ವಿಮಾನಸ್ಥಾ ಮುದಾಂಬರೇ ।
ಪುಷ್ಪವೃಷ್ಟಿಂ ಶುಭಾಂ ಚಕ್ರುರ್ನತ್ವಾ ತಾಂ ತುಷ್ಟುವುಸ್ಸ್ತವೈಃ ॥ ೧೮ ॥

ತದಾ ತಾಂ ಚ ರಥೇ ಸ್ಥಾಪ್ಯ ಸರ್ವೇ ಶೋಭಾನ್ವಿತೇ ವರೇ ।
ಪುರಂ ಪ್ರವೇಶಯಾಮಾಸುಸ್ಸರ್ವೇ ವಿಪ್ರಾದಯೋ ಮುದಾ ॥ ೧೯ ॥

ಅಥ ವಿಪ್ರಾಃ ಪುರೋಧಾಶ್ಚ ಸಖ್ಯೋಽನ್ಯಾಶ್ಚ ಸ್ತ್ರಿಯಃ ಶಿವಾಂ ।
ಗೃಹಂ ಪ್ರವೇಶಯಾಮಾಸುರ್ಬಹುಮಾನಪುರಸ್ಸರಂ ॥ ೨೦ ॥

ಸ್ತ್ರಿಯೋ ನಿರ್ಮಂಛನಂ ಚಕ್ರುರ್ವಿಪ್ರಾ ಯುಯುಜುರಾಶಿಷಃ ।
ಹಿಮವಾನ್ ಮೇನಕಾ ಮಾತಾ ಮುಮೋದಾತಿ ಮುನೀಶ್ವರ ॥ ೨೧ ॥

ಸ್ವಾಶ್ರಮಂ ಸಫಲಂ ಮೇನೇ ಕುಪುತ್ರಾತ್ಸುಪುತ್ರಿಕಾ ವರಾ ।
ಹಿಮವಾನ್ನಾರದಂ ತ್ವಾಂ ಚ ಸಂಸ್ತುವನ್ ಸಾಧು ಸಾಧ್ವಿತಿ ॥ ೨೨ ॥

---

೧೮. ಈ ಸಮಯದಲ್ಲಿ ದೇವತೆಗಳು ಆಕಾಶದಲ್ಲಿ ವಿಮಾನದಲ್ಲಿ ನಿಂತು ಗಿರಿಜೆಯ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಮತ್ತು ಅವಳನ್ನು ನಮಸ್ಕರಿಸಿ ಸ್ತುತಿಸಿದರು.

೧೯. ಬ್ರಾಹ್ಮಣರು ಮೊದಲಾದವರೆಲ್ಲರೂ ಸೇರಿ ಆ ಗಿರಿಜೆಯನ್ನು ಸುಂದರವಾದ ರಥದಲ್ಲಿ ಕುಳ್ಳಿರಿಸಿಕೊಂಡು ನಗರವನ್ನು ಪ್ರವೇಶಿಸಿದರು.

೨೦. ಆಮೇಲೆ ಬ್ರಾಹ್ಮಣರು, ಪುರೋಹಿತರು, ಸಖಿಯರು, ಮುತ್ತೈದೆಯರೂ ಎಲ್ಲರೂ ಸೇರಿ ಗಿರಿಜೆಯನ್ನು ಬಹುಮರ್ಯಾದೆಯೊಡನೆ ಅವಳ ಮನೆಗೆ ಕರೆದೊಯ್ದರು.

೨೧. ಸ್ತ್ರೀಯರು ದೃಷ್ಟಿಯನ್ನು ತೆಗೆದು ಗಿರಿಜೆಗೆ ಆರತಿಯನ್ನು ಎತ್ತಿದರು. ಬ್ರಾಹ್ಮಣರು ಆಶೀರ್ವಾದವನ್ನು ಮಾಡಿದರು. ಹಿಮವಂತನೂ, ತಾಯಿಯಾದ ಮೇನಕೆಯೂ ಸಹ ತುಂಬಾ ಹರ್ಷಗೊಂಡರು.

೨೨. ಆಗ ಹಿಮವಂತನು ತನ್ನ ಗೃಹಸ್ಥಾಶ್ರಮವು ಸಫಲವಾಯಿತೆಂದು ತಿಳಿದುಕೊಂಡನು. ಕೆಟ್ಟ ಪುತ್ರನಿಗಿಂತಲೂ ಪುತ್ರಿಯು ಉತ್ತಮಳು. ಎಲೈ ನಾರದ, ಆಗ ಹಿಮವಂತನು ನಿನ್ನನ್ನು ಸಾಧು ಸಾಧುವೆಂದು ಹೊಗಳಿ ಸ್ತುತಿಸಿದನು.

ಬ್ರಾಹ್ಮಣೇಭ್ಯಶ್ಚ ವಂದಿಭ್ಯಃ ಪರ್ವತೇಂದ್ರೋ ಧನಂ ದದೌ ।
ಮಂಗಲಂ ಪಾಠಯಾಮಾಸ ಸ ದ್ವಿಜೇಭ್ಯೋ ಮಹೋತ್ಸವಂ ॥ ೨೩ ॥

ಏವಂ ಸ್ವಕನ್ಯಯಾ ಹೃಷ್ಟೌ ಪಿತರೌ ಭ್ರಾತರಸ್ತಥಾ ।
ಜಾಮಯಶ್ಚ ಮಹಾಪ್ರೀತ್ಯಾ ಸಮೂಷುಃ ಪ್ರಾಂಗಣೇ ಮುನೇ ॥ ೨೪ ॥

ತತಸ್ಸ ಹಿಮವಾಂಸ್ತಾತ ಸುಪ್ರಹೃಷ್ಟಃ ಪ್ರಸನ್ನಧೀಃ ।
ಸಮ್ಮಾನ್ಯ ಸಕಲಾರ್ ಪ್ರೀತ್ಯಾ ಸ್ನಾತುಂ ಗಂಗಾಂ ಜಗಾಮ ಹ ॥ ೨೫ ॥

ಏತಸ್ಮಿನ್ನಂತರೇ ಶಂಭುಸ್ಸುಲೀಲೋ ಭಕ್ತವತ್ಸಲಃ ।
ಸುನರ್ತಕನಟೋ ಭೂತ್ವಾ ಮೇನಕಾಸನ್ನಿಧಿಂ ಯಯೌ ॥ ೨೬ ॥

ಶೃಂಗಂ ವಾಮೇ ಕರೇ ಧೃತ್ವಾ ದಕ್ಷಿಣೇ ಡಮರುಂ ತಥಾ ।
ಪೃಷ್ಠೇ ಕಂಥಾಂ ರಕ್ತವಾಸಾ ನೃತ್ಯಗಾನವಿಶಾರದಃ ॥ ೨೭ ॥

---

೨೩. ಬ್ರಾಹ್ಮಣರಿಗೂ, ಸ್ತುತಿಪಾಠಕರಿಗೂ ಹಿಮವಂತನು ಧನವನ್ನು ಕೊಟ್ಟನು. ಬ್ರಾಹ್ಮಣರಿಂದ ಮಂಗಳವನ್ನೂ ವೇದಘೋಷವನ್ನೂ ಮಾಡಿಸಿ ಮಹೋತ್ಸವವನ್ನು ಮಾಡಿದನು.

೨೪. ಹೀಗೆ ಗಿರಿಜೆಯಿಂದ ಅವಳ ತಂದೆತಾಯಿಗಳೂ ಸಹೋದರರೂ ಬಂಧುಗಳೂ ಸಹ ಹಿಮವಂತನ ಮನೆಯಲ್ಲಿ ಹರ್ಷದಿಂದ ಸೇರಿದರು.

೨೫. ಬಳಿಕ ಆ ಹಿಮವಂತನು ಪ್ರಸನ್ನತೆಯಿಂದ ಮನೆಗೆ ಬಂದವರೆಲ್ಲರನ್ನೂ ಗೌರವಿಸಿ ಬೀಳ್ಕೊಟ್ಟು ಸ್ನಾನಮಾಡಲು ಗಂಗಾನದಿಗೆ ತೆರಳಿದನು.

೨೬. ಇದೇ ಸಮಯದಲ್ಲಿ ಭಕ್ತವತ್ಸಲನೂ ಲೀಲಾವಿಶಾರದನೂ ಆದ ಶಂಕರನು ಚೆನ್ನಾಗಿ ನರ್ತಿಸುವ ನಟನ ವೇಷವನ್ನು ಧರಿಸಿ ಮೇನಾದೇವಿಯ ಬಳಿಗೆ ಬಂದನು.

೨೭. ಆ ಶಿವನು ಎಡಗೈನಲ್ಲಿ ಶೃಂಗವನ್ನೂ ಬಲಗೈನಲ್ಲಿ ಡಮರುವನ್ನೂ ಧರಿಸಿದ್ದನು. ಬೆನ್ನಮೇಲೆ ಗಂಟನ್ನು ಹೊತ್ತಿದ್ದನು. ಕೆಂಪುಬಟ್ಟೆಯನ್ನುಟ್ಟು ನರ್ತನ ಮತ್ತು ಗಾನಗಳಲ್ಲಿ ನಿಪುಣನಾದ ನಟನಾಗಿದ್ದನು.

ತತಸ್ಸನಟರೂಪೋऽಸೌ ಮೇನಕಾಯಾಂ ಗಣೇ ಮುದಾ ।
ಚಕ್ರೇ ಸುನೃತ್ಯಂ ವಿವಿಧಂ ಗಾನಂ ಚಾಪಿ ಮನೋಹರಂ ॥ ೨೮ ॥

ಶೃಂಗಂ ಚ ಡಮರುಂ ತತ್ರ ವಾದಯಾಮಾಸ ಸುಧ್ವನಿಂ ।
ಮಹತೀಂ ವಿವಿಧಾಂ ತತ್ರ ಸ ಚಕಾರ ಮನೋಹರಾಂ ॥ ೨೯ ॥

ತಾಂ ಪ್ರಷ್ಟುಂ ನಾಗರಾಸ್ಸರ್ವೇ ಪುರುಷಾಶ್ಚ ಸ್ತ್ರಿಯಸ್ತಥಾ ।
ಆಜಗ್ಮುಸ್ಸಹಸಾ ತತ್ರ ಬಾಲಾ ವೃದ್ಧಾ ಅಪಿ ಧ್ರುವಂ ॥ ೩೦ ॥

ಶ್ರುತ್ವಾ ಸುಗೀತಂ ತದ್ದೃಷ್ಟ್ವಾ ಸುನೃತ್ಯಂ ಚ ಮನೋಹರಂ ।
ಸಹಸಾ ಮುಮುಹುಸ್ಸರ್ವೇ ಮೇನಾಪಿ ಚ ತದಾ ಮುನೇ ॥ ೩೧ ॥

ಮೂರ್ಛಾಂ ಸಂಪ್ರಾಪ್ಯ ಸಾ ದುರ್ಗಾ ವಿಲೋಕ್ಯ ಹೃದಿ ಶಂಕರಂ ।
ತ್ರಿಶೂಲಾದಿಕಚಿಹ್ನಾನಿ ಬಿಭ್ರತಂ ಚಾತಿಸುಂದರಂ ॥ ೩೨ ॥

---

೨೮. ಬಳಿಕ ನಟರೂಪನಾದ ಶಿವನು ಮೇನಕಾ ಮತ್ತು ಅವಳ ಪರಿವಾರ ಜನಗಳ ಮುಂದೆ ಬಗೆಬಗೆಯಾಗಿ ನರ್ತಿಸಿದನು. ಇಂಪಾಗಿ ಗಾನವನ್ನು ಹಾಡಿದನು.

೨೯. ಕೊಂಬನ್ನೂ ಡಮರವನ್ನೂ ಮನೋಹರವಾಗಿ ಊದಿದನು. ಅನೇಕ ವಿಧವಾಗಿ ವೀಣೆಯನ್ನು ಬಾರಿಸಿದನು ಬಗೆಬಗೆಯ ಅಭಿನಯಗಳನ್ನು ಮನೋಹರವಾಗಿ ಮಾಡಿದನು.

೩೦. ಶಂಕರನ ಆ ನರ್ತನವನ್ನು ನೋಡಲು ಪಟ್ಟಣಿಗರಾದ ಸ್ತ್ರೀಯರೂ ಪುರುಷರೂ, ಬಾಲಕರೂ, ವೃದ್ಧರೂ ಎಲ್ಲರೂ ತ್ವರೆಯಿಂದ ಬಂದು,

೩೧. ಅವನ ಇಂಪಾದ ಗಾನವನ್ನು ಕೇಳಿ ಮನೋಹರವಾದ ನರ್ತನವನ್ನು ನೋಡಿ ಎಲ್ಲರೂ ಮೋಹಗೊಂಡರು. ಮೇನಾದೇವಿಯೂ ಮೋಹಗೊಂಡಳು.

೩೨. ಗಿರಿಜೆಗೂ ಮೂರ್ಛೆಬಂದಿತು. ಅನಂತರ ಅವಳು ತನ್ನ ಮನಸ್ಸಿನಲ್ಲಿ ಧ್ಯಾನದಿಂದ ಈಶ್ವರನನ್ನು ನೋಡಿದಳು. ಆ ಈಶ್ವರನು ತ್ರಿಶೂಲ ಮುಂತಾದ ಚಿಹ್ನೆಗಳನ್ನು ಧರಿಸಿ ತುಂಬಾ ಸುಂದರನಾಗಿದ್ದನು.

ವಿಭೂತಿಭೂಷಿತಂ ರಮ್ಯಮಸ್ಥಿಮಾಲಾಸಮನ್ವಿತಂ ।
ತ್ರಿಲೋಚನೋಜ್ಜ್ವಲದ್ವಕ್ತ್ರಂ ನಾಗಯಜ್ಞೋಪವೀತಿನಂ ॥ ೩೩ ॥

ವರಂ ವೃಣ್ವಿತ್ಯುಕ್ತವಂತಂ ಗೌರವರ್ಣಂ ಮಹೇಶ್ವರಂ ।
ದೀನಬಂಧುಂ ದಯಾಸಿಂಧುಂ ಸರ್ವಥಾ ಸುಮನೋಹರಂ ॥ ೩೪ ॥

ಹೃದಯಸ್ಥಂ ಹರಂ ದೃಷ್ಟ್ವೇದೃಶಂ ಸಾ ಪ್ರಣನಾಮ ತಂ ।
ವರಂ ವವ್ರೇ ಮಾನಸಂ ಹಿ ಪತಿರ್ಮೇ ತ್ವಂ ಭವೇದಿತಿ ॥ ೩೫ ॥

ವರಂ ದತ್ವಾ ಶಿವಶ್ಚಾಥ ತಾದೃಶಂ ಪ್ರೀತಿತೋ ಹೃದಾ ।
ಅಂತರ್ಧಾಯ ಪುನಸ್ತತ್ರ ಸುನನರ್ತ ಸ ಭಿಕ್ಷುಕಃ ॥ ೩೬ ॥

ತತೋ ಮೇನಾ ಸುರತ್ನಾನಿ ಸ್ವರ್ಣಪಾತ್ರಸ್ಥಿತಾನಿ ಚ ।
ತಸ್ಮೈ ದಾತುಂ ಯಯೌ ಪ್ರೀತ್ಯಾ ತದ್ಭೂತಿಪ್ರೀತಮಾನಸಾ ॥ ೩೭ ॥

---

೩೩-೩೪. ವಿಭೂತಿಯನ್ನು ಲೇಪನಮಾಡಿಕೊಂಡಿದ್ದನು. ಅಸ್ಥಿಮಾಲೆಯನ್ನು ಧರಿಸಿದ್ದನು. ಅವನ ಮುಖವು ಮೂರುಕಣ್ಣುಗಳಿಂದೊಪ್ಪುತ್ತಿದ್ದಿತು. ಸರ್ಪಗಳನ್ನು ಯಜ್ಞೋಪವೀತದಂತೆ ಮೈಗೆ ಸುತ್ತಿಕೊಂಡಿದ್ದನು. ಗಿರಿಜೆಯನ್ನು ಕುರಿತು “ ನನ್ನನ್ನು ವರಿಸು ” ಎಂದು ಹೇಳುತ್ತಿದ್ದನು. ದೀನಬಂಧುವೂ ಕರುಣಾನಿಧಿಯೂ ಆದ ಆ ರುದ್ರನು ಸರ್ವವಿಧಗಳಿಂದಲೂ ಮನೋಹರನಾಗಿ ಒಪ್ಪುತ್ತಿದ್ದನು.

೩೫. ಹೀಗೆ ಹೃದಯದಲ್ಲಿರುವ ಹರನನ್ನು ನೋಡಿ, ಗಿರಿಜೆಯು ನಮಸ್ಕರಿಸಿದಳು. “ ನೀನೇ ನನ್ನ ಪತಿಯಾಗು ” ಎಂದು ವರವನ್ನು ಕೇಳಿದಳು.

೩೬. ಆಗ ಶಿವನೂ ಸಹ ಆ ಗಿರಿಜೆಯ ಮನಸ್ಸಿನಲ್ಲಿದ್ದ ಒಂದು ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನನಾಗಿ, ತಿರುಗಿ ಹೊರಗೆ ನಟರೂಪದಿಂದ ನರ್ತನ ಮಾಡಿದನು.

೩೭. ಬಳಿಕ ಮೇನಾದೇವಿಯು ಆ ನಟನ ನರ್ತನ, ಚಮತ್ಕಾರ ಮತ್ತು ತೇಜಸ್ಸುಗಳಿಗೆ ಸಂತುಷ್ಟಳಾಗಿ ಚಿನ್ನದ ಪಾತ್ರೆಗಳಲ್ಲಿ ರತ್ನಗಳನ್ನಿಟ್ಟು ಅವನಿಗೆ ಕೊಡಲು ಹೋದಳು.

ತಾನಿ ನ ಸ್ವೀಚಕಾರಾಸೌ ಭಿಕ್ಷಾಂ ಯಾಚೇ ಶಿವಾಂ ಚ ತಾಂ ।
ಪುನಃ ಸುನೃತ್ಯಂ ಗಾನಂ ಚ ಕೌತುಕಾತ್ಕರ್ತುಮುದ್ಯತಃ ॥ ೩೮ ॥

ಮೇನಾ ತದ್ವಚನಂ ಶ್ರುತ್ವಾ ಚುಕೋಪಾತಿ ಸುವಿಸ್ಮಿತಾ ।
ಭಿಕ್ಷುಕಂ ಭರ್ತ್ಸಯಾಮಾಸ ಬಹಿಷ್ಕರ್ತುಮಿಯೇಷ ಸಾ ॥ ೩೯ ॥

ಏತಸ್ಮಿನ್ನಂತರೇ ತತ್ರ ಗಂಗಾತೋ ಗಿರಿರಾಯಯೌ ।
ದದರ್ಶ ಪುರತೋ ಭಿಕ್ಷುಂ ಪ್ರಾಂಗಣಸ್ಥಂ ನರಾಕೃತಿಂ ॥ ೪೦ ॥

ಶ್ರುತ್ವಾ ಮೇನಾಮುಖಾದ್ವೃತ್ತಂ ತತ್ಸರ್ವಂ ಸುಚುಕೋಪ ಸಃ ।
ಆಜ್ಞಾಂ ಚಕಾರಾನುಚರಾನ್ ಬಹಿಷ್ಕರ್ತುಂ ಚ ತಂ ನಟಂ ॥ ೪೧ ॥

ಮಹಾಗ್ನಿಮಿವ ದುಃಸ್ಪರ್ಶಂ ಪ್ರಜ್ವಲಂತಂ ಸುತೇಜಸಂ ।
ನ ಶಶಾಕ ಬಹಿಷ್ಕರ್ತುಂ ಕೋಽಪಿ ತಂ ಮುನಿಸತ್ತಮ ॥ ೪೨ ॥

---

೩೮. ಆದರೆ ಆ ರತ್ನಗಳನ್ನು ನಟನು ಸ್ವೀಕರಿಸಲಿಲ್ಲ. ಗಿರಿಜೆಯನ್ನು ತನಗೆ ಕೊಡಬೇಕೆಂದು ಯಾಚಿಸಿದನು. ಅದಕ್ಕಾಗಿ ತಿರುಗಿ ನೃತ್ಯವನ್ನೂ ಗಾನವನ್ನೂ ಚಮತ್ಕಾರವಾಗಿ ಮಾಡಿದನು.

೩೯. ಮೇನಾದೇವಿಯು ಅವನ ಮಾತನ್ನು ಕೇಳಿ ತುಂಬಾ ಕೋಪಗೊಂಡಳು. ಮತ್ತು ಆ ನಟನನ್ನು ಹೆದರಿಸಿ ಹೊರಗೆ ಕಳುಹಿಸಲುದ್ಯುಕ್ತಳಾದಳು.

೪೦. ಇಷ್ಟರಲ್ಲಿ ಗಂಗೆಗೆ ಸ್ನಾನಕ್ಕಾಗಿ ಹೋಗಿದ್ದ ಹಿಮವಂತನು ಅಲ್ಲಿಗೆ ಬಂದನು. ಅವನು ಅಂಗಳದಲ್ಲಿ ನಿಂತಿರುವ ಮನುಷ್ಯರೂಪವುಳ್ಳ ನಟನಾದ ಆ ಭಿಕ್ಷುಕನನ್ನು ನೋಡಿದನು.

೪೧. ಮೇನೆಯಿಂದ ನಡೆದ ಸಮಾಚಾರವನ್ನು ಕೇಳಿ ಆ ಹಿಮವಂತನೂ ಕೋಪಗೊಂಡು ಆ ನಟನನ್ನು ಹೊರಗೆ ಕಳುಹಿಸುವಂತೆ ಸೇವಕರಿಗೆ ಆಜ್ಞೆ ಮಾಡಿದನು.

೪೨. ಆದರೆ ಎಲೈ ನಾರದ, ಕಾಲಾಗ್ನಿಯಂತೆ ಮುಟ್ಟಲು ಅಸಾಧ್ಯವಾದ ತೇಜಸ್ಸಿನಿಂದ ಜ್ವಲಿಸುತ್ತಲಿರುವ ಆ ನಟನನ್ನು ಯಾವನೂ ಹೊರಗೆ ಕಳುಹಿಸಲಾರದವನಾದನು.

ತತಸ್ಸ ಭಿಕ್ಷುಕಸ್ತ್ರಾತ ನಾನಾಲೀಲಾವಿಶಾರದಃ ।
ದರ್ಶಯಾಮಾಸ ಶೈಲಾಯ ಸ್ವಪ್ರಭಾವಮನಂತಕಂ ॥ ೪೩ ॥

ಶೈಲೋ ದದರ್ಶ ತಂ ತತ್ರ ವಿಷ್ಣುರೂಪಧರಂ ದ್ರುತಂ ।
ಕಿರೀಟಿನಂ ಕುಂಡಲಿನಂ ಪೀತವಸ್ತ್ರಂ ಚತುರ್ಭುಜಂ ॥ ೪೪ ॥

ಯದ್ಯತ್ಪುಷ್ಪಾದಿಕಂ ದತ್ತಂ ಪೂಜಾಕಾಲೇ ಗದಾಭೃತೇ ।
ಗಾತ್ರೇ ಶಿರಸಿ ತತ್ಸರ್ವಂ ಭಿಕ್ಷುಕಸ್ಯ ದದರ್ಶ ಹ ॥ ೪೫ ॥

ತತೋ ದದರ್ಶ ಜಗತಾಂ ಸ್ರಷ್ಟಾರಂ ಸ ಚತುರ್ಮುಖಂ ।
ರಕ್ತವರ್ಣಂ ಪಠಂತಂ ಚ ಶ್ರುತಿಸೂಕ್ತಂ ಗಿರೀಶ್ವರಃ ॥ ೪೬ ॥

ತತಸ್ಸೂರ್ಯಸ್ವರೂಪಂ ಚ ಜಗಚ್ಚಕ್ಷುಸ್ಸ್ವರೂಪಕಂ ।
ದದರ್ಶ ಗಿರಿರಾಜಸ್ಸ ಕ್ಷಣಂ ಕೌತುಕಕಾರಿಣಂ ॥ ೪೭ ॥

---

೪೩. ಬಳಿಕ ಭಿಕ್ಷುರೂಪನಾದ, ನಾನಾಲೀಲೆಗಳನ್ನು ಮಾಡುವಂತಹ ಶಿವನು ಹಿಮವಂತನಿಗೆ ತುದಿಮೊದಲಿಲ್ಲದ ತನ್ನ ಮಹಿಮೆಯನ್ನು ತೋರಿಸಿದನು.

೪೪. ಹಿಮವಂತನು ಆ ಭಿಕ್ಷುಕನಲ್ಲಿ ಮೊದಲು ವಿಷ್ಣುರೂಪವನ್ನು ನೋಡಿದನು. ಆ ಹರಿಯು ನಾಲ್ಕು ಕೈಗಳುಳ್ಳವನಾಗಿದ್ದು ಪೀತವಸ್ತ್ರವನ್ನುಟ್ಟಿದ್ದನು. ಕಿರೀಟ ಮತ್ತು ಕುಂಡಲಗಳನ್ನಿಟ್ಟುಕೊಂಡಿದ್ದನು.

೪೫. ಪೂಜೆಯ ಕಾಲದಲ್ಲಿ ಹಿಮವಂತನು ಹರಿಯ ಶರೀರ ಮತ್ತು ಶಿರಸ್ಸುಗಳಲ್ಲಿ ಯಾವಾವ ಹೂವು ಮೊದಲಾದುವುಗಳನ್ನು ಇಟ್ಟು ಪೂಜಿಸಿದ್ದನೋ ಅವೆಲ್ಲವನ್ನೂ ಭಿಕ್ಷುಕನ ಶಿರಸ್ಸು ಮತ್ತು ಶರೀರಗಳಲ್ಲಿರುವುದನ್ನು ನೋಡಿದನು.

೪೬. ಆಮೇಲೆ ಭಿಕ್ಷುಕನಲ್ಲಿ ಜಗತ್ಕರ್ತನಾದ ಬ್ರಹ್ಮನನ್ನು ನೋಡಿದನು. ಅವನು ನಾಲ್ಕು ಮುಖಗಳುಳ್ಳವನಾಗಿದ್ದು ಕೆಂಪುಬಣ್ಣದವನಾಗಿದ್ದನು. ವೇದಸೂಕ್ತಗಳನ್ನು ಪಠಿಸುತ್ತಿದ್ದನು.

೪೭. ಬಳಿಕ ಆ ಹಿಮವಂತನು ಜಗತ್ತಿಗೆ ಚಕ್ಷುಸ್ಸಿನ ರೂಪನಾದ ಸೂರ್ಯನನ್ನು ಭಿಕ್ಷುಕನಲ್ಲಿ ನೋಡಿ ತುಂಬಾ ಆಶ್ಚರ್ಯಗೊಂಡನು.

ತತೋ ದದರ್ಶ ತಂ ತಾತ ರುದ್ರರೂಪಂ ಮಹಾದ್ಭುತಂ ।
ಪಾರ್ವತೀಸಹಿತಂ ರಮ್ಯಂ ವಿಹಸಂತಂ ಸುತೇಜಸಂ ॥ ೪೮ ॥

ತತಸ್ತೇಜಸ್ಸ್ವರೂಪಂ ಚ ನಿರಾಕಾರಂ ನಿರಂಜನಂ ।
ನಿರುಪಾಧಿಂ ನಿರೀಹಂ ಚ ಮಹಾದ್ಭುತಮರೂಪಕಂ ॥ ೪೯ ॥

ಏವಂ ಬಹೂನಿ ರೂಪಾಣಿ ತಸ್ಯ ತತ್ರ ದದರ್ಶ ಸಃ ।
ಸುವಿಸ್ಮಿತೋ ಬಭೂವಾಶು ಪರಮಾನಂದಸಂಯುತಃ ॥ ೫೦ ॥

ಅಥಾಸೌ ಭಿಕ್ಷುವರ್ಯೋ ಹಿ ತಸ್ಮಾತ್ತಸ್ಯಾಶ್ಚ ಸೂತಿಕೃತ್ ।
ಭಿಕ್ಷಾಂ ಯಯಾಚೇ ದುರ್ಗಾಂ ತಾಂ ನಾನ್ಯಜ್ಜಗ್ರಾಹ ಕಿಂಚನ ॥ ೫೧ ॥

ನ ಸ್ವೀಚಕಾರ ಶೈಲೇಂದ್ರೋ ಮೋಹಿತಶ್ಶಿವಮಾಯಯಾ ।
ಭಿಕ್ಷುಃ ಕಿಂಚಿನ್ನ ಜಗ್ರಾಹ ತತ್ರೈವಾಂತರ್ದಧೇ ತತಃ ॥ ೫೨ ॥

---

೪೮. ಆಮೇಲೆ ಆ ಭಿಕ್ಷುಕನಲ್ಲಿ ಅದ್ಭುತವಾದ ರುದ್ರರೂಪವನ್ನು ನೋಡಿದನು. ಆ ರುದ್ರನು ಪಾರ್ವತಿಯೊಡನೆ ಇದ್ದು ನಗುತ್ತಿದ್ದನು. ಮಹಾತೇಜಸ್ಸಿನಿಂದೊಪ್ಪುತ್ತಾ ಮನೋಹರನಾಗಿದ್ದನು.

೪೯. ಆಮೇಲಾ ಗಿರಿರಾಜನು ಪ್ರಕಾಶಸ್ವರೂಪವೂ ಅವಯುವಗಳಿಲ್ಲದುದೂ, ಪರಿಶುದ್ಧವಾದುದೂ, ಮಾಯೆಯ ಸಂಬಂಧವಿಲ್ಲದುದೂ, ನಿಸ್ಪೃಹವೂ, ನಿರ್ಗುಣವೂ, ಅದ್ಭುತವೂ ಆದಂತಹ ಪರಬ್ರಹ್ಮವಸ್ತುವನ್ನು ಭಿಕ್ಷುಕನ ಶರೀರದಲ್ಲಿ ನೋಡಿದನು.

೫೦. ಹೀಗೆ ಆ ಭಿಕ್ಷುಕನಲ್ಲಿ ಶಿವನ ಅನೇಕ ವಿಶ್ವರೂಪಗಳನ್ನು ಹಿಮವಂತನು ನೋಡಿದನು. ಆಗ ಅವನು ತುಂಬಾ ಆಶ್ಚರ್ಯದಿಂದ ಆನಂದಪರವಶನಾದನು.

೫೧. ಆಮೇಲಾಜಗತ್ಕರ್ತನಾದ ಭಿಕ್ಷುಶ್ರೇಷ್ಠ (ಶಿವ) ನು ಹಿಮವಂತನನ್ನೂ ಮೇನಾದೇವಿಯನ್ನೂ ಕುರಿತು ಪಾರ್ವತಿಯನ್ನು ತನಗೆ ಕೊಡುವಂತೆ ಯಾಚಿಸಿದನು. ಇನ್ನೇನನ್ನೂ ಅವನು ತೆಗೆದುಕೊಳ್ಳಲಿಷ್ಟಪಡಲಿಲ್ಲ.

೫೨. ಆದರೆ ಹಿಮವಂತನು ಶಿವಮಾಯೆಯಿಂದ ಮೋಹಗೊಂಡು ಆ ಭಿಕ್ಷುಕನಿಗೆ ಗಿರಿಜೆಯನ್ನು ಕೊಡಲು ಸಮ್ಮತಿಸಲಿಲ್ಲ. ಆಗಲಾ ನಟಭಿಕ್ಷುವು ಅಲ್ಲಿಯೇ ಅಂತರ್ಧಾನನಾದನು.

ತದಾ ಬಭೂವ ಸುಜ್ಞಾನಂ ಮೇನಾಶೈಲೇಶಯೋರಿತಿ ।
ಆವಾಂ ಶಿವೋ ವಂಚಯಿತ್ವಾ ಸ್ವಸ್ಥಾನಂ ಗತವಾರ್ ಪ್ರಭುಃ ॥ ೫೩ ॥

ತಯೋರ್ವಿಚಿಂತ್ಯ ತತ್ರೈವ ಶಿವೇ ಭಕ್ತಿರಭೂತ್ಪರಾ ।
ಮಹಾಮೋಕ್ಷಕರೀ ದಿವ್ಯಾ ಸರ್ವಾನಂದಪ್ರದಾಯಿನೀ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ತ್ರಿಂಶೋಽಧ್ಯಾಯಃ



---

೫೩. ಆಮೇಲೆ ಮೇನಾಹಿಮವಂತರಿಗೆ ಶಿವನು ಭಿಕ್ಷುರೂಪದಿಂದ ತಮ್ಮನ್ನು ಮೋಸಗೊಳಿಸಿ ತನ್ನ ಸ್ಥಾನಕ್ಕೆ ತೆರಳಿದನು ಎಂದು ಗೊತ್ತಾಯಿತು.

೫೪. ಆಗ ಆ ಮೇನಾದೇವಿಹಿಮವಂತರು ಶಿವನ ಮಹಿಮೆಯನ್ನು ಆಶ್ಚರ್ಯ ದಿಂದ ಆಲೋಚಿಸಿದರು. ಎಲೈ ನಾರದ, ಅದರಿಂದ ಅವರಿಗೆ ಮುಕ್ತಿಪ್ರದವೂ ಆನಂದ ಕರವೂ ಆದಂತಹ ಶಿವಭಕ್ತಿಯು ಉಂಟಾಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಏಕತ್ರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ತಯೋರ್ಭಕ್ತಿಂ ಶಿವೇ ಜ್ಞಾತ್ವಾ ಪರಾಮವ್ಯಭಿಚಾರಿಣೀಂ ।
ಸರ್ವೇ ಶಕ್ರಾದಯೋ ದೇವಾಶ್ಚಿಚಿಂತುರಿತಿ ನಾರದ ॥ ೧ ॥

॥ ದೇವಾ ಊಚುಃ ॥

ಏಕಾಂತಭಕ್ತ್ಯಾ ಶೈಲಶ್ಚೇತ್ಕನ್ಯಾಂ ತಸ್ಮೈ ಪ್ರದಾಸ್ಯತಿ ।
ಧ್ರುವಂ ನಿರ್ವಾಣತಾಂ ಸದ್ಯಸ್ಸ ಪ್ರಾಪ್ಸ್ಯತಿ ಚ ಭಾರತೇ ॥ ೨ ॥

---

### ಮೂವತ್ತೊಂದನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಶಂಕರನಲ್ಲಿ ಮೇನಕಾ ಮತ್ತು ಹಿಮವಂತರಿಗಿರುವ ಅನನ್ಯವಾದ ಭಕ್ತಿಯನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳು ಹೀಗೆ ಆಲೋಚಿಸಿದರು.

೨. ಅನನ್ಯವಾದ ಭಕ್ತಿಯಿಂದ ಹಿಮವಂತನು ತನ್ನ ಪುತ್ರಿಯನ್ನು ಶಂಕರನಿಗೆ ಮದುವೆಮಾಡಿಕೊಟ್ಟಿದ್ದೇ ಆದರೆ ಖಂಡಿತವಾಗಿ ಅವನು ಕೂಡಲೇ ಮುಕ್ತಿಯನ್ನು ಹೊಂದುವನು.

ಅನಂತರತ್ನಾಧಾರಶ್ಚೇತ್ಪೃಥ್ವೀಂ ತ್ಯಕ್ತ್ವಾ ಪ್ರಯಾಸ್ಯತಿ ।
ರತ್ನಗರ್ಭಾಭಿಧಾ ಭೂಮಿರ್ಮಿಥ್ಯೈವ ಭವಿತಾ ಧ್ರುವಂ ॥ ೩ ॥

ಸ್ಥಾವರತ್ವಂ ಪರಿತ್ಯಜ್ಯ ದಿವ್ಯರೂಪಂ ವಿಧಾಯ ಸಃ ।
ಕನ್ಯಾಂ ಶೂಲಭೃತೇ ದತ್ವಾ ಶಿವಲೋಕಂ ಗಮಿಷ್ಯತಿ ॥ ೪ ॥

ಮಹಾದೇವಸ್ಯ ಸಾರೂಪ್ಯಂ ಲಪ್ಸ್ಯತೇ ನಾತ್ರ ಸಂಶಯಃ ।
ತತ್ರ ಭುಕ್ತ್ವಾ ವರ್ರಾ ಭೋಗಾಂಸ್ತತೋ ಮೋಕ್ಷಮವಾಪ್ಸ್ಯತಿ ॥ ೫ ॥

॥ ಬ್ರಹ್ಮೋವಾಚ ॥

ಇತ್ಯಾಲೋಚ್ಯ ಸುರಾಸ್ಸರ್ವೇ ಕೃತ್ವಾ ಚಾಮಂತ್ರಣಂ ಮಿಥಃ ।
ಪ್ರಸ್ಥಾಪಯಿತುಮೈಚ್ಛಂಸ್ತೇ ಗುರುಂ ತತ್ರ ಸುವಿಸ್ಮಿತಾಃ ॥ ೬ ॥

ತತಶ್ಶಕ್ರಾದಯೋ ದೇವಾಸ್ಸರ್ವೇ ಗುರುನಿಕೇತನಂ ।
ಜಗ್ಮುಃ ಪ್ರೀತ್ಯಾ ಸವಿನಯಾ ನಾರದ ಸ್ವಾರ್ಥಸಾಧಕಾಃ ॥ ೭ ॥

---

೩. ಹಿಮವಂತನಲ್ಲಿ ಮಿತಿಯಿಲ್ಲದಷ್ಟು ರತ್ನಗಳಿರುವುವು. ಇಂತಹವನು ಮುಕ್ತಿಯನ್ನೈದಿದರೆ ಭೂಮಿಯ ರತ್ನಗರ್ಭಾ ಎಂಬ ಹೆಸರೇ ಸುಳ್ಳಾಗುವುದು.

೪. ಆ ಹಿಮವಂತನು ತನ್ನ ಪರ್ವತರೂಪವನ್ನು ಬಿಟ್ಟು ದಿವ್ಯರೂಪವನ್ನು ಧರಿಸಿ, ಪುತ್ರಿಯನ್ನು ಶಂಕರನಿಗೆ ಮದುವೆಮಾಡಿಕೊಟ್ಟು ಶಿವಲೋಕಕ್ಕೆ ತೆರಳುವನು.

೫. ಆ ಶಿವಲೋಕದಲ್ಲಿ ಶಿವನಂತಿರುವ ರೂಪವನ್ನು ಪಡೆದು ಬೇಕಾದಂತಹ ಉತ್ತಮ ಭೋಗಗಳನ್ನನುಭವಿಸುವನು. ಕೊನೆಯಲ್ಲಿ ಮುಕ್ತಿಯನ್ನೂ ಪಡೆಯುವನು.

೬. ಬ್ರಹ್ಮನು ಹೇಳಿದನು :—ಹೀಗೆ ಆಲೋಚಿಸಿ ದೇವತೆಗಳೆಲ್ಲರೂ ಸಹ ಸೇರಿ ಬೃಹಸ್ಪತಿಯನ್ನು ಹಿಮವಂತನ ಮನೆಗೆ ಕಳುಹಿಸಬೇಕೆಂದು ನಿಶ್ಚಯಿಸಿದರು.

೭-೮. ಬಳಿಕ ಆ ದೇವೇಂದ್ರ ಮೊದಲಾದ ದೇವತೆಗಳೆಲ್ಲರೂ ಸಹ ತಮ್ಮ

ಗತ್ವಾ ತತ್ರ ಗುರುಂ ನತ್ವಾ ಸರ್ವೇ ದೇವಾಸ್ಸವಾಸವಾಃ ।
ಚಕ್ರುರ್ನಿವೇದನಂ ತಸ್ಮೈ ಗುರವೇ ವೃತ್ತಮಾದರಾತ್ ॥ ೮ ॥

॥ ದೇವಾ ಊಚುಃ ॥

ಗುರೋ ಹಿಮಾಲಯಗೃಹಂ ಗಚ್ಛಾಸ್ಮತ್ಕಾರ್ಯಸಿದ್ಧಯೇ ।
ತತ್ರ ಗತ್ವಾ ಪ್ರಯತ್ನೇನ ಕುರು ನಿಂದಾಂ ಚ ಶೂಲಿನಃ ॥ ೯ ॥

ಪಿನಾಕಿನಾ ವಿನಾ ದುರ್ಗಾ ವರಂ ನಾನ್ಯಂ ವರಿಷ್ಯತಿ ।
ಅನಿಚ್ಛಯಾ ಸುತಾಂ ದತ್ವಾ ಫಲಂ ತೂರ್ಣಂ ಲಭಿಷ್ಯತಿ ॥ ೧೦ ॥

ಕಾಲೇನ್ಯೈವಾಧುನಾ ಶೈಲಮಿದಾನೀಂ ಭುವಿ ತಿಷ್ಠತು ।
ಅನೇಕರತ್ನಾಧಾರಂ ತ ಸ್ಥಾಪಯ ತ್ವಂ ಕ್ಷಿತೌ ಗುರೋ ॥ ೧೧ ॥

॥ ಬ್ರಹ್ಮೋವಾಚ ॥

ಇತಿ ದೇವವಚಃ ಶ್ರುತ್ವಾ ಪ್ರದದೌ ಕರ್ಣಯೋಃ ಕರಂ ।
ನ ಸ್ವೀಚಕಾರ ಸ ಗುರುಃ ಸ್ಮರನ್ನಾಮ ಶಿವೇತಿ ಚ ॥ ೧೨ ॥

---

ಕಾರ್ಯಕ್ಕಾಗಿ ವಿನಯದಿಂದ ತಮ್ಮ ಗುರುವಾದ ಬೃಹಸ್ಪತಿಯ ಮನೆಗೆ ಹೋಗಿ ಅವನನ್ನು ಭಕ್ತಿಯಿಂದ ನಮಸ್ಕರಿಸಿ ನಡೆದ ಸಮಾಚಾರನ್ನು ಹೇಳಿದರು.

೯. ದೇವತೆಗಳು ಹೇಳಿದರು:—ಓ ಗುರುವೇ, ಈಗ ನೀನು ನಮ್ಮ ಕಾರ್ಯಕ್ಕಾಗಿ ಹಿಮವಂತನ ಮನೆಗೆ ಹೋಗಿ ಅಲ್ಲಿ ಬೇಕೆಂದು ಶಿವನನ್ನು ನಿಂದಿಸು.

೧೦-೧೧. ಪಾರ್ವತಿಯು ಶಂಕರರನ್ನು ಹೊರತು ಯಾರನ್ನೂ ವರಿಸುವುದಿಲ್ಲ. ಆದರೆ ಹಿಮವಂತನು ಫಲೇಚ್ಛೆಯಿಲ್ಲದೇ ಪುತ್ರಿಯನ್ನು ಶಂಕರನಿಗೆ ಕೊಟ್ಟರೆ ಅದರ ಫಲವಾದ ಮೋಕ್ಷವು ಕೂಡಲೇ ಸಿಗುವುದು. ಅದಾಗಬಾರದು, ರತ್ನನಿಧಿಯಾದ ಹಿಮವಂತನು ಇನ್ನೂ ಕೆಲವು ಕಾಲ ಭೂಮಿಯಲ್ಲಿರಬೇಕು. ಓ ಗುರುವೇ, ಆರೀತಿ ಮಾಡು ಎಂದರು.

೧೨. ಬ್ರಹ್ಮನು ಹೇಳಿದನು:—ಹೀಗೆ ದೇವತೆಗಳು ಹೇಳಿದ ಮಾತು ಕೇಳಿ ದೇವಗುರುವು ಕೂಡಲೇ ಕಿವಿಗಳನ್ನು ಮುಚ್ಚಿಕೊಂಡು ಶಿವನಾಮವನ್ನು ಜಪಿಸತೊಡಗಿದನು. ದೇವತೆಗಳ ಮಾತನ್ನಂಗೀಕರಿಸಲಿಲ್ಲ.

ಅಥ ಸ್ಮೃತ್ವಾ ಮಹಾದೇವಂ ಬೃಹಸ್ಪತಿರುದಾರಧೀಃ ।
ಉವಾಚ ದೇವವರ್ಯಾಂಶ್ಚ ಧಿಕ್ಕೃತ್ವಾ ಚ ಪುನಃ ಪುನಃ ॥ ೧೩ ॥

॥ ಬೃಹಸ್ಪತಿರುವಾಚ ॥
ಸರ್ವೇ ದೇವಾಃ ಸ್ವಾರ್ಥಪರಾಃ ಪರಾರ್ಥಧ್ವಂಸಕಾರಕಾಃ ।
ಕೃತ್ವಾ ಶಂಕರನಿಂದಾಂ ಹಿ ಯಾಸ್ಯಾಮಿ ನರಕಂ ಧ್ರುವಂ ॥ ೧೪ ॥

ಕಶ್ಚಿನ್ಮಧ್ಯೇ ಚ ಯುಷ್ಮಾಕಂ ಗಚ್ಛೇಚ್ಛೈಲಾಂತಿಕಂ ಸುರಾಃ ।
ಸಂಪಾದಯೇತ್ಸ್ವಾಭಿಮತಂ ಶೈಲೇಂದ್ರಂ ಪ್ರತಿಬೋಧ್ಯ ಚ ॥ ೧೫ ॥

ಅನಿಚ್ಛಯಾ ಸುತಾಂ ದತ್ವಾ ಸುಖಂ ತಿಷ್ಠತು ಭಾರತೇ ।
ತಸ್ಮೈ ದತ್ವಾ ಸುತಾಂ ಭಕ್ತ್ಯಾ ಮೋಕ್ಷಂ ಪ್ರಾಪ್ಸ್ಯತಿ ನಿಶ್ಚಿತಂ ॥ ೧೬ ॥

ಪಶ್ಚಾತ್ಸಪ್ತರ್ಷಯಸ್ಸರ್ವೇ ಬೋಧಯಿಷ್ಯಂತಿ ಪರ್ವತಂ ।
ಪಿನಾಕಿನಾ ವಿನಾ ದುರ್ಗಾ ವರಂ ನಾನ್ಯಂ ವರಿಷ್ಯತಿ ॥ ೧೭ ॥

---

೧೩. ಮಹಾದೇವನನ್ನು ಸ್ಮರಿಸಿ ಮಹಾಜ್ಞಾನಿಯಾದ ಆ ಬೃಹಸ್ಪತಿಯು ದೇವತೆಗಳ ಮಾತನ್ನು ಧಿಕ್ಕರಿಸಿದನು.

೧೪. ಗುರುವು ಹೇಳಿದನು:—ಎಲೈ ದೇವತೆಗಳೇ, ನೀವು ಕೇವಲ ಸ್ವಾರ್ಥ ಪರರು. ಅದಕ್ಕಾಗಿ ಪರಾರ್ಥವನ್ನು ಹಾಳುಮಾಡುವಿರಿ. ನಿಮ್ಮಿಷ್ಟದಂತೆ ಶಂಕರನಿಂದೆ ಯನ್ನು ಮಾಡಿದರೆ ನಾನು ನರಕಕ್ಕೆ ಹೋಗಬೇಕಾಗುವುದು.

೧೫. ನಿಮ್ಮಲ್ಲಿಯೇ ಯಾರಾದರೂ ಹಿಮವಂತನ ಬಳಿಗೆ ಹೋಗಿ ಅವನಿಗೆ ಬೋಧಿಸಿ ನಿಮ್ಮ ಕಾರ್ಯವನ್ನು ಸಾಧಿಸಿಕೊಳ್ಳಿರಿ. ಹಾಗೇಕೆ ಮಾಡಬಾರದು?

೧೬. ಫಲೇಚ್ಛೆಯಿಲ್ಲದೇ ಪುತ್ರಿಯನ್ನು ಶಂಕರನಿಗೆ ಕೊಟ್ಟು ಹಿಮವಂತನು ಭೂಮಿಯಲ್ಲಿ ಸುಖವಾಗಿರಲಿ. ಆದರೆ ಭಕ್ತಿಯಿಂದ ಪುತ್ರಿಯನ್ನು ಶಿವನಿಗೆ ಕೊಟ್ಟರೆ ಹಿಮವಂತನು ಮುಕ್ತಿಯನ್ನೇ ಪಡೆಯುವನು. ಇದು ನಿಶ್ಚಯವು.

೧೭. ಇಲ್ಲದಿದ್ದರೆ ಸಪ್ತಋಷಿಗಳು ಹಿಮವಂತನಿಗೆ ಬೋಧಿಸಲಿ. ಆದರೆ ಶಿವನನ್ನು ಹೊರತು ಪಾರ್ವತಿಯು ಇನ್ನಾರನ್ನೂ ವರಿಸುವುದಿಲ್ಲ.

ಅಥವಾ ಗಚ್ಛತ ಸುರಾ ಬ್ರಹ್ಮಲೋಕಂ ಸವಾಸವಾಃ ।
ವೃತ್ತಂ ಕಥಯತ ಸ್ವಂ ತತ್ಸ ವಃ ಕಾರ್ಯಂ ಕರಿಷ್ಯತಿ ॥ ೧೮ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ತೇ ಸಮಾಲೋಚ್ಯಾಜಗ್ಮುರ್ಮಮ ಸಭಾಂ ಸುರಾಃ ।
ಸರ್ವೇ ನಿವೇದಯಾಂಚಕ್ರುರ್ನತ್ವಾ ತದ್ಗತಮಾದರಾತ್ ॥ ೧೯ ॥

ದೇವಾನಾಂ ತದ್ವಚಃ ಶ್ರುತ್ವಾ ಶಿವನಿಂದಾಕರಂ ತದಾ ।
ವೇದವಕ್ತಾ ವಿಲಪ್ಯಾಹಂ ತಾನವೋಚಂ ಸುರಾನ್ಮುನೇ ॥ ೨೦ ॥

॥ ಬ್ರಹ್ಮೋವಾಚ ॥

ನಾಹಂ ಕರ್ತುಂ ಕ್ಷಮೋ ವತ್ಸಾಃ ಶಿವನಿಂದಾಂ ಸುದುಸ್ಸಹಾಂ ।
ಸಂಪದ್ವಿನಾಶರೂಪಾಂ ಚ ವಿಪದಾಂ ಬೀಜರೂಪಿಣೀಂ ॥ ೨೧ ॥

ಸುರಾ ಗಚ್ಛತ ಕೈಲಾಸಂ ಸಂತೋಷಯತ ಶಂಕರಂ ।
ಪ್ರಸ್ಥಾಪಯತ ತಂ ಶೀಘ್ರಂ ಹಿಮಾಲಯಗೃಹಂ ಪ್ರತಿ ॥ ೨೨ ॥

---

೧೮. ಅಥವಾ ನೀವೆಲ್ಲರೂ ಬ್ರಹ್ಮನ ಬಳಿಗೆ ಹೋಗಿ, ಅವನಿಗೆ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ. ಅವನು ನಿಮ್ಮ ಕಾರ್ಯವನ್ನು ಮಾಡುವನು ಎಂದನು.

೧೯. ಬ್ರಹ್ಮನು ಹೇಳಿದನು:—ಹೀಗೆ ಬೃಹಸ್ಪತಿಯು ಹೇಳಿದ ಮಾತನ್ನು ಕೇಳಿ ದೇವತೆಗಳು ತಮ್ಮಲ್ಲಿಯೇ ಆಲೋಚಿಸಿಕೊಂಡು ನನ್ನ ಸಭೆಗೆ ಬಂದು ನನ್ನನ್ನು ನಮಸ್ಕರಿಸಿ ತಮ್ಮ ಅಭಿಪ್ರಾಯವನ್ನು ತಿಳಿಸಿದರು.

೨೦-೨೧. ಶಿವನಿಂದೆಯನ್ನು ಮಾಡುವಂತಹ ಆ ದೇವತೆಗಳ ಮಾತನ್ನು ಕೇಳಿ ವೇದ ವಕ್ತೃವಾದ ನಾನು ತುಂಬಾ ಖತಿಗೊಂಡು ಆ ದೇವತೆಗಳನ್ನು ಕುರಿತು ಎಲೈ ಮಕ್ಕಳಿರಾ, ಮಹಾ ಪಾಪಕರವಾದ ಶಿವನಿಂದೆಯನ್ನು ನಾನು ಮಾಡಲಾರೆನು. ಅದು ಸಕಲಸಂಪತ್ತನ್ನೂ ನಾಶಮಾಡುವುದು. ಅನೇಕ ವಿಪತ್ತುಗಳನ್ನುಂಟು ಮಾಡುವುದು.

೨೨. ಆದರೆ ನಿಮಗೊಂದುಪಾಯವನ್ನು ಹೇಳುವೆನು. ನೇರವಾಗಿ ಕೈಲಾಸಕ್ಕೇ ಹೋಗಿ ಅಲ್ಲಿ ಶಿವನನ್ನು ಸಂತೋಷಗೊಳಿಸಿ ಅವನನ್ನೇ ಹಿಮವಂತನ ಮನೆಗೆ ಕಳುಹಿಸಿರಿ.

ಸ ಗಚ್ಛೇದುಪಶೈಲೇಶಮಾತ್ಮನಿಂದಾಂ ಕರೋತು ವೈ ।
ಪರನಿಂದಾ ವಿನಾಶಾಯ ಸ್ವನಿಂದಾ ಯಶಸೇ ಮತಾ ॥ ೨೩ ॥

॥ ಬ್ರಹ್ಮೋವಾಚ ॥

ಶ್ರುತ್ವೇತಿ ಮದ್ವಚೋ ದೇವಾ ಮಾಂ ಪ್ರಣಮ್ಯ ಮುದಾ ಚ ತೇ ।
ಕೈಲಾಸಂ ಪ್ರಯಯುಃ ಶೀಘ್ರಂ ಶೈಲಾನಾಮಧಿಪಂ ಗಿರಿಂ ॥ ೨೪ ॥

ತತ್ರ ಗತ್ವಾ ಶಿವಂ ದೃಷ್ಟ್ವಾ ಪ್ರಣಮ್ಯ ನತಮಸ್ತಕಾಃ ।
ಸುಕೃತಾಂಜಲಯಸ್ಸರ್ವೇ ತುಷ್ಟುವುಸ್ತಂ ಸುರಾ ಹರಂ ॥ ೨೫ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ವಯಂ ತ್ವಾಂ ಶರಣಾಪನ್ನಾಃ ಕೃಪಾಂ ಕುರು ನಮೋಽಸ್ತು ತೇ ॥ ೨೬ ॥

ತ್ವಂ ಭಕ್ತವತ್ಸಲಃ ಸ್ವಾಮಿನ್ ಭಕ್ತಕಾರ್ಯಕರಸ್ಸದಾ ।
ದೀನೋದ್ಧರಃ ಕೃಪಾಸಿಂಧುರ್ಭಕ್ತಾಪದ್ವಿನಿಮೋಚಕಃ ॥ ೨೭ ॥

---

೨೩. ಆ ಶಿವನು ಹಿಮವಂತನ ಬಳಿಗೆ ಹೋಗಿ ತನ್ನ ನಿಂದೆಯನ್ನು ತಾನೇ ಮಾಡಲಿ, ಪರನಿಂದೆಯಿಂದ ನಾಶವುಂಟಾಗುವುದು. ಆದರೆ ಸ್ವನಿಂದೆಯಿಂದ ಯಶಸ್ಸುಂಟಾಗುವುದು ಎಂದೆನು.

೨೪-೨೫. ಹೀಗೆ ನಾನು ಹೇಳಿದ ಮಾತನ್ನು ಕೇಳಿ ದೇವತೆಗಳು ಸಂತೋಷಗೊಂಡು ನನಗೆ ನಮಸ್ಕರಿಸಿ ಆಕೂಡಲೇ ಪರ್ವತಶ್ರೇಷ್ಠವಾದ ಕೈಲಾಸಕ್ಕೆ ಹೋಗಿ ಅಲ್ಲಿ ಶಿವನನ್ನು ದರ್ಶನಮಾಡಿ ನಮಸ್ಕರಿಸಿ, ಶಿರವನ್ನು ಬಗ್ಗಿಸಿ ಕೈಮುಗಿದುಕೊಂಡು ಎಲ್ಲರೂ ಹೀಗೆ ಸ್ತುತಿಸಿದರು.

೨೬. ಓ ಮಹಾದೇವ, ನೀನು ದೇವದೇವನು, ಕರುಣಾಮಯನು, ಎಲ್ಲರಿಗೂ ಸುಖವನ್ನುಂಟುಮಾಡುವವನು. ಇಂತಹ ನಿನ್ನನ್ನು ನಾವು ಮರೆಹೊಕ್ಕಿರುವೆವು. ನಿನಗೆ ನಮಸ್ಕಾರವು.

೨೭. ಎಲೈ ಸ್ವಾಮಿಯೇ, ನೀನು ಭಕ್ತವತ್ಸಲನು. ಭಕ್ತರ ಕಾರ್ಯವನ್ನು ನೆರವೇರಿಸುವವನು. ದೀನರನ್ನುದ್ಧರಿಸುವವನು. ದಯಾಮಯನು. ಭಕ್ತರ ಆಪತ್ತನ್ನು ಹೋಗಲಾಡಿಸುವವನು ಎಂದು ಅನೇಕವಿಧವಾಗಿ ಸ್ತುತಿಸಿದರು.

॥ ಬ್ರಹ್ಮೋವಾಚ ॥

ಇತಿ ಸ್ತುತ್ವಾ ಮಹೇಶಾನಂ ಸರ್ವೇ ದೇವಾಸ್ಸವಾಸವಾಃ
ಸರ್ವಂ ನಿವೇದಯಾಂಚಕ್ರುಸ್ತದ್ವೃತ್ತಂ ತತ ಆದರಾತ್ ॥ ೨೮ ॥

ತಚ್ಛ್ರುತ್ವಾ ದೇವವಚನಂ ಸ್ವೀಚಕಾರ ಮಹೇಶ್ವರಃ ।
ದೇವಾನ್ ಸುಯಾಪಯಾಮಾಸ ತಾನಾಶ್ವಾಸ್ಯ ವಿಹಸ್ಯ ಸಃ ॥ ೨೯ ॥

ದೇವಾ ಮುಮುದಿರೇ ಸರ್ವೇ ಶೀಘ್ರಂ ಗತ್ವಾ ಸ್ವಮಂದಿರಂ ।
ಸಿದ್ಧಂ ಮತ್ವಾ ಸ್ವಕಾರ್ಯಂ ಹಿ ಪ್ರಶಂಸಂತಃ ಸದಾಶಿವಂ ॥ ೩೦ ॥

ತತಸ್ಸ ಭಗವಾನ್ ಶಂಭುರ್ಮಹೇಶೋ ಭಕ್ತವತ್ಸಲಃ ।
ಪ್ರಯಯೌ ಶೈಲಭೂಪಂ ಚ ಮಾಯೇಶೋ ನಿರ್ವಿಕಾರವಾನ್ ॥ ೩೧ ॥

ಯದಾ ಶೈಲಸ್ಸಭಾಮಧ್ಯೇ ಸಮುವಾಸ ಮುದಾನ್ವಿತಃ ।
ಬಂಧುವರ್ಗೈಃ ಪರಿವೃತಃ ಪಾರ್ವತೀಸಹಿತಃ ಸ್ವಯಂ ॥ ೩೨ ॥

---

೨೮. ಬ್ರಹ್ಮನು ಹೇಳಿದನು :—ಹೀಗೆ ಪರಮೇಶ್ವರನನ್ನು ಸ್ತುತಿಸಿ ದೇವತೆಗಳು ತಮ್ಮ ಅಭಿಪ್ರಾಯವನ್ನು ಅವನಿಗೆ ನಿವೇದಿಸಿದರು.

೨೯. ದೇವತೆಗಳ ಆ ಮಾತನ್ನು ಕೇಳಿ ಶಿವನು ನಕ್ಕು ಹಾಗೆಯೇ ಆಗಲೆಂದು ಅವರ ಮಾತನ್ನು ಅಂಗೀಕರಿಸಿ, ದೇವತೆಗಳನ್ನು ಸಮಾಧಾನಮಾಡಿ ಕಳುಹಿಸಿದನು.

೩೦. ಆಗ ದೇವತೆಗಳು ತುಂಬಾ ಹರ್ಷಗೊಂಡು ತಮ್ಮ ಕಾರ್ಯಸಿದ್ಧಿಯಾಯಿತೆಂದು ತಿಳಿದು ಶಿವನನ್ನು ಹೊಗಳುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೩೧. ಬಳಿಕ ಭಕ್ತವತ್ಸಲನೂ, ಮಾಯಾಮಯನೂ, ವಿಕಾರಗಳಿಲ್ಲದವನೂ ಆದ ಪರಮೇಶ್ವರು ಪರ್ವತರಾಜನಾದ ಹಿಮವಂತನ ಬಳಿಗೆ ಹೋದನು.

೩೨. ಹಿಮವಂತನು ಬಂಧುಗಳಿಂದಲೂ ಪಾರ್ವತಿಯಿಂದಲೂ ಕೂಡಿ ಸಭಾಮಧ್ಯದಲ್ಲಿ ಸಂತೋಷದಿಂದಿದ್ದನು. ಇಂತಹ ಸಮಯದಲ್ಲಿ ಶಿವನು ಅಲ್ಲಿಗೆ ಹೋದನು.

ಏತಸ್ಮಿನ್ನಂತರೇ ತತ್ರ ಹ್ಯಾಜಗಾಮ ಸದಾಶಿವಃ ।
ದಂಡೀ ಛತ್ರೀ ದಿವ್ಯವಾಸಾ ಬಿಭ್ರತ್ತಿಲಕಮುಜ್ಜ್ವಲಂ ॥ ೩೩ ॥

ಕರೇ ಸ್ಫಟಿಕಮಾಲಾಂ ಚ ಶಾಲಗ್ರಾಮಂ ಗಲೇ ದಧತ್ ।
ಜಪರ್ ನಾಮ ಹರೇರ್ಭಕ್ತ್ಯಾ ಸಾಧುವೇಷಧರೋ ದ್ವಿಜಃ ॥ ೩೪ ॥

ತಂ ಚ ದೃಷ್ಟ್ವಾ ಸಮುತ್ತಸ್ಥೌ ಸಗಣೋಽಪಿ ಹಿಮಾಲಯಃ ।
ನನಾಮ ದಂಡವದ್ಭೂಮೌ ಭಕ್ತ್ಯಾತಿಥಿಮಪೂರ್ವಕಂ ॥ ೩೫ ॥

ನನಾಮ ಪಾರ್ವತೀ ಭಕ್ತ್ಯಾ ಪ್ರಾಣೇಶಂ ವಿಪ್ರರೂಪಿಣಂ ।
ಜ್ಞಾತ್ವಾ ತಂ ಮನಸಾ ದೇವೀ ತುಷ್ಟಾವ ಪರಯಾ ಮುದಾ ॥ ೩೬ ॥

ಆಶಿಷಂ ಯುಯುಜೇ ವಿಪ್ರಸ್ಸರ್ವೇಷಾಂ ಪ್ರೀತಿತಃ ಶಿವಃ ।
ಶಿವಾಯಾ ಅಧಿಕಂ ತಾತ ಮನೋಭಿಲಷಿತಂ ಹೃದಾ ॥ ೩೭ ॥

---

೩೩-೩೪. ಆಗ ಸದಾಶಿವನು ಬ್ರಾಹ್ಮಣರೂಪವನ್ನು ಧರಿಸಿದ್ದು ಕೈಗಳಲ್ಲಿ ದಂಡ ಮತ್ತು ಛತ್ರಿ (ಕೊಡೆ) ಗಳನ್ನು ಹಿಡಿದಿದ್ದನು. ದಿವ್ಯವಾದ ಬಟ್ಟೆಯನ್ನುಟ್ಟಿದ್ದನು. ಸುಂದರವಾದ ತಿಲಕವನ್ನಿಟ್ಟಿದ್ದನು. ಕೈಯಲ್ಲಿ ಸ್ಫಟಿಕಸರವನ್ನೂ ಕತ್ತಿನಲ್ಲಿ ಸಾಲಿಗ್ರಾಮವನ್ನೂ ಧರಿಸಿದ್ದನು. ಭಕ್ತಿಯಿಂದ ಹರಿನಾಮವನ್ನು ಜಪಿಸುತ್ತಾ ಹಿಮವಂತನ ಸಭೆಯನ್ನು ಪ್ರವೇಶಿಸಿದನು.

೩೫. ಇಂತಹ ತೇಜಸ್ವಿಯಾದ ಹೊಸ ಅತಿಥಿಯನ್ನು ನೋಡಿ ಹಿಮವಂತನು ಕೂಡಲೇ ಪರಿವಾರದೊಡನೆ ಮೇಲೆದ್ದು, ದಂಡದಂತೆ ಉದ್ದಕ್ಕೆ ಅಡ್ಡಬಿದ್ದು ಭಕ್ತಿಯಿಂದ ನಮಸ್ಕರಿಸಿದನು.

೩೬. ಪಾರ್ವತಿಯು ಆ ಬ್ರಾಹ್ಮಣನನ್ನು ವಿಪ್ರರೂಪವನ್ನು ಧರಿಸಿಬಂದ ತನ್ನ ಪ್ರಾಣಕಾಂತನೆಂದು ತಿಳಿದು ಸಂತೋಷದಿಂದ ಮನಸ್ಸಿನಲ್ಲಿಯೇ ಸ್ತುತಿಸಿದಳು.

೩೭. ಆ ಬ್ರಾಹ್ಮಣನು ಪ್ರೀತಿಯಿಂದ ಎಲ್ಲರನ್ನೂ ಆಶೀರ್ವದಿಸಿದನು. ಆದರೆ ಪಾರ್ವತಿಗೆ ಇಷ್ಟವಾದಂತಹ ಆಶೀರ್ವಾದವನ್ನು ಮನಸ್ಸಿನಲ್ಲಿ ಮಾಡಿದನು.

ಮಧುಪರ್ಕಾದಿಕಂ ಸರ್ವಂ ಜಗ್ರಾಹ ಬ್ರಾಹ್ಮಣೋ ಮುದಾ ।
ದತ್ತಂ ಶೈಲಾಧಿರಾಜೇನ ಹಿಮಾಗೇನ ಮಹಾದರಾತ್ ॥ ೩೮ ॥

ಪಪ್ರಚ್ಛ ಕುಶಲಂ ಚಾಸ್ಯ ಹಿಮಾದ್ರಿಃ ಪರ್ವತೋತ್ತಮಃ ।
ತಂ ದ್ವಿಜೇಂದ್ರಂ ಮಹಾಪ್ರೀತ್ಯಾ ಸಂಪೂಜ್ಯ ವಿಧಿವನ್ಮನೇ ॥ ೩೯ ॥

ಪುನಃ ಪಪ್ರಚ್ಛ ಶೈಲೇಶಸ್ತಂ ತತಃ ಕೋ ಭವಾನಿತಿ ।
ಉವಾಚ ಶೀಘ್ರಂ ವಿಪ್ರೇಂದ್ರೋ ಗಿರೀಂದ್ರಂ ಸಾದರಂ ವಚಃ ॥ ೪೦ ॥

॥ ವಿಪ್ರ ಉವಾಚ ॥

ಬ್ರಾಹ್ಮಣೋಽಹಂ ಗಿರಿಶ್ರೇಷ್ಠ ವೈಷ್ಣವೋ ಬುಧಸತ್ತಮಃ ।
ಘಟಕೀಂ ವೃತ್ತಿಮಾಶ್ರಿತ್ಯ ಭ್ರಮಾಮಿ ಧರಣೀತಲೇ ॥ ೪೧ ॥

ಮನೋಯಾಯೀ ಸರ್ವಗಾಮೀ ಸರ್ವಜ್ಞೋಽಹಂ ಗುರೋರ್ಬಲಾತ್ ।
ಪರೋಪಕಾರೀ ಶುದ್ಧಾತ್ಮಾ ದಯಾಸಿಂಧುರ್ವಿಕಾರಹಾ ॥ ೪೨ ॥

---

೩೮. ಹಿಮವಂತನು ಆದರದಿಂದ ಮಧುಪರ್ಕ ಮುಂತಾದುವನ್ನು ಆ ಬ್ರಾಹ್ಮಣನಿಗೆ ಅರ್ಪಿಸಿದನು.

೩೯. ಹಿಮವಂತನು ಪ್ರೀತಿಯಿಂದ ಆ ಬ್ರಾಹ್ಮಣೋತ್ತಮನನ್ನು ವಿಧಿವತ್ತಾಗಿ ಪೂಜಿಸಿ, ಅವನನ್ನು ಕುರಿತು ಕುಶಲಪ್ರಶ್ನೆ ಮಾಡಿದನು. ಎಲೈ ವಿಪ್ರನೇ, ನೀನು ಯಾರು ?

೪೦. ಇಲ್ಲಿಗೆ ಬಂದ ಕಾರ್ಯವೇನು? ದಯವಿಟ್ಟು ತಿಳಿಸು ಎಂದು ಮುಂತಾಗಿ ಕೇಳಲು ಬ್ರಾಹ್ಮಣನಿಂತೆಂದನು.

೪೧. ಎಲೈ ಪರ್ವತರಾಜನೆ, ನಾನು ವೈಷ್ಣವಬ್ರಾಹ್ಮಣನು. ತಕ್ಕಮಟ್ಟಿಗೆ ವಿದ್ಯಾಭ್ಯಾಸಮಾಡಿರುತ್ತೇನೆ. ಭಿಕ್ಷಾವೃತ್ತಿಯನ್ನವಲಂಬಿಸಿ ಊರಿಂದ ಊರಿಗೆ ಸಂಚರಿಸುತ್ತಲಿದ್ದೇನೆ.

೪೨. ಗುರುಗಳ ಅನುಗ್ರಹದಿಂದ ನಾನು ಯಾವಕಡೆಗೆ ಬೇಕೆಂದರೆ ಆಕಡೆಗೆ ಹೋಗಬಲ್ಲ ಶಕ್ತಿಯುಳ್ಳವನಾಗಿರುತ್ತೇನೆ. ಎಲ್ಲವನ್ನೂ ತಿಳಿಯಬಲ್ಲ ಶಕ್ತಿಯು ನನಗಿರುತ್ತದೆ. ನಾನು ಪರೋಪಕಾರಿಯು, ಪರಿಶುದ್ಧನು, ದಯಾಮಯನು, ವಿಕಾರಗಳಿಗೆ ಒಳಪಡತಕ್ಕವನಲ್ಲ.

ಮಯಾ ಜ್ಞಾತಂ ಹರಾಯ ತ್ವಂ ಸ್ವಸುತಾಂ ದಾತುಮಿಚ್ಛಸಿ ।
ಇಮಾಂ ಪದ್ಮಸಮಾಂ ದಿವ್ಯಾಂ ವರರೂಪಾಂ ಸುಲಕ್ಷಣಾಂ ॥ ೪೩ ॥

ನಿರಾಶ್ರಯಾಯಾಸಂಗಾಯ ಕುರೂಪಾಯಾಗುಣಾಯ ಚ ।
ಶ್ಮಶಾನವಾಸಿನೇ ವ್ಯಾಲಗ್ರಾಹಿರೂಪಾಯ ಯೋಗಿನೇ ॥ ೪೪ ॥

ದಿಗ್ವಾಸಸೇ ಕುಗಾತ್ರಾಯ ವ್ಯಾಲಭೂಷಣಧಾರಿಣೇ ।
ಅಜ್ಞಾತಕುಲಾನಾಮ್ನೇ ಚ ಕುಶೀಲಾಯಾವಿಹಾರಿಣೇ ॥ ೪೫ ॥

ವಿಭೂತಿದಿಗ್ಧದೇಹಾಯ ಸಂಕ್ರುದ್ಧಾಯಾವಿವೇಕಿನೇ ।
ಅಜ್ಞಾತವಯಸೇಽತೀವ ಕುಜಟಾಧಾರಿಣೇ ಸದಾ ॥ ೪೬ ॥

ಸರ್ವಾಶ್ರಯಾಯ ಭ್ರಮಿಣೇ ನಾಗಹಾರಾಯ ಭಿಕ್ಷವೇ ।
ಕುಮಾರ್ಗನಿರತಾಯಾಥ ವೇದಾಧ್ವತ್ಯಾಗಿನೇ ಹಠಾತ್ ॥ ೪೭ ॥

---

೪೩. ಕಮಲದಂತೆ ಮನೋಹರಿಯೂ, ಸುಂದರಳೂ, ಸುಲಕ್ಷಣಳೂ ಆದ ಈ ನಿನ್ನ ಪುತ್ರಿಯನ್ನು ಶಿವನಿಗೆ ಮದುವೆಮಾಡಿಕೊಡಲಪೇಕ್ಷೆಯುಳ್ಳವನೆಂದು ಜ್ಞಾನ ದೃಷ್ಟಿಯಿಂದ ತಿಳಿದೆನು.

೪೪. ಆ ಶಿವನಿಗೆ ಆಶ್ರಯವಿಲ್ಲ, ಸಹವಾಸ ಸಂಬಂಧಗಳಿಲ್ಲ, ಅವನು ಕುರೂಪಿಯು, ಗುಣಗಳಿಲ್ಲದವನು, ಶ್ಮಸಾನದಲ್ಲಿ ಅವನ ವಾಸವು, ಹಾವುಗಳನ್ನು ಧರಿಸುವನು, ಸಂಸಾರದಲ್ಲಿ ಆಸಕ್ತಿಯಿಲ್ಲದ ಯೋಗಿಯು.

೪೫. ಮತ್ತು ಆ ಶಿವನು ದಿಗಂಬರನು, ಕೆಟ್ಟ ಶರೀರವುಳ್ಳವನು, ಸರ್ಪಗಳೇ ಅವನಿಗಾಭರಣ, ಅವನ ಕುಲವಾವುದೋ ಗೊತ್ತಿಲ್ಲ, ಶೀಲವೂ ಚನ್ನಾಗಿಲ್ಲ, ವಿಹಾರವೇ ಅವನಿಗಿಲ್ಲ.

೪೬. ಆ ಶಿವನು ಸದಾ ಮೈಗೆ ಬೂದಿಯನ್ನು ಬಳಿದುಕೊಳ್ಳುವನು. ಬಹು ಕೋಪಿಷ್ಠನು, ಅವಿವೇಕಿಯು. ಅವನ ವಯಸ್ಸೇ ತಿಳಿಯದು, ಹೊಲಸಾದ ಜಟೆಯನ್ನು ಧರಿಸಿರುವನು.

೪೭. ಆ ಶಿವನು ಊರುತುಂಬ ಅಲೆಯುವನು, ಸರ್ಪವೇ ಅವನ ಹಾರವು, ಭಿಕ್ಷುಕನವನು. ವೇದಮಾರ್ಗವನ್ನು ಬಿಟ್ಟು ಹಠದಿಂದ ಕೆಟ್ಟ ಮಾರ್ಗವನ್ನು ಹಿಡಿದಿರುವನು.

ಇಯಂ ತೇ ಬುದ್ಧಿರಚಲ ನ ಹಿ ಮಂಗಲದಾ ಖಲು ।
ವಿಬೋಧ ಜ್ಞಾನಿನಾಂ ಶ್ರೇಷ್ಠ ನಾರಾಯಣಕುಲೋದ್ಭವ ॥ ೪೮ ॥

ನ ತೇ ಪಾತ್ರಾನುರೂಪಶ್ಚ ಪಾರ್ವತೀದಾನಕರ್ಮಣಿ ।
ಮಹಾಜನಃ ಸ್ಮೇರಮುಖಃ ಶ್ರುತಮಾತ್ರಾದ್ಭವಿಷ್ಯತಿ ॥ ೪೯ ॥

ಪಶ್ಯ ಶೈಲಾಧಿಪ ತ್ವಂ ಚ ನ ತಸ್ಯೈಕೋಽಸ್ತಿ ಬಾಂಧವಃ ।
ಮಹಾರತ್ನಾಕರಸ್ತ್ವಂ ಚ ತಸ್ಯ ಕಿಂಚಿದ್ಧನಂ ನ ಹಿ ॥ ೫೦ ॥

ಬಾಂಧವಾನ್ ಮೇನಕಾಂ ಕುಧ್ರಪತೇ ಶೀಘ್ರಂ ಸುತಾನ್ ತಥಾ ।
ಸರ್ವಾನ್ ಪೃಚ್ಛ ಪ್ರಯತ್ನೇನ ಪಂಡಿತಾನ್ ಪಾರ್ವತೀಂ ವಿನಾ ॥ ೫೧ ॥

ರೋಗಿಣೋ ನೌಷಧಂ ಶಶ್ವದ್ರೋಚತೇ ಗಿರಿಸತ್ತಮ ।
ಕುಪಥ್ಯಂ ರೋಚತೇಽಭೀಕ್ಷ್ಣಂ ಮಹಾದೋಷಕರಂ ಸದಾ ॥ ೫೨ ॥

---

೪೮. ಎಲೈ ಪರ್ವತರಾಜನೆ, ನೀನು ವಿಷ್ಣುವಂಶದಲ್ಲಿ ಜನಿಸಿದವನು, ಮಹಾ ಜ್ಞಾನಿಯು, ನೀನೇ ಯೋಚನೆಮಾಡು. ಈ ನಿನ್ನ ಬುದ್ಧಿಯು ಸರಿಯಾದುದಲ್ಲ.

೪೯. ಪಾರ್ವತಿಯನ್ನು ಪರಿಗ್ರಹಿಸಲು ಆ ಶಿವನು ಯೋಗ್ಯನೂ ಅಲ್ಲ. ಈಶ್ವರನು ಪಾರ್ವತಿಯನ್ನು ಪರಿಗ್ರಹಿಸಿದನ್ನು ಕೇಳಿದರೆ ತಿಳಿದವರು ಪರಿಹಾಸ ಮಾಡುವರು.

೫೦. ಓ ಗಿರಿರಾಜ, ನೀನೇ ಯೋಚಿಸಿನೋಡು. ಆ ಶಿವನಿಗೆ ಒಬ್ಬನೂ ಬಂಧುವಿಲ್ಲ. ನೀನಾದರೋ ಬೇಕುಬೇಕಾದ ರತ್ನಗಳುಳ್ಳವನು. ಆ ಶಿವನಿಗೆ ಸ್ವಲ್ಪವೂ ಧನವಿಲ್ಲ, ಬಹು ದರಿದ್ರನು.

೫೧-೫೨. ಈಗ ನೀನು ಈ ಮದುವೆಯ ವಿಷಯದಲ್ಲಿ ನಿನ್ನ ಬಂಧುಗಳು ಹೆಂಡತಿ, ಮಕ್ಕಳು, ಗುರುಹಿರಿಯರು, ಪಂಡಿತರು ಮುಂತಾದವರನ್ನು ಕೇಳು. ಆದರೆ ಪಾರ್ವತಿಯನ್ನು ಮಾತ್ರ ಕೇಳಬೇಕಾದುದಿಲ್ಲ. ಏಕೆಂದರೆ ರೋಗಿಗೆ ಔಷಧವು ಸೇರುವುದಿಲ್ಲವಷ್ಟೆ? ಆದರೆ ಅಪಥ್ಯವು ಚೆನ್ನಾಗಿ ಸೇರುತ್ತದೆ. ಆ ಅಪಥ್ಯದಿಂದ ಮಹಾ ದೋಷವೇ ಉಂಟಾಗುವುದು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಬ್ರಾಹ್ಮಣಃ ಶೀಘ್ರಂ ಸ ವೈ ಭುಕ್ತ್ವಾ ಮುದಾನ್ವಿತಃ ।
ಜಗಾಮ ಸ್ವಾಲಯಂ ಶಾಂತೋ ನಾನಾಲೀಲಾಕರಃ ಶಿವಃ ॥ ೫೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಏಕತ್ರಿಂಶೋಽಧ್ಯಾಯಃ



೫೩. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಬ್ರಾಹ್ಮಣವೇಷಧಾರಿಯಾದ ಲೀಲಾಮಯನಾದ ಶಿವನು ಸಮಾಧಾನದಿಂದ ಕೈಲಾಸಕ್ಕೆ ತೆರಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ದ್ವಾತ್ರಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಬ್ರಾಹ್ಮಣಸ್ಯ ವಚಃ ಶ್ರುತ್ವಾ ಮೇನೋವಾಚ ಹಿಮಾಲಯಂ ।
ಶೋಕೇನ ಸಾಶ್ರುನಯನಾ ಹೃದಯೇನ ವಿದೂಯತಾ ॥ ೧ ॥

॥ ಮೇನೋವಾಚ ॥

ಶೃಣು ಶೈಲೇಂದ್ರ ಮದ್ವಾಕ್ಯಂ ಪರಿಣಾಮೇ ಸುಖಾವಹಂ ।
ಪೃಚ್ಛ ಶೈವವರಾನ್ ಸರ್ವಾನ್ ಕಿಮುಕ್ತಂ ಬ್ರಾಹ್ಮಣೇನ ಹ ॥ ೨ ॥

ನಿಂದಾನೇನ ಕೃತಾ ಶಂಭೋರ್ವೈಷ್ಣವೇನ ದ್ವಿಜನ್ಮನಾ ।
ಶ್ರುತ್ವಾ ತಾಂ ಮೇ ಮನೋಽತೀವ ನಿರ್ವಿಣ್ಣಂ ಹಿ ನಗೇಶ್ವರ ॥ ೩ ॥

---

### ಮೂವತ್ತೆರಡನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು:—ಎಲೈ ನಾರದ, ಬ್ರಾಹ್ಮಣನ ಮಾತುಗಳನ್ನು ಕೇಳಿ ಮೇನಾದೇವಿಯು ತುಂಬಾ ವ್ಯಥೆಗೊಂಡು ಹಿಮವಂತನನ್ನು ಕುರಿತು ಓ ಪರ್ವತರಾಜ, ನನ್ನ ಮಾತನ್ನು ಕೇಳು. ಆ ಮಾತು ಈಗ ಅಹಿತವಾಗಿದ್ದರೂ ಕೊನೆಯಲ್ಲಿ ಸುಖದಾಯಕವೇ ಆಗುವುದು. ಈ ಬ್ರಾಹ್ಮಣನು ಹೇಳಿದ ವಿಷಯದಲ್ಲಿ ಎಲ್ಲಾ ಶೈವರನ್ನೂ ಕೇಳು.

೩. ಈ ವೈಷ್ಣವಬ್ರಾಹ್ಮಣನು ಶಂಕರನನ್ನು ನಿಂದಿಸಿರುವನು. ಅದನ್ನು ಕೇಳಿ ನನ್ನ ಮನಸ್ಸಿಗೆ ತುಂಬಾ ವ್ಯಥೆಯಾಗಿದೆ.

ತಸ್ಮೈ ರುದ್ರಾಯ ಶೈಲೇಶ ನ ದಾಸ್ಯಾಮಿ ಸುತಾಮಹಂ ।
ಕುರೂಪಶೀಲನಾಮ್ನೇ ಚ ಸುಲಕ್ಷಣಯುತಾಂ ನಿಜಾಂ ॥ ೪ ॥

ನ ಮನ್ಯಸೇ ವಚಶ್ಚೇನ್ಮೇ ಮರಿಷ್ಯಾಮಿ ನ ಸಂಶಯಃ ।
ತ್ಯಕ್ಷ್ಯಾಮಿ ವಾ ಗೃಹಂ ಸದ್ಯೋ ಭಕ್ಷಯಿಷ್ಯಾಮಿ ವಾ ವಿಷಂ ॥ ೫ ॥

ಗಲೇ ಬಧ್ವಾಂಬಿಕಾಂ ರಜ್ಜ್ವಾ ಯಾಸ್ಯಾಮಿ ಗಹನಂ ವನಂ ।
ಮಹಾಂಬುಧೌ ಮಜ್ಜಯಿಷ್ಯೇ ತಸ್ಮೈ ದಾಸ್ಯಾಮಿ ನೋ ಸುತಾಂ ॥ ೬ ॥

ಇತ್ಯುಕ್ತ್ವಾಽಽಶು ತದಾ ಗತ್ವಾ ಮೇನಾ ಕೋಪಾಲಯಂ ಶುಚಾ ।
ತ್ಯಕ್ತ್ವಾಽಽಹಾರಂ ರುದಂತೀ ಸಾ ಚಕಾರ ಶಯನಂ ಭುವಿ ॥ ೭ ॥

ಏತಸ್ಮಿನ್ನಂತರೇ ತಾತ ಶಂಭುನಾ ಸಪ್ತ ಏವ ತೇ ।
ಸಂಸ್ಮೃತಾ ಋಷಯಸ್ಸದ್ಯೋ ವಿರಹವ್ಯಾಕುಲಾತ್ಮನಾ ॥ ೮ ॥

---

೪. ಕುರೂಪಿಯೂ ದುಶ್ಶೀಲನೂ ಆದಂತಹ ರುದ್ರನಿಗೆ ಸುಲಕ್ಷಣವತಿಯಾದ ಪುತ್ರಿಯನ್ನು ಹೇಗೆ ತಾನೇ ಕೊಡಲಿ?

೫. ನನ್ನ ಮಾತನ್ನು ನೀನು ಕೇಳದೇ ಹೋದರೆ ಖಂಡಿತ ನಾನು ಪ್ರಾಣ ತ್ಯಾಗಮಾಡುವೆನು. ಇಲ್ಲವೆ ಮನೆಯನ್ನು ಬಿಟ್ಟುಹೋಗುವೆನು. ಅಥವಾ ವಿಷ ವನ್ನಾದರೂ ಕುಡಿಯುವೆನು.

೬. ಪಾರ್ವತಿಯನ್ನು ಕತ್ತಿಗೆ ಕಟ್ಟಿಕೊಂಡು ಘೋರಾರಣ್ಯಕ್ಕೆ ತೆರಳುವೆನು. ಇಲ್ಲವೆ ಸಮುದ್ರದಲ್ಲಿ ಮುಳುಗುವೆನು ಅಂತೂ ರುದ್ರನಿಗೆ ಕನ್ಯೆಯನ್ನು ಕೊಡ ಲಾರೆನು.

೭. ಹೀಗೆ ಕೋಪದಿಂದ ಹೇಳಿ ಮೇನಾದೇವಿಯು ಮನೆಗೆ ಹೋಗಿ ಶೋಕ ದಿಂದ ಆಹಾರವನ್ನು ಬಿಟ್ಟು ಬರಿಯ ನೆಲದಮೇಲೆ ಮಲಗಿದಳು.

೮-೯. ಈ ಮಧ್ಯದಲ್ಲಿ ವಿರಹದುಃಖಿತನಾದ ಶಿವನು ಸಪ್ತಋಷಿಗಳನ್ನು

ಋಷಯಶ್ಚೈವ ತೇ ಸರ್ವೇ ಶಂಭುನಾ ಸಂಸ್ಮೃತಾ ಯದಾ ।
ತದಾಽಽಜಗ್ಮುಃ ಸ್ವಯಂ ಸದ್ಯಃ ಕಲ್ಪವೃಕ್ಷಾ ಇವಾಪರೇ ॥ ೯ ॥

ಅರುಂಧತೀ ತಥಾಽಽಯಾತಾ ಸಾಕ್ಷಾತ್ಸಿದ್ಧಿರಿವಾಪರಾ ।
ತಾಂ ದೃಷ್ಟ್ವಾ ಸೂರ್ಯಸಂಕಾಶಾಂ ವಿಜಹೌ ಸ್ವಜಪಂ ಹರಃ ॥ ೧೦ ॥

ಸ್ಥಿತ್ವಾಽಽಗ್ರೇ ಋಷಯಃ ಶ್ರೇಷ್ಠ ನತ್ವಾ ಸ್ತುತ್ವಾ ಶಿವಂ ಮುನೇ ।
ಮೇನಿರೇ ಚ ತದಾತ್ಮಾನಂ ಕೃತಾರ್ಥಂ ತೇ ತಪಸ್ವಿನಃ ॥ ೧೧ ॥

ತತೋ ವಿಸ್ಮಯಮಾಪನ್ನಾ ನಮಸ್ಕೃತ್ಯ ಸ್ಥಿತಾಃ ಪುನಃ ।
ಪ್ರೋಚುಃ ಪ್ರಾಂಜಲಯಸ್ತೇ ವೈ ಶಿವಂ ಲೋಕನಮಸ್ಕೃತಂ ॥ ೧೨ ॥

॥ ಋಷಯ ಊಚುಃ ॥

ಸರ್ವೋತ್ಕೃಷ್ಟ ಮಹಾರಾಜ ಸಾರ್ವಭೌಮ ದಿವೌಕಸಾಂ ।
ಸ್ವಭಾಗ್ಯಂ ವರ್ಣ್ಯತೇಽಸ್ಮಾಭಿಃ ಕಿಂ ಪುನಃ ಸಕಲೋತ್ತಮಂ ॥ ೧೩ ॥

---

ಸ್ಮರಿಸಿದನು. ಶಿವನು ಸ್ಮರಿಸಿದೊಡನೆಯೇ ಸಪ್ತಋಷಿಗಳೂ ಸಹ ಕಲ್ಪವೃಕ್ಷಗಳಂತೆ ಶಂಕರನ ಬಳಿಗೆ ಬಂದರು.

೧೦. ಎರಡನೇ ಸಿದ್ಧಿಲಕ್ಷ್ಮಿಯಂತಿರುವ ಅರುಂಧತಿಯೂ ಸಹ ಶಂಕರನ ಬಳಿಗೆ ಬಂದಳು. ಹೀಗೆ ಬಂದಿರತಕ್ಕ ಸಪ್ತಋಷಿಗಳನ್ನು ನೋಡಿ ಶಂಕರನು ತನ್ನ ಚಿಂತೆಯನ್ನು ಬಿಟ್ಟನು.

೧೧. ಆ ಸಪ್ತಋಷಿಗಳು ಶಂಕರನೆದುರಿಗೆ ಬಂದು ಅವನನ್ನು ನಮಸ್ಕರಿಸಿ ಭಕ್ತಿಯಿಂದ ಸ್ತುತಿಸಿ, ತಾವು ಕೃತಾರ್ಥರಾದೆವೆಂದು ತಿಳಿದುಕೊಂಡರು.

೧೨-೧೩. ಬಳಿಕ ಆ ಋಷಿಗಳು ಲೋಕವಂದ್ಯನಾದ ಪರಮೇಶ್ವರನನ್ನು ಮತ್ತೊಮ್ಮೆ ನಮಸ್ಕರಿಸಿ ಅಂಜಲಿಯನ್ನು ಧರಿಸಿ ಆಶ್ಚರ್ಯದಿಂದ ಓ ಪರಮೇಶ್ವರ, ನೀನು ಸರ್ವೋತ್ಕೃಷ್ಟನು. ಮಹಾರಾಜನು, ದೇವಚಕ್ರವರ್ತಿಯು, ಇಂತಹ ನಿನ್ನ ದರ್ಶನವನ್ನು ಮಾಡಿದ ನಮ್ಮ ಭಾಗ್ಯವನ್ನು ಎಷ್ಟು ಹೊಗಳಿಕೊಂಡರೂ ಸಾಲದು.

ತಪಸ್ತಪ್ತಂ ತ್ರಿಧಾ ಪೂರ್ವಂ ವೇದಾಧ್ಯಯನಮುತ್ತಮಂ ।
ಅಗ್ನಯಶ್ಚ ಹುತಾಃ ಪೂರ್ವಂ ತೀರ್ಥಾನಿ ವಿವಿಧಾನಿ ಚ ॥ ೧೨ ॥

ವಾಙ್ಮನಃಕಾಯಜಂ ಕಿಂಚಿತ್ಪುಣ್ಯಂ ಸ್ಮರಣಸಂಭವಂ ।
ತತ್ಸರ್ವಂ ಸಂಗತಂ ಚಾದ್ಯ ಸ್ಮರಣಾನುಗ್ರಹಾತ್ತವ ॥ ೧೩ ॥

ಸರ್ವೋತ್ಕೃಷ್ಟಾ ವಯಂ ಜಾತಾಃ ಸ್ಮರಣಾತ್ತೇ ಸದಾಶಿವ ।
ಮನೋರಥಪಥಂ ನೈವ ಗಚ್ಛಸಿ ತ್ವಂ ಕಥಂಚನ ॥ ೧೪ ॥

ಯೋ ವೈ ಭಜತಿ ನಿತ್ಯಂ ತ್ವಾಂ ಕೃತಕೃತ್ಯೋ ಭವೇನ್ನರಃ ।
ಕಿಂ ಪುಣ್ಯಂ ವರ್ಣ್ಯತೇ ತೇಷಾಂ ಯೇಷಾಂ ಚ ಸ್ಮರಣಂ ತವ ॥ ೧೫ ॥

ವಾಮನಸ್ಯ ಫಲಂ ಯದ್ವಜ್ಜನ್ಮಾಂಧಸ್ಯ ದೃಶೌ ತಥಾ ।
ವಾಚಾಲತ್ವಂ ಚ ಮೂಕಸ್ಯ ರಂಕಸ್ಯ ನಿಧಿದರ್ಶನಂ ॥ ೧೬ ॥

ಪಂಗೋರ್ಗಿರಿವರಾಕ್ರಾಂತಿರ್ವಂಧ್ಯಾಯಾಃ ಪ್ರಸವಸ್ತಥಾ ।
ದರ್ಶನಂ ಭವತಸ್ತದ್ವಜ್ಜಾತಂ ನೋ ದುರ್ಲಭಂ ಪ್ರಭೋ ॥ ೧೭ ॥

---

೧೨-೧೩. ಶರೀರ ವಾಕ್ಕು ಮನಸ್ಸು ಈ ಮೂರು ಕಾರಣಗಳಿಂದ ನಾವು ಮಾಡಿದ ತಪಸ್ಸು ನಮ್ಮ ವೇದಾಧ್ಯಯನ, ಅಗ್ನಿಹೋತ್ರ ಮತ್ತು ಯಾಗಗಳು. ತೀರ್ಥಯಾತ್ರೆ, ಧ್ಯಾನ ಇವೆಲ್ಲವೂ ಸಹ ನಿನ್ನ ಈ ಸ್ಮರಣಾನುಗ್ರಹದಿಂದ ಸಾರ್ಥಕವಾದುವು.

೧೪. ಓ ಸದಾಶಿವ, ನೀನು ಸಾಮಾನ್ಯರ ಮನೋರಥಕ್ಕೆ ಸಿಲುಕದವನು. ಇಂತಹ ನೀನು ನಮ್ಮನ್ನು ಸ್ಮರಿಸಿದುದರಿಂದ ನಾವು ಕೃತಾರ್ಥರಾದೆವು.

೧೫. ನಿತ್ಯವೂ ನಿನ್ನನ್ನು ಭಜಿಸುವ ನರನೂ ಕೃತಕೃತ್ಯನಾಗುವನು. ಹೀಗಿರಲು ನಿನ್ನ ಸ್ಮರಣೆಗೇ ವಿಷಯರಾದವರ ಪುಣ್ಯವನ್ನು ವರ್ಣಿಸಲು ಸಾಧ್ಯವೇ ?

೧೬-೧೭. ಕುಳ್ಳನಿಗೆ ಎತ್ತರವಾದ ಮರದಲ್ಲಿರುವ ಹಣ್ಣು, ಹುಟ್ಟುಕುರುಡನಿಗೆ ಕಣ್ಣುಗಳು, ಮೂಕನಿಗೆ ಮಾತುಗಾರಿಕೆ, ದುರ್ದೈವಿಯಾದ ದರಿದ್ರನಿಗೆ ನಿಧಿಯ ದರ್ಶನ, ಕುಂಟನಿಗೆ ಗಿರಿಶಿಖರಪ್ರಾಪ್ತಿ, ಹುಟ್ಟುಬಂಜೆಗೆ ಮಕ್ಕಳಾಗುವಿಕೆ - ಇವುಗಳು ಹೇಗೆ ದುರ್ಲಭಗಳೋ ಅದರಂತೆ ಸಾಮಾನ್ಯಜನರಿಗೆ ನಿನ್ನ ದರ್ಶನವೂ ದುರ್ಲಭವು. ಇಂತಹ ದರ್ಶನವು ಈಗ ನಮಗೆ ಲಭಿಸಿದೆ.

ಅದ್ಯಪ್ರಭೃತಿ ಲೋಕೇಷು ಮಾನ್ಯಾಃ ಪೂಜ್ಯಾ ಮುನೀಶ್ವರಾಃ ।
ಜಾತಾಸ್ತೇ ದರ್ಶನಾದೇವ ಸಮುಚ್ಛ್ರೈಃ ಪದಮಾಶ್ರಿತಾಃ ॥ ೨೦ ॥

ಅತ್ರ ಕಿಂ ಬಹುನೋಕ್ತೇನ ಸರ್ವಥಾ ಮಾನ್ಯತಾಂ ಗತಾಃ ।
ದರ್ಶನಾತ್ತವ ದೇವೇಶ ಸರ್ವದೇವೇಶ್ವರಸ್ಯ ಹಿ ॥ ೨೧ ॥

ಪೂರ್ಣಾನಾಂ ಕಿಂಚ ಕರ್ತವ್ಯಮಸ್ತಿ ಚೇತ್ಪರಮಾ ಕೃಪಾ ।
ಸದೃಶಂ ಸೇವಕಾನಾಂ ತು ದೇಯಂ ಕಾರ್ಯಂ ತ್ವಯಾ ಶುಭಂ ॥ ೨೨ ॥

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಶ್ರುತ್ವಾ ತೇಷಾಂ ಶಂಭುರ್ಮಹೇಶ್ವರಃ ।
ಲೌಕಿಕಾಽಽಚಾರಮಾಶ್ರಿತ್ಯ ರಮ್ಯಂ ವಾಕ್ಯಮುಪಾದದೇ ॥ ೨೩ ॥

॥ ಶಿವ ಉವಾಚ ॥

ಋಷಯಶ್ಚ ಸದಾ ಪೂಜ್ಯಾ ಭವಂತಶ್ಚ ವಿಶೇಷತಃ ।
ಯುಷ್ಮಾಕಂ ಕಾರಣಾದ್ವಿಪ್ರಾಃ ಸ್ಮರಣಂ ಚ ಮಯಾ ಕೃತಂ ॥ ೨೪ ॥

---

೨೦. ಇದು ಮೊದಲುಗೊಂಡು ನಿನ್ನ ದರ್ಶದಿಂದ ಮುನಿಗಳು ಲೋಕದಲ್ಲಿ ಮಾನ್ಯರೂ ಪೂಜ್ಯರೂ ಆದರು. ಉನ್ನತವಾದ ಸ್ಥಾನವನ್ನೂ ಪಡೆದರು.

೨೧. ಹೆಚ್ಚು ಹೇಳಿಯೇನು? ಓ ದೇವೇಶ, ದೇವದೇವನಾದ ನಿನ್ನ ದರ್ಶನದಿಂದ ನಾವೆಲ್ಲರೂ ಸಂಪೂರ್ಣವಾಗಿ ಮಾನ್ಯರಾದೆವು.

೨೨. ಸಕಲ ಸಂಪತ್ತುಗಳಿಂದ ಪೂರ್ಣರಾದವನೂ ಸಹ ಒಂದು ಕಾರ್ಯವನ್ನು ಮಾಡಬೇಕು. ಅದೇನೆಂದರೆ, ಸೇವಕರಲ್ಲಿ ದಯೆಯು. ಅದರಂತೆ ನೀನೂ ಸಹ ಸೇವಕರಾದ ನಮ್ಮಲ್ಲಿ ದಯೆತೋರಬೇಕು ಎಂದರು.

೨೩-೨೪. ಬ್ರಹ್ಮನು ಹೇಳಿದನು:—ಹೀಗೆ ಋಷಿಗಳು ಹೇಳಿದ ಮಾತನ್ನು ಕೇಳಿ ಮಹೇಶ್ವರನು ಲೋಕಾಚಾರಕ್ಕನುಸಾರವಾಗಿ ಅವರನ್ನು ಕುರಿತು ಎಲೈ ಋಷಿಗಳಿರಾ, ಸಾಮಾನ್ಯಋಷಿಗಳೇ ಪೂಜ್ಯರು. ಆದರಲ್ಲಿ ಸಪ್ತರ್ಷಿಗಳಾದ ನೀವು ಮಹಾಪೂಜ್ಯರು. ಆದಕಾರಣ ನಿಮ್ಮನ್ನು ನಾನು ಸ್ಮರಿಸಿದೆನು.

ಮಮಾವಸ್ಥಾ ಭವದ್ಭಿಶ್ಚ ಜ್ಞಾಯತೇ ಹ್ಯುಪಕಾರಿಕಾ ।
ಸಾಧನೀಯಾ ವಿಶೇಷೇಣ ಲೋಕಾನಾಂ ಸಿದ್ಧಿಹೇತವೇ ॥ ೨೫ ॥

ದೇವಾನಾಂ ದುಃಖಮುತ್ಪನ್ನಂ ತಾರಕಾತ್ಸುದುರಾತ್ಮನಃ ।
ಬ್ರಹ್ಮಣಾ ಚ ವರೋ ದತ್ತಃ ಕಿಂ ಕರೋಮಿ ದುರಾಸದಃ ॥ ೨೬ ॥

ಮೂರ್ತಯೋಽಷ್ಟೌ ಚ ಯಾಃ ಪ್ರೋಕ್ತಾ ಮದೀಯಾಃ ಪರಮರ್ಷಯಃ ।
ತಾಸ್ಸರ್ವಾ ಉಪಕಾರಾಯ ನ ತು ಸ್ವಾರ್ಥಾಯ ತತ್ಸ್ಫುಟಂ ॥ ೨೭ ॥

ತಥಾ ಚ ಕರ್ತುಕಾಮೋಽಹಂ ವಿವಾಹಂ ಶಿವಯಾ ಸಹ ।
ತಯಾ ವೈ ಸುತಪಸ್ತಪ್ತಂ ದುಷ್ಕರಂ ಪರಮರ್ಷಿಭಿಃ ॥ ೨೮ ॥

ತಸ್ಯೈ ಪರಂ ಫಲಂ ದೇಯಮಭೀಷ್ಟಂ ತದ್ಧಿತಾವಹಂ ।
ಏತಾದೃಶಃ ಪಣೋ ಮೇ ಹಿ ಭಕ್ತಾನಂದಪ್ರದಃ ಸ್ಫುಟಂ ॥ ೨೯ ॥

---

೨೫. ನನ್ನ ವ್ಯಾಪಾರವೆಲ್ಲವೂ ಲೋಕೋಪಕಾರಕ್ಕಾಗಿಯೇ ಎಂದು ನಿಮಗೆ ತಿಳಿದೇ ಇದೆ. ಆ ಲೋಕೋಪಕಾರವನ್ನೂ ಪ್ರಯತ್ನಪೂರ್ವಕವಾಗಿ ಸಾಧಿಸಬೇಕು.

೨೬. ದುಷ್ಟನಾದ ತಾರಕಾಸುರನಿಂದ ದೇವತೆಗಳಿಗೆ ದುಃಖವುಂಟಾಗಿದೆ. ಬ್ರಹ್ಮನೂ ಆ ದೈತ್ಯನಿಗೆ ವರವನ್ನು ಕೊಟ್ಟಿದ್ದಾನೆ. ಹೀಗೆ ಅವನು ದುಸ್ಸಹನಾಗಿದ್ದಾನೆ. ಅದಕ್ಕಾಗಿ ಈಗ ನಾನು ಏನು ಮಾಡಲಿ?

೨೭. ಎಲೈ ಮಹರ್ಷಿಗಳೇ, ನನ್ನ ಪ್ರಸಿದ್ಧವಾದ ಎಂಟು ಮೂರ್ತಿಗಳೂ ಸಹ ಪರೋಪಕಾರಕ್ಕಾಗಿಯೇ ಇರುವುವು. ನನ್ನ ಸ್ವಾರ್ಥಕ್ಕಾಗಿ ಯಾವುದೂ ಇಲ್ಲ. ಇದು ಪ್ರತ್ಯಕ್ಷವಾಗಿಯೇ ಇರುವುದು.

೨೮. ಪ್ರಕೃತ ನಾನು ಪಾರ್ವತಿಯನ್ನು ಮದುವೆಯಾಗಲು ಇಷ್ಟವುಳ್ಳವನಾಗಿರುವೆನು. ಆ ದೇವಿಯೂ ಸಹ ನನ್ನನ್ನೇ ಪತಿಯನ್ನಾಗಿ ಪಡೆಯಲು, ಮಹಾ ಮಹಾ ಮುನಿಗಳೂ ಮಾಡದಿರದಂತಹ ತಪವನ್ನು ಆಚರಿಸಿರುವಳು.

೨೯. ಅವಳಿಗೆ ಬೇಕಾದುದೂ ಹಿತವಾದುದೂ ಆದ ವರವನ್ನು ಕೊಡಬೇಕು. ನನ್ನನ್ನಾರಾಧಿಸುವ ಭಕ್ತರಿಗೆ ಆನಂದವನ್ನು ಕೊಟ್ಟೇಕೊಡುವೆನು. ಇದು ನನ್ನ ಪಣವು.

ಪಾರ್ವತೀವಚಸಾದ್ಭಿಕ್ಷುರೂಪೋ ಯಾತೋ ಗಿರೇರ್ಗೃಹಂ ।
ಅಹಂ ಪಾವಿತವಾನ್ ಕಾಲೀಂ ಯತೋ ಲೀಲಾವಿಶಾರದಃ ॥ ೩೦ ॥

ಮಾಂ ಜ್ಞಾತ್ವಾ ತೌ ಪರಂ ಬ್ರಹ್ಮ ದಂಪತೀ ಪರಭಕ್ತಿತಃ ।
ದಾತುಕಾಮಾವಭೂತಾಂ ಚ ಸ್ವಸುತಾಂ ವೇದರೀತಿತಃ ॥ ೩೧ ॥

ದೇವಪ್ರೇರಣಯಾಹಂ ವೈ ಕೃತವಾನಸ್ಮಿ ನಿಂದನಂ ।
ತದಾ ಸ್ವಸ್ಯ ಚ ತದ್ಭಕ್ತಿಂ ವಿಹಂತುಂ ವೈಷ್ಣವಾತ್ಮನಾ ॥ ೩೨ ॥

ತಚ್ಛ್ರುತ್ವಾ ತೌ ಸುನಿರ್ವಿಣ್ಣೌ ತದ್ದೀನೌ ಸಂಬಭೂವತುಃ ।
ಸ್ವಕನ್ಯಾಂ ನೇಚ್ಛತೋ ದಾತುಂ ಮಹ್ಯಂ ಹಿ ಮುನಯೋಽಧುನಾ ॥ ೩೩ ॥

ತಸ್ಮಾದ್ಭವಂತೋ ಗಚ್ಛಂತು ಹಿಮಾಚಲಗೃಹಂ ಧ್ರುವಂ ।
ತತ್ರ ಗತ್ವಾ ಗಿರಿವರಂ ತತ್ಪತ್ನೀಂಶ್ಚ ಪ್ರಬೋಧಯ ॥ ೩೪ ॥

---

೩೦. ಆ ಪಾರ್ವತಿಯ ಮಾತಾಪಿತೃಗಳಾದ ಮೇನಾಹಿಮವಂತರು, ನಾನು ಪರಬ್ರಹ್ಮನೆಂದು ತಿಳಿದು ಮಹಾಭಕ್ತಿಯಿಂದ ತಮ್ಮ ಪುತ್ರಿಯನ್ನು ನನಗೆ ವೇದವಿಧಿಯಂತೆ ಮದುವೆಮಾಡಿಕೊಡಲಿಷ್ಟವುಳ್ಳವರಾಗಿದ್ದರು.

೩೧. ಲೀಲಾಮಯನಾದ ನಾನು ಪಾರ್ವತಿಯ ಮಾತಿನಂತೆ ಅವಳನ್ನು ಪರಿಶುದ್ಧಳನ್ನಾಗಿಮಾಡಲು ಹಿಮವಂತನ ಮನೆಗೆ ಭಿಕ್ಷುರೂಪದಿಂದ ಹೋಗಿ,

೩೨. ದೇವತೆಗಳ ಮಾತಿನಂತೆ ಹಿಮವಂತನಿಗೆ ನನ್ನಮೇಲಿನ ಭಕ್ತಿಯನ್ನು ಕಮ್ಮಿಮಾಡಲು ವೈಷ್ಣವಬ್ರಾಹ್ಮಣನ ವೇಷದಿಂದ ಅವನ ಬಳಿಗೆ ಹೋಗಿ ಶಿವನಿಂದೆಯನ್ನು ಮಾಡಿದೆನು.

೩೩. ನಾನು ಮಾಡಿದ ಶಿವನಿಂದೆಯನ್ನು ಕೇಳಿ ಮೇನಾಹಿಮವಂತರು ತುಂಬಾ ದೀನರೂ ದುಃಖಿತರೂ ಆದರು. ಮತ್ತು ಈಗ ಅವರು ತಮ್ಮ ಪುತ್ರಿಯನ್ನು ನನಗೆ ಕೊಡಲು ಇಚ್ಛಿಸುತ್ತಿಲ್ಲ.

೩೪. ಆದುದರಿಂದ ಎಲೈ ಋಷಿಗಳಿರಾ, ಈಗ ನೀವು ಹಿಮವಂತನ ಮನೆಗೆ ಹೋಗಿ ಅಲ್ಲಿ ಮೇನಾಹಿಮವಂತರಿಗೆ ಸರಿಯಾದ ಬೋಧನೆಯನ್ನು ಮಾಡಿರಿ.

ಕಥನೀಯಂ ಪ್ರಯತ್ನೇನ ವಚನಂ ವೇದಸಮ್ಮತಂ ।
ಸರ್ವಥಾ ಕರಣೀಯಂ ತದ್ಯಥಾ ಸ್ಯಾತ್ಕಾರ್ಯಮುತ್ತಮಂ ॥ ೩೫ ॥

ಉದ್ವಾಹಂ ಕರ್ತುಮಿಚ್ಛಾಮಿ ತತ್ಪುತ್ರ್ಯಾ ಸಹ ಸತ್ತಮಾಃ ।
ಸ್ವೀಕೃತಸ್ತದ್ವಿವಾಹೋ ಮೇ ವರೋ ದತ್ತಶ್ಚ ತಾದೃಶಃ ॥ ೩೬ ॥

ಅತ್ರ ಕಿಂ ಬಹುನೋಕ್ತೇನ ಬೋಧನೀಯೋ ಹಿಮಾಲಯಃ ।
ತಥಾ ಮೇನಾ ಚ ಬೋದ್ಧವ್ಯಾ ದೇವಾನಾಂ ಸ್ಯಾದ್ಧಿತಂ ಯಥಾ ॥ ೩೭ ॥

ಭವದ್ಭಿಃ ಕಲ್ಪಿತೋ ಯೋ ವೈ ವಿಧಿಸ್ಸ್ಯಾದಧಿಕಸ್ತತಃ ।
ಭವತಾಂ ಚೈವ ಕಾರ್ಯಂ ತು ಭವಂತಃ ಕಾರ್ಯಭಾಗಿನಃ ॥ ೩೮ ॥

॥ ಬ್ರಹ್ಮೋವಾಚ ॥

ಇತ್ಯೇವಂ ವಚನಂ ಶ್ರುತ್ವಾ ಮುನಯಸ್ತೇಽಮಲಾಶಯಾಃ ।
ಆನಂದಂ ಲೇಭಿರೇ ಸರ್ವೇ ಪ್ರಭುಣಾನುಗ್ರಹೀಕೃತಾಃ ॥ ೩೯ ॥

---

೩೫. ವೇದಸಮಾನವಾದ ಮಾತಿನಿಂದ ಆ ದಂಪತಿಗಳಿಗೆ ಉಪದೇಶಿಸಿರಿ, ಸರ್ವಥಾ ನಮ್ಮ ಕಾರ್ಯವು ಸಾಧಿಸುವಂತೆ ಪ್ರಯತ್ನಪಡಿ.

೩೬. ಆ ದಂಪತಿಗಳ ಪುತ್ರಿಯಾದ ಪಾರ್ವತಿಯೊಡನೆ ವಿವಾಹವನ್ನು ಮಾಡಿಕೊಳ್ಳಲಪೇಕ್ಷಿಸುವೆನು. ಪಾರ್ವತಿಗೆ ಹಾಗೆಯೇ ವರವನ್ನು ಕೊಟ್ಟಿರುವೆನು.

೩೭. ಈ ವಿಷಯದಲ್ಲಿ ಹೆಚ್ಚು ಹೇಳುವುದೇನು ? ಒಟ್ಟಿನಲ್ಲಿ ವಿವಾಹಕ್ಕೆ ಸಮ್ಮತಿಸುವಂತೆ ಮೇನಾ ಮತ್ತು ಹಿಮವಂತರನ್ನು ಬೋಧಿಸಬೇಕು. ಈ ಕಾರ್ಯ ಸಾಧಿಸಿದರೆ ದೇವತೆಗಳಿಗೂ ಕ್ಷೇಮವಾಗುವುದು.

೩೮. ನೀವು ಕಲ್ಪಿಸಿದ ವಿಧಿಗಿಂತಲೂ ಈ ಕಾರ್ಯವು ಹೆಚ್ಚಾದುದು. ಇಂತಹ ಕಾರ್ಯದಲ್ಲಿ ಈಗ ನೀವು ಭಾಗಿಗಳಾಗಿರುತ್ತೀರಿ ಎಂದನು.

೩೯. ಬ್ರಹ್ಮನು ಹೇಳಿದನು :—ಹೀಗೆ ಶಿವನ ಮಾತನ್ನು ಕೇಳಿ ಅವನ ಅನುಗ್ರಹಕ್ಕೆ ಪಾತ್ರರಾದ ಶುದ್ಧವಾದ ಮನಸ್ಸುಳ್ಳ, ಮುನಿಗಳು ತುಂಬಾ ಸಂತೋಷಗೊಂಡು,

ವಯಂ ಧನ್ಯಾ ಅಭೂವಂಶ್ಚ ಕೃತಕೃತ್ಯಾಶ್ಚ ಸರ್ವಥಾ ।
ವಂದ್ಯಾ ಜಾತಾಶ್ಚ ಸರ್ವೇಷಾಂ ಪೂಜನೀಯಾ ವಿಶೇಷತಃ ॥ ೪೦ ॥

ಬ್ರಹ್ಮಣಾ ವಿಷ್ಣುನಾ ಯೋ ವೈ ವಂದ್ಯಸ್ಸರ್ವಾರ್ಥಸಾಧಕಃ ।
ಸೋಽಸ್ಮಾನ್ ಪ್ರೇಷಯಸೇ ಪ್ರೇಷ್ಯಾನ್ ಕಾರ್ಯೇ ಲೋಕಸುಖಾವಹೇ ॥ ೪೧ ॥

ಅಯಂ ವೈ ಜಗತಾಂ ಸ್ವಾಮೀ ಪಿತಾ ಸಾ ಜನನೀ ಮತಾ ।
ಅಯಂ ಯುಕ್ತಶ್ಚ ಸಂಬಂಧೋ ವರ್ಧತಾಂ ಚಂದ್ರವತ್ಸದಾ ॥ ೪೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಹ್ಯೃಷಯೋ ದಿವ್ಯಾ ನಮಸ್ಕೃತ್ಯ ಶಿವಂ ತದಾ ।
ಗತಾ ಆಕಾಶಮಾರ್ಗೇಣ ಯತ್ರಾಸ್ತಿ ಹಿಮವತ್ಪುರಂ ॥ ೪೩ ॥

ದೃಷ್ಟ್ವಾ ತಾಂ ಚ ಪುರಂ ದಿವ್ಯಾಮೃಷಯಸ್ತೇ ಸುವಿಸ್ಮಿತಾಃ ।
ವರ್ಣಯಂತಶ್ಚ ಸ್ವಂ ಪುಣ್ಯಮಬ್ರುವನ್ ವೈ ಪರಸ್ಪರಂ ॥ ೪೪ ॥

---

೪೦. ನಾವು ಧನ್ಯರಾದೆವು, ಕೃತಕೃತ್ಯರಾದೆವು ಮತ್ತು ನಾವು ಎಲ್ಲರೂ ವಂದಿಸಲು ಯೋಗ್ಯರೂ, ವಿಶೇಷವಾಗಿ ಪೂಜ್ಯರೂ ಆದೆವು.

೪೧. ಯಾವನು ಬ್ರಹ್ಮವಿಷ್ಣುಗಳಿಂದಲೂ ವಂದಿತನಾಗಿ ಅವರಿಗೂ ಇಷ್ಟಾರ್ಥಗಳನ್ನು ಕೊಡುವನೋ ಅಂತಹ ಮಹಾದೇವನಾದ ನೀನು ಸೇವಕರಾದ ನಮ್ಮನ್ನು ಲೋಕಕ್ಕೆ ಹಿತಕರವಾದ ಕಾರ್ಯದಲ್ಲಿ ನಿಯಮಿಸುತ್ತಲಿರುವೆ.

೪೨. ಶಂಕರನು ಜಗತ್ಪತಿಯು, ಜಗತ್ತಿಗೆ ತಂದೆಯು. ಆ ಪಾರ್ವತಿಯು ಜಗನ್ಮಾತೆಯು. ಇವರೀರ್ವರಿಗೆ ಸಂಬಧ (ವಿವಾಹ) ವು ಯುಕ್ತವಾದುದು. ಮತ್ತು ಆ ಸಂಬಂಧವು ಶುಕ್ಲಪಕ್ಷದ ಚಂದ್ರನಂತೆ ಸದಾ ವೃದ್ಧಿಹೊಂದಲಿ,ಎಂದರು.

೪೩. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ದಿವ್ಯಮುನಿಗಳು ಶಂಕರನನ್ನು ನಮಸ್ಕರಿಸಿ ಆಕಾಶಮಾರ್ಗದಿಂದ ಹಿಮವಂತನ ರಾಜಧಾನಿಗೆ ತೆರಳಿದರು.

೪೪. ಹಿಮವಂತನ ಆ ದಿವ್ಯವಾದ ರಾಜಧಾನಿಯನ್ನು ನೋಡಿ ಸಪ್ತಋಷಿಗಳು ತುಂಬಾ ವಿಸ್ಮಯಗೊಂಡು ತಮ್ಮ ಪುಣ್ಯವನ್ನು ಹೊಗಳಿಕೊಳ್ಳುತ್ತಾ ಪರಸ್ಪರ ಮಾತನಾಡಿದರು.

॥ ಋಷಯ ಊಚುಃ ॥

ಪುಣ್ಯವಂತೋ ವಯಂ ಧನ್ಯಾ ದೃಷ್ಟ್ವೈತದ್ಧಿಮವತ್ಪುರಂ ।
ಯಸ್ಮಾದೇವಂವಿಧೇ ಕಾರ್ಯೇ ಶಿವೇನೈವ ನಿಯೋಜಿತಾಃ ॥ ೪೫ ॥

ಅಲಕಾಯಾಶ್ಚ ಸ್ವರ್ಗಾಚ್ಚ ಭೋಗವತ್ಯಾಸ್ತಥಾ ಪುನಃ ।
ವಿಶೇಷೇಣಾಮರಾವತ್ಯಾ ದೃಶ್ಯತೇ ಪುರಮುತ್ತಮಂ ॥ ೪೬ ॥

ಸುಗೃಹಾಣಿ ಸುರಮ್ಯಾಣಿ ಸ್ಫಟಿಕೈರ್ನಿರ್ಮಿತೈರ್ವರೈಃ ।
ಮಣಿಭಿರ್ನಾ ವಿಚಿತ್ರಾಣಿ ರಚಿತಾನ್ಯಂಗಣಾನಿ ಚ ॥ ೪೭ ॥

ಸೂರ್ಯಕಾಂತಾಶ್ಚ ಮಣಯಶ್ಚಂದ್ರಕಾಂತಾಸ್ತಥೈವ ಚ ।
ಗೃಹೇ ಗೃಹೇ ವಿಚಿತ್ರಾಶ್ಚ ವೃಕ್ಷಾಃ ಸ್ವರ್ಗಸಮುದ್ಭವಾಃ ॥ ೪೮ ॥

ತೋರಣಾನಾಂ ತಥಾ ಲಕ್ಷ್ಮೀರ್ದೃಶ್ಯತೇ ಚ ಗೃಹೇ ಗೃಹೇ ।
ವಿವಿಧಾನಿ ವಿಚಿತ್ರಾಣಿ ಶುಕಹಂಸೈರ್ವಿಮಾನಕೈಃ ॥ ೪೯ ॥

---

೪೫. ಈ ದಿವ್ಯವಾದ ಹಿಮವಂತನ ರಾಜಧಾನಿಯನ್ನು ನೋಡಿ ನಾವು ಧನ್ಯರಾದೆವು. ಇಂತಹ ಮಹಾಕಾರ್ಯದಲ್ಲಿ ಶಿವನು ನಮ್ಮನ್ನು ನಿಯಮಿಸಿದುದರಿಂದ ನಾವು ಮಹಾಪುಣ್ಯವಂತರು.

೪೬. ಈ ನಗರವು ಅಲಕಾನಗರ, ಸ್ವರ್ಗ, ಭೋಗವತಿ, ಅಮರಾವತಿ ಈ ಎಲ್ಲಾ ನಗರಗಳಿಗಿಂತಲೂ ತುಂಬಾ ಉತ್ತಮವಾಗಿರುವುದು.

೪೭. ಮನೆಗಳು ಸ್ಫಟಿಕಗಳಿಂದ ನಿರ್ಮಿಸಲ್ಪಟ್ಟು ರಮ್ಯವಾಗಿ ಪ್ರಕಾಶಿಸುತ್ತಲಿವೆ. ಮಣಿಗಳಿಂದಲೇ ಚೌಕಗಳನ್ನು ವಿಚಿತ್ರವಾಗಿ ರಚಿಸಿರುವರು.

೪೮. ಸೂರ್ಯಕಾಂತರತ್ನಗಳು ಚಂದ್ರಕಾಂತರತ್ನಗಳು ಪ್ರತಿಮನೆಗಳಲ್ಲಿಯೂ ಇರುವುವು. ಕಲ್ಪವೃಕ್ಷಗಳು ಪ್ರತಿಮನೆಗಳಲ್ಲಿಯೂ ಕಂಗೊಳಿಸುತ್ತಿವೆ.

೪೯. ಗೃಹಗಳಿಗೆ ಸುಂದರವಾದ ತೋರಣಗಳನ್ನು ಕಟ್ಟಿರುವರು. ವಿಚಿತ್ರವಾದ ಶುಕ ಮತ್ತು ಹಂಸಗಳು ಇರುವುವು. ಸುಂದರವಾದ ವಿಮಾನಗಳಿರುವುವು.

ವಿತಾನಾನಿ ವಿಚಿತ್ರಾಣಿ ಚೈಲವತ್ಕೋರಣೈಸ್ಸಹ ।
ಜಲಾಶಯಾನ್ಯನೇಕಾನಿ ದೀರ್ಘಿಕಾ ವಿವಿಧಾಃ ಸ್ಥಿತಾಃ ॥ ೫೦ ॥

ಉದ್ಯಾನಾನಿ ವಿಚಿತ್ರಾಣಿ ಪ್ರಸೂನೈಃ ಪೂಜಿತಾನ್ಯಥ ।
ನರಾಶ್ಚ ದೇವತಾಸ್ಸರ್ವೇ ಸ್ತ್ರಿಯಶ್ಚಾಪ್ಸರಸಸ್ತಥಾ ॥ ೫೧ ॥

ಕರ್ಮಭೂಮೌ ಯಾಜ್ಞಿಕಾಶ್ಚ ಪೌರಾಣಾಃ ಸ್ವರ್ಗಕಾಮ್ಯಯಾ ।
ಕುರ್ವಂತಿ ತೇ ವೃಥಾ ಸರ್ವೇ ವಿಹಾಯ ಹಿಮವತ್ಪುರಂ ॥ ೫೨ ॥

ಯಾವನ್ನ ದೃಷ್ಟಮೇತಚ್ಚ ತಾವತ್ಸ್ವರ್ಗಪರಾ ನರಾಃ ।
ದೃಷ್ಟಮೇತದ್ಯದಾ ವಿಪ್ರಾಃ ಕಿಂ ಸ್ವರ್ಗೇಣ ಪ್ರಯೋಜನಂ ॥ ೫೩ ॥

॥ ಬ್ರಹ್ಮೋವಾಚ ॥
ಇತ್ಯೇವಮೃಷಿವರ್ಯಾಸ್ತೇ ವರ್ಣಯಂತಃ ಪುರಂ ಚ ತಾಂ ।
ಗತಾ ಹೈಮಾಲಯಂ ಸರ್ವೇ ಗೃಹಂ ಸರ್ವಸಮೃದ್ಧಿಮತ್ ॥ ೫೪ ॥

---

೫೦. ವಿಚಿತ್ರವಾದ ಮೇಲುಕಟ್ಟುಗಳು ಸುಂದರವಾದ ಧ್ವಜಪಟಗಳೊಡನೆ ರಾಜಿಸುತ್ತಲಿರುವುವು. ಸುಂದರವಾದ ಅನೇಕ ಸರೋವರಗಳು ಕಲ್ಯಾಣಿಗಳು ಅಲ್ಲಲ್ಲಿ ಇರುವುವು.

೫೧. ಹೂವುಗಳಿಂದ ತುಂಬಿರುವ ವಿಚಿತ್ರವಾದ ಅನೇಕ ಉದ್ಯಾನವನಗಳಿರುವುವು. ಉತ್ತಮರಾದ ಪುರುಷರೂ, ಸ್ತ್ರೀಯರೂ, ದೇವತೆಗಳೂ, ಅಪ್ಸರೆಯರೂ ಇಲ್ಲಿ ವಿಹರಿಸುವರು.

೫೨. ಕರ್ಮಭೂಮಿಯಾದ ಭೂಲೋಕದಲ್ಲಿ ಯಜ್ಞಮಾಡುವವರು ಮತ್ತು ಪೌರಾಣಿಕರು, ಈ ದಿವ್ಯವಾದ ಹಿಮವಂತನನಗರವನ್ನು ಬಿಟ್ಟು ಸ್ವರ್ಗವನ್ನು ಪಡೆಯಲುದ್ದೇಶದಿಂದ ಕರ್ಮವನ್ನೂ ತಪವನ್ನೂ ಆಚರಿಸುವರು.

೫೩. ಈ ನಗರವನ್ನು ನೋಡದೇ ಇರುವುದರಿಂದ ಜನಗಳು ಸ್ವರ್ಗದಲ್ಲಿ ಇಚ್ಛೆಯುಳ್ಳವರಾಗಿರುವರು. ಈ ನಗರವನ್ನು ನೋಡಿದಮೇಲೆ ಸ್ವರ್ಗದಿಂದ ಏನು ಪ್ರಯೋಜನವೆನ್ನುವರು.

೫೪. ಬ್ರಹ್ಮನು ಹೇಳಿದನು:—ಹೀಗೆ ಆ ಸಪ್ತಋಷಿಗಳು ಹಿಮವಂತನ ರಾಜಧಾನಿಯನ್ನು ವರ್ಣಿಸುತ್ತಾ ಅವನ ಸರ್ವಸಮೃದ್ಧಿಯುಳ್ಳ ಅರಮನೆಗೆ ತೆರಳಿದರು.

ತಾನ್ ದೃಷ್ಟ್ವಾ ಸೂರ್ಯಸಂಕಾಶಾನ್ ಹಿಮವಾನ್ ವಿಸ್ಮಿತೋऽಬ್ರವೀತ್ ।
ದೂರಾದಾಕಾಶಮಾರ್ಗಸ್ಥಾನ್ ಮುನೀನ್ ಸಪ್ತ ಸುತೇಜಸಃ ॥ ೫೫ ॥

॥ ಹಿಮವಾನುವಾಚ ॥

ಸಪ್ತೈತೇ ಸೂರ್ಯಸಂಕಾಶಾಃ ಸಮಾಯಾಂತಿ ಮದಂತಿಕಂ ।
ಪೂಜಾ ಕಾರ್ಯಾ ಪ್ರಯತ್ನೇನ ಮುನೀನಾಂ ಚ ಮಯಾಧುನಾ ॥ ೫೬ ॥

ವಯಂ ಧನ್ಯಾ ಗೃಹಸ್ಥಾಶ್ಚ ಸರ್ವೇಷಾಂ ಸುಖದಾಯಿನಃ ।
ಯೇಷಾಂ ಗೃಹೇ ಸಮಾಯಾಂತಿ ಮಹಾತ್ಮಾನೋ ಯದೀದೃಶಾಃ ॥ ೫೭ ॥

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ಚೈವಾಕಾಶಾದೇತ್ಯ ಭುವಿ ಸ್ಥಿತಾನ್ ।
ಸಮ್ಮುಖೇ ಹಿಮವಾನ್ ದೃಷ್ಟ್ವಾ ಯಯೌ ಮಾನಪುರಸ್ಸರಂ ॥ ೫೮ ॥

ಕೃತಾಂಜಲಿರ್ನತಸ್ಕಂಧಃ ಸಪ್ತರ್ಷೀನ್ ಸುಪ್ರಣಮ್ಯ ಸಃ ।
ಪೂಜಾಂ ಚಕಾರ ವೈ ತೇಷಾಂ ಬಹುಮಾನಪುರಸ್ಸರಂ ॥ ೫೯ ॥

---

೫೫. ಸೂರ್ಯನಂತೆ ತೇಜಸ್ವಿಗಳಾಗಿ ಆಕಾಶಮಾರ್ಗದಲ್ಲಿ ಬರುತ್ತಲಿರುವ ಆ ಸಪ್ತಋಷಿಗಳನ್ನು ದೂರದಿಂದಲೇ ನೋಡಿ ಹಿಮವಂತನು ತುಂಬಾ ಆಶ್ಚರ್ಯಗೊಂಡು ತನ್ನಲ್ಲಿಯೇ ಯೋಚಿಸಿದನು.

೫೬. ಸೂರ್ಯನಂತೆ ತೇಜಸ್ವಿಗಳಾದ ಈ ಸಪ್ತಋಷಿಗಳು ನನ್ನ ಬಳಿಗೆ ಬರುತ್ತಲಿರುವರು. ಇವರನ್ನು ಪ್ರಯತ್ನದಿಂದ ಚೆನ್ನಾಗಿ ಪೂಜಿಸಬೇಕು.

೫೭. ಸರ್ವರಿಗೂ ಕ್ಷೇಮವನ್ನುಂಟುಮಾಡಬಲ್ಲ ಇಂತಹ ಮಹಾತ್ಮರು ನಮ್ಮ ಮನೆಗೆ ಬರುತ್ತಲಿರುವರು. ಇಂತವರನ್ನು ಪೂಜಿಸಿದರೆ ಗೃಹಸ್ಥರಾದ ನಾವು ಧನ್ಯರಾಗುವೆವು.

೫೮. ಬ್ರಹ್ಮನು ಹೇಳಿದನು:—ಅಷ್ಟರಲ್ಲಿ ಆ ಋಷಿಗಳು ಆಕಾಶದಿಂದ ಭೂಮಿಗಿಳಿದರು. ಅವರನ್ನು ಹಿಮವಂತನು ಮರ್ಯಾದೆಗಳೊಡನೆ ಎದುರುಗೊಂಡನು.

೫೯. ಆ ಹಿಮವಂತನು ಅಂಜಲಿಯನ್ನು ಧರಿಸಿ ಕತ್ತನ್ನು ಬಗ್ಗಿಸಿ ಭಕ್ತಿಯಿಂದ ಸಪ್ತಋಷಿಗಳನ್ನೂ ನಮಸ್ಕರಿಸಿ ಬಹುಮಾನದೊಡನೆ ಅವರನ್ನು ಪೂಜಿಸಿದನು.

ಗೃಹೀತ್ವೋಚುಃ ಪ್ರಸನ್ನಾಸ್ತ್ಯಾ ವಚನಂ ಮಂಗಲಾಯಂ ।
ಹಿತಾಃ ಸಪ್ತರ್ಷಯಸ್ತೇ ಚ ಹಿಮವಂತಂ ನಗೇಶ್ವರಂ ॥ ೬೦ ॥

ಯಥಾಗ್ರತಶ್ಚ ತಾಂ ಕೃತ್ವಾ ಧನ್ಯೋ ಮಮ ಗೃಹಾಽಽಶ್ರಮಃ ।
ಇತ್ಯುಕ್ತ್ವಾಽಽಸನಮಾನೀಯ ದದೌ ಭಕ್ತಿಪುರಸ್ಸರಂ ॥ ೬೧ ॥

ಆಸನೇಷೂಪವಿಷ್ಟೇಷು ತದಾಜ್ಞಪ್ತಸ್ಸ್ವಯಂ ಸ್ಥಿತಃ ।
ಉವಾಚ ಹಿಮವಾಂಸ್ತತ್ರ ಮುನೀನ್ ಜ್ಯೋತಿರ್ಮಯಾಂಸ್ತದಾ ॥ ೬೨ ॥

॥ ಹಿಮವಾನುವಾಚ ॥

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಸಫಲಂ ಜೀವನಂ ಮಮ ।
ಲೋಕೇಷು ದರ್ಶನೀಯೋಽಹಂ ಬಹುತೀರ್ಥಸಮೋ ಮತಃ ॥ ೬೩ ॥

ಯಸ್ಮಾದ್ಭವಂತೋ ಮದ್ಗೇಹಮಾಗತಾ ವಿಷ್ಣುರೂಪಿಣಃ ।
ಪೂರ್ಣಾನಾಂ ಭವತಾಂ ಕಾರ್ಯಂ ಕೃಪಣಾನಾಂ ಗೃಹೇಷು ಕಿಂ ॥ ೬೪ ॥

---

೬೦. ಆ ಪೂಜೆಯನ್ನು ಸ್ವೀಕರಿಸಿ ಮುನಿಗಳು ಪ್ರಸನ್ನರಾಗಿ ಹಿಮವಂತನನ್ನು ಕುರಿತು ಮಂಗಳಕರವಾದ ಆಶೀರ್ವಾದವನ್ನು ಮಾಡಿದರು.

೬೧. ಓ ಮುನಿಗಳೇ, ತಮ್ಮ ಆಗಮನದಿಂದ ನನ್ನ ಗೃಹಸ್ಥಾಶ್ರಮವು ಸಾರ್ಥಕವಾಯಿತು. ಹೀಗೆಂದು ಹಿಮವಂತನು ಮುನಿಗಳಿಗೆ ಭಕ್ತಿಯಿಂದ ಆಸನವನ್ನು ಕೊಟ್ಟನು.

೬೨. ಆ ಮುನಿಗಳೆಲ್ಲರೂ ಆಸನಗಳಲ್ಲಿ ಕುಳಿತುಕೊಂಡಮೇಲೆ ಹಿಮವಂತನು ತಾನೂ ಅವರಪ್ಪಣೆಯಂತೆ ಕುಳಿತುಕೊಂಡನು. ಮತ್ತು ತೇಜಸ್ವಿಗಳಾದ ಅವರನ್ನು ಕುರಿತು,

೬೩. ಓ ಮುನಿಗಳೇ, ನಾನು ಧನ್ಯನಾದೆನು, ಕೃತಕೃತ್ಯನಾದೆನು, ನನ್ನ ಜೀವನವು ಸಾರ್ಥಕವಾಯಿತು. ಮಹಾತೀರ್ಥಗಳಂತೆ ನಾನು ಜನಗಳಿಂದ ನೋಡಲ್ಪಡಲು ಯೋಗ್ಯನಾದೆನು.

೬೪. ವಿಷ್ಣುರೂಪಿಗಳಾದ ನೀವು ನನ್ನ ಮನೆಗೆ ಬಂದುದರಿಂದ ನಾನು ಧನ್ಯನಾದೆನು. ಆತ್ಮತೃಪ್ತರಾದ ನಿಮಗೆ ಕೃಪಣ (ದೀನ) ರಾದ ನಮ್ಮಂತಹವರ ಮನೆಯಲ್ಲಿ ಏನು ಕಾರ್ಯವಿರಬಹುದು? ಕೇವಲ ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಬಂದಿರುವಿರಿ.

ತಥಾಪಿ ಕಿಂಚಿತ್ಕಾರ್ಯಂ ಚ ಸದೃಶಂ ಸೇವಕಸ್ಯ ಮೇ ।
ಕಥನೀಯಂ ಸುದಯಯಾ ಸಫಲಂ ಸ್ಯಾಜ್ಜನುರ್ಮಮ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ದ್ವಾತ್ರಿಂಶೋಽಧ್ಯಾಯಃ



---

೬೫. ಹಾಗಿದ್ದರೂ ಸೇವಕನಾದ ನಾನು ಮಾಡುವಂತಹ ಯಾವುದಾದರೂ ಕಾರ್ಯವಿದ್ದರೆ ದಯೆಯಿಂದ ಹೇಳಬೇಕು. ಅದನ್ನು ನಿರ್ವಹಿಸಿ ನನ್ನ ಜನ್ಮವನ್ನು ಸಾರ್ಥಕಮಾಡಿಕೊಳ್ಳುವೆನು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ತ್ರಯಸ್ತ್ರಿಂಶೋಽಧ್ಯಾಯಃ

॥ ಋಷಯ ಊಚುಃ ॥

ಜಗತ್ಪಿತಾ ಶಿವಃ ಪ್ರೋಕ್ತೋ ಜಗನ್ಮಾತಾ ಶಿವಾ ಮತಾ ।
ತಸ್ಮಾದ್ದೇಯಾ ತ್ವಯಾ ಕನ್ಯಾ ಶಂಕರಾಯ ಮಹಾತ್ಮನೇ ॥ ೧ ॥

ಏವಂ ಕೃತ್ವಾ ಹಿಮಗಿರೇ ಸಾರ್ಥಕಂ ತೇ ಭವೇಜ್ಜನುಃ ।
ಜಗದ್ಗುರೋರ್ಗುರುಸ್ತ್ವಂ ಹಿ ಭವಿಷ್ಯಸಿ ನ ಸಂಶಯಃ ॥ ೨ ॥

॥ ಬ್ರಹ್ಮೋವಾಚ ॥

ಏವಂ ವಚನಮಾಕರ್ಣ್ಯ ಸಪ್ತರ್ಷೀಣಾಂ ಮುನೀಶ್ವರ ।
ಪ್ರಣಮ್ಯ ತಾನ್ ಕರೌ ಬಧ್ವಾ ಗಿರಿರಾಜೋಽಬ್ರವೀದಿದಂ ॥ ೩ ॥

---

### ಮೂವತ್ತಮೂರನೆಯ ಅಧ್ಯಾಯವು

೧. ಋಷಿಗಳು ಹೇಳಿದರು:—ಎಲೈ ಹಿಮವಂತನೆ, ಶಿವನು ಜಗತ್ತಿಗೆ ತಂದೆಯು. ಪಾರ್ವತಿಯು ಜಗನ್ಮಾತೆಯು. ಆದುದರಿಂದ ನೀನು ಪುತ್ರಿಯನ್ನು ಮಹಾತ್ಮನಾದ ಶಂಕರನಿಗೆ ಕೊಡಬೇಕು.

೨. ಹೀಗೆ ಮಾಡಿದರೆ ನಿನ್ನ ಜನ್ಮವು ಸಾರ್ಥಕವಾಗುವುದು. ಜಗದ್ಗುರುವಾದ ಶಂಕರನಿಗೂ ನೀನು ಗುರು ಎಂದರೆ ಹಿರಿಯನಾಗುವೆ ಎಂದರು.

೩. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಮುನಿಗಳು ಹೇಳಿದ ಮಾತನ್ನು ಕೇಳಿ ಹಿಮವಂತನು ಅವರನ್ನು ನಮಸ್ಕರಿಸಿ ಕೈಮುಗಿದುಕೊಂಡು,

॥ ಹಿಮಾಲಯ ಉವಾಚ ॥

ಸಪ್ತರ್ಷಯೋ ಮಹಾಭಾಗಾ ಭವದ್ಭಿರ್ಯದುದೀರಿತಂ ।
ತತ್ಪ್ರಮಾಣೀಕೃತಂ ಮೇ ಹಿ ಪುರೈವ ಗಿರಿಶೇಚ್ಛಯಾ ॥ ೪ ॥

ಇದಾನೀಮೇಕ ಆಗತ್ಯ ವಿಪ್ರೋ ವೈಷ್ಣವಧರ್ಮವಾ ।
ಶಿವಮುದ್ದಿಶ್ಯ ಸುಪ್ರೀತ್ಯಾ ವಿಪರೀತಂ ವಚೋಽಬ್ರವೀತ್ ॥ ೫ ॥

ತದಾರಭ್ಯ ಶಿವಾಮಾತಾ ಜ್ಞಾನಭ್ರಷ್ಟಾ ಬಭೂವ ಹ ।
ಸುತಾವಿವಾಹಂ ರುದ್ರೇಣ ಯೋಗಿನಾ ತೇನ ನೇಚ್ಛತಿ ॥ ೬ ॥

ಕೋಪಾಗಾರಮಗಾತ್ಸಾ ಹಿ ಸುತಪಾ ಮಲಿನಾಂಬರಾ ।
ಕೃತ್ವಾ ಮಹಾಹಠಂ ವಿಪ್ರಾ ಬೋಧ್ಯಮಾನಾಪಿ ನಾಬುಧತ್ ॥ ೭ ॥

ಅಹಂ ಚ ಜ್ಞಾನವಿಭ್ರಷ್ಟೋ ಜಾತೋಽಹಂ ಸತ್ಯಮಿರ್ಯತೇ ।
ದಾತುಂ ಸುತಾಂ ಮಹೇಶಾಯ ನೇಚ್ಛಾಮಿ ಭಿಕ್ಷುರೂಪಿಣೇ ॥ ೮ ॥

---

೪. ಓ ಮಹಾನುಭಾವರಾದ ಮುನಿಗಳೇ, ನೀವು ಹೇಳಿದಂತೆಯೇ ಹಿಂದೆ ಶಿವನಿಚ್ಛೆಯಿಂದ ನಾನು ಮದುವೆಮಾಡಿಕೊಡಲು ಪ್ರಮಾಣಮಾಡಿಯೇ ಇದ್ದೆನು.

೫. ಈಗ ಸ್ವಲ್ಪಕಾಲದ ಹಿಂದೆ ಓರ್ವ ವೈಷ್ಣವಬ್ರಾಹ್ಮಣನು ಬಂದು ಶಿವನ ವಿಚಾರದಲ್ಲಿ ಬಹುವಾಗಿ ನಿಂದೆಯನ್ನು ಮಾಡಿದನು.

೬. ಆಮೊದಲುಗೊಂಡು ಪಾರ್ವತಿಯ ತಾಯಿಯು ಬುದ್ಧಿಯನ್ನು ಬದಲಾಯಿಸಿರುವಳು. ಯೋಗಿಯಾದ ರುದ್ರನಿಗೆ ಪಾರ್ವತಿಯನ್ನು ಕೊಡಲು ಅವಳು ಸಮ್ಮತಿಸುವುದಿಲ್ಲ.

೭. ಮಲಿನವಾದ ಬಟ್ಟೆಯನ್ನುಟ್ಟು ಮಹಾಹಠವನ್ನು ಮಾಡಿ ಕೋಪದಿಂದ ಮನೆಗೆ ಹೊರಟುಹೋದಳು. ನಾನೆಷ್ಟು ಹೇಳಿದರೂ ಕೇಳಲಿಲ್ಲ.

೮. ಆದಕಾರಣ ನನ್ನ ಮನಸ್ಸಿಗೂ ಬೇಸರವಾಗಿ ಮೇನೆಯ ಮಾತಿನಂತೆ ನಡೆಯುವುದೇ ಯುಕ್ತವೆಂದು ನನಗೆ ಈಗ ತೋರುತ್ತಲಿದೆ. ಆದುದರಿಂದ ಭಿಕ್ಷುಕನಾದ ಆ ರುದ್ರನಿಗೆ ಪುತ್ರಿಯನ್ನು ಕೊಡಲಾರೆನು. ಇದು ನಿಶ್ಚಯವು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಶೈಲರಾಜಸ್ತು ಶಿವಮಾಯಾವಿಮೋಹಿತಃ ।
ತೂಷ್ಣೀಂ ಬಭೂವ ತತ್ರಸ್ಥೋ ಮುನೀನಾಂ ಮಧ್ಯತೋ ಮುನೇ ॥ ೯ ॥

ಸರ್ವೇ ಸಪ್ತರ್ಷಯಸ್ತೇ ಹಿ ಶಿವಮಾಯಾಂ ಪ್ರಶಸ್ಯ ವೈ ।
ಪ್ರೇಷಯಾಮಾಸುರಥ ತಾಂ ಮೇನಕಾಂ ಪ್ರತ್ಯರುಂಧತೀಂ ॥ ೧೦ ॥

ಅಥ ಪತ್ಯುಃ ಸಮಾದಾಯ ನಿದೇಶಂ ಜ್ಞಾನದಾ ಹಿ ಸಾ ।
ಜಗಾಮಾರುಂಧತೀ ತೂರ್ಣಂ ಯತ್ರ ಮೇನಾ ಚ ಪಾರ್ವತೀ ॥ ೧೧ ॥

ಗತ್ವಾ ದದರ್ಶ ಮೇನಾಂ ತಾಂ ಶಯಾನಾಂ ಶೋಕಮೂರ್ಛಿತಾಂ ।
ಉವಾಚ ಮಧುರಂ ಸಾಧ್ವೀ ಸಾವಧಾನಾ ಹಿತಂ ವಚಃ ॥ ೧೨ ॥

॥ ಅರುಂಧತ್ಯುವಾಚ ॥

ಉತ್ತಿಷ್ಠ ಮೇನಕೇ ಸಾಧ್ವಿ ತ್ವದ್ಗೃಹೇಽಹಮರುಂಧತೀ ।
ಆಗತಾ ಮುನಯಶ್ಚಾಪಿ ಸಪ್ತಾಯಾತಾಃ ಕೃಪಾಲವಃ ॥ ೧೩ ॥

---

೯. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಶಿವಮಾಯೆಯಿಂದ ಮೋಹಗೊಂಡ ಹಿಮವಂತನು ಮುನಿಗಳ ಮಧ್ಯದಲ್ಲಿ ಸುಮ್ಮನೆ ಕುಳಿತನು.

೧೦. ಆಗ ಆ ಸಪ್ತಋಷಿಗಳು ಹಿಮವಂತನು ಮೋಹಗೊಳಿಸಿದ ಶಿವಮಾಯೆಯನ್ನು ಪ್ರಶಂಸಿಸಿ, ಬಳಿಕ ಅರುಂಧತಿಯನ್ನು ಮೇನಕೆಯ ಬಳಿಗೆ ಕಳುಹಿಸಿದರು.

೧೧-೧೨. ತನ್ನ ಪತಿಯಾದ ವಸಿಷ್ಠನ ಅನುಮತಿಯನ್ನು ಪಡೆದು, ಅರುಂಧತಿಯು ಮೇನಾದೇವಿಯನ್ನು ಬೋಧಿಸಲು ಮೇನಾ ಮತ್ತು ಪಾರ್ವತಿಯರಿರುವಲ್ಲಿಗೆ ಹೋಗಿ, ಶೋಕದುಃಖಿತಳಾಗಿ ಮಲಗಿರುವ ಮೇನಾದೇವಿಯನ್ನು ನೋಡಿ ಅವಳನ್ನು ಕುರಿತು ಮಧುರವಾಗಿ ಇಂತೆಂದಳು.

೧೩. ಅರುಂಧತಿಯು ಹೇಳಿದಳು:—ಎಲೌ ಪತಿವ್ರತೆಯಾದ ಮೇನಕೆ, ಏಳು. ನಿನ್ನ ಮನೆಗೆ ಬಂದಿರುವೆನು. ನಾನು ಅರುಂಧತಿಯು. ದಯಾಳುಗಳಾದ ಸಪ್ತಋಷಿಳೂ ಬಂದಿರುವರು ಎನ್ನಲು,

॥ ಬ್ರಹ್ಮೋವಾಚ ॥

ಅರುಂಧತೀಸ್ವರಂ ಶ್ರುತ್ವಾ ಶೀಘ್ರಮುತ್ಥಾಯ ಮೇನಕಾ ।
ಉವಾಚ ಶಿರಸಾ ನತ್ವಾ ತಾಂ ಪದ್ಮಾಮಿವ ತೇಜಸಾ ॥ ೧೪ ॥

॥ ಮೆನೋವಾಚ ॥

ಅಹೋಽದ್ಯ ಕಿಮಿದಂ ಪುಣ್ಯಮಸ್ಮಾಕಂ ಪುಣ್ಯಜನ್ಮನಾಂ ।
ವಧೂರ್ಜಗದ್ವಿಧೇಃ ಪತ್ನೀ ವಸಿಷ್ಠಸ್ಯಾಗತೇಹ ವೈ ॥ ೧೫ ॥

ಕಿಮರ್ಥಮಾಗತಾ ದೇವಿ ತನ್ಮೇ ಬ್ರೂಹಿ ವಿಶೇಷತಃ ।
ಅಹಂ ದಾಸೀಸಮಾ ತೇ ಹಿ ಸಸುತಾ ಕರುಣಾಂ ಕುರು ॥ ೧೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಮೇನಕಾ ಸಾಧ್ವೀ ಬೋಧಯಿತ್ವಾ ಚ ತಾಂ ಬಹು ।
ತಥಾಗತಾಶ್ಚ ಸುಪ್ರೀತ್ಯಾ ಸಾಸ್ತೇ ಯತ್ರರ್ಷಯೋಽಪಿ ತೇ ॥ ೧೭ ॥

ಅಥ ಶೈಲೇಶ್ವರಂ ತೇ ಚ ಬೋಧಯಾಮಾಸುರಾದರಾತ್ ।
ಸ್ಮೃತ್ವಾ ಶಿವಪದದ್ವಂದ್ವಂ ಸರ್ವೇ ವಾಕ್ಯವಿಶಾರದಾಃ ॥ ೧೮ ॥

---

೧೪. ಅರುಂಧತಿಯ ಸ್ವರವನ್ನು ಕೇಳಿದೊಡನೆಯೇ ಮೇನಕೆಯು ಮೇಲಕ್ಕೆದ್ದು ಲಕ್ಷ್ಮಿಯಂತೆ ತೇಜಸ್ವಿನಿಯಾದ ಅರುಂಧತಿಯನ್ನು ತಲೆಬಾಗಿ ನಮಸ್ಕರಿಸಿ ಅವಳನ್ನು ಕುರಿತು,

೧೫. ಇದೇನಾಶ್ಚರ್ಯವು? ಜಗತ್ಕರ್ತ (ಬ್ರಹ್ಮ) ನ ಸೊಸೆಯೂ ವಸಿಷ್ಠನ ಪತ್ನಿಯೂ ಆದ ನೀನು ನಮ್ಮ ಮನೆಗೆ ಬಂದಿರುವೆ. ನಮ್ಮ ಪುಣ್ಯಕ್ಕೆ ಎಣೆಯುಂಟೇ?

೧೬. ಓ ದೇವಿ, ನಮ್ಮಲ್ಲಿಗೆ ನೀನು ಬಂದಿರುವ ಕಾರಣವೇನು? ನಾನೂ ನನ್ನ ಪುತ್ರಿಯೂ ನಿನಗೆ ಸೇವಕರು. ನಮ್ಮಲ್ಲಿ ಅನುಗ್ರಹವನ್ನು ಮಾಡು ಎಂದಳು.

೧೭. ಬ್ರಹ್ಮನು ಹೇಳಿದನು :—ಹೀಗೆ ಸಾಧ್ವಿಯಾದ ಮೇನಕೆಯು ಹೇಳಲು ಅವಳನ್ನು ಅರುಂಧತಿಯು ಚನ್ನಾಗಿ ಹಿತೋಪದೇಶಮಾಡಿ ಅವಳನ್ನೂ ಕರೆದುಕೊಂಡು ಸಪ್ತಋಷಿಗಳಿರುವಲ್ಲಿಗೆ ಬಂದಳು.

೧೮. ಬಳಿಕ ವಾಗ್ಮಿಗಳಾದ ಸಪ್ತಋಷಿಗಳು ಶಿವನ ಪಾದಕಮಲವನ್ನು ಸ್ಮರಿಸಿ ಹಿಮವಂತನಿಗೆ ಹೀಗೆ ಬೋಧಿಸಿದರು.

॥ ಋಷಯ ಊಚುಃ ॥

ಶೈಲೇಂದ್ರ ಶ್ರೂಯತಾಂ ವಾಕ್ಯಮಸ್ಮಾಕಂ ಶುಭಕಾರಣಂ ।
ಶಿವಾಯ ಪಾರ್ವತೀಂ ದೇಹಿ ಸಂಹರ್ತುಃ ಶ್ವಶುರೋ ಭವ ॥ ೧೯ ॥

ಅಯಾಚಿತಾರಂ ಸರ್ವೇಶಂ ಪ್ರಾರ್ಥಯಾಮಾಸ ಯತ್ನತಃ ।
ತಾರಕಸ್ಯ ವಿನಾಶಾಯ ಬ್ರಹ್ಮಾ ಸಂಬಂಧಕರ್ಮಣಿ ॥ ೨೦ ॥

ನೋತ್ಸುಕೋ ದಾರಸಂಯೋಗೇ ಶಂಕರೋ ಯೋಗಿನಾಂ ವರಃ ।
ವಿಧೇಃ ಪ್ರಾರ್ಥನಯಾ ದೇವಸ್ತವ ಕನ್ಯಾಂ ಗ್ರಹೀಷ್ಯತಿ ॥ ೨೧ ॥

ದುಹಿತುಸ್ತೇ ತಪಸ್ತಪ್ತಂ ಪ್ರತಿಜ್ಞಾತಂ ಚಕಾರ ಸಃ ।
ಹೇತುದ್ವಯೇನ ಯೋಗೀಂದ್ರೋ ವಿವಾಹಂ ಕರಿಷ್ಯತಿ ॥ ೨೨ ॥

---

೧೯. ಋಷಿಗಳು ಹೇಳಿದರು:—ಎಲೈ ಪರ್ವತರಾಜನೆ, ಮಂಗಳಕರವಾದ ನಮ್ಮ ವಾಕ್ಯವನ್ನು ಕೇಳು. ಶಿವನಿಗೆ ಪಾರ್ವತಿಯನ್ನು ಮದುವೆಮಾಡಿಕೊಡು. ಆದರಿಂದ ಪ್ರಳಯಕರ್ತೃವಾದ ಆ ಶಂಕರನ ಮಾವನಾಗುವೆ, ಲೋಕಪೂಜ್ಯನಾಗುವೆ.

೨೦. ಪರಮೇಶ್ವರನಿಗೆ ಮದುವೆಯಲ್ಲಿಷ್ಟವಿರಲಿಲ್ಲ. ಆದರೂ ಬ್ರಹ್ಮನು ತಾರಕಾಸುರನ ವಧೆಗೋಸ್ಕರ ಮದುವೆಮಾಡಿಕೊಳ್ಳವಂತೆ ಶಂಕರನನ್ನು ಪ್ರಾರ್ಥಿಸಿದನು.

೨೧. ಮಹಾಯೋಗಿಯಾದ ಮಹಾದೇವನು ಸ್ತ್ರೀಸಂಬಂಧದಲ್ಲಿಚ್ಛೆಯಿಲ್ಲದವನಾದರೂ ಬ್ರಹ್ಮನ ಪ್ರಾರ್ಥನೆಯಂತೆ ನಿನ್ನ ಮಗಳನ್ನು ಮದುವೆಯಾಗಬೇಕೆಂದಿರುವನು.

೨೨. ನಿನ್ನ ಪುತ್ರಿಯು ಶಿವನೇ ತನಗೆ ಪತಿಯಾಗಬೇಕೆಂದು ಇಚ್ಛಿಸಿ ತಪಸ್ಸನ್ನಾಚರಿಸಿರುವಳು. ಅವಳ ತಪಸ್ಸಿಗೆ ಪ್ರಸನ್ನನಾಗಿ ಪರಮೇಶ್ವರನು ಅವಳನ್ನು ಮದುವೆಯಾಗುವೆನೆಂದು ಪ್ರತಿಜ್ಞೆಮಾಡಿರುವನು. ಹೀಗೆ ಎರಡು ಕಾರಣಗಳಿಂದ ಆ ಯೋಗಿ ರಾಜನಾದ ಶಿವನು ವಿವಾಹವನ್ನು ಮಾಡಿಕೊಳ್ಳುವನು ಎಂದರು.

॥ ಬ್ರಹ್ಮೋವಾಚ ॥

ಋಷೀಣಾಂ ವಚನಂ ಶ್ರುತ್ವಾ ಪ್ರಹಸ್ಯ ಸ ಹಿಮಾಲಯಃ ।
ಉವಾಚ ಕಿಂಚಿದ್ಭೀತಸ್ತು ಪರಂ ವಿನಯಪೂರ್ವಕಂ ॥ ೨೩ ॥

ನೇಚ್ಛಾಮ್ಯತಿವಿನಿರ್ಲಿಪ್ತಯೋಗಿನೇ ಸ್ವಾಂ ಸುತಾಮಹಂ ।
ಯೂಯಂ ವೇದವಿಧಾತುಶ್ಚ ಪುತ್ರಾ ವದತ ನಿಶ್ಚಿತಂ ॥ ೨೪ ॥

ಶಿವಸ್ಯ ರಾಜಸಾಮಗ್ರೀಂ ನ ಹಿ ಪಶ್ಯಾಮಿ ಕಾಂಚನ ।
ಕಂಚಿದಾಶ್ರಯಮೈಶ್ವರ್ಯಂ ಕಂ ವಾಸ್ವಜನಬಾಂಧವಂ ॥ ೨೫ ॥

ವರಾಯಾನನುರೂಪಾಯ ಪಿತಾ ಕನ್ಯಾಂ ದದಾತಿ ಚೇತ್ ।
ಕಾಮಾನ್ಮೋಹಾದ್ಭಯಾಲ್ಲೋಭಾತ್ಸ ನಷ್ಟೋ ನರಕಂ ವ್ರಜೇತ್ ॥ ೨೬ ॥

ನ ಹಿ ದಾಸ್ಯಾಮ್ಯಹಂ ಕನ್ಯಾಮಿಚ್ಛಯಾ ಶೂಲಪಾಣಯೇ ।
ಯದ್ವಿಧಾನಂ ಭವೇದ್ಯೋಗ್ಯಮೃಷಯಸ್ತದ್ವಿಧೀಯತಾಂ ॥ ೨೭ ॥

---

೨೩. ಬ್ರಹ್ಮನು ಹೇಳಿದನು:—ಋಷಿಗಳ ಮಾತನ್ನು ಕೇಳಿ ಹಿಮವಂತನು ಸ್ವಲ್ಪ ಹೆದರಿದರೂ ವಿನಯದಿಂದ ಹೀಗೆ ಹೇಳಿದನು.

೨೪. ಮಹಾವಿರಕ್ತನೂ ಯೋಗಿಯೂ ಆದ ಶಿವನಿಗೆ ಪುತ್ರಿಯನ್ನು ಕೊಡಲೆನಗೆ ಇಚ್ಛೆಯಿಲ್ಲ. ನೀವು ವೇದವಿಧಾತೃವಾದ ಬ್ರಹ್ಮನ ಪುತ್ರರು. ಈಗಿನ ಸಂದರ್ಭದಲ್ಲಿ ಯಾವರೀತಿ ಮಾಡಿದರೆ ಉತ್ತಮವೆಂದು ತಿಳಿದು ನಿಶ್ಚಯಮಾಡಿರಿ.

೨೫. ಶಿವನಿಗೆ ಯಾವ ರಾಜಪರಿಕರವನ್ನೂ ನಾನು ಕಾಣೆನು. ಅವನಿಗೊಂದು ಆಶ್ರಯವೂ ಇಲ್ಲ. ಐಶ್ವರ್ಯವಿಲ್ಲ, ಸ್ವಜನರು, ಬಂಧುಗಳು, ಯಾರೂ ಇಲ್ಲ.

೨೬. ಕಾಮದಿಂದಲಾಗಲೀ, ಮೋಹದಿಂದಲಾಗಲೀ, ಭಯದಿಂದಲಾಗಲೀ, ಲೋಭದಿಂದಲಾಗಲೀ ಪುತ್ರಿಯನ್ನು ಅನುರೂಪನಲ್ಲದ ವರನಿಗೆ ಕೊಟ್ಟರೆ ನರಕವು ಪ್ರಾಪ್ತವಾಗುವುದು.

೨೭. ಆದಕಾರಣ ಶಂಕರನಿಗೆ ಮಗಳನ್ನು ಕೊಡಲು ನನಗಿಷ್ಟವಿಲ್ಲ. ಎಲೈ ಮುನಿಗಳೇ, ಈ ವಿಷಯದಲ್ಲಿ ಯಾವುದನ್ನು ಮಾಡಿದರೆ ಯೋಗ್ಯವಾಗುವುದೋ ಅದನ್ನು ನೀವೇ ನಿಶ್ಚಯಮಾಡಿ ಹೇಳಿರಿ ಎಂದನು.

॥ ಬ್ರಹ್ಮೋವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ಹಿಮಾಗಸ್ಯ ಮುನೀಶ್ವರ ।
ಪ್ರತ್ಯುವಾಚ ವಸಿಷ್ಠಸ್ತಂ ತೇಷಾಂ ವಾಕ್ಯವಿಶಾರದಃ ॥ ೨೮ ॥

॥ ವಸಿಷ್ಠ ಉವಾಚ ॥
ಶೃಣು ಶೈಲೇಶ ಮದ್ವಾಕ್ಯಂ ಸರ್ವಥಾ ತೇ ಹಿತಾವಹಂ ।
ಧರ್ಮಾವಿರುದ್ಧಂ ಸತ್ಯಂ ಚ ಪರತ್ರೇಹ ಮುದಾವಹಂ ॥ ೨೯ ॥

ವಚನಂ ತ್ರಿವಿಧಂ ಶೈಲ ಲೌಕಿಕೇ ವೈದಿಕೇಽಪಿಚ ।
ಸರ್ವಂ ಜಾನಾತಿ ಶಾಸ್ತ್ರಜ್ಞೋ ನಿರ್ಮಲಜ್ಞಾನಚಕ್ಷುಷಾ ॥ ೩೦ ॥

ಅಸತ್ಯಮಹಿತಂ ಪಶ್ಚಾತ್ಸಾಂಪ್ರತಂ ಶ್ರುತಿಸುಂದರಂ ।
ಸುಬುದ್ಧಿರ್ವಕ್ತಿ ಶತ್ರುರ್ಹಿ ಹಿತಂ ನೈವ ಕದಾಚನ ॥ ೩೧ ॥

ಆದಾವಪ್ರೀತಿಜನಕಂ ಪರಿಣಾಮೇ ಸುಖಾವಹಂ ।
ದಯಾಲುರ್ಧರ್ಮಶೀಲೋ ಹಿ ಬೋಧಯತ್ಯೇವ ಬಾಂಧವಃ ॥ ೩೨ ॥

---

೨೮-೨೯. ಬ್ರಹ್ಮನು ಹೇಳಿದನು:—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ, ಆ ಮುನಿಗಳಲ್ಲಿ ಉತ್ತಮವಾಗ್ಮಿಯಾದ ವಸಿಷ್ಠಮುನಿಯು, ಎಲೈ ಶೈಲರಾಜ, ನನ್ನ ಮಾತನ್ನು ಕೇಳು. ನನ್ನ ಮಾತು ನಿನಗೆ ಹಿತವಾದುದು. ಅದು ಧರ್ಮ ವಿರುದ್ಧವಲ್ಲ, ಸತ್ಯವಾದುದು. ಇಹಪರಗಳೆರಡರಲ್ಲಿಯೂ ಸುಖವನ್ನುಂಟುಮಾಡು ವಂತಹುದು.

೩೦. ಮೂರುವಿಧವಾದ ವಚನವು ಲೋಕದಲ್ಲಿಯೂ, ವೇದಗಳಲ್ಲಿಯೂ ಇರುವುದು. ಆ ಮೂರನ್ನೂ ಶಾಸ್ತ್ರಜ್ಞನು ತನ್ನ ಜ್ಞಾನದೃಷ್ಟಿಯಿಂದ ತಿಳಿಯುವನು.

೩೧. ಬುದ್ಧಿವಂತನಾದ ಶತ್ರುವು, ಕೇಳುವುದಕ್ಕೆ ಮನೋಹರವಾದಂತಹ ಮಾತನ್ನಾಡುವನು. ಆದರಾಮಾತು ಮುಂದೆ ಅಸತ್ಯವೂ, ಹಿತವಲ್ಲದುದೂ ಆಗಿರು ತ್ತದೆ. ಎಂದರೆ ಪರಿಣಾಮದಲ್ಲಿ ಅಹಿತವಾಗುವುದು.

೩೨. ದಯಾಲುವೂ, ಧರ್ಮಿಷ್ಠನೂ, ಹಿತವನ್ನು ಕೋರುವವನೂ ಆದ ಬಂಧುವು ಹೇಳುವ ಮಾತು ಮೊದಲು ಒಳ್ಳೆಯದಾಗಿ ಕಾಣದಿದ್ದರೂ ಕೊನೆಯಲ್ಲಿ ಸುಖವುಂಟುಮಾಡುವುದಾಗಿರುವುದು.

ಶ್ರುತಿಮಾತ್ರಾತ್ಸುಧಾತುಲ್ಯಂ ಸರ್ವಕಾಲಸುಖಾವಹಂ ।
ಸತ್ಯಸಾರಂ ಹಿತಕರಂ ವಚನಂ ಶ್ರೇಷ್ಠಮೀರಿತಂ ॥ ೩೩ ॥

ಏವಂ ಚ ತ್ರಿವಿಧಂ ಶೈಲ ನೀತಿಶಾಸ್ತ್ರೋದಿತಂ ವಚಃ ।
ಕಥ್ಯತಾಂ ತ್ರಿಷು ಮಧ್ಯೇ ಕಿಂ ಬ್ರುವೇ ವಾಕ್ಯಂ ತ್ವದೀಪ್ಸಿತಂ ॥ ೩೪ ॥

ಬ್ರಾಹ್ಮಸಂಪದ್ವಿಹೀನಶ್ಚ ಶಂಕರಸ್ತ್ರಿದಶೇಶ್ವರಃ ।
ತತ್ತ್ವಜ್ಞಾನಸಮುದ್ರೇಷು ಸನ್ನಿಮಗ್ನೈಕಮಾನಸಃ ॥ ೩೫ ॥

ಜ್ಞಾನಾನಂದಸ್ಯೇಶ್ವರಸ್ಯ ಬಾಹ್ಯವಸ್ತುಷು ಕಾ ಸ್ಪೃಹಾ ।
ಗೃಹೀ ದದಾತಿ ಸ್ವಸುತಾಂ ರಾಜ್ಯಸಂಪತ್ತಿಶಾಲಿನೇ ॥ ೩೬ ॥

ಕನ್ಯಕಾಂ ದುಃಖಿನೇ ದತ್ವಾ ಕನ್ಯಾಘಾತೀ ಭವೇತ್ಪಿತಾ ।
ಕೋ ವೇದ ಶಂಕರೋ ದುಃಖೀ ಕುಬೇರೋ ಯಸ್ಯ ಕಿಂಕರಃ ॥ ೩೭ ॥

---

೩೩. ಕೇಳಿದೊಡನೆ ಅಮೃತದಂತೆ ಮನೋಹರವಾಗಿರಬೇಕು. ಎಲ್ಲಾ ಕಾಲಗಳಲ್ಲೂ ಸುಖವನ್ನುಂಟುಮಾಡುವಂತಹುದಾಗಿರಬೇಕು. ಸತ್ಯವೂ ಹಿತವೂ ಆಗಿರಬೇಕು. ಇಂತಹ ಮಾತು ಎಲ್ಲಕ್ಕೂ ಶ್ರೇಷ್ಠವಾದುದು.

೩೪. ಎಲೈ ಶೈಲರಾಜ, ಹೀಗೆ ಮೂರುವಿಧವಾದ ವಚನಗಳನ್ನು ನೀತಿಶಾಸ್ತ್ರಗಳಲ್ಲಿ ಹೇಳಿರುವರು. ಈ ಮೂರರಲ್ಲಿ ನಿನಗೆಂತಹ ವಚನವು ಬೇಕು? ಹೇಳು.

೩೫. ಶಂಕರನಲ್ಲಿ ಬ್ರಹ್ಮನು ನಿರ್ಮಿಸಿದ ಲೌಕಿಕವಾದ ತುಚ್ಛ ಸಂಪತ್ತು (ಐಶ್ವರ್ಯ) ಗಳಾವುವೂ ಇಲ್ಲ. ಆತ್ಮಜ್ಞಾನವೆಂಬ ಸಮುದ್ರದಲ್ಲಿ ಸದಾ ಅವನು ಮುಳುಗಿರುವನು.

೩೬. ಜ್ಞಾನಸ್ವರೂಪನೂ ಆನಂದಮಯನೂ ಆದ ಈಶ್ವರನಿಗೆ ಬಾಹ್ಯವಸ್ತುಗಳಲ್ಲಿ ಆಶೆಯೆಲ್ಲಿಯದು? ಲೋಕದಲ್ಲಿ ಗೃಹಸ್ಥನು ತನ್ನ ಪುತ್ರಿಯನ್ನು ರಾಜ್ಯ ಮತ್ತು ಐಶ್ವರ್ಯಗಳುಳ್ಳವನಿಗೆ ಕೊಡುವನು.

೩೭. ದುಃಖಿಯಾದ ದರಿದ್ರನಿಗೆ ಕನ್ಯೆಯನ್ನು ಕೊಟ್ಟರೆ ತಂದೆಯು ಕನ್ಯೆಯನ್ನು ಕೊಂದ ಪಾಪಕ್ಕೆ ಭಾಗಿಯಾಗುವನು. ಆದರೆ ಶಂಕರನು ದುಃಖಿಯೆಂದು ಹೇಳುವವನಾರು? ಧನಪತಿಯಾದ ಕುಬೇರನೇ ಅವನ ಸೇವಕನು.

ಭ್ರೂಭಂಗಲೀಲಯಾ ಸೃಷ್ಟಿಂ ಸ್ರಷ್ಟುಂ ಹರ್ತುಂ ಕ್ಷಮೋ ಹಿ ಸಃ ।
ನಿರ್ಗುಣಃ ಪರಮಾತ್ಮಾ ಚ ಪರೇಶಃ ಪ್ರಕೃತೇಃ ಪರಃ ॥ ೩೮ ॥

ಯಸ್ಯ ಚ ತ್ರಿವಿಧಾ ಮೂರ್ತಿರ್ವಿಧಾತುಃ ಸೃಷ್ಟಿಕರ್ಮಣಿ ।
ಸೃಷ್ಟಿಸ್ಥಿತ್ಯಂತಜನನೀ ಬ್ರಹ್ಮವಿಷ್ಣುಹರಾಭಿಧಾ ॥ ೩೯ ॥

ಬ್ರಹ್ಮಾ ಚ ಬ್ರಹ್ಮಲೋಕಸ್ಥೋ ವಿಷ್ಣುಃ ಕ್ಷೀರೋದವಾಸಕೃತ್ ।
ಹರಃ ಕೈಲಾಸನಿಲಯಃ ಸರ್ವಾಃ ಶಿವವಿಭೂತಯಃ ॥ ೪೦ ॥

ಧತ್ತೇ ಚ ತ್ರಿವಿಧಾ ಮೂರ್ತೀಃ ಪ್ರಕೃತಿಃ ಶಿವಸಂಭವಾ ।
ಅಂಶೇನ ಲೀಲಯಾ ಸೃಷ್ಟ್ವಾ ಕಲಯಾ ಬಹುಧಾ ಅಪಿ ॥ ೪೧ ॥

ಮುಖೋದ್ಭವಾ ಸ್ವಯಂ ವಾಣೀ ವಾಗಧಿಷ್ಠಾತೃದೇವತಾ ।
ವಕ್ಷಸ್ಥಲೋದ್ಭವಾ ಲಕ್ಷ್ಮೀಸ್ಸರ್ವಸಂಪತ್ಸ್ವರೂಪಿಣೀ ॥ ೪೨ ॥

---

೩೮. ಭ್ರೂಲೀಲೆಯಿಂದಲೇ ಆ ಶಿವನು ಜಗತ್ತನ್ನು ಸೃಷ್ಟಿಸಲೂ ಸಂಹರಿಸಲೂ ಸಮರ್ಥನು. ಅವನು ನಿರ್ಗುಣನು. ಪರಮಾತ್ಮನು. ಪ್ರಕೃತಿಯ ಸಂಬಂಧವಿಲ್ಲದ ಪರೇಶನು.

೩೯. ಆ ಪರಮೇಶ್ವರನೇ ಬ್ರಹ್ಮ ವಿಷ್ಣು ರುದ್ರ ಈ ಮೂರು ರೂಪಗಳನ್ನು ಧರಿಸಿ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವನು.

೪೦. ಬ್ರಹ್ಮಲೋಕದಲ್ಲಿರುವ ಬ್ರಹ್ಮ, ಕ್ಷೀರಸಾಗರದಲ್ಲಿರುವ ವಿಷ್ಣು, ಕೈಲಾಸದಲ್ಲಿರುವ ರುದ್ರ ಈ ಮೂವರೂ ಪರಶಿವನ ವಿಭೂತಿಗಳು.

೪೧. ಶಿವನಿಂದ ಜನಿಸಿದ ಪ್ರಕೃತಿಯು ಹರಿಬ್ರಹ್ಮರೂಪಗಳಾದ ಮೂರು ಮೂರ್ತಿಗಳನ್ನು ಶಿವನ ಅಂಶದಿಂದಲೇ ರಚಿಸುವುದು.

೪೨. ವಾಕ್ಕಿನ ಅಧಿದೇವತೆಯಾದ ವಾಣಿಯು ಪರಮೇಶ್ವರ ಮುಖದಿಂದ ಜನಿಸಿರುವಳು. ಸಕಲೈಶ್ವರ್ಯರೂಪಳಾದ ಲಕ್ಷ್ಮಿಯು ಹೃದಯದಿಂದ ಜನಿಸಿರುವಳು.

ಶಿವಾ ತೇಜಸ್ಸು ದೇವಾನಾಮಾವಿರ್ಭಾವನಂ ಚಕಾರ ಸಾ ।
ನಿಹತ್ಯ ದಾನವಾನ್ ಸರ್ವಾನ್ ದೇವೇಭ್ಯಶ್ಚ ಶ್ರಿಯಂ ದದೌ ॥ ೪೩ ॥

ಪ್ರಾಪ ಕಲ್ಪಾಂತರೇ ಜನ್ಮ ಜಠರೇ ದಕ್ಷಯೋಷಿತಃ ।
ನಾಮ್ನಾ ಸತೀ ಹರಂ ಪ್ರಾಪ ದಕ್ಷಸ್ತಸ್ಮೈ ದದೌ ಚ ತಾಂ ॥ ೪೪ ॥

ದೇಹಂ ತತ್ಯಾಜ ಯೋಗೇನ ಶ್ರುತ್ವಾ ಸಾ ಭರ್ತೃನಿಂದನಂ ।
ಸಾದ್ಯ ತ್ವತ್ತಸ್ತು ಮೇನಾಯಾ ಜಜ್ಞೇ ಜಠರತಃ ಶಿವಾ ॥ ೪೫ ॥

ಶಿವಾ ಶಿವಸ್ಯ ಪತ್ನೀಯಂ ಶೈಲ ಜನ್ಮನಿ ಜನ್ಮನಿ ।
ಕಲ್ಪೇ ಕಲ್ಪೇ ಬುದ್ಧಿರೂಪಾ ಜ್ಞಾನಿನಾಂ ಜನನೀ ಪರಾ ॥ ೪೬ ॥

ಜಾಯತೇ ಸ್ಮ ಸದಾ ಸಿದ್ಧಾ ಸಿದ್ಧಿದಾ ಸಿದ್ಧಿರೂಪಿಣೀ ।
ಸತ್ಯಾ ಅಸ್ಥಿ ಚಿತಾಭಸ್ಮ ಭಕ್ತ್ಯಾ ಧತ್ತೇ ಹರಃ ಸ್ವಯಂ ॥ ೪೭ ॥

---

೪೩. ಪರಮೇಶ್ವರಿಯು ಸಮಸ್ತ ದೇವತೆಗಳ ತೇಜಸ್ಸನ್ನೊಳಗೊಂಡು ಮಹಿಷಾಸುರಮರ್ದಿನಿಯ ರೂಪದಿಂದ ಆವಿರ್ಭವಿಸಿದಳು. ಅವಳು ದೈತ್ಯರನ್ನೆಲ್ಲಾ ಸಂಹರಿಸಿ ದೇವತೆಗಳಿಗೆ ಐಶ್ವರ್ಯವನ್ನು ಕೊಟ್ಟಳು.

೪೪. ಆ ಕಾಳಿಯು ತಿರುಗಿ ಬೇರೆ ಕಲ್ಪದಲ್ಲಿ ದಕ್ಷನ ಪತ್ನಿಯಲ್ಲಿ ಸತೀದೇವಿಯಾಗಿ ಹರನನ್ನು ಪಡೆದಳು. ದಕ್ಷನು ಅವಳನ್ನು ಹರನಿಗೆ ಮದುವೆಮಾಡಿ ಕೊಟ್ಟನು.

೪೫. ತಂದೆಯ ಯಜ್ಞದಲ್ಲಾ ಸತಿಯು ಪತಿಯ ನಿಂದೆಯನ್ನು ಕೇಳಿ ಯೋಗದಿಂದ ದೇಹವನ್ನು ತ್ಯಜಿಸಿದಳು. ಅವಳೇ ಈಗ ನಿನ್ನ ಪತ್ನಿಯಾದ ಮೇನಾದೇವಿಯ ಉದರದಲ್ಲಿ ಜನಿಸಿರುವಳು.

೪೬. ಎಲೈ ಹಿಮವಂತನೆ, ಆ ಕಾಳಿಯು ಪ್ರತಿಜನ್ಮದಲ್ಲಿಯೂ ಶಿವನ ಪತ್ನಿಯೇ ಆಗಿರುವಳು. ಬುದ್ಧಿರೂಪಳಾದ ಅವಳು ಎಲ್ಲಾ ಕಲ್ಪಗಳಲ್ಲಿಯೂ ಜ್ಞಾನಿಗಳುದಯಿಸುವಂತೆ ಮಾಡುವಳು.

೪೭. ಸಿದ್ಧಿರೂಪಳಾದ ಪರಮೇಶ್ವರಿಯು ಸದಾ ಸಿದ್ಧಿಯನ್ನು ಕೊಡುವ ಸಿದ್ಧಳಾಗಿರುವಳು. ಅಂತಹ ಸತೀದೇವಿಯ ಅಸ್ಥಿ (ಎಲುಬು) ಮತ್ತು ಚಿತಾಭಸ್ಮಗಳನ್ನು ಶಂಕರನು ಪ್ರೀತಿಯಿಂದ ಸದಾ ಧರಿಸುವನು.

ಅತಸ್ತ್ವಂ ಸ್ವೇಚ್ಛಯಾ ಕನ್ಯಾಂ ದೇಹಿ ಭದ್ರಾಂ ಹರಾಯ ಚ ।
ಅಥವಾ ಸಾ ಸ್ವಯಂಕಾತಸ್ಥಾನೇ ಯಾಸ್ಯತಿ ದಾಸ್ಯಸಿ ॥ ೪೮ ॥

ಕೃತ್ವಾ ಪ್ರತಿಜ್ಞಾಂ ದೇವೇಶೋ ದೃಷ್ಟ್ವಾ ಕ್ಲೇಶಮಸಂಖ್ಯಕಂ ।
ದುಹಿತುಸ್ತೇ ತಪಃಸ್ಥಾನಮಾಜಗಾಮ ದ್ವಿಜಾತ್ಮಕಃ ॥ ೪೯ ॥

ತಾಮಾಶ್ವಾಸ್ಯ ವರಂ ದತ್ವಾ ಜಗಾಮ ನಿಜಮಂದಿರಂ ।
ತತ್ಪ್ರಾರ್ಥನಾವಶಾಚ್ಛಂಭುರ್ಯಯಾಚೇ ತ್ವಾಂ ಶಿವಾಂ ಗಿರೇ ॥ ೫೦ ॥

ಅಂಗೀಕೃತಂ ಯುವಾಭ್ಯಾಂ ತಚ್ಛಿವಭಕ್ತಿರತಾತ್ಮನಾ ।
ವಿಪರೀತಮತಿರ್ಜಾತಾ ವದ ಕಸ್ಮಾದ್ಗಿರೀಶ್ವರ ॥ ೫೧ ॥

ಗದ್ಗತ್ವಾ ಪ್ರಭುಣಾ ದೇವ ಪ್ರಾರ್ಥಿತೇನ ತ್ವದಂತಿಕಂ ।
ಪ್ರಸ್ಥಾಪಿತಾ ವಯಂ ಶೀಘ್ರಂ ಹ್ಯೃಷಯಸ್ಸಾಸ್ಯರುಂಧತೀ ॥ ೫೨ ॥

---

೪೮. ಆದುದರಿಂದ ಎಲೈ ಪರ್ವತರಾಜನೆ, ನೀನೇ ಸ್ವೇಚ್ಛೆಯಿಂದ ಮಂಗಳ ರೂಪಳಾದ ನಿನ್ನ ಪುತ್ರಿಯನ್ನು ಶಿವನಿಗೆ ಕೊಡು. ಇಲ್ಲದಿದ್ದರೆ ಅವಳೇ ತಾನಾಗಿ ಹರನ ಬಳಿಗೆ ತೆರಳುವಳು. ಆಗ ತಾನಾಗಿಯೇ ಕೊಡಬೇಕಾಗುವುದು.

೪೯. ನಿನ್ನ ಮಗಳ ತಪಸ್ಸಿನ ಕ್ಲೇಶವನ್ನು ನೋಡಿ ಕನಿಕರಗೊಂಡು ಪಾರ್ವತಿಯ ಇಷ್ಟವನ್ನು ನೆರವೇರಿಸುವೆನೆಂದು ಪ್ರತಿಜ್ಞೆಮಾಡಿ ಮಹೇಶನು ಬ್ರಾಹ್ಮಣರೂಪದಿಂದ ಪಾರ್ವತಿಯ ತಪೋವನಕ್ಕೆ ಹೋಗಿ,

೫೦. ಅಲ್ಲಿ ಪಾರ್ವತಿಯನ್ನು ಸಮಾಧಾನಗೊಳಿಸಿ ಅವಳಿಗೆ ಬೇಕಾದ ವರವನ್ನು ಕೊಟ್ಟು ತನ್ನ ಸ್ಥಾನಕ್ಕೆ ತೆರಳಿದನು. ಪಾರ್ವತಿಯ ಆಗಿನ ಪ್ರಾರ್ಥನೆಯಂತೆಯೇ ಶಿವನು ಅವಳನ್ನು ಮದುವೆಯಾಗಲು ನಿನ್ನನ್ನು ಪ್ರಾರ್ಥಿಸಿದನು.

೫೧. ಶಿವನ ಪ್ರಾರ್ಥನೆಯನ್ನು ಶಿವಭಕ್ತರಾದ ನೀವು ಆಗ ಅಂಗೀಕರಿಸಿರುವಿರಿ. ಹೀಗಿದ್ದು, ಈಗ ನಿಮಗೆ ಬುದ್ಧಿಬದಲಾಯಿಸಲು ಕಾರಣವೇನು?

೫೨. ದೇವತೆಗಳು ಪ್ರಾರ್ಥಿಸಲಾಗಿ ಶಂಕರನು ನಿನ್ನ ಬಳಿಗೆ ನಮ್ಮನ್ನೂ ಅರುಂಧತಿಯನ್ನೂ ಕಳುಹಿಸಿರುವನು.

ಶಿಕ್ಷಯಾಮೋ ವಯಂ ತ್ವಾಂ ಹಿ ದತ್ವಾ ರುದ್ರಾಯ ಪಾರ್ವತೀಂ ।
ಏವಂ ಕೃತೇ ಮಹಾನಂದೋ ಭವಿಷ್ಯತಿ ಗಿರೇ ತವ ॥ ೫೩ ॥

ಶಿವಾಂ ಶಿವಾಯ ಶೈಲೇಂದ್ರ ಸ್ವೇಚ್ಛಯಾ ಚೇನ್ನ ದಾಸ್ಯಸಿ ।
ಭವಿತಾ ತದ್ವಿವಾಹೋಽತ್ರ ಭವಿತವ್ಯಬಲೇನ ಹಿ ॥ ೫೪ ॥

ವರಂ ದದೌ ಶಿವಾಯೈ ಸ ತಪಂತ್ಯೈ ತಾತ ಶಂಕರಃ ।
ನ ಹೀಶ್ವರಂ ಪ್ರತಿಜ್ಞಾತಂ ವಿಪರೀತಾಯ ಕಲ್ಪತೇ ॥ ೫೫ ॥

ಅಹೋ ಪ್ರತಿಜ್ಞಾ ದುರ್ಲಂಘ್ಯಾ ಸಾಧೂನಾಮೀಶವರ್ತಿನಾಂ ।
ಸರ್ವೇಷಾಂ ಜಗತಾಂ ಮಧ್ಯೇ ಕಿಮೀಶಸ್ಯ ಪುನರ್ಗಿರೇ ॥ ೫೬ ॥

ಏಕೋ ಮಹೇಂದ್ರಶ್ಶೈಲಾನಾಂ ಪಕ್ಷಾಂಶ್ಚಿಚ್ಛೇದ ಲೀಲಯಾ ।
ಪಾರ್ವತೀ ಲೀಲಯಾ ಮೇರೋಃ ಶೃಂಗಭಂಗಂ ಚಕಾರ ಚ ॥ ೫೭ ॥

---

೫೩. ಶಿವನಪ್ಪಣೆಯಂತೆ ನಾವು ಈಗ ನಿನಗೆ ಹಿತವನ್ನೇ ಹೇಳುತ್ತಿರುವೆವು. ಎಲೈ ಪರ್ವತರಾಜ, ನಿಶ್ಚಿಂತನಾಗಿ ಪಾರ್ವತಿಯನ್ನು ರುದ್ರನಿಗೆ ಕೊಡು. ಅದರಿಂದ ನಿನಗೆ ಮಹತ್ತಾದ ಆನಂದವು ಲಭಿಸುವುದು.

೫೪. ಪಾರ್ವತಿಯನ್ನು ನೀನಾಗಿ ಶಿವನಿಗೆ ಕೊಡದಿದ್ದರೆ ಅವರೀರ್ವರ ವಿವಾಹವು ಅದೃಷ್ಟದ ಬಲದಿಂದ ಆಗಿಯೇ ಆಗುವುದು.

೫೫. ಪಾರ್ವತಿಯನ್ನು ಮದುವೆಯಾಗುವೆನೆಂದು ಅವನು ಅವಳಿಗೆ ವರವನ್ನು ಕೊಟ್ಟಿರುವನು. ಈಶ್ವರಸಂಕಲ್ಪವು ಎಂದಿಗೂ ಸುಳ್ಳಾಗುವುದಿಲ್ಲವಷ್ಟೆ.

೫೬. ಸತ್ಪುರುಷರು ಪ್ರಭುಗಳ ಸಂಕಲ್ಪವನ್ನು ಮೀರಲಸದಳವು. ಹೀಗಿರಲು ಜಗದೀಶ್ವರನ ಸಂಕಲ್ಪವನ್ನು ಮೀರುವುದು ಸಾಧ್ಯವೆ?

೫೭. ದೇವೇಂದ್ರನೋರ್ವನೇ ಎಲ್ಲ ಪರ್ವತಗಳ ರೆಕ್ಕೆಗಳನ್ನು ಲೀಲೆಯಿಂದ ಕತ್ತರಿಸಿದನು. ಪಾರ್ವತಿಯು ಮೇರುಶಿಖರವನ್ನು ಲೀಲೆಯಿಂದಲೇ ಭೇದಿಸಿದಳು.

ಏಕಾರ್ಥೇನ ಹಿ ಶೈಲೇಶ ನಾಶ್ಯಾಸ್ಸರ್ವಾ ಹಿ ಸಂಪದಃ ।
ಏಕಂ ತ್ಯಜೇತ್ಕುಲಸ್ಯಾರ್ಥೇ ಶ್ರುತಿರೇಷಾ ಸನಾತನೀ ॥ ೫೮ ॥

ದತ್ವಾ ವಿಪ್ರಾಯ ಸ್ವಸುತಾಮನರಣ್ಯೋ ನೃಪೇಶ್ವರಃ ।
ಬ್ರಾಹ್ಮಣಾದ್ಭಯಮಾಪನ್ನೋ ರರಕ್ಷ ನಿಜಸಂಪದಂ ॥ ೫೯ ॥

ತಮಾಶು ಬೋಧಯಾಮಾಸುರ್ನೀತಿಶಾಸ್ತ್ರವಿದೋ ಜನಾಃ ।
ಬ್ರಹ್ಮಶಾಪಾದ್ವಿಭೀತಾಶ್ಚ ಗುರುವೋ ಜ್ಞಾತಿಸತ್ತಮಾಃ ॥ ೬೦ ॥

ಶೈಲರಾಜ ತ್ವಮಪ್ಯೇವಂ ಸುತಾಂ ದತ್ವಾ ಶಿವಾಯ ಚ ।
ರಕ್ಷ ಸರ್ವಾನ್ ಬಂಧುವರ್ಗಾನ್ ವಶಂ ಕುರು ಸುರಾನಪಿ ॥ ೬೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಸಿಷ್ಠಸ್ಯ ವಚನಂ ಸ ಪ್ರಹಸ್ಯ ಚ ।
ಪಪ್ರಚ್ಛ ನೃಪವಾರ್ತಾಂ ಚ ಹೃದಯೇನ ವಿದೂಯತಾ ॥ ೬೨ ॥

---

೫೮. ಒಂದೇ ವಸ್ತುವಿನಿಂದ ಸಕಲೈಶ್ವರ್ಯಗಳೂ ನಾಶವಾಗುವುವು. ಎಂದು ಅನಾದಿಯಾದ ಗಾದೆಯಿರುವುದು.

೫೯. ಬ್ರಾಹ್ಮಣನಿಂದ (ಶಾಪ) ಭಯವನ್ನು ಹೊಂದಿದ, ಅನರಣ್ಯನೆಂಬ ಚಕ್ರವರ್ತಿಯು ಅವನಿಗೆ ಮಗಳನ್ನು ಕೊಟ್ಟು ತನ್ನ ಐಶ್ವರ್ಯಗಳೆಲ್ಲವನ್ನೂ ರಕ್ಷಿಸಿ ಕೊಂಡನು.

೬೦. ನೀತಿಶಾಸ್ತ್ರಗಳನ್ನು ಬಲ್ಲ ಸಚಿವರೂ ಬಂಧುಗಳೂ ಗುರುಗಳೂ ಸಹ ಬ್ರಾಹ್ಮಣಶಾಪಕ್ಕೆ ಹೆದರಿ ಆ ಅನರಣ್ಯರಾಜನಿಗೆ ಮಗಳನ್ನು ಕೊಡುವಂತೆ ಉಪ ದೇಶಿಸಿದರು.

೬೧. ಅದರಂತೆಯೇ ನೀನೂ ಸಹ ಮಗಳನ್ನು ಶಿವನಿಗೆ ಕೊಟ್ಟು ಬಂಧು ವರ್ಗವನ್ನು ರಕ್ಷಿಸು. ಅದರಿಂದ ದೇವತೆಗಳೂ ನಿನ್ನ ಅಧೀನರಾಗುವರು. ನಿನ್ನನ್ನು ಗೌರವಿಸುವರು ಎಂದನು.

೬೨. ಬ್ರಹ್ಮನು ಹೇಳಿದನು :—ಹೀಗೆ ವಸಿಷ್ಠಮುನಿಯು ಹೇಳಿದ ಮಾತನ್ನು ಕೇಳಿ ಹಿಮವಂತನು ವಿಸ್ಮಯಗೊಂಡು ಅನರಣ್ಯನ ವೃತ್ತಾಂತವೇನೆಂದು ಪ್ರಶ್ನಿಸಿದನು.

॥ ಹಿಮಾಲಯ ಉವಾಚ ॥
ಕಸ್ಯ ವಂಶೋದ್ಭವೋ ಬ್ರಹ್ಮನ್ನನರಣ್ಯೋ ನೃಪಶ್ಚ ಸಃ ।
ಸುತಾಂ ದತ್ವಾ ಸ ಚ ಕಥಂ ರರಕ್ಷಾಖಿಲಸಂಪದಃ ॥ ೬೩ ॥

॥ ಬ್ರಹ್ಮೋವಾಚ ॥
ಇತಿ ಶ್ರುತ್ವಾ ವಸಿಷ್ಠಸ್ಸ ಶೈಲವಾಕ್ಯಂ ಪ್ರಸನ್ನಧೀಃ ।
ಪ್ರೋವಾಚ ಗಿರಯೇ ತಸ್ಮೈ ನೃಪವಾರ್ತಾಂ ಸುಖಾವಹಾಂ ॥ ೬೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ತ್ರಯಸ್ತ್ರಿಂಶೋಽಧ್ಯಾಯಃ



---

೬೩-೬೪. ಓ ವಿಪ್ರೋತ್ತಮ, ಆ ಅನರಣ್ಯರಾಜನು ಯಾವ ವಂಶದವನು? ಪುತ್ರಿಯನ್ನು ಕೊಟ್ಟು ಅವನು ತನ್ನ ಸಕಲ ಸಂಪತ್ತುಗಳನ್ನು ಹೇಗೆ ಕಾಪಾಡಿಕೊಂಡನು? ಇದನ್ನು ನನಗೆ ಹೇಳೆನ್ನಲು, ಹಿಮವಂತನು ಹೇಳಿದ ಮಾತನ್ನು ಪ್ರಸನ್ನತೆಯಿಂದ ಕೇಳಿ, ವಸಿಷ್ಠಮುನಿಯು ಮನೋಹರವಾದ ಅನರಣ್ಯನ ವೃತ್ತಾಂತವನ್ನು ಇಂತು ವಿವರಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತಮೂರನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಚತುಸ್ತ್ರಿಂಶೋಽಧ್ಯಾಯಃ

॥ ವಸಿಷ್ಠ ಉವಾಚ ॥

ಮನೋರ್ವಂಶೋದ್ಭವೋ ರಾಜಾ ಸೋಽನರಣ್ಯೋ ನೃಪೇಶ್ವರಃ ।
ಇಂದ್ರಸಾವರ್ಣಿಸಂಜ್ಞಸ್ಯ ಚತುರ್ದಶಮಿತಸ್ಯ ಹಿ ॥ ೧ ॥

ಅನರಣ್ಯೋ ನೃಪಶ್ರೇಷ್ಠಃ ಸಪ್ತದ್ವೀಪಮಹೀಪತಿಃ ।
ಶಂಭುಭಕ್ತೋ ವಿಶೇಷೇಣ ಮಂಗಲಾರಣ್ಯಜೋ ಬಲೀ ॥ ೨ ॥

ಭೃಗುಂ ಪುರೋಧಸಂ ಕೃತ್ವಾ ಶತಂ ಯಜ್ಞಾಂಶ್ಚಕಾರ ಹ ।
ನ ಸ್ವೀಚಕಾರ ಶಕ್ರತ್ವಂ ದೀಯಮಾನಂ ಸುರೈರಪಿ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯವು

೧. ವಸಿಷ್ಠಮುನಿಯು ಹೇಳಿದನು:--ಎಲೈ ಪರ್ವತರಾಜನೇ, ಕೇಳು ಆ ಅನರಣ್ಯ ಚಕ್ರವರ್ತಿಯು ಇಂದ್ರಸಾವರ್ಣಿಯೆಂಬ ಹದಿನಾಲ್ಕನೆಯ ಮನುವಿನ ವಂಶದಲ್ಲಿ ಜನಿಸಿದವನು.

೨. ಆ ರಾಜನು ಸಪ್ತದ್ವೀಪಗಳಿಗೂ ರಾಜನಾಗಿದ್ದನು. ಅವನು ಮಹಾ ಶಿವಭಕ್ತನು. ಮಂಗಲಾರಣ್ಯನಿಂದ ಜನಿಸಿದವನು, ಮಹಾಬಲಿಷ್ಠನು.

೩. ಅವನು ಭೃಗುಮುನಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡು ನೂರುಯಾಗಗಳನ್ನು ಮಾಡಿದನು. ಆದರೆ ದೇವತೆಗಳು ಕೊಡಲಿಚ್ಛಿಸಪಟ್ಟರೂ ಸಹ ಇಂದ್ರಪದವಿಯನ್ನವನು ಸ್ವೀಕರಿಸಲಿಲ್ಲ.

ಬಭೂವುಃ ಶತಪುತ್ರಾಶ್ಚ ರಾಜ್ಞಸ್ತಸ್ಯ ಹಿಮಾಲಯ ।
ಕನ್ಯೈಕಾ ಸುಂದರೀ ನಾಮ್ನಾ ಪದ್ಮಾ ಪದ್ಮಾಲಯಾಸಮಾ ॥ ೪ ॥

ಯಃ ಸ್ನೇಹಃ ಪುತ್ರಶತಕೇ ಕನ್ಯಾಯಾಂಚ ತತೋಽಧಿಕಃ ।
ನೃಪಸ್ಯ ತಸ್ಯ ತಸ್ಯಾಂ ಹಿ ಬಭೂವ ನೃಪಸತ್ತಮ ॥ ೫ ॥

ಪ್ರಾಣಾಧಿಕಾಃ ಪ್ರಿಯತಮಾ ಮಹಿಷ್ಯಃ ಸರ್ವಯೋಷಿತಃ ।
ನೃಪಸ್ಯ ಪತ್ನ್ಯಃ ಪಂಚಾಸರ್ ಸರ್ವಾಃ ಸೌಭಾಗ್ಯಸಂಯುತಾಃ ॥ ೬ ॥

ಸಾ ಕನ್ಯಾ ಯೌವನಸ್ಥಾ ಚ ಬಭೂವ ಸ್ವಪಿತುರ್ಗೃಹೇ ।
ಪುತ್ರಂ ಪ್ರಸ್ಥಾಪಯಾಮಾಸ ಸುವರಾನಯನಾಯ ಸಃ ॥ ೭ ॥

ಏಕದಾ ಪಿಪ್ಪಲಾದರ್ಷಿರ್ಗಂತುಂ ಸ್ವಾಶ್ರಮಮುತ್ಸುಕಃ ।
ತಪಃಸ್ಥಾನೇ ನಿರ್ಜನೇ ಚ ಗಂಧರ್ವಂ ಸಂದದರ್ಶ ಹ ॥ ೮ ॥

---

೪. ಆ ಅನರಣ್ಯರಾಜನಿಗೆ ನೂರುಜನ ಗಂಡುಮಕ್ಕಳಾದರು. ಕನ್ಯೆಯೋರ್ವಳು ಜನಿಸಿದಳು. ಅವಳು ತುಂಬಾ ಸುಂದರಿಯಾಗಿದ್ದು ಸಾಕ್ಷಾತ್ ಲಕ್ಷ್ಮಿಯಂತಿದ್ದಳು. ಅವಳ ಹೆಸರು "ಪದ್ಮಾ" ಎಂದು.

೫. ಅನರಣ್ಯರಾಜನಿಗೆ ನೂರುಜನ ಮಕ್ಕಳಲ್ಲಿ ಇರುವುದಕ್ಕಿಂತಲೂ ಹೆಚ್ಚಾದ ಪ್ರೀತಿಯು ಆ ಕನ್ಯೆಯಲ್ಲಿ ಇದ್ದಿತು.

೬. ಆ ರಾಜನಿಗೆ ಪ್ರಾಣಕ್ಕಿಂತಲೂ ಪ್ರಿಯರಾದಂತಹ ಐದುಜನ ಹೆಂಡತಿಯರಿದ್ದರು. ಎಲ್ಲರೂ ಒಳ್ಳೇ ಸೌಭಾಗ್ಯಸಂಪನ್ನರು.

೭. ಆ ಕನ್ಯೆಯು ತಂದೆಯ ಮನೆಯಲ್ಲಿ ಬೆಳೆಯುತ್ತಾ ಯೌವನವತಿಯಾದಳು. ಬಳಿಕ ಅನರಣ್ಯನು ಒಳ್ಳೆಯ ವರಗಳನ್ನು ಹುಡುಕಿಕೊಂಡು ಬರಲು ತನ್ನ ಮಕ್ಕಳನ್ನು ಬೇರೆ ದೇಶಗಳಿಗೆ ಕಳುಹಿದನು.

೮. ಒಂದುದಿನ ಪಿಪ್ಪಲಾದನೆಂಬ ಮಹರ್ಷಿಯು ನಿರ್ಜನವಾದ ವನದಲ್ಲಿ ತಪಸ್ಸನ್ನು ಮಾಡುತ್ತಿದ್ದು ಅದು ಮುಗಿದಮೇಲೆ ತನ್ನ ಆಶ್ರಮಕ್ಕೆ ತೆರಳಲುದ್ಯುಕ್ತನಾಗಿದ್ದನು. ಆಗ ಅವನು ಎದುರಿನಲ್ಲಿ ಓರ್ವ ಗಂಧರ್ವನನ್ನು ಕಂಡನು.

ಸ್ತ್ರೀಯುತಂ ಮಗ್ನಚಿತ್ತಂ ಚ ಶೃಂಗಾರೇ ರಸಸಾಗರೇ ।
ವಿಹರಂತಂ ಮಹಾಪ್ರೇಮ್ಣಾ ಕಾಮಶಾಸ್ತ್ರವಿಶಾರದಂ ॥ ೯ ॥

ದೃಷ್ಟ್ವಾ ತಂ ಮುನಿಶಾರ್ದೂಲಃ ಸಕಾಮಃ ಸಂಬಭೂವ ಹ ।
ತಪಸ್ಸ್ವದತ್ತಚಿತ್ತಶ್ಚಾಚಿಂತಯದ್ದಾರಸಂಗ್ರಹಂ ॥ ೧೦ ॥

ಏವಂ ವೃತ್ತಸ್ಯ ತಸ್ಯೈವ ಪಿಪ್ಪಲಾದಸ್ಯ ಸನ್ಮುನೇಃ ।
ಕಿಯತ್ಕಾಲೋ ಗತಸ್ತತ್ರ ಕಾಮೋನ್ಮಥಿತಚೇತಸಃ ॥ ೧೧ ॥

ಏಕದಾ ಪುಷ್ಪಭದ್ರಾಯಾಂ ಸ್ನಾತುಂ ಗಚ್ಛನ್ಮುನೀಶ್ವರಃ ।
ದದರ್ಶ ಪದ್ಮಾಂ ಯುವತೀಂ ಪದ್ಮಾಮಿವ ಮನೋರಮಾಂ ॥ ೧೨ ॥

ಕೇಯಂ ಕನ್ಯೇತಿ ಪಪ್ರಚ್ಛ ಸಮೀಪಸ್ಥಾನ್ ಜನಾನ್ ಮುನಿಃ ।
ಜನಾ ನಿವೇದಯಾಂಚಕ್ರುರ್ನತ್ವಾ ಶಾಪನಿಯಂತ್ರಿತಾಃ ॥ ೧೩ ॥

---

೯. ಆ ಗಂಧರ್ವನು ಸುಂದರಿಯೊಡನೆ ಕೂಡಿ ವಿಹರಿಸುತ್ತಾ ಶೃಂಗಾರರಸವೆಂಬ ಸಮುದ್ರದಲ್ಲಿ ಮುಳುಗಿದ್ದನು. ಕಾಮಶಾಸ್ತ್ರಪಂಡಿತನಾದ ಅವನು ಮಹಾ ಅನುರಾಗದಿಂದ ಪತ್ನಿಯೊಡನೆ ಬಹುವಿಧವಾಗಿ ವಿಹರಿಸುತ್ತಿದ್ದನು.

೧೦. ಹೀಗಿರುವ ಗಂಧರ್ವನನ್ನು ನೋಡಿ ಆ ಪಿಪ್ಪಲಾದ ಮುನಿಗೂ ಕಾಮವಿಕಾರವುಂಟಾಯಿತು. ಮುಂದೆ ಅವನು ತಪಸ್ಸಿನಲ್ಲಾಸಕ್ತಿಯನ್ನು ತೊರೆದು ತಾನೂ ಪತ್ನಿಯನ್ನು ಪರಿಗ್ರಹಿಸಬೇಕೆಂದು ಬಯಸಿದನು.

೧೧. ಹೀಗೆ ಕಾಮವಿಕಾರವನ್ನು ಹೊಂದಿ ಪಿಪ್ಪಲಾದ ಮುನಿಯು ಚಿಂತೆಗೊಳಗಾಗಿ ದುಃಖಿಸುತ್ತಲಿರಲು ಸ್ವಲ್ಪಕಾಲವು ಕಳೆಯಿತು.

೧೨. ಹೀಗಿರಲೊಂದುದಿನ ಆ ಪಿಪ್ಪಲಾದಮುನಿಯು ಪುಷ್ಪಭದ್ರಾನದಿಗೆ ಸ್ನಾನಕ್ಕಾಗಿ ಹೋಗಿದ್ದನು. ಅಲ್ಲಿ ಅನರಣ್ಯನ ಪುತ್ರಿ ಪದ್ಮೆಯೂ ಬಂದಿದ್ದಳು. ಲಕ್ಷ್ಮಿಯಂತೆ ಸುಂದರಿಯಾದ ಪದ್ಮಾದೇವಿಯನ್ನವನು ನೋಡಿದನು.

೧೩. ಈ ಕನ್ಯೆಯು ಯಾರು? ಎಂದು ಸಮೀಪದಲ್ಲಿರುವ ಜನಗಳನ್ನು ಮುನಿಯು ಪ್ರಶ್ನಿಸಿದನು. ಅವನ ಶಾಪಕ್ಕೆ ಹೆದರಿ ಜನಗಳು ನಿಜಸಂಗತಿಯನ್ನು ಮರೆಮಾಚದೆ ಇದ್ದುದನ್ನೇ ಹೇಳಿದರು.

ಅನರಣ್ಯಸುತೇಯಂ ವೈ ಪದ್ಮಾ ನಾಮ ರಮಾಪರಾ ।
ವರಾರೋಹಾ ಪ್ರಾರ್ಥ್ಯಮಾನಾ ನೃಪಶ್ರೇಷ್ಠೈರ್ಗುಣಾಲಯಾ ॥ ೧೪ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ಸ ಮುನಿರ್ವಾಕ್ಯಂ ಜನಾನಾಂ ತಥ್ಯವಾದಿನಾಂ ।
ಚುಕ್ಷೋಭಾತೀವ ಮನಸಿ ತಲ್ಲಿಪ್ಸುರಭವಚ್ಚ ಸಃ ॥ ೧೫ ॥

ಮುನಿಃ ಸ್ನಾತ್ವಾಭೀಷ್ಟದೇವಂ ಸಂಪೂಜ್ಯ ವಿಧಿವಚ್ಛಿವಂ ।
ಜಗಾಮ ಕಾಮೀ ಭಿಕ್ಷಾರ್ಥಮನರಣ್ಯಸಭಾಂ ಗಿರೇ ॥ ೧೬ ॥

ರಾಜಾ ಶೀಘ್ರಂ ಮುನಿಂ ದೃಷ್ಟ್ವಾ ಪ್ರಣನಾಮ ಭಯಾಕುಲಃ ।
ಮಧುಪರ್ಕಾದಿಕಂ ದತ್ವಾ ಪೂಜಯಾಮಾಸ ಭಕ್ತಿತಃ ॥ ೧೭ ॥

ಕಾಮಾತ್ಸರ್ವಂ ಗೃಹೀತ್ವಾ ಚ ಯಯಾಚೇ ಕನ್ಯಕಾಂ ಮುನಿಃ ।
ಮೌನೀ ಬಭೂವ ನೃಪತಿಃ ಕಿಂಚಿನ್ನಿರ್ವಕ್ತುಮಕ್ಷಮಃ ॥ ೧೮ ॥

---

೧೪. ಓ ಮುನಿಯೇ, ಕೇಳು. ಸಾಕ್ಷಾತ್ ಲಕ್ಷ್ಮಿಯಂತಿರುವ ಈ ಕುಮಾರಿಯು ಅನರಣ್ಯರಾಜನ ಪುತ್ರಿಯು. ಗುಣವತಿಯಾದ ಇವಳನ್ನು ಅನೇಕಜನ ರಾಜೋತ್ತಮರು ಮದುವೆಯಾಗಲು ಹಾತೊರೆಯುತ್ತಿರುವರು ಎಂದರು.

೧೫. ಸತ್ಯವಾದಿಗಳಾದ ಜನಗಳ ಮಾತನ್ನು ಕೇಳಿ ಪಿಪ್ಪಲಾದಮುನಿಯು ಮನಸ್ಸಿನಲ್ಲಿ ತುಂಬಾ ಕ್ಷೋಭೆಗೊಂಡು ಆ ರಾಜಕುಮಾರಿಯನ್ನು ಪಡೆಯುವ ಬಗೆ ಹೇಗೆಂದು ಯೋಚಿಸಿದನು.

೧೬. ಆಮೇಲಾಮುನಿಯು ನದಿಯಲ್ಲಿ ಸ್ನಾನಮಾಡಿ ತನ್ನಿಷ್ಟದೇವನಾದ ಶಿವನನ್ನು ವಿಧಿವತ್ತಾಗಿ ಪೂಜಿಸಿ ಪತ್ನೀಭಿಕ್ಷೆಗಾಗಿ ಅನರಣ್ಯರಾಜನ ಸಭೆಗೆ ಹೋದನು.

೧೭. ಪಿಪ್ಪಲಾದಮುನಿಯು ಬಂದುದನ್ನು ನೋಡಿ ಅನರಣ್ಯರಾಜನು ಕೂಡಲೇ ಭಯದಿಂದ ಎದ್ದು ನಮಸ್ಕರಿಸಿದನು. ಮಧುಪರ್ಕ ಮುಂತಾದುದನ್ನು ಕೊಟ್ಟು ಆ ಮುನಿಯನ್ನು ಭಕ್ತಿಯಿಂದ ಸತ್ಕರಿಸಿದನು.

೧೮. ಪೂಜೆಯೆಲ್ಲವನ್ನೂ ಪರಿಗ್ರಹಿಸಿ ಪಿಪ್ಪಲಾದಮುನಿಯು ಅನರಣ್ಯಪುತ್ರಿಯನ್ನು ಯಾಚಿಸಿದನು. ಆಗ ರಾಜನು ಏನೂ ಹೇಳಲು ತೋರದೆ ಸುಮ್ಮನಿರಲು, ಪಿಪ್ಪಲಾದನು ಪುನಃ ರಾಜನನ್ನು ಕುರಿತು,

ಮುನಿರ್ಯಯಾಚೇ ಕನ್ಯಾಂ ಸ ತಾಂ ದೇಹೀತಿ ನೃಪೇಶ್ವರ ।
ಅನ್ಯಥಾ ಭಸ್ಮಸಾತ್ಕುರ್ಯಾಂ ಕುಲಂ ತೇ ಸರ್ವಮೇವ ಚ ॥ ೧೯ ॥

ಸರ್ವೇ ಬಭೂವುರಾಚ್ಛನ್ನಾ ಗಣಾಸ್ತತ್ತೇಜಸಾ ಮುನೇ ।
ರುರೋದ ರಾಜಾ ಸಗಣೋ ದೃಷ್ಟ್ವಾ ವಿಪ್ರಂ ಜರಾತುರಂ ॥ ೨೦ ॥

ಮಹಿಷ್ಯೋ ರುರುದುಸ್ಸರ್ವಾ ಇತಿಕರ್ತವ್ಯತಾಕ್ಷಮಾಃ ।
ಮೂರ್ಛಾಮಾಪ ಮಹಾರಾಜ್ಞೀ ಕನ್ಯಾಮಾತಾ ಶುಚಾಕುಲಾ ॥ ೨೧ ॥

ಬಭೂವುಸ್ತನಯಾಸ್ಸರ್ವೇ ಶೋಕವ್ಯಾಕುಲಿತಮಾನಸಾಃ ।
ಸರ್ವಂ ಶೋಕಾಕುಲಂ ಜಾತಂ ನೃಪಸಂಬಂಧಿ ಶೈಲಪ ॥ ೨೨ ॥

ಏತಸ್ಮಿನ್ನಂತರೇ ಪ್ರಾಜ್ಞೋ ದ್ವಿಜೋ ಗುರುರನುತ್ತಮಃ ।
ಪುರೋಹಿತಶ್ಚ ಮತಿಮಾನಾಗತೋ ನೃಪಸನ್ನಿಧಿಂ ॥ ೨೩ ॥

---

೧೯. ಎಲೈ ರಾಜನೆ, ನಿನ್ನ ಪುತ್ರಿಯನ್ನು ನನಗೆ ಮದುವೆಮಾಡಿಕೊಡು. ಇಲ್ಲದಿದ್ದರೆ ನಿನ್ನ ಕುಲವನ್ನೇ ಈ ಕ್ಷಣದಲ್ಲಿ ಭಸ್ಮಮಾಡುವೆನು ಎಂದು ಆ ಮುನಿಯು ಹೇಳಿದನು.

೨೦. ಆ ಬ್ರಾಹ್ಮಣನ ತೇಜಸ್ಸಿಗೆ ಎಲ್ಲರೂ ಹೆದರಿದರು. ಏನು ಮಾಡಬೇಕೆಂದು ಯಾರಿಗೂ ತೋರಲಿಲ್ಲ. ಮುದುಕನಾದ ಬ್ರಾಹ್ಮಣನನ್ನು ನೋಡಿ ರಾಜನು ತುಂಬಾ ದುಃಖಗೊಂಡನು.

೨೧. ರಾಣಿಯರೆಲ್ಲರೂ ಮುಂದೇನು ಮಾಡಬೇಕೆಂಬುದನ್ನು ತಿಳಿಯದೆ ದುಃಖಗೊಂಡರು. ಕನ್ಯೆಯ ತಾಯಿಯಾದ ಮಹಾರಾಣಿಯು ತುಂಬಾ ಶೋಕಗೊಂಡು ಮೂರ್ಛೆಹೊಂದಿದಳು.

೨೨. ಅನರಣ್ಯನ ಪುತ್ರರೆಲ್ಲರೂ ತುಂಬಾ ವ್ಯಸನವುಳ್ಳವರಾದರು. ಎಲೈ ಪರ್ವತರಾಜನೆ, ಹೀಗೆ ಆ ರಾಜನ ಪರಿವಾರವೆಲ್ಲವೂ ದುಃಖಸಾಗರದಲ್ಲಿ ಮುಳುಗಿದ್ದಿತು.

೨೩. ಈ ಸಮಯದಲ್ಲಿ ಆ ರಾಜನ ಮಹಾಪ್ರಾಜ್ಞನಾದ ಗುರುವೂ, ಬುದ್ಧಿವಂತನಾದ ಪುರೋಹಿತನೂ ಅವನ ಬಳಿಗೆ ಬಂದರು.

ರಾಜಾ ಪ್ರಣಮ್ಯ ಸಂಪೂಜ್ಯ ರುರೋದ ಚ ತಯೋಃ ಪುರಃ ।
ಸರ್ವಂ ನಿವೇದಯಾಂಚಕ್ರೇ ಪಪ್ರಚ್ಛೋಚಿತಮಾದರಾತ್ ॥ ೨೪ ॥

ಅಥ ರಾಜ್ಞೋ ಗುರುರ್ವಿಪ್ರಃ ಪಂಡಿತಶ್ಚ ಪುರೋಹಿತಃ ।
ಅಪಿ ದ್ವೌ ಶಾಸ್ತ್ರನೀತಿಜ್ಞೌ ಬೋಧಯಾಮಾಸತುರ್ನೃಪಂ ॥ ೨೫ ॥

ಶೋಕಾಽಽಕುಲಾಶ್ಚ ಮಹಿಷೀರ್ನೃಪಬಾಲಾಂಶ್ಚ ಕನ್ಯಕಾಂ ।
ಉತ್ತಮಾಂ ನೀತಿಮಾದೃತ್ಯ ಸರ್ವೇಷಾಂ ಹಿತಕಾರಿಣೀಂ ॥ ೨೬ ॥

॥ ಗುರುಪುರೋಧಸಾವೂಚತುಃ ॥

ಶೃಣು ರಾಜನ್ ಮಹಾಪ್ರಾಜ್ಞ ವಚೋ ನೌ ತ್ವದ್ಧಿತಾವಹಂ ।
ಮಾ ಶುಚಃ ಸಪರೀವಾರಃ ಶಾಸ್ತ್ರೇ ಕುರು ಮತಿಂ ಸತೀಂ ॥ ೨೭ ॥

ಅದ್ಯ ವಾಬ್ದದಿನಾಂತೇ ವಾ ದಾತವ್ಯಾ ಕನ್ಯಕಾ ನೃಪ ।
ಪಾತ್ರಾಯ ವಿಪ್ರಾಯಾನ್ಯಸ್ಮೈ ಕಸ್ಮೈಚಿದ್ವಾ ವಿಶೇಷತಃ ॥ ೨೮ ॥

---

೨೪. ಆಗ ರಾಜನು ಆ ಪುರೋಹಿತ ಗುರುಗಳೀರ್ವರಿಗೂ ನಮಸ್ಕಾರಮಾಡಿ ಅವರೆದುರಿಗೆ ತನ್ನ ದುಃಖವನ್ನು ಹೇಳಿಕೊಂಡು ರೋದಿಸಿದನು. ಮತ್ತು ಈಗ ತಾನು ಏನು ಮಾಡಬೇಕೆಂದು ಅವರನ್ನು ಕೇಳಿದನು.

೨೫-೨೬. ಬಳಿಕ ಶಾಸ್ತ್ರವನ್ನೂ ಮತ್ತು ನೀತಿಯನ್ನೂ ಚೆನ್ನಾಗಿ ಬಲ್ಲ ಆ ಗುರು ಪುರೋಹಿತರು ಶೋಕಿಸುತ್ತಲಿರುವ ರಾಣಿಯರನ್ನೂ, ರಾಜಕುಮಾರರನ್ನೂ, ಕುಮಾರಿಯನ್ನೂ ನೋಡಿ ನೀತಿಯನ್ನನುಸರಿಸಿ ಎಲ್ಲರಿಗೂ ಹಿತವಾಗುವಂತೆ ಇಂತೆಂದರು.

೨೭. ಮಹಾಪ್ರಾಜ್ಞನಾದ ಎಲೈ ರಾಜನೆ, ನಿನಗೆ ಹಿತವಾದಂತಹ ಮಾತನ್ನು ಹೇಳುವೆವು, ಅದನ್ನು ಕೇಳು. ಸುಮ್ಮನೆ ದುಃಖಿಸಬೇಡ. ಶಾಸ್ತ್ರವನ್ನನುಸರಿಸಿ ವಿಚಾರಮಾಡು.

೨೮. ಇಂದಾಗಲೀ ಇನ್ನೊಂದು ವರ್ಷದಮೇಲಾಗಲೀ ನಿನ್ನ ಕುಮಾರಿಯನ್ನು ಬ್ರಾಹ್ಮಣನಿಗಾಗಲೀ ಅಥವಾ ಯೋಗ್ಯನಾದ ಬೇರೊಬ್ಬ ವರನಿಗಾಗಲೀ ಕೊಡಲೇ ಬೇಕಷ್ಟೆ?

ಸತ್ಪಾತ್ರಂ ಬ್ರಾಹ್ಮಣಾದನ್ಯಂ ನ ಪಶ್ಯಾಮೋ ಜಗತ್ತ್ರಯೇ ।
ಸುತಾಂ ದತ್ವಾ ಚ ಮುನಯೇ ರಕ್ಷ ಸ್ವಾಂ ಸರ್ವಸಂಪದಂ ॥ ೨೯ ॥

ರಾಜನ್ನೇಕನಿಮಿತ್ತೇನ ಸರ್ವಸಂಪದ್ವಿನಶ್ಯತಿ ।
ಸರ್ವಂ ರಕ್ಷತಿ ತಂ ತ್ಯಕ್ತ್ವಾವಿನಾ ತಂ ಶರಣಾಗತಂ ॥ ೩೦ ॥

॥ ವಸಿಷ್ಠ ಉವಾಚ ॥

ರಾಜಾ ಪ್ರಾಜ್ಞವಚಃ ಶ್ರುತ್ವಾ ವಿಲಪ್ಯ ಚ ಮುಹುರ್ಮುಹುಃ ।
ಕನ್ಯಾಂ ಸಾಲಂಕೃತಾಂ ಕೃತ್ವಾ ಮುನೀಂದ್ರಾಯ ದದೌ ಕಿಲ ॥ ೩೧ ॥

ಕಾಂತಾಂ ಗೃಹೀತ್ವಾ ಸ ಮುನಿರ್ವಿವಾಹ್ಯ ವಿಧಿವದ್ಗಿರೇ ।
ಪದ್ಮಾಂ ಪದ್ಮೋಪಮಾಂ ತಾಂ ವೈ ಮುದಿತಃ ಸ್ವಾಲಯಂ ಯಯೌ ॥ ೩೨ ॥

ಸರ್ವಾರ್ಣ ರಾಜಾ ಪರಿತ್ಯಜ್ಯ ದತ್ವಾ ವೃದ್ಧಾಯ ಚಾತ್ಮಜಾಂ ।
ಗ್ಲಾನಿಂ ಚಿತ್ತೇ ಸಮಾಧಾಯ ಜಗಾಮ ತಪಸೇ ವನಂ ॥ ೩೩ ॥

---

೨೯. ಬ್ರಾಹ್ಮಣನಿಗಿಂತಲೂ ಯೋಗ್ಯನಾದ ವರನು ಮೂರುಲೋಕಗಳಲ್ಲಿ ಎಲ್ಲಿಯೂ ಇಲ್ಲ. ಆದುದರಿಂದ ಬ್ರಾಹ್ಮಣನಾದ ಈ ಮುನಿಗೆ ಮಗಳನ್ನು ಕೊಟ್ಟು ನಿನ್ನ ಕುಲಸಂಪತ್ತೆಲ್ಲವನ್ನೂ ರಕ್ಷಿಸು.

೩೦. ಎಲೈ ರಾಜ, ಪುತ್ರಿಯೋರ್ವಳಿಗಾಗಿ ನಿನ್ನ ಸಂಪತ್ತೆಲ್ಲವೂ ನಷ್ಟವಾಗುವುದು. ಓರ್ವನಿಂದ ಕುಲವೇ ನಾಶವಾಗುವಂತಿದ್ದರೆ ಅವನನ್ನು ಬಿಟ್ಟುಬಿಡಬೇಕು. ಶರಣಾಗತನ ವಿಚಾರದಲ್ಲಿ ಮಾತ್ರ ಈ ನೀತಿಯು ಅನ್ವಯಿಸುವುದಿಲ್ಲ.

೩೧. ವಸಿಷ್ಠಮುನಿಯು ಹೇಳಿದನು:—ಅನರಣ್ಯರಾಜನು ಪಂಡಿತರಾದ ಗುರು ಮತ್ತು ಪುರೋಹಿತರ ಮಾತನ್ನು ಕೇಳಿ ಪುನಃ ಪುನಃ ದುಃಖಿಸುತ್ತಾ, ಕನ್ಯೆಯನ್ನು ಚನ್ನಾಗಿ ಅಲಂಕರಿಸಿ ಪಿಪ್ಪಲಾದಮುನಿಗೆ ಮದುವೆಮಾಡಿಕೊಟ್ಟನು.

೩೨. ಪಿಪ್ಪಲಾದಮುನಿಯು ಲಕ್ಷ್ಮಿಯಂತಿರುವ ಪದ್ಮಾದೇವಿಯನ್ನು ವಿಧಿವತ್ತಾಗಿ ಮದುವೆಯಾಗಿ ಸಂತೋಷದಿಂದ ತನ್ನಾಶ್ರಮಕ್ಕೆ ತೆರಳಿದನು.

೩೩. ಹೀಗೆ ಅನರಣ್ಯರಾಜನು ಮುದುಕನಿಗೆ ಮಗಳನ್ನು ಕೊಟ್ಟು ರಾಜ್ಯವೆಲ್ಲವನ್ನೂ ಬಿಟ್ಟು, ಮನಸ್ಸನ್ನು ಸಮಾಧಾನಮಾಡಿಕೊಂಡು ತಪಸ್ಸುಮಾಡಲು ಅರಣ್ಯಕ್ಕೆ ಹೋದನು.

ತದ್ಭಾರ್ಯಾಪಿ ವನಂ ಯಾತೇ ಪ್ರಾಣನಾಥೇ ತದಾ ಗಿರೇ ।
ಭರ್ತುಶ್ಚ ದುಹಿತುಶ್ಶೋಕಾತ್ಪ್ರಾಣಾಂಸ್ತತ್ಯಾಜ ಸುಂದರೀ ॥ ೩೪ ॥

ಪೂಜ್ಯಾಃ ಪುತ್ರಾಶ್ಚ ಭೃತ್ಯಾಶ್ಚ ಮೂರ್ಛಾಮಾಪುರ್ನೃಪಂ ವಿನಾ ।
ಶುಶುಚುಃ ಶ್ವಾಸಸಂಯುಕ್ತಂ ಜ್ಞಾತ್ವಾ ಸರ್ವೇಽಪರೇ ಜನಾಃ ॥ ೩೫ ॥

ಅನರಣ್ಯೋ ವನಂ ಗತ್ವಾ ತಪಸ್ತಪ್ತ್ವಾತಿ ಶಂಕರಂ ।
ಸಮಾರಾಧ್ಯ ಯಯೌ ಭಕ್ತ್ಯಾ ಶಿವಲೋಕಮನಾಮಯಂ ॥ ೩೬ ॥

ನೃಪಸ್ಯ ಕೀರ್ತಿಮಾನ್ನಾಮ್ನಾ ಜ್ಯೇಷ್ಠಪುತ್ರೋಽಥ ಧಾರ್ಮಿಕಃ ।
ಪುತ್ರವತ್ಪಾಲಯಾಮಾಸ ಪ್ರಜಾ ರಾಜ್ಯಂ ಚಕಾರ ಸಃ ॥ ೩೭ ॥

ಇತಿ ತೇ ಕಥಿತಂ ಶೈಲಾನರಣ್ಯಚರಿತಂ ಶುಭಂ ।
ಕನ್ಯಾಂದತ್ವಾ ಯಥಾರಕ್ಷದ್ವಂಶಂ ಚಾಪ್ಯಖಿಲಂ ಧನಂ ॥ ೩೮ ॥

---

೩೪. ರಾಜನು ಕಾಡಿಗೆ ಹೋಗಲು ಅವನ ಹೆಂಡತಿಯು ಪತಿವಿರಹದಿಂದಲೂ ಮಗಳ ಶೋಕದಿಂದಲೂ ಸಹ ಪ್ರಾಣಗಳನ್ನು ಬಿಟ್ಟಳು.

೩೫. ರಾಜನು ಹೊರಟುಹೋದುದರಿಂದ ಅವನ ಪುತ್ರರೂ ಸೇವಕರೂ ಗುರುಹಿರಿಯರೂ ಸಹ ಮೂರ್ಛೆಹೊಂದಿದರು. ಮಿಕ್ಕ ಪ್ರಜೆಗಳು ನಿಟ್ಟುಸಿರನ್ನು ಬಿಡುತ್ತಾ ತುಂಬಾ ದುಃಖಿಸಿದರು.

೩೬. ಇತ್ತ ಅನರಣ್ಯರಾಜನು ಕಾಡಿಗೆ ಹೋಗಿ ಅಲ್ಲಿ ತಪಸ್ಸನ್ನು ಮಾಡುತ್ತಾ ಭಕ್ತಿಯಿಂದ ಶಂಕರನನ್ನು ಆರಾಧಿಸಿ ಕೊನೆಯಲ್ಲಿ ದುಃಖದ ಸಂಬಂಧವೇ ಇಲ್ಲದಂತಹ ಶಿವಲೋಕವನ್ನು ಪಡೆದನು.

೩೭. ಆ ಅನರಣ್ಯರಾಜನ ಹಿರಿಯ ಮಗನು ಕೀರ್ತಿಮಾ‌ನ್ ಎಂಬುವನು. ಅವನು ಧಾರ್ಮಿಕನಾಗಿದ್ದು ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಾ ರಾಜ್ಯವಾಳಿದನು.

೩೮. ಎಲೈ ಹಿಮವಂತನೆ, ಹೀಗೆ ಅನರಣ್ಯನು ಪುತ್ರಿಯನ್ನು ಕೊಟ್ಟು ತನ್ನ ವಂಶವನ್ನೂ ಸಕಲೈಶ್ವರ್ಯಗಳನ್ನೂ ಹೇಗೆ ರಕ್ಷಿಸಿಕೊಂಡನೆಂಬ ಶುಭಕಥೆಯನ್ನು ನಿನಗೆ ಹೇಳಿರುತ್ತೇನೆ.

ಶೈಲರಾಜ ತ್ವಮಪ್ಯೇವಂ ಸುತಾಂ ದತ್ವಾ ಶಿವಾಯ ಚ ।
ರಕ್ಷ ಸರ್ವಕುಲಂ ಸರ್ವಾನ್ ವಶಾನ್ ಕುರು ಸುರಾನಪಿ ॥ ೩೯ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಚತುಸ್ತ್ರಿಂಶೋಽಧ್ಯಾಯಃ



---

೩೯. ಆ ಅನರಣ್ಯನಂತೆ ನೀನೂ ಸಹ ನಿನ್ನ ಮಗಳನ್ನು ಶಿವನಿಗೆ ಕೊಟ್ಟು ನಿನ್ನ ಕುಲವನ್ನು ಕಾಪಾಡಿಕೊ. ದೇವತೆಗಳೆಲ್ಲರನ್ನೂ ನಿನ್ನಧೀನರನ್ನಾಗಿ ಮಾಡಿಕೋ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಪಂಚತ್ರಿಂಶೋಽಧ್ಯಾಯಃ

---

॥ ನಾರದ ಉವಾಚ ॥

ಅನರಣ್ಯಸ್ಯ ಚರಿತಂ ಸುತಾದಾನಸಮನ್ವಿತಂ ।
ಶ್ರುತ್ವಾ ಗಿರಿವರಸ್ತಾತ ಕಿಂ ಚಕಾರ ಚ ತದ್ವದ ॥ ೧ ॥

॥ ಬ್ರಹ್ಮೋವಾಚ ॥

ಅನರಣ್ಯಸ್ಯ ಚರಿತಂ ಕನ್ಯಾದಾನಸಮನ್ವಿತಂ ।
ಶ್ರುತ್ವಾ ಪಪ್ರಚ್ಛ ಶೈಲೇಶೋ ವಸಿಷ್ಠಂ ಸಾಂಜಲಿಃ ಪುನಃ ॥ ೨ ॥

---

### ಮೂವತ್ತೈದನೆಯ ಅಧ್ಯಾಯವು

೧. ನಾರದನು ಬ್ರಹ್ಮನನ್ನು ಕುರಿತು, ಓ ತಂದೆಯೆ, ಅನರಣ್ಯನು ಕುಲಕ್ಕಾಗಿ ಪುತ್ರಿಯನ್ನು ದಾನಮಾಡಿದ ಕಥೆಯನ್ನು ಕೇಳಿ ಹಿಮವಂತನು ಮುಂದೇನು ಮಾಡಿದನು ? ಅದನ್ನು ನನಗೆ ಹೇಳು ಎನ್ನಲು,

೨-೩. ಬ್ರಹ್ಮನು ಹೇಳಿದನು :—ಎಲೈ ನಾರದ, ಅನರಣ್ಯನ ಚರಿತ್ರೆಯನ್ನು ಕೇಳಿ ಹಿಮವಂತನು ತಿರುಗಿ ಕೈಮುಗಿದುಕೊಂಡು, ವಸಿಷ್ಠನನ್ನು ಕುರಿತು, ಓ ಬ್ರಹ್ಮ

॥ ಶೈಲೇಶ ಉವಾಚ ॥
ವಸಿಷ್ಠ ಮುನಿಶಾರ್ದೂಲ ಬ್ರಹ್ಮಪುತ್ರ ಕೃಪಾನಿಧೇ ।
ಅನರಣ್ಯಚರಿತ್ರಂ ತೇ ಕಥಿತಂ ಪರಮಾದ್ಭುತಂ ॥ ೩ ॥

ಅನರಣ್ಯಸುತಾ ಯಸ್ಮಾತ್ ಪಿಪ್ಪಲಾದಂ ಮುನಿಂ ಪತಿಂ ।
ಸಂಪ್ರಾಪ್ಯ ಕಿಮಕಾರ್ಷೀತ್ಸಾ ತಚ್ಚರಿತ್ರಂ ಮುದಾವಹಂ ॥ ೪ ॥

॥ ವಸಿಷ್ಠ ಉವಾಚ ॥
ಪಿಪ್ಪಲಾದೋ ಮುನಿವರೋ ವಯಸಾ ಜರ್ಜರೋಽಧಿಕಃ ।
ಗತ್ವಾ ನಿಜಾಶ್ರಮಂ ಸಾರ್ಧಮನರಣ್ಯಸುತಯಾ ತಯಾ ॥ ೫ ॥

ಉವಾಸ ತತ್ರ ಸುಪ್ರೀತ್ಯಾ ತಪಸ್ವೀ ನಾತಿಲಂಪಟಃ ।
ತತ್ರಾರಣ್ಯೇ ಗಿರಿವರ ಸ ನಿತ್ಯಂ ನಿಜಧರ್ಮಕೃತ್ ॥ ೬ ॥

ಅಥಾನರಣ್ಯಕನ್ಯಾ ಸಾ ಸಿಷೇವೇ ಭಕ್ತಿತೋ ಮುನಿಂ ।
ಕರ್ಮಣಾ ಮನಸಾ ವಾಚಾ ಲಕ್ಷ್ಮೀರ್ನಾರಾಯಣಂ ಯಥಾ ॥ ೭ ॥

---

ಪುತ್ರ, ನೀನು ಮುನಿಗಳಲ್ಲಿ ಶ್ರೇಷ್ಠನು, ದಯಾನಿಧಿಯು. ಈಗ ನೀನು ಆಶ್ಚರ್ಯಕರವಾದ ಅನರಣ್ಯಕನ ಚರಿತ್ರವನ್ನು ಹೇಳಿರುವೆ.

೪. ಅನರಣ್ಯರಾಜನ ಪುತ್ರಿ ಪದ್ಮೆಯು ಪಿಪ್ಪಲಾದಮುನಿಯನ್ನು ಪತಿಯನ್ನಾಗಿ ಪಡೆದು ಮುಂದೇನು ಮಾಡಿದಳು? ಸಂತೋಷಕರವಾದ ಆ ಚರಿತ್ರೆಯನ್ನು ದಯವಿಟ್ಟು ಹೇಳು ಎಂದನು.

೫-೬. ವಸಿಷ್ಠಮುನಿಯು ಹೇಳಿದನು:—ಎಲೈ ಪರ್ವತರಾಜ, ತುಂಬಾ ಮುದುಕನಾದ ಆ ಪಿಪ್ಪಲಾದ ಮುನಿಯು ಅನರಣ್ಯಪುತ್ರಿಯಾದ ಪದ್ಮೆಯೊಡನೆ ತನ್ನಾಶ್ರಮಕ್ಕೆ ತೆರಳಿದನು. ಮತ್ತು ಅಲ್ಲಿ ಅವನು ಹೆಚ್ಚು ಮುದುಕನಾಗಿರದೆ ನಿತ್ಯವೂ ತನ್ನ ಕರ್ಮಗಳನ್ನಾಚರಿಸುತ್ತಾ ಸಂತೋಷದಿಂದ ಹೆಂಡತಿಯೊಡನೆ ವಾಸವಾಗಿದ್ದನು.

೭. ಪದ್ಮಾದೇವಿಯು, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ಪತಿಯಾದ ಪಿಪ್ಪಲಾದನನ್ನು, ಲಕ್ಷ್ಮಿಯು ನಾರಾಯಣನನ್ನು ಸೇವಿಸುವಂತೆ ಭಕ್ತಿಯಿಂದ ಸೇವಿಸಿದಳು.

ಏಕದಾ ಸ್ವರ್ಣದೀಂ ಸ್ನಾತುಂ ಗಚ್ಛಂತೀಂ ಸುಸ್ಮಿತಾಂ ಚ ತಾಂ ।
ದದರ್ಶ ಪಥಿ ಧರ್ಮಶ್ಚ ಮಾಯಯಾ ನೃಪರೂಪಧೃಕ್ ॥ ೮ ॥

ಚಾರುರತ್ನರಥಸ್ಥಶ್ಚ ನಾನಾಲಂಕಾರಭೂಷಿತಃ ।
ನವೀನಯೌವನಃ ಶ್ರೀಮಾನ್ ಕಾಮದೇವಸಮಪ್ರಭಃ ॥ ೯ ॥

ದೃಷ್ಟ್ವಾ ತಾಂ ಸುಂದರೀಂ ಪದ್ಮಾಮುವಾಚ ಸ ವೃಷೋ ವಿಭುಃ ।
ವಿಜ್ಞಾತುಂ ಭಾವಮಂತಃಸ್ಥಂ ತಸ್ಯಾಶ್ಚ ಮುನಿಯೋಷಿತಃ ॥ ೧೦ ॥

॥ ಧರ್ಮ ಉವಾಚ ॥

ಅಯಿ ಸುಂದರಿ ಲಕ್ಷ್ಮೀರ್ವೈ ರಾಜಯೋಗ್ಯೇ ಮನೋಹರೇ ।
ಅತೀವ ಯೌವನಸ್ಥೇ ಚ ಕಾಮಿನಿ ಸ್ಥಿರಯೌವನೇ ॥ ೧೧ ॥

ಜರಾತುರಸ್ಯ ವೃದ್ಧಸ್ಯ ಪಿಪ್ಪಲಾದಸ್ಯ ವೈ ಮುನೇಃ ।
ಸತ್ಯಂ ವದಾಮಿ ತನ್ವಂಗಿ ಸಮೀಪೇ ನೈವ ರಾಜಸೇ ॥ ೧೨ ॥

---

೮. ಒಂದುದಿನ ಆ ಪದ್ಮಾದೇವಿಯು ಗಂಗಾನದಿಗೆ ಸ್ನಾನಮಾಡುವುದಕ್ಕಾಗಿ ಹೋಗಿದ್ದಳು. ಆಗ ಧರ್ಮಪುರುಷನು ಮಾಯೆಯಿಂದ .ರಾಜವೇಷವನ್ನು ಧರಿಸಿ ದಾರಿಯಲ್ಲಿ ಅವಳಿಗೆ ಕಾಣಿಸಿಕೊಂಡನು.

೯. ಆಗ ಆ ಧರ್ಮಪುರುಷನು, ಸುಂದರವಾದ ರತ್ನರಥವನ್ನೇರಿದ್ದನು. ಅನೇಕ ಆಭರಣಗಳಿಂದ ಅಲಂಕರಿಸಿಕೊಂಡಿದ್ದನು. ಆಗತಾನೇ ಉದಯಿಸುತ್ತಲಿರುವ ಯೌವನವುಳ್ಳವನಾಗಿ ಮನ್ಮಥನಂತೆ ಸುಂದರನಾಗಿದ್ದನು.

೧೦-೧೧. ಸುಂದರಿಯಾದ ಆ ಪದ್ಮಾದೇವಿಯನ್ನು ನೋಡಿ, ಅಂತರಂಗವನ್ನು ತಿಳಿಯಲು ಧರ್ಮಪುರುಷನು ಅವಳನ್ನು ಕುರಿತು, ಎಲೌ ಸುಂದರಿ, ನೀನು ಸಾಕ್ಷಾತ್ ಲಕ್ಷ್ಮಿಯಂತಿರುವೆ. ತುಂಬಿದ ಯೌವನವುಳ್ಳವಳಾಗಿರುವೆ. ಇಂತಹ ನೀನು ತರುಣರಾದ ರಾಜರಿಗೆ ಯೋಗ್ಯಳಾಗಿರುವೆ.

೧೨. ನಿನ್ನ ಪತಿಯಾದ ಈ ಪಿಪ್ಪಲಾದನು ತೀರಾ ಮುದುಕನಾಗಿರುವನು. ನಿಜವಾದುದನ್ನು ಹೇಳುತ್ತೇನೆ. ನೀನು ಆ ಮುದುಕನ ಬಳಿಯಲ್ಲಿರಲು ಯೋಗ್ಯಳಲ್ಲ.

ವಿಪ್ರಂ ತಪಸ್ಸು ನಿರತಂ ನಿರ್ಘೃಣಂ ಮರಣೋನ್ಮುಖಂ ।
ತ್ಯಕ್ತ್ವಾ ಮಾಂ ಪಶ್ಯ ರಾಜೇಂದ್ರಂ ರತಿಶೂರಂ ಸ್ಮರಾತುರಂ ॥ ೧೩ ॥

ಪ್ರಾಪ್ನೋತಿ ಸುಂದರೀ ಪುಣ್ಯಾತ್ಸೌಂದರ್ಯಂ ಪೂರ್ವಜನ್ಮನಃ ।
ಸಫಲಂ ತದ್ಭವೇತ್ಸರ್ವಂ ರಸಿಕಾಲಿಂಗನೇನ ಚ ॥ ೧೪ ॥

ಸಹಸ್ರಸುಂದರೀಕಾಂತಂ ಕಾಮಶಾಸ್ತ್ರವಿಶಾರದಂ ।
ಕಿಂಕರಂ ಕುರು ಮಾಂ ಕಾಂತೇ ಸಂಪರಿತ್ಯಜ್ಯ ತಂ ಪತಿಂ ॥ ೧೫ ॥

ನಿರ್ಜನೇ ಕಾನನೇ ರಮ್ಯೇ ಶೈಲೇ ಶೈಲೇ ನದೀತಟೇ ।
ವಿಹರಸ್ವ ಮಯಾ ಸಾರ್ಧಂ ಜನ್ಮೇದಂ ಸಫಲಂ ಕುರು ॥ ೧೬ ॥

॥ ವಸಿಷ್ಠ ಉವಾಚ ॥

ಇತ್ಯೇವಮುಕ್ತವಂತಂ ಸಾ ಸ್ವರಥಾದವರುಹ್ಯ ಚ ।
ಗೃಹೀತುಮುತ್ಸುಕಂ ಹಸ್ತೇ ತಮುವಾಚ ಪತಿವ್ರತಾ ॥ ೧೭ ॥

---

೧೩. ನಿನ್ನ ಪತಿಯು ಸದಾ ತಪಸ್ಸಿನಲ್ಲಿರುವನು. ಆವನಿಗೆ ಕರುಣೆಯಿಲ್ಲ. ಸಾಯುವುದಕ್ಕೆ ಸಿದ್ಧನಾಗಿರುವನು. ಇಂತಹವನನ್ನು ಬಿಟ್ಟು ನನ್ನನ್ನು ನೋಡು. ನಾನು ರಾಜೇಂದ್ರನು, ರತಿಶೂರನು, ಕಾಮಾಸಕ್ತಿಯುಳ್ಳವನಾಗಿರುವೆನು.

೧೪. ಸುಂದರಿಯು ಪೂರ್ವಜನ್ಮದ ಪುಣ್ಯದಿಂದ ಸೌಂದರ್ಯವತಿಯಾಗುವಳು. ಆದರಾಸೌಂದರ್ಯವು ರಸಿಕನಾದ ಸುಂದರಪುರುಷನ ಆಲಿಂಗನ ಲಭಿಸಿದರೆ ಮಾತ್ರ ಸಾರ್ಥಕವಾಗುವುದು.

೧೫. ನನಗೆ ಸಾವಿರಾರು ಸುಂದರಿಯರಿರುವರು. ಕಾಮಶಾಸ್ತ್ರದಲ್ಲಿ ನಾನು ಪಂಡಿತನು. ಎಲೌ ಕಾಂತೆ, ನೀನು ಆ ಮುದುಕ ಪತಿಯನ್ನು ಬಿಟ್ಟು ನನ್ನನ್ನು ನಿನ್ನ ಚರಣದಾಸನನ್ನಾಗಿ ಮಾಡಿಕೊ.

೧೬. ಜನರ ಬಾಧೆಯಿಲ್ಲದ ಅರಣ್ಯದಲ್ಲಿಯೂ, ಮನೋಹರವಾದ ಬೆಟ್ಟದ ತಪ್ಪಲುಗಳಲ್ಲಿಯೂ, ನದೀದಡಗಳಲ್ಲಿಯೂ ನನ್ನೊಡನೆ ವಿಹರಿಸು. ನಿನ್ನ ಜನ್ಮವನ್ನು ಸಾರ್ಥಕವಾಗಿ ಮಾಡಿಕೊ ಎಂದನು.

೧೭-೧೮. ವಸಿಷ್ಠಮುನಿಯು ಹೇಳಿದನು:—ಹೀಗೆ ಹೇಳಿ ಆ ಧರ್ಮಪುರುಷನು ರಥದಿಂದಿಳಿದು ಅವಳ ಬಳಿಗೆ ಬಂದು ಕೈಹಿಡಿಯಲುದ್ಯುಕ್ತನಾದನು. ಆಗ

॥ ಪದ್ಮೋವಾಚ ॥

ಗಚ್ಛ ದೂರಂ ಗಚ್ಛ ದೂರಂ ಪಾಪಿಷ್ಠಸ್ತ್ವಂ ನರಾಧಿಪ ।
ಮಾಂ ಚೇತತ್ಪಶ್ಯಸಿ ಕಾಮೇನ ಸದ್ಯೋ ನಷ್ಟೋ ಭವಿಷ್ಯಸಿ ॥ ೧೮ ॥

ಪಿಪ್ಪಲಾದಂ ಮುನಿಶ್ರೇಷ್ಠಂ ತಪಸಾ ಪೂತವಿಗ್ರಹಂ ।
ತ್ಯಕ್ತ್ವಾ ಕಥಂ ಭಜೇಯಂ ತ್ವಾಂ ಸ್ತ್ರೀಜಿತಂ ರತಿಲಂಪಟಂ ॥ ೧೯ ॥

ಸ್ತ್ರೀಜಿತಸ್ಪರ್ಶಮಾತ್ರೇಣ ಸರ್ವಂ ಪುಣ್ಯಂ ವಿನಶ್ಯತಿ ।
ಸ್ತ್ರೀಜಿತಃ ಪರಮಃ ಪಾಪೀ ತದ್ದರ್ಶನಮಘಾವಹಂ ॥ ೨೦ ॥

ಅಸತ್ಕ್ರಿಯೋಽಶುಚಿರ್ನಿತ್ಯಂ ಸ ಪುಮಾನ್ ಯಃ ಸ್ತ್ರಿಯಾ ಜಿತಃ ।
ನಿಂದಂತಿ ಪಿತರೋ ದೇವಾ ಮಾನವಾಃ ಸಕಲಾಶ್ಚ ತಂ ॥ ೨೧ ॥

ತಸ್ಯ ಕಿಂ ಜ್ಞಾನಸುತಪೋಜಪಹೋಮಪ್ರಪೂಜನೈಃ ।
ವಿದ್ಯಯಾ ದಾನತಃ ಕಿಂ ವಾ ಸ್ತ್ರೀಭಿರ್ಯಸ್ಯ ಮನೋ ಹೃತಂ ॥ ೨೨ ॥

---

ಆ ಪತಿವ್ರತೆಯು ಅವನನ್ನು ತಡೆದು ಛೇ ನೀಚನೇ, ದೂರ ಹೋಗು, ದೂರ ಹೋಗು. ನೀನು ಮಹಾಪಾಪಿಯು. ನನ್ನನ್ನು ಕಾಮದೃಷ್ಟಿಯಿಂದ ನೋಡಿದರೆ ಆಕೂಡಲೆ ನಾಶವಾಗುತ್ತೀಯೆ.

೧೯. ನನ್ನ ಪತಿಯಾದ ಪಿಪ್ಪಲಾದ ಮುನಿಯು ಮಹಾನುಭಾವನು. ತಪಸ್ಸಿನಿಂದ ಪವಿತ್ರನಾದವನು. ಅವನನ್ನು ಬಿಟ್ಟು ನಿನ್ನನ್ನು ಏಕೆ ಸೇರುವೆನು? ನೀನು ಸ್ತ್ರೀಯ ಬಲೆಗೆ ಬಿದ್ದವನು. ಸದಾ ಕಾಮುಕನು.

೨೦. ಸ್ತ್ರೀಲಂಪಟನನ್ನು ಮುಟ್ಟಿದ ಮಾತ್ರದಿಂದಲೇ ಪುಣ್ಯವೆಲ್ಲವೂ ನಾಶವಾಗುವುದು. ಅವನು ಮಹಾಪಾಪಿಯು. ಅವನನ್ನು ನೋಡಿದರೂ ಪಾಪಬರುವುದು.

೨೧. ಸ್ತ್ರೀಲಂಪಟನು ಕೆಟ್ಟ ಆಚಾರವುಳ್ಳವನೂ ಅಶುಚಿಯೂ ಆಗಿರುವನು. ಅವನನ್ನು ಪಿತೃಗಳೂ, ದೇವತೆಗಳೂ ಎಲ್ಲಾ ಮಾನವರೂ ಸಹ ನಿಂದಿಸುವರು.

೨೨. ಸ್ತ್ರೀಯರ ಮೋಹಕ್ಕೆ ಬಿದ್ದವನಿಗೆ ಜ್ಞಾನ, ತಪಸ್ಸು, ಜಪ, ಹೋಮ, ಪೂಜೆ ಇವುಗಳಿಂದ ಯಾವ ಫಲವೂ ಲಭಿಸಲಾರದು. ಮತ್ತು ವಿದ್ಯೆ ದಾನ ಇವುಗಳಿಂದಲೂ ಏನೂ ಪ್ರಯೋಜನವಾಗಲಾರದು.

ಮಾತರಂ ಮಾಂ ಸ್ತ್ರಿಯೋ ಭಾವಂ ಕೃತ್ವಾ ಯೇನ ಬ್ರವೀಷಿ ಹ ।
ಭವಿಷ್ಯತಿ ಕ್ಷಯಸ್ತೇನ ಕಾಲೇನ ಮಮ ಶಾಪತಃ ॥ ೨೩ ॥

॥ ವಸಿಷ್ಠ ಉವಾಚ ॥

ಶ್ರುತ್ವಾ ಧರ್ಮಸ್ಸತೀಶಾಪಂ ನೃಪಮೂರ್ತಿಂ ವಿಹಾಯ ಚ ।
ಧೃತ್ವಾ ಸ್ವಮೂರ್ತಿಂ ದೇವೇಶಃ ಕಂಪಮಾನ ಉವಾಚ ಸಃ ॥ ೨೪ ॥

॥ ಧರ್ಮ ಉವಾಚ ॥

ಮಾತರ್ಜಾನೀಹಿ ಮಾಂ ಧರ್ಮಂ ಜ್ಞಾನಿನಾಂ ಚ ಗುರೋರ್ಗುರುಂ ।
ಪರಸ್ತ್ರೀಮಾತೃಬುದ್ಧಿಂ ಚ ಕುರ್ವಂತಂ ಸತತಂ ಪ್ರತಿ ॥ ೨೫ ॥

ಅಹಂ ತವಾಂತರಂ ಜ್ಞಾತುಮಾಗತಸ್ತವ ಸನ್ನಿಧಿಂ ।
ತವಾಶಂ ಚ ಮನೋ ಜಾನೇ ತಥಾಪಿ ವಿಧಿನೋದಿತಃ ॥ ೨೬ ॥

ಕೃತಂ ಮೇ ದಮನಂ ಸಾಧ್ವಿ ನ ವಿರುದ್ಧಂ ಯಥೋಚಿತಂ ।
ಶಾಸ್ತಿಃ ಸಮುತ್ಪಥಸ್ಥಾನಾಮೀಶ್ವರೇಣ ವಿನಿರ್ಮಿತಾ ॥ ೨೭ ॥

---

೨೩. ಎಲೈ ರಾಜನೆ, ನಿನಗೆ ನಾನು ತಾಯಿಯ ಸಮಾನಳು. ಇಂಥವಳಲ್ಲಿ ಕಾಮಾಸಕ್ತಿಯಿಂದ ಏನೇನೋ ಹೇಳುತ್ತಿರುವೆ. ಆದಕಾರಣ ನಿನಗೆ ಕೆಲವು ಕಾಲ ವಲ್ಲಿಯೇ ನನ್ನ ಶಾಪದಿಂದ ಕ್ಷಯವು ಬರುವುದು ಎಂದಳು.

೨೪. ವಸಿಷ್ಠಮುನಿಯು ಹೇಳಿದನು :—ಧರ್ಮಪುರುಷನು ಪತಿವ್ರತೆಯಾದ ಪದ್ಮಾದೇವಿಯ ಶಾಪವನ್ನು ಕೇಳಿ ರಾಜರೂಪವನ್ನು ಬಿಟ್ಟು ತನ್ನ ನಿಜವಾದ ರೂಪ ವನ್ನು ಧರಿಸಿ ಭಯದಿಂದ ನಡುಗುತ್ತಾ,

೨೫. ಧರ್ಮಪುರುಷನು ಹೇಳಿದನು :—ಓ ಮಾತೆ, ನಾನು ಜ್ಞಾನಿಗಳಿಗೂ ಗುರುವಾದ ಧರ್ಮಪುರುಷನು. ಸದಾ ನಾನು ಪರಸ್ತ್ರೀಯನ್ನು ತಾಯಿಯಂತೆ ತಿಳಿಯುವವನು.

೨೬. ಎಲೌ ಸಾಧ್ವಿ, ನಿನ್ನ ಅಂತರಂಗವನ್ನು ಪರೀಕ್ಷೆಮಾಡಲು ನಿನ್ನ ಬಳಿಗೆ ಬಂದೆನು. ನಿನ್ನ ಪರಿಶುದ್ಧವಾದ ಮನಸ್ಸನ್ನು ನಾನು ಬಲ್ಲೆನು. ಆದರೂ ದೈವ ಪ್ರೇರಣೆಯಿಂದ ನಿನ್ನನ್ನು ಪರೀಕ್ಷೆಮಾಡಲುದ್ಯುಕ್ತನಾದೆನು.

೨೭. ಓ ದೇವಿ, ನನಗೆ ಯೋಗ್ಯವಾದ ಶಿಕ್ಷೆಯನ್ನೇ ವಿಧಿಸಿರುವೆ. ಇದರಲ್ಲಿ ನಿನ್ನದೇನೂ ತಪ್ಪಿಲ್ಲ. ದಾರಿಯನ್ನು ಬಿಟ್ಟು ನಡೆಯುವವರಿಗೆ ಒಂದಲ್ಲ ಒಂದು ರೀತಿ ಯಲ್ಲಿ ಈಶ್ವರನು ಶಿಕ್ಷೆಯನ್ನು ವಿಧಿಸುವನು.

ಸ್ವಯಂ ಪ್ರದಾತಾ ಸರ್ವೇಭ್ಯಃ ಸುಖದುಃಖವರ್ಗಾ ಕ್ಷಮಃ ।
ಸಂಪದಂ ವಿಪದಂ ಯೋ ಹಿ ನಮಸ್ತಸ್ಮೈ ಶಿವಾಯ ಹಿ ॥ ೨೮ ॥

ಶತ್ರುಂ ಮಿತ್ರಂ ಸಂವಿಧಾತುಂ ಪ್ರೀತಿಂ ಚ ಕಲಹಂ ಕ್ಷಮಃ ।
ಸೃಷ್ಟುಂ ನಷ್ಟುಂ ಚ ಯಸ್ಸೃಷ್ಟಿಂ ನಮಸ್ತಸ್ಮೈ ಶಿವಾಯ ಹಿ ॥ ೨೯ ॥

ಯೇನ ಶುಕ್ಲೀಕೃತಂ ಕ್ಷೀರಂ ಜಲೇ ಶೈತ್ಯಂ ಕೃತಂ ಪುರಾ ।
ದಾಹೀಕೃತೋ ಹುತಾಶಶ್ಚ ನಮಸ್ತಸ್ಮೈ ಶಿವಾಯ ಹಿ ॥ ೩೦ ॥

ಪ್ರಕೃತಿರ್ನಿರ್ಮಿತಾ ಯೇನ ತಪ್ತ್ವಾತಿ ಮಹದಾದಿತಃ ।
ಬ್ರಹ್ಮವಿಷ್ಣುಮಹೇಶಾದ್ಯಾ ನಮಸ್ತಸ್ಮೈ ಶಿವಾಯ ಹಿ ॥ ೩೧ ॥

---

೨೮. ಎಲ್ಲರಿಗೂ ಸುಖ ಮತ್ತು ದುಃಖಗಳನ್ನು ಅವರವರ ಕರ್ಮಕ್ಕನುಸಾರವಾಗಿ ಕೊಡಲು ಆ ಈಶ್ವರನೇ ಸಮರ್ಥನು. ಸಂಪತ್ತು ಮತ್ತು ವಿಪತ್ತುಗಳನ್ನುಂಟುಮಾಡುವವನೂ ಅವನೇ. ಇಂತಹ ಶಿವನಿಗೆ ನಮಸ್ಕಾರವು.

೨೯. ಆ ಈಶ್ವರನು ಶತ್ರುವನ್ನು ಮಿತ್ರನನ್ನಾಗಿಯೂ, ಮಿತ್ರನನ್ನು ಶತ್ರುವನ್ನಾಗಿಯೂ ಮಾಡಲು ಸಮರ್ಥನು. ಪ್ರೀತಿ ಮತ್ತು ಕಲಹಗಳನ್ನು ಅವನೇ ಮಾಡಿಸುವವನು. ಜಗತ್ತನ್ನು ಸೃಜಿಸಲೂ, ಸಂಹರಿಸಲೂ ಅವನೇ ಸಮರ್ಥನು. ಇಂತಹ ಶಿವನಿಗೆ ನಮಸ್ಕಾರವು.

೩೦. ಸೃಷ್ಟಿಸುವಾಗ ಯಾವನು ಹಾಲನ್ನು ಬೆಳ್ಳಗಾಗಿಯೂ, ನೀರನ್ನು ತಣ್ಣಗಾಗಿಯೂ, ಅಗ್ನಿಯನ್ನು ಸುಡುವಂತಹುದನ್ನಾಗಿಯೂ ಸೃಷ್ಟಿಸಿದನೋ ಅಂತಹ ಶಿವನಿಗೆ ನಮಸ್ಕಾರವು.

೩೧. ಮಹಾತಪವನ್ನಾಚರಿಸಿ ಮೊದಲು ಪ್ರಕೃತಿಯನ್ನು ನಿರ್ಮಿಸಿ, ಬಳಿಕ ಮಹತ್ತತ್ವ ಅಹಂಕಾರ ಮುಂತಾದುವುಗಳನ್ನು ಸೃಜಿಸಿ ಬ್ರಹ್ಮ ವಿಷ್ಣು ರುದ್ರ ಮೊದಲಾದವರನ್ನೂ ಸೃಷ್ಟಿಸಿದ ಪರಮೇಶ್ವರನಿಗೆ ನಮಸ್ಕಾರವು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪುರತಸ್ತಸ್ಯಾಸ್ತಸ್ಥೌ ಧರ್ಮೋ ಜಗದ್ಗುರುಃ ।
ಕಿಂಚಿನ್ನೋವಾಚ ಚಕಿತಸ್ತತ್ಪಾತಿವ್ರತ್ಯತೋಷಿತಃ ॥ ೩೨ ॥

ಪದ್ಮಾಪಿ ನೃಪಕನ್ಯಾ ಸಾ ಪಿಪ್ಪಲಾದಪ್ರಿಯಾ ತಥಾ ।
ಸಾಧ್ವೀ ತಂ ಧರ್ಮಮಾಜ್ಞಾಯ ವಿಸ್ಮಿತೋವಾಚ ಪರ್ವತ ॥ ೩೩ ॥

॥ ಪದ್ಮೋವಾಚ ॥

ತ್ವಮೇವ ಧರ್ಮ ಸರ್ವೇಷಾಂ ಸಾಕ್ಷೀ ನಿಖಿಲಕರ್ಮಣಾಂ ।
ಕಥಂ ಮನೋ ಮೇ ವಿಜ್ಞಾತುಂ ವಿಡಂಬಯಸಿ ಮಾಂ ವಿಭೋ ॥ ೩೪ ॥

ಯತ್ತತ್ಸರ್ವಂ ಕೃತಂ ಬ್ರಹ್ಮ ನಾಪರಾಧೋ ಬಭೂವ ಮೇ ।
ತ್ವಂ ಚ ಶಪ್ತೋ ಮಯಾಜ್ಞಾನಾತ್ ಸ್ತ್ರೀಸ್ವಭಾವಾದ್ವೃಥಾ ವೃಷ ॥ ೩೫ ॥

ಕಾ ವ್ಯವಸ್ಥಾ ಭವೇತ್ತಸ್ಯ ಚಿಂತಯಾಮೀತಿ ಸಾಂಪ್ರತಂ ।
ಚಿತ್ತೇ ಸ್ಫುರತು ಸಾ ಬುದ್ಧಿರ್ಯಯಾ ಶಂ ಸಂಲಭಾಮಿ ವೈ ॥ ೩೬ ॥

---

೩೨. ಬ್ರಹ್ಮನು ಹೇಳಿದನು :— ಹೀಗೆ ಹೇಳಿ ಜಗದ್ಗುರುವಾದ ಧರ್ಮಪುರುಷನು ಆ ಪದ್ಮಾದೇವಿಯ ಎದುರಿಗೆ ನಿಂತನು. ಅವಳ ಪಾತಿವ್ರತ್ಯಕ್ಕೆ ಸಂತುಷ್ಟನಾದ ಅವನು ಮುಂದೇನನ್ನೂ ಹೇಳಲಿಲ್ಲ.

೩೩-೩೪. ಪಿಪ್ಪಲಾದ ಪತ್ನಿಯಾದ ಆ ಸಾಧ್ವಿ ಪದ್ಮಾದೇವಿಯು ಅವನು ಧರ್ಮಪುರುಷನೆಂದು ತಿಳಿದು, ಆಶ್ಚರ್ಯಗೊಂಡವಳಾಗಿ ಅವನನ್ನು ಕುರಿತು, ಓ ಧರ್ಮಪುರುಷ, ನೀನು ಎಲ್ಲ ಕರ್ಮಗಳಿಗೂ ಸಾಕ್ಷಿಯು. ಹೀಗಿದ್ದೂ ನನ್ನ ಮನಸ್ಸನ್ನು ತಿಳಿಯಲು ನನ್ನನ್ನು ಹೀಗೆ ಮೋಸಗೊಳಿಸಬಹುದೇ?

೩೫. ಆದರೆ ನಿನ್ನಿಂದ ನನಗೇನು ಹೆಚ್ಚಿನ ಅಪರಾಧವಾಗಲಿಲ್ಲ. ಸ್ತ್ರೀಯರಿಗೆ ಸಹಜವಾದ ಅಜ್ಞಾನದಿಂದ ನಾನು ಸುಮ್ಮನೇ ನಿನ್ನನ್ನು ಶಪಿಸಿಬಿಟ್ಟೆನು.

೩೬. ಆ ಶಾಪಕ್ಕೆ ಸರಿಯಾದ ವ್ಯವಸ್ಥೆಯಾವುದು? ಎಂದು ಚಿಂತಿಸುತ್ತಲಿದ್ದೇನೆ. ಅದಕ್ಕೆ ಅನುಕೂಲವಾದ ಬುದ್ಧಿಯು ನನಗೆ ಸ್ಫುರಿಸಲಿ.

ಆಕಾಶೋಽಸೌ ದಿಶಃ ಸರ್ವಾ ಯದಿ ನಶ್ಯಂತು ವಾಯವಃ ।
ತಥಾಪಿ ಸಾಧ್ವೀಶಾಪಸ್ತು ನ.ನಶ್ಯತಿ ಕದಾಚನ ॥ ೩೭ ॥

ಸತ್ಯೇ ಪೂರ್ಣಶ್ಚತುಷ್ಪಾದಃ ಪೌರ್ಣಮಾಸ್ಯಾಂ ಯಥಾ ಶಶೀ ।
ವಿರಾಜಸೇ ದೇವರಾಜ ಸರ್ವಕಾಲಂ ದಿವಾನಿಶಂ ॥ ೩೮ ॥

ತ್ವಂ ಚ ನಷ್ಟೋ ಭವಸಿ ಚೇತ್ಸೃಷ್ಟಿನಾಶೋ ಭವೇತ್ತದಾ ।
ಇತಿಕರ್ತವ್ಯತಾಮೂಢಾ ವೃಥಾಪಿ ಚ ವದಾಮ್ಯಹಂ ॥ ೩೯ ॥

ಪಾದಕ್ಷಯಶ್ಚ ಭವಿತಾ ತ್ರೇತಾಯಾಂ ಚ ಸುರೋತ್ತಮ ।
ಪಾದೋಽಪರೇ ದ್ವಾಪರೇ ಚ ತೃತೀಯೋಽಪಿ ಕಲೌ ವಿಭೋ ॥ ೪೦ ॥

ಕಲಿಶೇಷೇಽಖಿಲಾಶ್ಛಿನ್ನಾ ಭವಿಷ್ಯಂತಿ ತವಾಂಘ್ರಯಃ ।
ಪುನಸ್ಸತ್ಯೇ ಸಮಾಯಾತೇ ಪರಿಪೂರ್ಣೋ ಭವಿಷ್ಯಸಿ ॥ ೪೧ ॥

---

೩೭. ಈ ಆಕಾಶ, ದಿಕ್ಕುಗಳು ವಾಯುಗಳು ಎಲ್ಲವೂ ನಾಶವಾಗಬಹುದು. ಆದರೆ ಪತಿವ್ರತೆಯ ಶಾಪವು ಎಂದೆಂದಿಗೂ ನಾಶವಾಗಲಾರದು.

೩೮. ಓ ಧರ್ಮಮೂರ್ತಿ, ಕೃತಯುಗದಲ್ಲಿ ನೀನು ನಾಲ್ಕು ಪಾದಗಳಿಂದಲೂ ಪೂರ್ಣನಾಗಿ ಹುಣ್ಣಿಮೆಯ ಚಂದ್ರನಂತೆ ಎಲ್ಲಾ ಕಾಲದಲ್ಲೂ ವಿರಾಜಿಸುವೆ.

೩೯. ನೀನು ನಷ್ಟವಾದರೆ ಜಗತ್ತೇ ನಾಶವಾಗುವುದು. ಈ ವಿಷಯದಲ್ಲಿ ಏನು ಮಾಡಬೇಕೆಂದು ತಿಳಿಯದೆ ಏನೇನೋ ಹೇಳುತ್ತಲಿರುವೆನು,

೪೦. ತ್ರೇತಾಯುಗದಲ್ಲಿ ನಿನ್ನ ಒಂದು ಪಾದವು ನಾಶವಾಗುವುದು. ದ್ವಾಪರದಲ್ಲಿ ಎರಡು ಪಾದಗಳು ಕ್ಷಯಿಸುವುವು. ಕಲಿಯುಗದಲ್ಲಿ ಮೂರನೆಯ ಪಾದವೂ ಕ್ಷಯಿಸುವುದು. ಆಗ ನಿನಗೆ ಒಂದೇ ಪಾದವು.

೪೧. ಕಲಿಯುಗದ ಕೊನೆಯಲ್ಲಿ ನಿನ್ನ ನಾಲ್ಕು ಪಾದಗಳೂ ನಾಶವಾಗುವುವು. ತಿರುಗಿ ಕೃತಯುಗವು ಬರಲು ನೀನು ಪರಿಪೂರ್ಣನು (ನಾಲ್ಕು ಪಾದಗಳುಳ್ಳವನು) ಆಗುವೆ.

ಸತ್ಯೇ ಸರ್ವವ್ಯಾಪಕಸ್ತ್ವಂ ತದನ್ಯೇಷು ಚ ಕುತ್ರಚಿತ್ ।
ಯುಗವ್ಯವಸ್ಥಯಾ ಸ ತ್ವಂ ಭವಿಷ್ಯಸಿ ತಥಾ ತಥಾ ॥ ೪೨ ॥

ಇತ್ಯೇವಂ ವಚನಂ ಸತ್ಯಂ ಮಮಾಸ್ತು ಸುಖದಂ ತವ ।
ಯಾಮ್ಯಹಂ ಪತಿಸೇವಾಯೈ ಗಚ್ಛ ತ್ವಂ ಸ್ವಗೃಹಂ ವಿಭೋ ॥ ೪೩ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯಾಸ್ಸಂತುಷ್ಟೋಽಭೂದ್ವೃಷಸ್ಸ ವೈ ।
ತಥೇವಂವಾದಿನೀಂ ಸಾಧ್ವೀಮುವಾಚ ವಿಧಿನಂದನ ॥ ೪೪ ॥

॥ ಧರ್ಮ ಉವಾಚ ॥

ಧನ್ಯಾಸಿ ಪತಿಭಕ್ತಾಸಿ ಸ್ವಸ್ತಿ ತೇಽಸ್ತು ಪತಿವ್ರತೇ ।
ವರಂ ಗೃಹಾಣ ತ್ವತ್ಸ್ವಾಮಿ ತತ್ಪರಿತ್ರಾಣಕಾರಣಾತ್ ॥ ೪೫ ॥

ಯುವಾ ಭವತು ತೇ ಭರ್ತಾ ರತಿಶೂರಶ್ಚ ಧಾರ್ಮಿಕಃ ।
ರೂಪವಾನ್ ಗುಣವಾನ್ ವಾಗ್ಮೀ ಸಂತತಸ್ಥಿರಯೌವನಃ ॥ ೪೬ ॥

---

೪೨. ಕೃತಯುಗದಲ್ಲಿ ಎಲ್ಲೆಲ್ಲಿಯೂ ನೀನು (ಧರ್ಮವು) ಹರಡಿರುವೆ. ಮಿಕ್ಕ ಯುಗಗಳಲ್ಲಿ ಅಷ್ಟು ವ್ಯಾಪಕತೆಯು ನಿನಗಿಲ್ಲ. ಆಯಾಯ ಯುಗಗಳ ಯೋಗ್ಯತೆಗನುಸಾರವಾಗಿ ನೀನಿರುವೆ.

೪೩. ಈ ರೀತಿಯಾಗಿ ನಾನು ಹೇಳಿದ ಮಾತು ಸತ್ಯವಾದುದು. ಇದು ನಿನಗೆ ಸುಖವುಂಟುಮಾಡುವುದಾಗಲಿ. ಇನ್ನು ನಾನು ಪತಿಸೇವೆಗೆ ತೆರಳುವೆನು. ನೀನು ನಿನ್ನ ಮನೆಗೆ ಹೊರಡು ಎಂದಳು.

೪೪. ಬ್ರಹ್ಮನು ಹೇಳಿದನು:—ಹೀಗೆ ಪದ್ಮಾದೇವಿಯು ಹೇಳಿದ ಮಾತನ್ನು ಕೇಳಿ ಧರ್ಮಪುರುಷನು ಸಂತುಷ್ಟನಾದನು ಮತ್ತು ಆ ಸಾಧ್ವಿಯನ್ನು ಕುರಿತು,

೪೫. ಧರ್ಮಪುರುಷನು ಹೇಳಿದನು:—ಎಲೌ ಸಾಧ್ವಿ, ಪತಿಭಕ್ತಳಾದ ನೀನು ಧನ್ಯಳು. ನಿನಗೆ ಮಂಗಳವಾಗಲಿ. ನಿನ್ನನ್ನನುಗ್ರಹಿಸುವುದಕ್ಕಾಗಿ ನಿನ್ನ ಪತಿಗೆ ವರವನ್ನು ಕೊಡುವೆನು.

೪೬. ನಿನ್ನ ಪತಿಯು ಯುವಕನಾಗಲಿ, ರತಿ (ಕಾಮಕ್ರೀಡೆ) ಯಲ್ಲಿ ಸಮರ್ಥನೂ ಧಾರ್ಮಿಕನೂ ಆಗಲಿ, ರೂಪವಂತನೂ ಗುಣವಂತನೂ ಆಗಲಿ ಮತ್ತು ಅವನ ಯೌವನವು ಸ್ಥಿರವಾಗಿರಲಿ.

ಚಿರಂಜೀವೀ ಸ ಭವತು ಮಾರ್ಕಾಂಡೇಯಾತ್ಪರಃ ಶುಭೇ ।
ಕುಬೇರಾದ್ಧನವಾಂಶ್ಚೈವ ಶಕ್ರಾದ್ಧೈಶ್ವರ್ಯವಾನಪಿ ॥ ೪೭ ॥

ಶಿವಭಕ್ತೋ ಹರಿಸಮಃ ಸಿದ್ಧಸ್ತು ಕಪಿಲಾತ್ಪರಃ ।
ಬುದ್ಧ್ಯಾ ಬೃಹಸ್ಪತಿಸಮಃ ಸಮುತ್ತ್ವೇನ ವಿಧೇಸ್ಸಮಃ ॥ ೪೮ ॥

ಸ್ವಾಮಿಸೌಭಾಗ್ಯಸಂಯುಕ್ತಾ ಭವ ತ್ವಂ ಜೀವನಾವಧಿ ।
ತಥಾ ಚ ಸುಭಗೇ ದೇವಿ ತ್ವಂ ಭವ ಸ್ಥಿರಯೌವನಾ ॥ ೪೯ ॥

ಮಾತಾ ತ್ವಂ ದಶಪುತ್ರಾಣಾಂ ಗುಣಿನಾಂ ಚಿರಜೀವಿನಾಂ ।
ಸ್ವಭರ್ತುರಧಿಕಾನಾಂ ಚ ಭವಿಷ್ಯತಿ ನ ಸಂಶಯಃ ॥ ೫೦ ॥

ಗೃಹಾ ಭವಂತು ತೇ ಸಾಧ್ವಿ ಸರ್ವಸಂಪತ್ಸಮನ್ವಿತಾಃ ।
ಪ್ರಕಾಶವಂತಃ ಸತತಂ ಕುಬೇರಭವನಾಧಿಕಾಃ ॥ ೫೧ ॥

---

೪೭. ಆ ನಿನ್ನ ಪತಿಯು ಮಾರ್ಕಾಂಡೇಯನಿಗಿಂತಲೂ ಉತ್ತಮ ಚಿರಂಜೀವಿಯಾಗಲಿ, ಕುಬೇರನಿಗಿಂತಲೂ ಧನವಂತನಾಗಲಿ, ಇಂದ್ರನಿಗಿಂತಲೂ ಐಶ್ವರ್ಯವಂತನಾಗಲಿ.

೪೮. ಹರಿಯಂತೆ ಶಿವಭಕ್ತನಾಗಿರಲಿ, ಕಪಿಲನಿಗಿಂತಲೂ ಶ್ರೇಷ್ಠ ಸಿದ್ಧನಾಗಿರಲಿ, ಬುದ್ಧಿಯಲ್ಲಿ ಬೃಹಸ್ಪತಿಯಂತಾಗುವನು. ವಿಧಿಯಂತೆ ಸರ್ವಸಮತೆಯುಳ್ಳವನಾಗುವನು.

೪೯. ಎಲೌ ದೇವಿ, ನೀನು ನಿನ್ನ ಜೀವಮಾನಪರ್ಯಂತ ಪತಿಸೌಭಾಗ್ಯವುಳ್ಳವಳಾಗು. ಮತ್ತು ನಿನ್ನ ಯೌವನವು ಸ್ಥಿರವಾಗಿರಲಿ.

೫೦. ನೀನು ಹತ್ತು ಮಕ್ಕಳ ತಾಯಿಯಾಗುವೆ. ಆ ಮಕ್ಕಳು ಗುಣಿಗಳೂ ಬಹಳಕಾಲ ಬದುಕುವವರೂ ಆಗುವರು. ತಂದೆಗಿಂತಲೂ ಉತ್ತಮರಾಗುವರು.

೫೧. ಎಲೌ ಸಾಧ್ವಿ, ನಿಮ್ಮ ಮನೆಗಳು ಕುಬೇರನ ಮನೆಗಳಿಗಿಂತಲೂ ಉತ್ತಮವಾಗಿ ಎಲ್ಲ ಐಶ್ವರ್ಯಗಳಿಂದಲೂ ಕೂಡಿ ಬೆಳಗುವಂತಾಗಲಿ ಎಂದು ವರವಿತ್ತನು.

॥ ವಸಿಷ್ಠ ಉವಾಚ ॥

ಇತ್ಯೇವಮುಕ್ತ್ವಾ ಸಂತಸ್ಥೌ ಧರ್ಮಸ್ಸ ಗಿರಿಸತ್ತಮ ।
ಸಾ ತಂ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಸ್ವಗೃಹಂ ಯಯೌ ॥ ೫೨ ॥

ಧರ್ಮಸ್ತಥಾಶಿಷೋ ದತ್ವಾ ಜಗಾಮ ನಿಜಮಂದಿರಂ ।
ಪ್ರಶಶಂಸ ಚ ತಾಂ ಪ್ರೀತ್ಯಾ ಪದ್ಮಾಂ ಸಂಸದಿ ಸಂಸದಿ ॥ ೫೩ ॥

ಸಾ ರೇಮೇ ಸ್ವಾಮಿನಾ ಸಾರ್ಧಂ ಯೂನಾ ರಹಸಿ ಸಂತತಂ ।
ಪಶ್ಚಾದ್ಬಭೂವುಸ್ಸತ್ಪುತ್ರಾಸ್ತ್ವದ್ಧರ್ತುರಧಿಕಾ ಗುಣೈಃ ॥ ೫೪ ॥

ಬಭೂವ ಸಕಲಾ ಸಂಪದ್ದಂಪತ್ಯೋಃ ಸುಖವರ್ಧಿನೀ ।
ಸರ್ವಾನಂದವೃದ್ಧಿಕರಾ ಪರತ್ರೇಹ ಚ ಶರ್ಮಣೇ ॥ ೫೫ ॥

ಶೈಲೇಂದ್ರ ಕಥಿತಂ ಸರ್ವಮಿತಿಹಾಸಂ ಪುರಾತನಂ ।
ದಂಪತ್ಯೋಶ್ಚ ತಯೋಃ ಪ್ರೀತ್ಯಾ ಶ್ರುತಂ ತೇ ಪರಮಾದರಾತ್ ॥ ೫೬ ॥

---

೫೨. ವಸಿಷ್ಠಮುನಿಯು ಹೇಳಿದನು :—ಹೀಗೆ ಹೇಳಿ ಧರ್ಮಪುರುಷನು ಸುಮ್ಮನಾದನು. ಎಲೈ ಪರ್ವತರಾಜ, ಆಮೇಲೆ ಪದ್ಮಾದೇವಿಯು ಅವನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಮನೆಗೆ ತೆರಳಿದಳು.

೫೩. ಧರ್ಮಪುರುಷನು ಪದ್ಮಾದೇವಿಗೆ ಆಶೀರ್ವಾದವನ್ನು ಮಾಡಿ ತನ್ನ ಮನೆಗೆ ಹೋದನು. ಅಲ್ಲಿ ಪ್ರತಿಯೊಂದು ಗೋಷ್ಠಿಯಲ್ಲಿಯೂ ಆ ಪದ್ಮಾದೇವಿಯ ಪಾತಿವ್ರತ್ಯಮಹಿಮೆಯನ್ನು ಪ್ರಶಂಸಿಸಿದನು.

೫೪. ಮುಂದೆ ಆ ಪದ್ಮಾದೇವಿಯು ಯುವಕನಾದ ಪತಿಯೊಡನೆ ಏಕಾಂತ ದಲ್ಲಿ ಯಥೇಚ್ಛೆಯಾಗಿ ವಿಹರಿಸಿದಳು. ಆಮೇಲೆ ಅವಳಿಗೆ ಗುಣವಂತರಾದ ಮಕ್ಕಳು ಜನಿಸಿದರು.

೫೫. ಆ ಪದ್ಮಾ ಮತ್ತು ಪಿಪ್ಪಲಾದರಿಗೆ ಸುಖಕರವಾದ ಎಲ್ಲಾ ಸಂಪತ್ತು ಗಳೂ ಕೂಡಿ ತುಂಬಾ ಆನಂದವನ್ನುಂಟುಮಾಡಿದುವು. ಆದರಿಂದ ಆ ದಂಪತಿಗಳು ಇಹಪರಗಳೆರಡರಲ್ಲೂ ಸುಖಪಡೆಯುವಂತಹ ಕರ್ಮವನ್ನು ಮಾಡಿದರು.

೫೬. ಎಲೈ ಹಿಮವಂತ, ಪದ್ಮಾ ಪಿಪ್ಪಲಾದ ದಂಪತಿಗಳ ಪುರಾತನವಾದ ಇತಿ ಹಾಸವನ್ನು ವಿಸ್ತಾರವಾಗಿ ಹೇಳಿರುವೆನು. ನೀನೂ ಸಹ ಆದರದಿಂದ ಕೇಳಿರುವೆ.

ಬುಧ್ವಾ ತತ್ತ್ವಂ ಸುತಾಂ ದೇಹಿ ಪಾರ್ವತೀಮೀಶ್ವರಾಯ ಚ ।
ಪರುಷಂ ತ್ಯಜ ಶೈಲೇಂದ್ರ ಮೇನಯಾ ಸ್ವಸ್ತ್ರಿಯಾ ಸಹ ॥ ೫೭ ॥

ಸಪ್ತಾಹೇ ಸಮತೀತೇ ತು ದುರ್ಲಭೇಽತಿಶುಭೇ ಕ್ಷಣೇ ।
ಲಗ್ನಾಧಿಪೇ ಚ ಲಗ್ನಸ್ಥೇ ಚಂದ್ರೇ ಸ್ವತನಯಾನ್ವಿತೇ ॥ ೫೮ ॥

ಮುದಿತೇ ರೋಹಿಣೀಯುಕ್ತೇ ವಿಶುದ್ಧೇ ಚಂದ್ರತಾರಕೇ ।
ಮಾರ್ಗಮಾಸೇ ಚಂದ್ರವಾರೇ ಸರ್ವದೋಷವಿವರ್ಜಿತೇ ॥ ೫೯ ॥

ಸರ್ವಸದ್ಗ್ರಹಸಂಸೃಷ್ಟೇಽಸದ್ಗ್ರಹದೃಷ್ಟಿವರ್ಜಿತೇ ।
ಸದಪತ್ಯಪ್ರದೇ ಜೀವೇ ಪತಿಸೌಭಾಗ್ಯದಾಯಿನಿ ॥ ೬೦ ॥

ಜಗದಂಬಾಂ ಜಗತ್ಪಿತ್ರೇ ಮೂಲಪ್ರಕೃತಿಮೀಶ್ವರೀಂ ।
ಕನ್ಯಾಂ ಪ್ರದಾಯ ಗಿರಿಜಾಂ ಕೃತೀ ತ್ವಂ ಭವ ಪರ್ವತ ॥ ೬೧ ॥

---

೫೭. ಇದರ ತತ್ವವನ್ನು ತಿಳಿದು ನೀನು ಈಗ ಪಾರ್ವತಿಯನ್ನು ಶಂಕರನಿಗೆ ಮದುವೆಮಾಡಿಕೊಡು. ನೀನೂ ನಿನ್ನ ಪತ್ನಿಯೂ ಸಹ ಈ ವಿಷಯದಲ್ಲಿ ಹಠವನ್ನು ಬಿಡಿ.

೫೮-೬೧. ಎಲೈ ಪರ್ವತರಾಜ, ಇಂದಿಗೆ ಏಳು ದಿವಸ ಕಳೆದು ಎಂಟನೆಯ ದಿನದಲ್ಲಿ ಸೋಮವಾರ ಅದೊಂದು ಶುಭಮುಹೂರ್ತವು ಬರುವುದು. ಕರ್ಕಾಟಕ ಲಗ್ನ, ಲಗ್ನಾಧಿಪತಿಯಾದ ಚಂದ್ರನು ಲಗ್ನದಲ್ಲಿಯೇ ಬುಧನೊಡನೆ ಇರಬೇಕು. ಚಂದ್ರನಕ್ಷತ್ರವಾದ ರೋಹಿಣಿಯೊಡನೆ ಕೂಡಿದ್ದು ಆ ಚಂದ್ರನು ಶುದ್ಧನಾಗಿ ಮುದಿತಾವಸ್ಥೆಯಲ್ಲಿರಬೇಕು. ಶುಭಗ್ರಹಗಳ ದೃಷ್ಟಿ ಅಥವಾ ಸಂಬಂಧವು ಲಗ್ನಕ್ಕಿರಬೇಕು, ಪಾಪಗ್ರಹದೃಷ್ಟಿಯಿರಕೂಡದು. ಪುತ್ರಕಾರಕನಾದ ಗುರುವು ಕೇಂದ್ರದಲ್ಲಿರಬೇಕು. ಇಂತಹ ಪುತ್ರಪ್ರದವೂ ಪತಿಸೌಭಾಗ್ಯಕರವೂ ಆದ ಮುಹೂರ್ತದಲ್ಲಿ ಜಗತ್ತಿಗೆ ಆದಿಕಾರಣಳೂ ಜಗನ್ಮಾತೆಯೂ ಆದ ಪಾರ್ವತಿಯನ್ನು ಜಗತ್ಪಿತೃವಾದ ಪರಮೇಶ್ವರನಿಗೆ ಧಾರೆಯೆರೆದುಕೊಟ್ಟು ನೀನು ಕೃತಕೃತ್ಯನಾಗು ಎಂದನು.

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ಮುನಿಶಾರ್ದೂಲೋ ವಸಿಷ್ಠೋ ಜ್ಞಾನಿಸತ್ತಮಃ ।
ವಿರರಾಮ ಶಿವಂ ಸ್ಮೃತ್ವಾ ನಾನಾಲೀಲಾಕರಂ ವಿಭುಂ ॥ ೬೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಪಂಚತ್ರಿಂಶೋಽಧ್ಯಾಯಃ



೬೨. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಮಹಾಜ್ಞಾನಿಯಾದ ವಸಿಷ್ಠ ಮುನಿಯು ಲೀಲಾಮಯನಾದ ಶಿವನನ್ನು ಸ್ಮರಿಸುತ್ತಾ ಸುಮ್ಮನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಷಟ್ತ್ರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ವಸಿಷ್ಠಸ್ಯ ವಚಃ ಶ್ರುತ್ವಾ ಸಗಣೋಽಪಿ ಹಿಮಾಲಯಃ ।
ವಿಸ್ಮಿತೋ ಭಾರ್ಯಯಾ ಶೈಲಾನುವಾಚ ಸ ಗಿರೀಶ್ವರಃ ॥ ೧ ॥

॥ ಹಿಮಾಲಯ ಉವಾಚ ॥

ಹೇ ಮೇರೋ ಗಿರಿರಾಟ್ಸಹ್ಯ ಗಂಧಮಾದನ ಮಂದರ ।
ಮೈನಾಕ ವಿಂಧ್ಯ ಶೈಲೇಂದ್ರಾಸ್ಸರ್ವೇ ಶೃಣ್ವಂತು ಮದ್ವಚಃ ॥ ೨ ॥

---

### ಮೂವತ್ತಾರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ವಸಿಷ್ಠಮುನಿಯು ಹೇಳಿದ ಮಾತನ್ನು ಪರಿವಾರ ಮತ್ತು ಪತ್ನಿಯೊಡನೆ ಕೇಳಿ ಹಿಮವಂತನು ತುಂಬಾ ಆಶ್ಚರ್ಯಗೊಂಡು ತನ್ನ ಜ್ಞಾತಿಗಳಾದ ಪರ್ವತಗಳನ್ನು ಕುರಿತು,

೨. ಎಲೈ ಗಿರಿರಾಜನಾದ ಮೇರು, ಸಹ್ಯಗಿರಿ, ಗಂಧಮಾದನ, ಮಂದರ, ಮೈನಾಕ, ವಿಂಧ್ಯ ನೀವೆಲ್ಲರೂ ನನ್ನ ಮಾತನ್ನು ಲಾಲಿಸಿ.

ವಸಿಷ್ಠೋ ಹಿ ವದತ್ಯೇವಂ ಕಿಂ ಮೇ ಕಾರ್ಯಂ ವಿಚಾರ್ಯತೇ ।
ಯಥಾ ತಥಾ ಚ ಶಂಸಧ್ವಂ ನಿರ್ಣೀಯ ಮನಸಾಖಿಲಂ ॥ ೩ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಸುಮೇರುಪ್ರಮುಖಾಶ್ಚ ತೇ ।
ಪ್ರೋಚುರ್ಹಿಮಾಲಯಂ ಪ್ರೀತ್ಯಾ ಸುನಿರ್ಣೀಯ ಮಹೀಧರಾಃ ॥ ೪ ॥

॥ ಶೈಲಾ ಊಚುಃ ॥

ಅಧುನಾ ಕಿಂ ವಿಮರ್ಶೇನ ಕೃತಂ ಕಾರ್ಯಂ ತಥೈವ ಹಿ ।
ಉತ್ಪನ್ನೇಯಂ ಮಹಾಭಾಗ ದೇವಕಾರ್ಯಾರ್ಥಮೇವ ಹಿ ॥ ೫ ॥

ಪ್ರದಾತವ್ಯಾ ಶಿವಾಯೇತಿ ಶಿವಸ್ಯಾರ್ಥೇಽವತಾರಿಣೀ ।
ಅನಯಾರಾಧಿತೋ ರುದ್ರೋ ರುದ್ರೇಣ ಯದಿ ಭಾಷಿತಾ ॥ ೬ ॥

---

೩. ವಸಿಷ್ಠಮುನಿಯು ಹೇಳಿದುದನ್ನು ನೀವೆಲ್ಲರೂ ಕೇಳಿರುವಿರಿ. ಅದನ್ನು ವಿಮರ್ಶೆಮಾಡಿ ಈಗ ನಾನು ಮಾಡಬೇಕಾದುದೇನು? ಎಂಬುದನ್ನು ಹೇಳಿರಿ ಎಂದನು.

೪. ಬ್ರಹ್ಮನು ಹೇಳಿದನು:—ಹಾಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಸುಮೇರು ಮೊದಲಾದ ಪರ್ವತಗಳು ತಮ್ಮಲ್ಲಿಯೇ ವಿಮರ್ಶೆಮಾಡಿ ಹೀಗೆ ಹೇಳಿದುವು.

೫. ಪರ್ವತಗಳು ಹೇಳಿದುವು:—ಎಲೈ ಹಿಮವಂತನೆ, ಇಲ್ಲಿ ವಿಮರ್ಶೆಯೇ ಬೇಕಾಗಿಲ್ಲ. ವಸಿಷ್ಠನು ಹೇಳಿದಂತೆಯೇ ಮಾಡಬೇಕು. ಈ ಪಾರ್ವತಿಯು ದೇವ ಕಾರ್ಯಕ್ಕಾಗಿಯೇ ನಿಮ್ಮಲ್ಲಿ ಜನಿಸಿರುವಳು.

೬. ಈ ಗಿರಿಜೆಯು ಶಿವನಿಗಾಗಿಯೇ ಅವತರಿಸಿರುವಳು. ಅವನೇ ಪತಿಯಾಗ ಬೇಕೆಂದು ಅನನ್ಯಭಕ್ತಿಯಿಂದ ಅವನನ್ನೇ ಆರಾಧಿಸಿರುವಳು. ಶಿವನೂ ಅದರಂತೆ ವರವನ್ನು ಕೊಟ್ಟಿರುವನು. ಅಂದಮೇಲೆ ಶಿವನಿಗೇ ಪಾರ್ವತಿಯನ್ನು ಕೊಡಬೇಕು ಎಂದರು.

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತೇಷಾಂ ಮೇರ್ವಾದೀನಾಂ ಹಿಮಾಚಲಃ ।
ಸುಪ್ರಸನ್ನತರೋಽಭೂದ್ವೈ ಜಹಾಸ ಗಿರಿಜಾ ಹೃದಿ ॥ ೭ ॥

ಅರುಂಧತೀ ಚ ತಾಂ ಮೇನಾಂ ಬೋಧಯಾಮಾಸ ಕಾರಣಾತ್ ।
ನಾನಾವಾಕ್ಯಸಮೂಹೇನೇತಿಹಾಸ್ಯೈರ್ವಿವಿಧೈರಪಿ ॥ ೮ ॥

ಅಥ ಸಾ ಮೇನಕಾದೇವೀ ಪ್ರಬುದ್ಧ್ವಾ ಚ ಪ್ರಸನ್ನಧೀಃ ।
ಮುನೀನರುಂಧತೀಂ ಶೈಲಂ ಭೋಜಯಿತ್ವಾ ಬುಭೋಜ ಚ ॥ ೯ ॥

ಅಥ ಶೈಲವರೋ ಜ್ಞಾನೀ ಸುಸಂಸೇವ್ಯ ಮುನೀಂಶ್ಚ ತಾನ್ ।
ಉವಾಚ ಸಾಂಜಲಿಃ ಪ್ರೀತ್ಯಾ ಪ್ರಸನ್ನಾತ್ಮಾ ಗತಭ್ರಮಃ ॥ ೧೦ ॥

॥ ಹಿಮಾಚಲ ಉವಾಚ ॥

ಸಪ್ತರ್ಷಯೋ ಮಹಾಭಾಗಾ ವಚಃ ಶೃಣುತ ಮಾಮಕಂ ।
ವಿಸ್ಮಯೋ ಮೇ ಗತಸ್ಸರ್ವಶ್ಶಿವಯೋಶ್ಚರಿತಂ ಶ್ರುತಂ ॥ ೧೧ ॥

---

೭. ಬ್ರಹ್ಮನು ಹೇಳಿದನು:—ಹೀಗೆ ಮೇರು ಮೊದಲಾದವರು ಹೇಳಿದ ಮಾತನ್ನು ಕೇಳಿ ಹಿಮವಂತನು ಸಂತುಷ್ಟನಾದನು. ಆಗ ಗಿರಿಜೆಯು ಮನಸ್ಸಿನಲ್ಲಿ ಹರ್ಷಗೊಂಡಳು.

೮. ಅರುಂಧತಿಯೂ ಸಹ, ಅನೇಕ ಇತಿಹಾಸಗಳನ್ನೂ ಯುಕ್ತಿಯುಕ್ತವಾದ ಮಾತುಗಳನ್ನೂ ಹೇಳಿ ಮೇನಾದೇವಿಯನ್ನು ಬೋಧಿಸಿದಳು.

೯. ಬಳಿಕ ಆ ಮೇನಾದೇವಿಯು ತತ್ವವನ್ನು ತಿಳಿದು ಪ್ರಸನ್ನಳಾಗಿ ಮುನಿಗಳಿಗೂ ಅರುಂಧತಿಗೂ ಭೋಜನಮಾಡಿಸಿ ಔತಣಮಾಡಿಸಿದಳು.

೧೦-೧೧. ಆಮೇಲೆ ಜ್ಞಾನಿಯಾದ ಹಿಮವಂತನು ಆ ಸಪ್ತಋಷಿಗಳನ್ನು ಚನ್ನಾಗಿ ಸೇವಿಸಿ ಕೈಮುಗಿದುಕೊಂಡು ಅವರನ್ನು ಕುರಿತು, ಓ ಸಪ್ತಮುನಿಗಳೇ, ನನ್ನ ವಚನವನ್ನು ಕೇಳಿರಿ. ಈಗ ನನ್ನ ಭ್ರಾಂತಿಯೆಲ್ಲವೂ ಹೋಯಿತು. ಶಿವಪಾರ್ವತಿಯರ ಪೂರ್ವಚರಿತೆಯು ನಿಮ್ಮಿಂದ ತಿಳಿಯಿತು.

ಮದೀಯಂ ಚ ಶರೀರಂ ವೈ ಪತ್ನೀ ಮೇನಾ ಸುತಾಸ್ಸುತಾ ।
ಋದ್ಧಿಸ್ಸಿದ್ಧಿಶ್ಚ ಚಾನ್ಯದ್ವೈ ಶಿವಸ್ಯೈವ ನ ಚಾನ್ಯಥಾ ॥ ೧೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸ ತದಾ ಪುತ್ರೀಂ ದೃಷ್ಟ್ವಾ ತತ್ಸಾದರಂ ಚ ತಾಂ ।
ಭೂಷಯಿತ್ವಾ ತದಂಗಾನಿ ಋಷ್ಯುತ್ಸಂಗೇ ನ್ಯವೇಶಯತ್ ॥ ೧೩ ॥

ಉವಾಚ ಚ ಪುನಃ ಪ್ರೀತ್ಯಾ ಶೈಲರಾಜ ಋಷೀಂಸ್ತದಾ ।
ಅಯಂ ಭಾಗೋ ಮಯಾ ತಸ್ಮೈ ದಾತವ್ಯ ಇತಿ ನಿಶ್ಚಿತಂ ॥ ೧೪ ॥

॥ ಋಷಯ ಊಚುಃ ॥

ಶಂಕರೋ ಭಿಕ್ಷುಕಸ್ತ್ವೇಽಥ ಸ್ವಯಂ ದಾತಾ ಭರ್ವಾ ಗಿರೇ ।
ಭೈಕ್ಷ್ಯಂ ಚ ಪಾರ್ವತೀ ದೇವಿ ಕಿಮುತಃ ಪರಮಮುತ್ತಮಂ ॥ ೧೫ ॥

ಹಿಮವರ್ವ ಶಿಖರಾಣಾಂ ತೇ ಯದ್ಧೇತೋಸ್ಸದೃಶೀ ಗತಿಃ ।
ಧನ್ಯಸ್ತ್ವಂ ಸರ್ವಶೈಲಾನಾಮಧಿಪಸ್ಸರ್ವತೋ ವರಃ ॥ ೧೬ ॥

---

೧೨. ನನ್ನ ಶರೀರ, ನನ್ನ ಹೆಂಡತಿ ಮೇನಕೆ, ಮಕ್ಕಳು ಪಾರ್ವತಿ, ಋದ್ಧಿ, ಸಿದ್ಧಿ ಎಲ್ಲ ಪರಮೇಶ್ವರನದೇ. ಅವನು ಅನುಗ್ರಹಿಸಿದುದೇ ಆಗಿದೆ. ಇದರಲ್ಲಿ ಸಂಶಯ ವಿಲ್ಲ ಎಂದನು.

೧೩. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಹಿಮವಂತನು ಮಗಳಾದ ಪಾರ್ವತಿಯನ್ನು ಪ್ರೀತಿಯಿಂದೊಮ್ಮೆ ನೋಡಿ ಅವಳನ್ನು ಆಭರಣಗಳಿಂದ ಅಲಂಕರಿಸಿ ಋಷಿಗಳ ಸಮೀಪಕ್ಕೆ ಕರೆತಂದನು.

೧೪. ಈ ಪಾರ್ವತಿಯನ್ನು ಪರಮೇಶ್ವರನಿಗೇ ದಾನಮಾಡಬೇಕೆಂದು ನಾನು ಹಿಂದೆಯೇ ಸಂಕಲ್ಪಮಾಡಿದ್ದೆನು ಎಂದು ಋಷಿಗಳಿಗೆ ಮತ್ತೆ ಹೇಳಿದನು.

೧೫. ಋಷಿಗಳು ಹೇಳಿದರು:—ಎಲೈ ಹಿಮವಂತನೆ, ಶಂಕರನು ಭಿಕ್ಷೆಯನ್ನು ಬೇಡುವವನು. ನೀನು ಭಿಕ್ಷೆಕೊಡುವವನು. ಪಾರ್ವತಿಯೇ ಭಿಕ್ಷೆಯು. ಇನ್ನು ಇದಕ್ಕಿಂತಲೂ ಉತ್ತಮವಾದುದು ಇರುವುದೇ?

೧೬. ಎಲೈ ಗಿರಿರಾಜ, ನಿನ್ನ ಶಿಖರಗಳಂತೆ ನೀನೂ ಉನ್ನತಸ್ಥಾನವನ್ನು ಪಡೆಯುವೆ. ಪರ್ವತಗಳಲ್ಲೆಲ್ಲಾ ನೀನು ಧನ್ಯನು. ಎಲ್ಲರಿಗಿಂತಲೂ ಶ್ರೇಷ್ಠನು ಎಂದರು.

॥ ಬ್ರಹ್ಮೋವಾಚ ॥

ಏವಮುಕ್ತ್ವಾ ತು ಕನ್ಯಾಯೈ ಮುನಯೋ ವಿಮಲಾಶಯಾಃ ।
ಆಶಿಷಂ ದತ್ತವಂತಸ್ತೇ ಶಿವಾಯ ಸುಖದಾ ಭವ ॥ ೧೭ ॥

ಸ್ಪೃಷ್ಟ್ವಾ ಕರೇಣ ತಾಂ ತತ್ರ ಕಲ್ಯಾಣಂ ತೇ ಭವಿಷ್ಯತಿ ।
ಶುಕ್ಲಪಕ್ಷೇ ಯಥಾ ಚಂದ್ರೋ ವರ್ಧತಾಂ ತ್ವದ್ಗುಣಾಸ್ತಥಾ ॥ ೧೮ ॥

ಇತ್ಯುಕ್ತ್ವಾ ಮುನಯಸ್ಸರ್ವೇ ದತ್ವಾ ತೇ ಗಿರಯೇ ಮುದಾ ।
ಪುಷ್ಪಾಣಿ ಫಲಯುಕ್ತಾನಿ ಪ್ರತ್ಯಯಂ ಚಕ್ರಿರೇ ತದಾ ॥ ೧೯ ॥

ಅರುಂಧತೀ ತದಾ ತತ್ರ ಮೇನಾಂ ಸಾ ಸುಮುಖೀ ಮುದಾ ।
ಗುಣೈಶ್ಚ ಲೋಭಯಾಮಾಸ ಶಿವಸ್ಯ ಪರಮಾ ಸತೀ ॥ ೨೦ ॥

ಹರಿದ್ರಾಕುಂಕುಮೈಶ್ಚೈಲಃ ಶ್ಮಶ್ರೂಣಿ ಪ್ರತ್ಯಮಾರ್ಜಯತ್ ।
ಲೌಕಿಕಾಚಾರಮಾಧಾಯ ಮಂಗಲಾಯನಮುತ್ತಮಂ ॥ ೨೧ ॥

---

೧೭. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಮಹಾ ಪವಿತ್ರರಾದ ಮುನಿಗಳು ಪಾರ್ವತಿಗೆ "ಶಿವನಿಗೆ ಸದಾ ಸುಖವನ್ನುಂಟುಮಾಡುವವಳಾಗು" ಎಂದು ಆಶೀರ್ವಾದಮಾಡಿದರು.

೧೮-೧೯. ಆಮೇಲಾ ಮುನಿಗಳು ಪಾರ್ವತಿಯನ್ನು ಕೈಗಳಿಂದ ನೇವರಿಸಿ ಶುಕ್ಲಪಕ್ಷದ ಚಂದ್ರನಂತೆ ನಿನ್ನ ಗುಣಗಳು ಅಭಿವೃದ್ಧಿಹೊಂದುವುವು ಎಂದು ಹೇಳಿ ಹಿಮವಂತನಿಗೆ ಫಲಪುಷ್ಪಗಳನ್ನು ಸಂತೋಷದಿಂದ ಕೊಟ್ಟು ಆಶೀರ್ವದಿಸಿ ವಿವಾಹ ನಿಶ್ಚಯುವನ್ನು ಮಾಡಿದರು.

೨೦. ಆಗ ಮಹಾಸಾಧ್ವಿಯಾದ ಅರುಂಧತಿಯು ಮೇನಕಾದೇವಿಗೆ ಶಿವನ ಗುಣಗಳನ್ನು ವರ್ಣಿಸಿ ಹೇಳಿ ಅವನ ವಿಷಯದಲ್ಲಿ ಅವಳಿಗೆ ಪೂಜ್ಯಬುದ್ಧಿಯುಂಟಾಗುವಂತೆ ಮಾಡಿದಳು.

೨೧. ಅರಶಿನ ಕುಂಕುಮಗಳಿಂದ ಕನ್ನೆಗಳನ್ನು ತಳೆದು ಲೋಕಾಚಾರದಂತೆ ಮಂಗಳಕಾರ್ಯಗಳನ್ನು ಮಾಡಿದಳು.

ತತಶ್ಚ ತೇ ಚತುರ್ಥೇಽಹ್ನಿ ಸಂಧಾರ್ಯ ಲಗ್ನಮುತ್ತಮಂ ।
ಪರಸ್ಪರಂ ಚ ಸಂತುಷ್ಯ ಸಂಜಗ್ಮುಶ್ಶಿವಸನ್ನಿಧಿಂ ॥ ೨೨ ॥

ತತ್ರ ಗತ್ವಾ ಶಿವಂ ನತ್ವಾ ಸ್ತುತ್ವಾ ವಿವಿಧಸೂಕ್ತಿಭಿಃ ।
ಊಚುಸ್ಸರ್ವೇ ವಸಿಷ್ಠಾದ್ಯಾ ಮುನಯಃ ಪರಮೇಶ್ವರಂ ॥ ೨೩ ॥

॥ ಋಷಯ ಊಚುಃ ॥

ದೇವದೇವ ಮಹಾದೇವ ಪರಮೇಶ ಮಹಾಪ್ರಭೋ ।
ಶೃಣ್ವಸ್ಮದ್ವಚನಂ ಪ್ರೀತ್ಯಾ ಯತ್ಕೃತಂ ಸೇವಕೈಸ್ತವ ॥ ೨೪ ॥

ಬೋಧಿತೋ ಗಿರಿರಾಜಶ್ಚ ಮೇನಾ ವಿವಿಧಸೂಕ್ತಿಭಿಃ ।
ಸೇತಿಹಾಸಂ ಮಹೇಶಾನ ಪ್ರಬುದ್ಧೋಽಸೌ ನ ಸಂಶಯಃ ॥ ೨೫ ॥

ವಾಕ್ಯದತ್ತಾ ಗಿರೀಂದ್ರೇಣ ಪಾರ್ವತೀ ತೇ ಹಿ ನಾನ್ಯಥಾ ।
ಉದ್ವಾಹಾಯ ಪ್ರಗಚ್ಛ ತ್ವಂ ಗಣೈರ್ದೇವೈಶ್ಚ ಸಂಯುತಃ ॥ ೨೬ ॥

---

೨೨-೨೩. ಬಳಿಕ ವಸಿಷ್ಠಮೊದಲಾದ ಆ ಮುನಿಗಳು ನಾಲ್ಕನೆಯ ದಿವಸದಲ್ಲಿ ಶುಭಲಗ್ನವೊಂದನ್ನು ನಿರ್ಣಯಿಸಿಕೊಂಡು ಸಂತೋಷದಿಂದ ಶಿವನ ಬಳಿಗೆ ಹೋಗಿ ಶಿವನನ್ನು ನಮಸ್ಕರಿಸಿ ವಿವಿಧ ವಾಕ್ಯಗಳಿಂದ ಸ್ತುತಿಸಿ ಆ ಪರಮೇಶ್ವರನನ್ನು ಕುರಿತು,

೨೪. ಋಷಿಗಳು ಹೇಳಿದರು :—ಪರಮೇಶ್ವರನೂ, ಮಹಾಪ್ರಭುವೂ, ದೇವದೇವನೂ ಆದ ಓ ಮಹಾದೇವನೆ, ನಿನ್ನ ಸೇವಕರಾದ ನಾವು ನೆರವೇರಿಸಿಕೊಂಡು ಬಂದ ಕಾರ್ಯವನ್ನು ಹೇಳುವೆವು. ಪ್ರೀತಿಯಿಂದ ಕೇಳು.

೨೫. ಓ ಮಹೇಶ್ವರ, ಹಿಮವಂತನಿಗೂ, ಮೇನಾದೇವಿಗೂ ಚನ್ನಾಗಿ ಬೋಧಿಸಿದೆವು. ಇತಿಹಾಸ ಮುಂತಾದ ಸೂಕ್ತಿಗಳನ್ನು ಹೇಳಿ ಅವರಿಗೆ ತಿಳಿವಳಿಕೆ ಉಂಟುಮಾಡಿರುವೆವು. ಈಗ ಆ ಹಿಮವಂತನು ಜ್ಞಾನವುಳ್ಳವನಾಗಿರುವನು. ಇದರಲ್ಲಿ ಸಂಶಯವಿಲ್ಲ.

೨೬. ಗಿರಿರಾಜನು ಪಾರ್ವತಿಯನ್ನು ನಿನಗೆ ಕೊಡಲು ವಾಗ್ದಾನಮಾಡಿರುವನು. ಈಗ ಮದುವೆಗಾಗಿ ಗಣಗಳು ಮತ್ತು ದೇವತೆಗಳೊಡನೆ ಹೊರಡಲು ಸಿದ್ಧನಾಗು.

ಗಚ್ಛ ಶೀಘ್ರಂ ಮಹಾದೇವ ಹಿಮಾಚಲಗೃಹಂ ಪ್ರಭೋ ।
ವಿವಾಹಾಯ ಯಥಾ ರೀತಿಃ ಪಾರ್ವತೀಮಾತ್ಮಜನ್ಮನೇ ॥ ೨೭ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತೇಷಾಂ ಲೌಕೀಕಾಚಾರತತ್ಪರಃ ।
ಪ್ರಹೃಷ್ಟಾತ್ಮಾ ಮಹೇಶಾನಃ ಪ್ರಹಸ್ಯೇದಮುವಾಚ ಸಃ ॥ ೨೮ ॥

॥ ಮಹೇಶ ಉವಾಚ ॥

ವಿವಾಹೋ ಹಿ ಮಹಾಭಾಗಾ ನ ದೃಷ್ಟೋ ನ ಶ್ರುತೋ ಮಯಾ ।
ಯಥಾ ಪುರಾ ಭವದ್ಭಿಸ್ತದ್ವಿಧಿಃ ಪ್ರೋಚ್ಯೋ ವಿಶೇಷತಃ ॥ ೨೯ ॥

॥ ಬ್ರಹ್ಮೋವಾಚ ॥

ತದಾಕರ್ಣ್ಯ ಮಹೇಶಸ್ಯ ಲೌಕಿಕಂ ವಚನಂ ಶುಭಂ ।
ಪ್ರತ್ಯೂಚುಃ ಪ್ರಹಸಂತಸ್ತೇ ದೇವದೇವಂ ಸದಾಶಿವಂ ॥ ೩೦ ॥

॥ ಋಷಯ ಊಚುಃ ॥

ವಿಷ್ಣುಮಾಹೂಯ ವೈ ಶೀಘ್ರಂ ಸಸಮಾಜಂ ವಿಶೇಷತಃ ।
ಬ್ರಹ್ಮಾಣಂ ಸಸುತಂ ಪ್ರೀತ್ಯಾ ತಥಾ ದೇವಂ ಶತಕ್ರತುಂ ॥ ೩೧ ॥

---

೨೭. ಓ ಮಹಾದೇವ, ಜಾಗ್ರತೆಯಾಗಿ ಹಿಮವಂತನ ಮನೆಗೆ ತೆರಳು. ಪುತ್ರರನ್ನು ಪಡೆಯಲು ವಿಧಿವತ್ತಾಗಿ ಪಾರ್ವತಿಯನ್ನು ಮದುವೆಯಾಗು ಎಂದರು.

೨೮. ಬ್ರಹ್ಮನು ಹೇಳಿದನು:—ಮುನಿಗಳ ಆ ಮಾತನ್ನು ಕೇಳಿ ಪರಮೇಶ್ವರನು ಸಂತುಷ್ಟನಾಗಿ ಲೋಕಾಚಾರವನ್ನು ಅನುಸರಿಸಿ,

೨೯. ಮಹೇಶ್ವರನು ಹೇಳಿದನು:—ಎಲೈ ಮಹಾನುಭಾವರೇ, ವಿವಾಹವನ್ನು ನಾನು ನೋಡಿಯೂ ಇಲ್ಲ. ಕೇಳಿಯೂ ಇಲ್ಲ. ಆದಕಾರಣ ನೀವು ಅದರ ವಿಧಿಯನ್ನು ಶಾಸ್ತ್ರಾನುಸಾರವಾಗಿ ಹೇಳಬೇಕು ಎಂದನು.

೩೦. ಬ್ರಹ್ಮನು ಹೇಳಿದನು:—ಆ ಲೌಕಿಕ ವಚನವನ್ನು ಕೇಳಿ ಮುನಿಗಳು ನಕ್ಕು ದೇವದೇವನಾದ ಸದಾಶಿವನನ್ನು ಕುರಿತು,

೩೧-೩೩. ಋಷಿಗಳು ಹೇಳಿದರು:—ಓ ಮಹಾದೇವ, ಹರಿಯನ್ನು ಅವನ

ತಥಾ ಋಷಿಗಣಾ್ ಸರ್ವಾ್ ಯಕ್ಷಗಂಧರ್ವಕಿನ್ನರಾ್ ।
ಸಿದ್ಧಾನ್ ವಿದ್ಯಾಧರಾಂಶ್ಚೈವ ತಥಾ ಚೈವಾಪ್ಸರೋ ಗಣಾ್ ॥ ೩೨ ॥

ಏತಾಂಶ್ಚಾನ್ಯಾ್ ಪ್ರಭೋ ಸರ್ವಾನಾನಯಸ್ವೇಹ ಸಾದರಂ ।
ಸರ್ವೇ ಸಂಸಾಧಯಿಷ್ಯಂತಿ ತ್ವತ್ಕಾರ್ಯಂ ತೇ ನ ಸಂಶಯಃ ॥ ೩೩ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ಸಪ್ತಋಷಯಸ್ತದಾಜ್ಞಾಂ ಪ್ರಾಪ್ಯ ತೇ ಮುದಾ ।
ಸ್ವಧಾಮ ಪ್ರಯಯುಸ್ಸರ್ವೇ ಶಂಸಂತಃ ಶಾಂಕರೀಂ ಗತಿಂ ॥ ೩೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಷಟ್ತ್ರಿಂಶೋಽಧ್ಯಾಯಃ



---

ಪರಿವಾರದೊಡನೆ ಕರೆಸು. ಬ್ರಹ್ಮನನ್ನು ಅವನ ಪುತ್ರರೊಡನೆ ಕರೆಸು. ಮತ್ತು ಇಂದ್ರ, ಋಷಿಗಳು, ಯಕ್ಷರು, ಗಂಧರ್ವರು, ಕಿನ್ನರರು, ವಿದ್ಯಾಧರರು, ಸಿದ್ಧರು, ಅಪ್ಸರೆಯರು, ಇವರೆಲ್ಲರನ್ನೂ ಕರೆಸು. ಅವರೆಲ್ಲರೂ ನಿನ್ನ ವಿವಾಹ ಕಾರ್ಯವನ್ನು ಸಾಂಗವಾಗಿ ನೆರವೇರಿಸುವರು. ಇದರಲ್ಲಿ ಸಂಶಯವಿಲ್ಲ ಎಂದರು.

೩೪. ಬ್ರಹ್ಮನು ಹೇಳಿದನು :—ಎಲೈ ನಾರದ ಹೀಗೆ ಹೇಳಿ ಸಪ್ತಋಷಿಗಳು ಶಿವನ ಅಪ್ಪಣೆಯನ್ನು ಪಡೆದು ಶಿವನ ಲೀಲೆಯನ್ನು ಹೊಗಳುತ್ತಾ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಸಪ್ತತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ತಾತ ಪ್ರಾಜ್ಞ ವದೇದಾನೀಂ ಸಪ್ತರ್ಷಿಷು ಗತೇಷು ಚ ।
ಕಿಮಕಾರ್ಷೀದ್ಧಿಮಗಿರಿಸ್ತನ್ಮೇ ಕೃತ್ವಾ ಕೃಪಾಂ ವಿಭೋ ॥ ೧ ॥

॥ ಬ್ರಹ್ಮೋವಾಚ ॥

ಗತೇಷು ತೇಷು ಮುನಿಷು ಸಪ್ತಸ್ವಪಿ ಮುನೀಶ್ವರ ।
ಸಾರುಂಧತೀಷು ಹಿಮವಾನ್ ಯದಕಾರ್ಷೀದ್ಬ್ರವೀಮಿ ತೇ ॥ ೨ ॥

---

## ಮೂವತ್ತೇಳನೆಯ ಅಧ್ಯಾಯವು

೧. ನಾರದನು ಕೇಳಿದನು:—ಪ್ರಾಜ್ಞನಾದ ಓ ತಂದೆಯೇ, ಸಪ್ತಋಷಿಗಳು ಹೊರಟುಹೋದಮೇಲೆ ಹಿಮವಂತನು ಏನು ಮಾಡಿದನು? ಅದನ್ನು ದಯವಿಟ್ಟು ಹೇಳು ಎನ್ನಲು,

೨. ಬ್ರಹ್ಮನು ಹೇಳಿದನು:—ಎಲೈ ನಾರದ, ಸಪ್ತಋಷಿಗಳೂ ಅರುಂಧತಿಯೂ ಹೊರಟುಹೋದಮೇಲೆ ಹಿಮವಂತನು ಏನು ಮಾಡಿದನೆಂಬುದನ್ನು ನಿನಗೆ ಹೇಳುವೆನು.

ತತ ಆಮಂತ್ರ್ಯ ಸ್ವಭ್ರಾತ್ರ್ಯ್ರ್ ಮೇರ್ವಾದೀರ್ ಸಸುತಪ್ರಿಯಃ ।
ಮಹಾಮನಾಸ್ಸ ಮುಮುದೇ ಹಿಮವಾರ್ನ್ ಪರ್ವತೇಶ್ವರಃ ॥ ೩ ॥

ತದಾಜ್ಞಪ್ತಸ್ತತಃ ಪ್ರೀತ್ಯಾ ಹಿಮವಾಂಲ್ಲಗ್ನಪತ್ರಿಕಾಂ ।
ಲೇಖಯಾಮಾಸ ಸುಪ್ರೀತ್ಯಾ ಗರ್ಗೇಣ ಸ್ವಪುರೋಧಸಾ ॥ ೪ ॥

ಅಥ ಪ್ರಸ್ಥಾಪಯಾಮಾಸ ತಾಂ ಶಿವಾಯ ಸ ಪತ್ರಿಕಾಂ ।
ನಾನಾವಿಧಾಸ್ತು ಸಾಮಗ್ರ್ಯಃ ಸ್ವಜನೈರ್ಮುದಿತಾತ್ಮಭಿಃ ॥ ೫ ॥

ತೇ ಜನಾಸ್ತತ್ರ ಗತ್ವಾ ಚ ಕೈಲಾಸೇ ಶಿವಸನ್ನಿಧಿಂ ।
ದದುಃ ಶಿವಾಯ ತತ್ಪತ್ರಂ ತಿಲಕಂ ಸಂವಿಧಾಯ ಚ ॥ ೬ ॥

ಸಮ್ಮಾನಿತಾ ವಿಶೇಷೇಣ ಪ್ರಭುಣಾ ಚ ಯಥೋಚಿತಂ ।
ಸರ್ವೇ ತೇ ಪ್ರೀತಮನಸ ಆಜಗ್ಮುಶ್ಶೈಲಸನ್ನಿಧಿಂ ॥ ೭ ॥

ಸಮ್ಮಾನಿತಾರ್ನ್ ವಿಶೇಷೇಣ ಮಹೇಶೇನಾಗತಾರ್ನ್ ಜನಾರ್ನ್ ।
ದೃಷ್ಟ್ವಾ ಸುಹರ್ಷಿತಾರ್ನ್ ಶೈಲೋ ಮುಮೋದಾತೀವ ಚೇತಸಿ ॥ ೮ ॥

---

೩. ಆಮೇಲೆ ಸುತವತ್ಸಲನಾದ ಆ ಹಿಮವಂತನು ತನ್ನ ಸಹೋದರರಾದ ಮೇರು ಮೊದಲಾದವರನ್ನು ಕರೆಸಿ ಸಂತೋಷದಿಂದ ಅವರೊಡನೆ ವಿಚಾರಮಾಡಿದನು.

೪. ಆ ಮೇರು ಮೊದಲಾದ ಸಂಬಂಧಿಗಳ ಅನುಮತಿಯಂತೆ ಹಿಮವಂತನು ಪುರೋಹಿತನಾದ ಗರ್ಗಮುನಿಯಿಂದ ಲಗ್ನಪತ್ರಿಕೆಯನ್ನು ಬರೆಯಿಸಿದನು.

೫. ಆಮೇಲಾ ಲಗ್ನಪತ್ರಿಕೆಯನ್ನು ಶಿವನಿಗೆ ಜನಗಳೊಡನೆ ಕಳುಹಿಸಿದನು. ಜೊತೆಗೆ ಅನೇಕ ಬಗೆಯ ಮಂಗಳದ್ರವ್ಯಗಳನ್ನೂ ಕಳುಹಿಸಿದನು.

೬. ಆ ಜನಗಳು ಕೈಲಾಸಕ್ಕೆ ಹೋಗಿ ಅಲ್ಲಿ ಶಿವನನ್ನು ಕಂಡು ಅವನಿಗೆ ತಿಲಕವನ್ನಿಟ್ಟು ಲಗ್ನಪತ್ರಿಕೆಯನ್ನು ಸಮರ್ಪಿಸಿದರು.

೭. ಆಗ ಶಿವನೂ ಸಹ ಆ ಜನಗಳನ್ನು ಯೋಗ್ಯರೀತಿಯಲ್ಲಿ ವಿಶೇಷವಾಗಿ ಸನ್ಮಾನಿಸಿದನು. ಅವರೆಲ್ಲರೂ ಸಂತೋಷಗೊಂಡು ಹಿಮವಂತನ ಬಳಿಗೆ ಬಂದರು.

೮. ಪರಮೇಶ್ವರನಿಂದ ಹೆಚ್ಚಾಗಿ ಸತ್ಕರಿಸಲ್ಪಟ್ಟು ಸಂತೋಷದಿಂದ ಬಂದಿರುವ ತನ್ನ ಜನಗಳನ್ನು ನೋಡಿ ಪರ್ವತರಾಜನು ತುಂಬಾ ಸಂತಸಗೊಂಡನು.

ತತೋ ನಿಮಂತ್ರಣಂ ಚಕ್ರೇ ಸ್ವಬಂಧೂನಾಂ ಪ್ರಮೋದಿತಃ ।
ನಾನಾದೇಶಸ್ಥಿತಾನಾಂ ಚ ನಿಖಿಲಾನಾಂ ಸುಖಾಸ್ಪದಂ ॥ ೯ ॥

ತತಸ್ಸ ಕಾರಯಾಮಾಸ ಸ್ವನ್ನಸಂಗ್ರಹಮಾದರಾತ್ ।
ನಾನಾವಿಧಾಶ್ಚ ಸಾಮಗ್ರೀರ್ವಿವಾಹಕರಣೋಚಿತಾಃ ॥ ೧೦ ॥

ತಂಡುಲಾನಾಂ ಬಹೂರ್ಶೈಲಾರ್ನ್ ಪೃಥುಕಾನಾಂ ತಥೈವ ಚ ।
ಗುಡಾನಾಂ ಶರ್ಕರಾಣಾಂ ಚ ಲವಣಾನಾಂ ತಥೈವ ಚ । ॥ ೧೧ ॥

ಕ್ಷೀರಾಣಾಂ ಚ ಘೃತಾನಾಂ ಚ ದಧ್ನಾಂ ವಾಪೀಶ್ಚಕಾರ ಹ ।
ಯವಾದಿಧಾನ್ಯಪಿಷ್ಟಾನಾಂ ಲಡ್ಡುಕಾನಾಂ ತಥೈವ ಚ ॥ ೧೨ ॥

ನಾನಾಪಕ್ವಾನ್ನಸಂಘಾಂಶ್ಚ ಮಹಸ್ವಾದುರಸಾಂಸ್ತಥಾ ।
ಬಹ್ವೀರ್ಹೈರ್ಯಯ್ಯಂಗವಾನಾಂ ಚ ಹ್ಯಾಸವಾನಾಂ ತಥೈವ ಚ ॥ ೧೩ ॥

ಶಷ್ಕುಲೀನಾಂ ಸ್ವಸ್ತಿಕಾನಾಂ ಶರ್ಕರಾಣಾಂ ತಥೈವ ಚ ।
ಅಮೃತೇಕ್ಷುರಸಾನಾಂ ಚ ತತ್ರ ವಾಪೀಶ್ಚಕಾರ ಸಃ ॥ ೧೪ ॥

---

೯. ಆಮೇಲೆ ಹಿಮವಂತನು ನಾನಾದೇಶವಿದೇಶಗಳಲ್ಲಿರುವಂತಹ ತನ್ನ ಬಂಧುಗಳಿಗೆ ವಿವಾಹಕ್ಕೆ ಬರುವಂತೆ ಆಹ್ವಾನವನ್ನು ಕಳುಹಿಸಿದನು.

೧೦. ಅನಂತರ ಅವನು ಒಳ್ಳೆಯ ಭೋಜನಪದಾರ್ಥಗಳನ್ನು ಸಂಗ್ರಹಿಸಿದನು. ಮದುವೆಗೆ ಯೋಗ್ಯವಾದಂತಹ ಸಾಮಗ್ರಿಗಳನ್ನೂ ಯಥೇಷ್ಟವಾಗಿ ಸಂಗ್ರಹಿಸಿದನು.

೧೧. ಅಕ್ಕಿ, ಅವಲಕ್ಕಿ, ಬೆಲ್ಲ, ಸಕ್ಕರೆ, ಉಪ್ಪು, ಇವೆಲ್ಲವನ್ನೂ ಬೆಟ್ಟದಂತೆ ರಾಶಿರಾಶಿಯಾಗಿ ಸಂಗ್ರಹಿಸಿದನು.

೧೨-೧೪. ಹಾಲು, ತುಪ್ಪ, ಮೊಸರು ಇವುಗಳ ಭಾವಿಯನ್ನು ಮಾಡಿಸಿದನು. ಗೋಧಿಹಿಟ್ಟು ಮೊದಲಾದ ಹಿಟ್ಟುಗಳು ಲಾಡು, ಅನೇಕಬಗೆ ರುಚಿರುಚಿಯಾದ ಪಕ್ವಾನ್ನಗಳು ಇವೆಲ್ಲವೂ ರಾಶಿರಾಶಿಯಾಗಿ ಸಂಗ್ರಹಿಸಲ್ಪಟ್ಟುವು. ಆಗತಾನೇ ಕಾಸಿದ ಹಸುವಿನ ತುಪ್ಪ, ದ್ರಾಕ್ಷಾಸವ, ಅಮೃತರಸ, ಕಬ್ಬಿನಹಾಲು ಇವುಗಳನ್ನು ಅನೇಕ ಭಾವಿಗಳಲ್ಲಿ ತುಂಬಿದ್ದರು. ಚಕ್ಕುಲಿ ಜಿಲೇಬಿ ಮುಂತಾದ ಬಗೆಬಗೆಯಾದ ಅನೇಕ ಭಕ್ಷ್ಯಗಳನ್ನು ಅಣಿಮಾಡಿದರು.

ನಾನಾವ್ಯಂಜನವಸ್ತೂನಿ ಗಣದೇವಹಿತಾನಿ ಚ ।
ಅಮೂಲ್ಯನಾನಾವಸ್ತ್ರಾಣಿ ವಹ್ನಿಶೌಚಾನಿ ಯಾನಿ ಚ ॥ ೧೫ ॥

ಮಣಿರತ್ನಪ್ರಕಾರಾಣಿ ಸುವರ್ಣರಜತಾನಿ ಚ ।
ದ್ರವ್ಯಾಣ್ಯೇತಾನಿ ಚಾನ್ಯಾನಿ ಸಂಗೃಹ್ಯ ವಿಧಿಪೂರ್ವಕಂ ॥ ೧೬ ॥

ಮಂಗಲಂ ಕರ್ತುಮಾರೇಭೇ ಗಿರಿರ್ಮಂಗಲಕೃದ್ದಿನೇ ।
ಸಂಸ್ಕಾರಂ ಕಾರಯಾಮಾಸುಃ ಪಾರ್ವತ್ಯಾಃ ಪರ್ವತಸ್ತ್ರಿಯಃ ॥ ೧೭ ॥

ತಾ ಮಂಗಲಂ ಮುದಾ ಚಕ್ರುರ್ಭೂಷಿತಾ ಭೂಷಣೈಸ್ಸ್ವಯಂ ।
ಪುರದ್ವಿಜಸ್ತ್ರಿಯೋ ಹೃಷ್ಟಾ ಲೋಕಾಚಾರಂ ಪ್ರಚಕ್ರಿರೇ ॥ ೧೮ ॥

ಸೋತ್ಸವಂ ವಿವಿಧಂ ತತ್ರ ಸುಮಂಗಲಪುರಸ್ಸರಂ ।
ಹಿಮಾಲಯೋಽಪಿ ಹೃಷ್ಟಾತ್ಮಾ ಕೃತ್ವಾಚಾರಂ ಸುಮಂಗಲಂ ॥ ೧೯ ॥

---

೧೫-೧೬. ಪ್ರಮಥಗಣಗಳಿಗೆ ಮತ್ತು ದೇವತೆಗಳಿಗೆ ಹಿತವಾದಂತಹ ಅನೇಕ ವ್ಯಂಜನಗಳನ್ನೂ, ಅಗ್ನಿಯಂತೆ ಪ್ರಕಾಶಿಸುವಂತಹವೂ ನಿರ್ಮಲವೂ ಆದಂತಹ ಅನೇಕ ಬೆಲೆಯುಳ್ಳ ವಸ್ತ್ರಗಳನ್ನೂ, ರತ್ನ ಮುತ್ತುಗಳು, ಚಿನ್ನ ಬೆಳ್ಳಿಗಳು ಮುಂತಾದ ಅನೇಕ ದ್ರವ್ಯಗಳನ್ನೂ ಸಂಗ್ರಹಿಸಿದನು.

೧೭. ಮಂಗಳಕಾರ್ಯವನ್ನು ಮಾಡಬೇಕಾದ ದಿನದಲ್ಲಿ ಹಿಮವಂತನು ಮಂಗಳೋತ್ಸವವನ್ನು ಮಾಡಿದನು. ಪರ್ವತಸ್ತ್ರೀಯರು ಪಾರ್ವತಿಗೆ ಮಂಗಳ ಸಂಸ್ಕಾರವನ್ನು ಮಾಡಿದರು.

೧೮. ಆ ಸ್ತ್ರೀಯರು ಗಿರಿಜೆಯನ್ನು ಆಭರಣಗಳಿಂದ ಚನ್ನಾಗಿ ಅಲಂಕರಿಸಿ ಮಂಗಳೋತ್ಸವವನ್ನು ಮಾಡಿದರು. ಪಟ್ಟಣದ ಬ್ರಾಹ್ಮಣ ಸ್ತ್ರೀಯರು ಹರ್ಷದಿಂದ ಲೋಕಾಚಾರವನ್ನು ನೆರವೇರಿಸಿದರು.

೧೯. ಆ ಹಿಮಾಲಯನೂ ಸಹ ಅನೇಕ ಬಗೆಯ ಮಂಗಲೋತ್ಸವಗಳನ್ನೂ ಲೋಕಾಚಾರಗಳನ್ನೂ ಮಾಡಿ ಸಂತಸದಿಂದ ತನ್ನ ಬಂಧುಗಳ ಬರುವಿಕೆಯನ್ನೇ ನಿರೀಕ್ಷಿಸುತ್ತಿದ್ದನು.

ಸರ್ವಭಾವೇನ ಸುಪ್ರೀತೋ ಬಂಧುವರ್ಗಾಗಮೋತ್ಸುಕಃ ।
ಏತಸ್ಮಿನ್ನಂತರೇ ತಸ್ಯ ಬಾಂಧವಾಶ್ಚ ನಿಮಂತ್ರಿತಾಃ ॥ ೨೦ ॥

ಆಜಗ್ಮುಃ ಸಸ್ತ್ರಿಯೋ ಹೃಷ್ಟಾಸ್ಸಸುತಾಃ ಸಪರಿಚ್ಛದಾಃ ।
ತದೇವ ಶೃಣು ದೇವರ್ಷೇ ವರ್ಣಯಾಮಿ ವಿಶೇಷತಃ ॥ ೨೧ ॥

ಶಿವಪ್ರೀತಿವಿವೃದ್ಧ್ಯರ್ಥಂ ನಿರ್ಯಾಗಮುಸಮಾದೃತಃ ।
ದೇವಾಲಯಗಿರಿರ್ಯೋ ಹಿ ದಿವ್ಯರೂಪಧರೋ ಮಹಾ ॥ ೨೨ ॥

ನಾನಾರತ್ನಪರಿಭ್ರಾಜತ್ಸಮಾಜಃ ಸಪರಿಚ್ಛದಃ ।
ನಾನಾಮಣಿಮಹಾರತ್ನಸಾರಮಾದಾಯ ಯತ್ನತಃ ॥ ೨೩ ॥

ಸುವೇಷಾಲಂಕೃತಃ ಶ್ರೀಮಾನ್ ಜಗಾಮ ಸ ಹಿಮಾಲಯಂ ।
ಮಂದರಸ್ಸರ್ವಶೋಭಾಢ್ಯಸ್ಸನಾರೀತನಯೋ ಗಿರಿಃ ॥ ೨೪ ॥

ಸೂಪಾಯನಾನಿ ಸಂಗೃಹ್ಯ ಜಗಾಮ ವಿವಿಧಾನಿ ಚ ।
ಅಸ್ತಾಚಲೋಽಪಿ ದಿವ್ಯಾತ್ಮಾ ಸೋಪಾಯನ ಉದಾರಧೀಃ ॥ ೨೫ ॥

---

೨೦. ಆ ಸಮಯದಲ್ಲಿ ಹಿಮವಂತನಿಂದ ಆಹ್ವಾನಿತರಾದ ಬಂಧುಗಳು ತಮ್ಮ ಹೆಂಡತಿ ಮಕ್ಕಳು ಮತ್ತು ಪರಿವಾರದೊಡನೆ ಹರ್ಷದಿಂದ ಅಲ್ಲಿಗೆ ಬಂದರು..

೨೧. ಎಲೈ ನಾರದ, ಹಿಮವಂತನ ಬಂಧುಗಳು ಬಂದುದನ್ನೇ ಶಿವನ ಪ್ರೀತಿಗಾಗಿ ಆದರದಿಂದ ವರ್ಣಿಸುವೆನು.

೨೨-೨೩. ದೇವತೆಗಳ ವಾಸಸ್ಥಾನವಾದ ಮೇರುವು ದಿವ್ಯರೂಪವನ್ನು ಧರಿಸಿ, ಅನೇಕ ರತ್ನಾಭರಣಗಳಿಂದೊಪ್ಪುವ ಪರಿವಾರದೊಡನೆ ಹೊರಟು ಬೆಲೆಯುಳ್ಳ ಅನೇಕ ಶ್ರೇಷ್ಠರತ್ನಗಳನ್ನು ತೆಗೆದುಕೊಂಡು ಹಿಮವಂತನ ಮನೆಗೆ ಬಂದನು

೨೪. ಮಂದರಗಿರಿಯೂ ಸಹ ಸುಂದರವಾದ ವೇಷವನ್ನು ಧರಿಸಿ ಮರ್ಯಾದೆಯ ಕಾಣಿಕೆಗಳನ್ನು ತೆಗೆದುಕೊಂಡು ಪತ್ನೀಪುತ್ರರೊಡನೆ ಹಿಮಾಲಯಕ್ಕೆ ಬಂದನು.

೨೫. ಅಸ್ತಾಚಲನೂ ಸಹ ದಿವ್ಯರೂಪವನ್ನು ಧರಿಸಿ ಪ್ರಕಾಶಿಸುತ್ತಾ, ಮರ್ಯಾದಾದ್ರವ್ಯಗಳನ್ನು ತೆಗೆದುಕೊಂಡು ಹರ್ಷದಿಂದ ಗಿರಿಜೆಯ ಮದುವೆಗೆ ಬಂದನು.

ಬಹುಶೋಭಾಸಮಾಯುಕ್ತ ಆಜಗಾಮ ಮುದಾನ್ವಿತಃ ।
ಉದಯಾಚಲ ಆದಾಯ ಸದ್ರತ್ನಾನಿ ಮಣೀನಪಿ ॥ ೨೬ ॥

ಅತ್ಯುತ್ಕೃಷ್ಟಪರೀವಾರ ಆಜಗಾಮ ಮಹಾಸುಖೀ ।
ಮಲಯೋ ಗಿರಿರಾಜೋ ಹಿ ಸಪರೀವಾರ ಆವೃತಃ ॥ ೨೭ ॥

ಸುದಿವ್ಯರಚನಾಯುಕ್ತ ಆಯಯೌ ಬಹುಸದ್ಬಲಃ ।
ಸದ್ಯೋ ದರ್ದುರನಾಮಾ ಚ ಮುದಿತಸ್ಸಕಲತ್ರಕಃ ॥ ೨೮ ॥

ಬಹುಶೋಭಾನ್ವಿತಸ್ತಾತ ಯಯೌ ಹಿಮಗಿರೇರ್ಗೃಹಂ ।
ನಿಷದೋಽಪಿ ಪ್ರಹೃಷ್ಟಾತ್ಮಾ ಸಪರಿಚ್ಛದ ಆಯಯೌ ॥ ೨೯ ॥

ಸಸುತಸ್ತ್ರೀಗಣಃ ಪ್ರೀತ್ಯಾ ಯಯೌ ಹಿಮಗಿರೇರ್ಗೃಹಂ ।
ಆಜಗಾಮ ಮಹಾಭಾಗ್ಯೋ ಗಂಧಮಾದನಭೂಧರಃ ॥ ೩೦ ॥

ಕರವೀರಸ್ತಥೈವಾಪಿ ಮಹಾವಿಭವಸಂಯುತಃ ।
ಮಹೇಂದ್ರಃ ಪರ್ವತಶ್ರೇಷ್ಠ ಆಜಗಾಮ ಹಿಮಾಲಯಂ ॥ ೩೧ ॥

---

೨೬. ಉದಯಗಿರಿಯೂ ಸಹ ಒಳ್ಳೆಯ ರತ್ನಗಳನ್ನೂ ಮಣಿಗಳನ್ನೂ ತೆಗೆದುಕೊಂಡು ಶ್ರೇಷ್ಠಪರಿವಾರದೊಡನೆ ಆನಂದದಿಂದ ಬಂದನು.

೨೭. ಮಲಯ ಗಿರಿಯು ಸುಂದರವೇಷವನ್ನು ಧರಿಸಿ ಅನೇಕ ಸೇನೆಯೊಡನೆಯೂ, ಪರಿವಾರದೊಡನೆಯೂ ಹರ್ಷದಿಂದ ಬಂದನು.

೨೮. ದರ್ದುರನೆಂಬ ಗಿರಿಯು ದಿವ್ಯರೂಪವುಳ್ಳವನಾಗಿ ಹೆಂಡತಿಯೊಡನೆ ಹಿಮವಂತನ ಮನೆಗೆ ಬಂದನು.

೨೯. ನಿಷದನೆಂಬ ಗಿರಿಯು ಪತ್ನಿ ಪುತ್ರರೊಡನೆಯೂ ಮಹಾಪರಿವಾರದೊಡನೆಯೂ ಹಿಮಾಲಯಕ್ಕೆ ಸಂತೋಷದಿಂದ ಬರುವವನಾದನು.

೩೦. ಮಹಾಸೌಭಾಗ್ಯವಂತನಾದ ಗಂಧಮಾನಗಿರಿಯೂ ಕರವೀರಗಿರಿಯೂ ಸಹ ಮಹಾ ವೈಭವದೊಡನೆ ಹಿಮವಂತನ ಮನೆಗೆ ಬಂದರು.

೩೧ ಮಹೇಂದ್ರನೆಂಬ ಕುಲಪರ್ವತನು ದಿವ್ಯರೂಪುಳ್ಳವನಾಗಿ ಪತ್ನೀಪುತ್ರ ಪರಿವಾರರೊಡನೆ ಹಿಮಾಲಯಕ್ಕೆ ಬಂದನು.

ಸಗಣಃ ಸಸುತಸ್ಸ್ರೀಕೋ ಬಹುಶೋಭಾಸಮನ್ವಿತಃ ।
ಪಾರಿಯಾತ್ರೋ ಹಿ ಹೃಷ್ಟಾತ್ಮಾ ಮಣಿರತ್ನಾಕರಸ್ಸಯುತ್ ॥ ೩೨ ॥

ಸಗಣಃ ಸಪರೀವಾರ ಆಯಯೌ ಹಿಮಭೂಧರಂ ।
ಕ್ರೌಂಚಃ ಪರ್ವತರಾಜೋ ಹಿ ಮಹಾಬಲಪರಿಚ್ಛದಃ ।
ಆಜಗಾಮ ಗಿರಿಶ್ರೇಷ್ಠಃ ಸಮುಪಾಯನ ಆದೃತಃ ॥ ೩೩ ॥

ಪುರುಷೋತ್ತಮಶ್ಶೈಲೋಽಪಿ ಸಪರಿಚ್ಛದ ಆದೃತಃ ।
ಮಹೋಪಾಯನಮಾದಾಯಾಜಗಾಮ ಹಿಮಭೂಧರಂ ॥ ೩೪ ॥

ನೀಲಸ್ಸಲೀಲಸ್ಸಸುತಃ ಸಸ್ತ್ರೀಕೋ ದ್ರವ್ಯಸಂಯುತಃ ।
ಆಜಗಾಮ ಹಿಮಾಗಸ್ಯ ಗೃಹಮಾನಂದಸಂಯುತಃ ॥ ೩೫ ॥

ತ್ರಿಕೂಟಶ್ಚಿತ್ರಕೂಟೋಽಪಿ ವೆಂಕಟಃ ಶ್ರೀಗಿರಿಸ್ತಥಾ ।
ಗೋಕಾಮುಖೀ ನಾರದಶ್ಚ ಹಿಮಗೇಹಮುಪಾಗಮತ್ ॥ ೩೬ ॥

---

೩೨. ಪಾರಿಯಾತ್ರಕುಲಗಿರಿಯೂ ಸಹ ಮಣಿರತ್ನಗಳನ್ನು ತೆಗೆದುಕೊಂಡು ಪತ್ನೀಪುತ್ರ ಪರಿವಾರದೊಡನೆ ಹಿಮವಂತನಲ್ಲಿಗೆ ಬಂದನು.

೩೩. ಪರ್ವತೋತ್ತಮವಾದ ಕ್ರೌಂಚಗಿರಿಯು ಮಹಾಸೈನ್ಯ, ಪರಿವಾರಗಳೊಡನೆ ಕಾಣಿಕೆಯನ್ನು ತೆಗೆದುಕೊಂಡು ಪರ್ವತರಾಜನ ಬಳಿಗೆ ಬಂದನು.

೩೪. ಪುರುಷೋತ್ತಮಗಿರಿಯು ಮಹತ್ತಾಗಿ ಮರ್ಯಾದಾವಸ್ತುಗಳನ್ನು ತೆಗೆದುಕೊಂಡು ಪರಿವಾರದೊಡನೆ ಸಂತೋಷದಿಂದ ಬಂದನು.

೩೫. ನೀಲಗಿರಿಯು ಪತ್ನೀಪುತ್ರಪರಿವಾರರೊಡನೆ ದ್ರವ್ಯವನ್ನು ತೆಗೆದುಕೊಂಡು ಹಿಮವಂತನ ಮನೆಗೆ ಸಂತಸದಿಂದ ಬಂದನು.

೩೬. ತ್ರಿಕೂಟಗಿರಿ, ಚಿತ್ರಕೂಟಗಿರಿ, ವೆಂಕಟಗಿರಿ, ಶ್ರೀಗಿರಿ, ಗೋಕಾಮುಖೀಗಿರಿ, ನಾರದಗಿರಿ, ಇವರೆಲ್ಲರೂ ಹಿಮಾಲಯನ ಮನೆಗೆ ಬಂದರು.

ವಿಂಧ್ಯಶ್ಚ ಪರ್ವತಶ್ರೇಷ್ಠೋ ನಾನಾಸಂಪತ್ಸಮನ್ವಿತಃ ।
ಆಜಗಾಮ ಪ್ರಹೃಷ್ಟಾತ್ಮಾ ಸದಾರತನಯಶ್ಶುಭಃ ॥ ೩೭ ॥

ಕಾಲಂಜರೋ ಮಹಾಶೈಲೋ ಬಹುಹರ್ಷಸಮನ್ವಿತಃ ।
ಬಹುಭಸ್ಸಗಣಃ ಪ್ರೀತ್ಯಾ ಜಗಾಮ ಹಿಮಭೂಧರಂ ॥ ೩೮ ॥

ಕೈಲಾಸಸ್ತು ಮಹಾಶೈಲೋ ಮಹಾಹರ್ಷಸಮನ್ವಿತಃ ।
ಆಜಗಾಮ ಕೃಪಾಂ ಕೃತ್ವಾ ಸರ್ವೋಪರಿ ಲಸತ್ಪ್ರಭುಃ ॥ ೩೯ ॥

ಅನ್ಯೇಽಪಿ ಭೂಭೃತೋ ಯೇ ಹಿ ದ್ವೀಪೇಷ್ವನ್ಯೇಷ್ವಪಿ ದ್ವಿಜ ।
ಇಹಾಪಿ ಯೇಽಚಲಾಸ್ಸರ್ವೇಽಪ್ಯಾಯಯುಸ್ತೇ ಹಿಮಾಲಯಂ ॥ ೪೦ ॥

ನಿಮಂತ್ರಿತಾ ನಗಾಸ್ತತ್ರ ತೇನ ಪೂರ್ವಂ ಮುದಾ ಮುನೇ ।
ದಿವ್ಯರೂಪಧರಾಃ ಪ್ರೀತ್ಯಾ ವಿವಾಹಶ್ಶಿವಯೋರಿತಿ ॥ ೪೧ ॥

ತದಾ ಸರ್ವೇ ಸಮಾಯಾತಾಶ್ಶೋಣಭದ್ರಾದಯಃ ಖಲು ।
ಬಹುಶೋಭಾ ಮಹಾಪ್ರೀತ್ಯಾ ವಿವಾಹಶ್ಶಿವಯೋರಿತಿ ॥ ೪೨ ॥

---

೩೭. ಪರ್ವತೋತ್ತಮನಾದ ವಿಂಧ್ಯಗಿರಿಯು ಅನೇಕ ಸಂಪತ್ತುಗಳನ್ನು ತೆಗೆದುಕೊಂಡು ಪತ್ನೀಪುತ್ರರೊಡನೆ ಸಂತೋಷದಿಂದ ಬಂದನು.

೩೮. ಕಾಲಂಜನೆಂಬ ಮಹಾಗಿರಿಯು ದಿವ್ಯವೇಷವನ್ನು ಧರಿಸಿ ಪರಿವಾರದೊಡನೆ ಸಂತಸದಿಂದ ಹಿಮವಂತನ ಮನೆಗೆ ಬಂದನು.

೩೯. ಕೈಲಾಸಗಿರಿಯು ಸುಂದರವೇಷವುಳ್ಳವನಾಗಿ ಎಲ್ಲರಲ್ಲಿಯೂ ದಯೆಯಿಟ್ಟು ಹರ್ಷದಿಂದ ಹಿಮಾಲಯನ ಅರಮನೆಗೆ ಬಂದನು.

೪೦. ಇನ್ನೂ ಮಿಕ್ಕ ದ್ವೀಪಾಂತರಗಳಲ್ಲಿರುವ ಗಿರಿಗಳು ಭೂಮಿಯಲ್ಲಿರುವ ಗಿರಿಗಳು ಎಲ್ಲರೂ ಹಿಮವಂತನ ಮನೆಗೆ ಬಂದರು.

೪೧. ಹಿಮವಂತನಿಂದ ಆಹ್ವಾನಿತರಾದ ಗಿರಿಗಳೆಲ್ಲರೂ ದಿವ್ಯರೂಪಗಳನ್ನು ಧರಿಸಿ ಗಿರಿಜಾಶಿವರಿಗೆ ವಿವಾಹವೆಂದು ಸಂತೋಷದಿಂದ ಬಂದರು.

೪೨. ಮತ್ತು ಆಗ ಶೋಣಭದ್ರಮೊದಲಾದ ನದಿಗಳೂ ಸಹ ದಿವ್ಯರೂಪಗಳನ್ನು ಧರಿಸಿ ಗಿರಿಜಾಶಿವರಿಗೆ ಮದುವೆಯೆಂದು ಸಂತೋಷದಿಂದ ಬಂದವು.

ನದ್ಯಸ್ಸರ್ವಾಸ್ಸಮಾಯಾತಾ ನಾನಾಲಂಕಾರಸಂಯುತಾಃ ।
ದಿವ್ಯರೂಪಧರಾಃ ಪ್ರೀತ್ಯಾ ವಿವಾಹಶ್ಶಿವಯೋರಿತಿ ॥ ೪೩ ॥

ಗೋದಾವರೀ ಚ ಯಮುನಾ ಬ್ರಹ್ಮಸ್ತ್ರೀರ್ವೇಣಿಕಾ ತಥಾ ।
ಆಯಯೌ ಹಿಮಶೈಲಂ ವೈ ವಿವಾಹಶ್ಶಿವಯೋರಿತಿ ॥ ೪೪ ॥

ಗಂಗಾ ತು ಸುಮಹಾಪ್ರೀತ್ಯಾ ನಾನಾಲಂಕಾರಸಂಯುತಾ ।
ದಿವ್ಯರೂಪಾ ಯಯೌ ಪ್ರೀತ್ಯಾ ವಿವಾಹಶ್ಶಿವಯೋರಿತಿ ॥ ೪೫ ॥

ನರ್ಮದಾ ತು ಮಹಾಮೋದಾ ರುದ್ರಕನ್ಯಾ ಸರಿದ್ವರಾ ।
ಮಹಾಪ್ರೀತ್ಯಾಽಽಜಗಾಮಾಶು ವಿವಾಹಶ್ಶಿವಯೋರಿತಿ ॥ ೪೬ ॥

ಆಗತೈಸ್ತೈಸ್ತತಃ ಸರ್ವೈಸ್ಸರ್ವತೋ ಹಿಮಭೂಧರಂ ।
ಸಂಕುಲಾಸೀತ್ಪುರೀ ದಿವ್ಯಾ ಸರ್ವಶೋಭಾಸಮನ್ವಿತಾ ॥ ೪೭ ॥

ಮಹೋತ್ಸವಾ ಲಸತ್ಕೇತುಧ್ವಜಾತೋರಣಕಾಧಿಕಾ ।
ವಿತಾನವಿನಿವೃತ್ತಾರ್ಕಾ ತಥಾ ನಾನಾಲಸತ್ಪ್ರಭಾ ॥ ೪೮ ॥

---

೪೩. ನದಿಗಳೆಲ್ಲವೂ ಅನೇಕ ಅಲಂಕಾರಗಳನ್ನು ಧರಿಸಿ ದಿವ್ಯರೂಪವುಳ್ಳವುಗಳಾಗಿ ಗಿರಿಜಾಶಿವರಿಗೆ ಮದುವೆಯೆಂದು ಹರ್ಷದಿಂದ ಬಂದವು.

೪೪. ಗೋದಾವರೀ, ಯಮುನಾ, ಸರಸ್ವತೀ, ವೇಣಿಕಾ ಈ ನದಿಗಳೂ ಸಹ ಗಿರಿಜಾಶಿವರಿಗೆ ಮದುವೆಯೆಂದು ಹಿಮವಂತನ ಮನೆಗೆ ಬಂದುವು.

೪೫. ಗಂಗಾನದಿಯು ದಿವ್ಯರೂಪವನ್ನು ಧರಿಸಿ ಅನೇಕ ಆಭರಣಗಳನ್ನು ತೆಗೆದುಕೊಂಡು ಗಿರಿಜಾಶಿವರಿಗೆ ಮದುವೆಯೆಂದು ಪ್ರೀತಿಯಿಂದ ಬಂದಳು.

೪೬. ರುದ್ರನ ಕುಮಾರಿಯಾದ ನರ್ಮದೆಯು ಗಿರಿಜಾಶಿವರಿಗೆ ಮದುವೆಯೆಂದು ತಿಳಿದು ಮಹಾ ಸಂತೋಷದಿಂದ ಹಿಮವಂತನಲ್ಲಿಗೆ ಬಂದಳು.

೪೭. ಹೀಗೆಲ್ಲಾ ಅತಿಥಿಗಳು ಹಿಮವಂತನ ರಾಜಧಾನಿಗೆ ಬಂದುಸೇರಲು ಮಹಾ ಸೌಂದರ್ಯವುಳ್ಳ ಆ ನಗರಿಯು ಅವರಿಂದ ಸಂಕುಲ (ನಿಬಿಡ) ವಾಯಿತು.

೪೮. ಮತ್ತು ಆ ನಗರಿಯು ಮಹೋತ್ಸವವುಳ್ಳದುದಾಯಿತು. ಮನೆಗಳಲ್ಲಿ ತೋರಣ ಧ್ವಜಗಳು ಎತ್ತರವಾಗಿ ರಾಜಿಸಿದುವು. ಮನೆಗಳ ಮೇಲ್ಕಟ್ಟು ಸೂರ್ಯ

ಹಿಮಾಲಯೋಽಪಿ ಸುಪ್ರೀತ್ಯಾಽಽದರೇಣ ವಿವಿಧೇನ ಚ ।
ತೇಷಾಂ ಚಕಾರ ಸನ್ಮಾನಂ ತಾಸಾಂ ಚೈವ ಯಥಾಯಥಂ ॥ ೪೯ ॥

ಸರ್ವಾನ್ನಿವಾಸಯಾಮಾಸ ಸುಸ್ಥಾನೇಷು ಪೃಥಕ್ ಪೃಥಕ್ ।
ಸಾಮಗ್ರೀಭಿರನೇಕಾಭಿಸ್ತೋಷಯಾಮಾಸ ಕೃತ್ಸ್ನಶಃ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಸಪ್ತತ್ರಿಂಶೋಽಧ್ಯಾಯಃ

---

ಮಂಡಲವನ್ನು ಮುಟ್ಟುವಂತಿತ್ತು. ಹೀಗೆ ಆ ನಗರಿಯು ಮಹಾ ವೈಭವವುಳ್ಳದ್ದಾಗಿದ್ದಿತು.

೪೯. ಹಿಮಾಲಯನೂ ಸಹ ಮದುವೆಗೆ ಬಂದಿರುವ ಅತಿಥಿಗಳಾದ ಸ್ತ್ರೀಪುರುಷರೆಲ್ಲರಿಗೂ ಯೋಗ್ಯವಾದಂತಹ ಆತಿಥ್ಯವನ್ನೂ ಗೌರವವನ್ನೂ, ಪ್ರೀತಿಯಿಂದಲೂ ಹೆಚ್ಚಾದ ಆದರದಿಂದಲೂ ಮಾಡಿದನು.

೫೦. ಮತ್ತು ಎಲ್ಲರನ್ನೂ ಉಚಿತವಾದ ಆಸನಗಳಲ್ಲಿ ಬೇರೆಬೇರೆಯಾಗಿ ಕುಳ್ಳರಿಸಿ ಅನೇಕ ಉಪಚಾರಗಳಿಂದ ಅವರನ್ನು ಚನ್ನಾಗಿ ಸಂತೋಷಗೊಳಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಅಷ್ಟತ್ರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥ ಶೈಲೇಶ್ವರಃ ಪ್ರೀತೋ ಹಿಮವಾನ್ ಮುನಿಸತ್ತಮ ।
ಸ್ವಪುರಂ ರಚಯಾಮಾಸ ವಿಚಿತ್ರಂ ಪರಮೋತ್ಸವಂ ॥ ೧ ॥

ಸಿಕ್ತಮಾರ್ಗಂ ಸಂಸ್ಕೃತಂ ಚ ಶೋಭಿತಂ ಪರಮರ್ದ್ಧಿಭಿಃ ।
ದ್ವಾರಿ ದ್ವಾರಿ ಚ ರಂಭಾದಿ ಮಂಗಲದ್ರವ್ಯಸಂಯುತಂ ॥ ೨ ॥

---

## ಮೂವತ್ತೆಂಟನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಆಮೇಲೆ ಗಿರಿರಾಜನಾದ ಹಿಮವಂತನು ಹರ್ಷದಿಂದ ತನ್ನ ನಗರವೆಲ್ಲವನ್ನೂ ಮಹೋತ್ಸವದೊಡನೆ ವಿಚಿತ್ರವಾಗಿ ಅಲಂಕರಿಸಿದನು.

೨. ರಾಜಮಾರ್ಗಗಳೆಲ್ಲವನ್ನೂ ಗುಡಿಸಿಸಿ ನೀರನ್ನು ಹಾಕಿಸಿಸಿದನು. ತಳಿರು ತೋರಣಗಳನ್ನು ಕಟ್ಟಿಸಿದನು. ಪ್ರತಿಯೊಂದು ಮನೆಯ ಬಾಗಿಲಿನಲ್ಲೂ ಬಾಳೆಗಂಬ ಮೊದಲಾದ ಮಂಗಳದ್ರವ್ಯಗಳನ್ನು ನಿಲ್ಲಿಸಿ ಅಲಂಕರಿಸಿದನು.

ಪ್ರಾಂಗಣಂ ರಚಯಾಮಾಸ ರಂಭಾಸ್ತಂಭಸಮನ್ವಿತಂ ।
ಪಟ್ಟಸೂತ್ರೈಸ್ಸನ್ನಿಬದ್ಧಂ ರಸಾಲಪಲ್ಲವಾನ್ವಿತಂ ॥ ೩ ॥

ಮಾಲತೀಮಾಲ್ಯಸಂಯುಕ್ತಂ ಲಸತ್ತೋರಣಸುಪ್ರಭಂ ।
ಶೋಭಿತಂ ಮಂಗಲದ್ರವ್ಯೈಶ್ಚತುರ್ದಿಕ್ಷು ಸ್ಥಿತೈಶ್ಶುಭೈಃ ॥ ೪ ॥

ತಥೈವ ಸರ್ವಂ ಪರಯಾ ಮುದಾನ್ವಿತ-
ಶ್ಚಕ್ರೇ ಗಿರೀಂದ್ರಃ ಸ್ವಸುತಾರ್ಥಮೇವ ।
ಗರ್ಗಂ ಪುರಸ್ಕೃತ್ಯ ಮಹಾಪ್ರಭಾವಂ
ಪ್ರಸ್ತಾವಯೋಗ್ಯಂ ಚ ಸುಮಂಗಲಂ ಹಿ ॥ ೫ ॥

ಆಹೂಯ ವಿಶ್ವಕರ್ಮಾಣಂ ಕಾರಯಾಮಾಸ ಸಾದರಂ ।
ಮಂಡಪಂ ಚ ಸುವಿಸ್ತೀರ್ಣಂ ವೇದಿಕಾದಿಮನೋಹರಂ ॥ ೬ ॥

ಅಯುತೇನ ಸುರರ್ಷೇ ತದ್ಯೋಜನಾನಾಂ ಚ ವಿಸ್ತೃತಂ ।
ಅನೇಕಲಕ್ಷಣೋಪೇತಂ ನಾನಾಶ್ಚರ್ಯಸಮನ್ವಿತಂ ॥ ೭ ॥

---

೩. ರಾಜಾಂಗಣವನ್ನು ಬಾಳೆಕಂಬಗಳಿಂದ ಅಲಂಕರಿಸಿದನು. ಮಾವಿನೆಲೆಗಳ ತೋರಣಗಳನ್ನೂ ಕಟ್ಟಿಸಿದನು.

೪. ಸುತ್ತಲೂ ಸುವಾಸನೆಯಾದ ಮಾಲತೀಹಾರವನ್ನು ಕಟ್ಟಿಸಿದನು. ಮಂಗಳದ್ರವ್ಯಗಳನ್ನು ನಾಲ್ಕು ಕಡೆಗಳಲ್ಲೂ ಅಲಂಕಾರವಾಗಿ ಇಡಿಸಿದನು.

೫. ಮತ್ತು ಆ ಗಿರಿರಾಜನು ತನ್ನ ಮಗಳಿಗಾಗಿ ಎಲ್ಲವನ್ನೂ ಹೆಚ್ಚಾದ ಸಂತೋಷದಿಂದ ಮಾಡಿಸಿದನು. ಮಹಾಮಹಿಮನಾದ ಗರ್ಗಮುನಿಯನ್ನು ಕರೆಯಿಸಿಕೊಂಡು ವಿವಾಹಯೋಗ್ಯವಾದ ಮಂಗಳಕಾರ್ಯಗಳನ್ನು ಮಾಡಿಸಿದನು.

೬. ವಿಶ್ವಕರ್ಮನನ್ನು ಕರೆಯಿಸಿ ವಿಸ್ತಾರವಾದ ಮಂಡಪವನ್ನು ಮಾಡಿಸಿದನು ಅದರಲ್ಲಿ ಮನೋಹರವಾದ ವೇದಿಕೆ (ಹಸೆ) ಯನ್ನು ನಿರ್ಮಿಸಿದನು.

೭. ಆ ವಿವಾಹಮಂಡಪವು ಹತ್ತುಸಾವಿರಯೋಜನ ವಿಸ್ತಾರವಾಗಿತ್ತು. ಅನೇಕ ಲಕ್ಷಣಗಳನ್ನು ಕಲ್ಪಿಸಿದ್ದರು. ಅದ್ಭುತವಾದ ಕೆಲಸಗಳನ್ನು ಮಾಡಿದ್ದರು.

ಸ್ಥಾವರಂ ಜಂಗಮಂ ಸರ್ವಂ ಸದೃಶಂ ತ್ರೈರ್ಮನೋಹರಂ ।
ಸರ್ವತೋಽದ್ಭುತಸರ್ವಸ್ವಂ ನಾನಾವಸ್ತುಚಮತ್ಕೃತಂ ॥ ೮ ॥

ಜಂಗಮಂ ಚ ಜಿತಂ ತತ್ರ ಸ್ಥಾವರೇಣ ವಿಶೇಷತಃ ।
ಜಂಗಮೇನ ಚ ತತ್ರಾಸೀಜ್ಜಿತಂ ಸ್ಥಾವರಮೇವ ಹಿ ॥ ೯ ॥

ಪಯಸಾ ಚ ಜಿತಾ ತತ್ರ ಸ್ಥಲಭೂಮಿರ್ನ ಚಾನ್ಯಥಾ ।
ಜಲಂ ಕಿಂ ಹಿ ಸ್ಥಲಂ ಕಿಂ ಹಿ ನ ವಿದುಃ ಕೇಽಪಿ ಕೋವಿದಾಃ ॥ ೧೦ ॥

ಕ್ವಚಿತ್ಸಿಂಹಾಃ ಕೃತ್ರಿಮಾಶ್ಚ ಕ್ವಚಿತ್ಸಾರಸಪಂಕ್ತಯಃ ।
ಕ್ವಚಿಚ್ಛಿಖಂಡಿನಸ್ತತ್ರ ಕೃತ್ರಿಮಾಶ್ಚ ಮನೋಹರಾಃ ॥ ೧೧ ॥

ಕ್ವಚಿತ್ಸ್ತ್ರಿಯಃ ಕೃತ್ರಿಮಾಶ್ಚ ನೃತ್ಯಂತ್ಯಃ ಪುರುಷೈಸ್ಸಹ ।
ಮೋಹಯಂತ್ಯೋ ಜನಾನ್ ಸರ್ವಾನ್ ಪಶ್ಯಂತ್ಯಃ ಕೃತ್ರಿಮಾಸ್ತಥಾ ॥ ೧೨ ॥

---

೮. ಸ್ಥಿರಚರಾತ್ಮಕವಾದ ಎಲ್ಲಾ ವಸ್ತುಗಳಿಗಿಂತಲೂ ಆ ಮಂಟಪವು ಮನೋಹರವಾಗಿತ್ತು. ಮಹಾಶ್ಚರ್ಯಕರವಾಗಿತ್ತು. ಚಮತ್ಕಾರವಾದ ಅನೇಕ ವಸ್ತುಗಳನ್ನಿಟ್ಟಿದ್ದರು.

೯. ಜಂಗಮ (ಚರ) ವಸ್ತುವನ್ನು ಆ ಮಂಟಪದಲ್ಲಿ ಸ್ಥಾವರ (ಸ್ಥಿರ) ವಸ್ತುವು ಜಯಿಸಿತು. ಸ್ಥಾವರವನ್ನು ಜಂಗಮವು ಜಯಿಸಿತು. ಅಲ್ಲಿರಿಸಿದ್ದ ಸ್ಥಾವರ ಜಂಗಮ ವಸ್ತುಗಳು ಒಂದಕ್ಕಿಂತ ಒಂದು ಸುಂದರವಾಗಿದ್ದವು.

೧೦. ನೀರು ಸ್ಥಲಭೂಮಿಯನ್ನು ಜಯಿಸಿತು. ಜಲವಾವುದು? ನೆಲವಾವುದು? ಎಂದು ಯಾರೂ ತಿಳಿಯಲಾರದವರಾದರು. ಜಲಸ್ಥಳಗಳಿಗೆ ಭೇದತೋರದಂತೆ ವಿಶ್ವಕರ್ಮನು ಚಮತ್ಕಾರವಾಗಿ ರಚಿಸಿದ್ದನು.

೧೧. ಆ ಮಂಟಪದಲ್ಲಿ ಒಂದುಕಡೆ ಸುಂದರವಾದ ಸಿಂಹವನ್ನೂ ಹಂಸಪಕ್ಷಿಗಳನ್ನೂ ನವಿಲುಗಳನ್ನೂ ಕೃತ್ರಿಮವಾಗಿ ಮಾಡಿರಿಸಿದ್ದರು.

೧೨. ಒಂದುಕಡೆ ಸ್ತ್ರೀಯರು ಪುರುಷರೊಡನೆ ಸೇರಿ ನರ್ತಿಸುವಂತೆ ಬೊಂಬೆಗಳನ್ನು ನಿರ್ಮಿಸಿದ್ದರು. ಇನ್ನೊಂದೆಡೆ ಸುಂದರಸ್ತ್ರೀಯರು ತಮ್ಮ ಕಟಾಕ್ಷದಿಂದ ಜನಗಳನ್ನು ಮೋಹಗೊಳಿಸುತ್ತಿರುವಂತೆ ರಚಿಸಿದ್ದರು.

ತಥಾ ತೇನೈವ ವಿಧಿನಾ ದ್ವಾರಪಾಲಾ ಮನೋಹರಾಃ ।
ಹಸ್ತೈರ್ಧನೂಂಷಿ ಚೋದ್ಧೃತ್ಯ ಸ್ಥಾವರಾ ಜಂಗಮೋಪಮಾಃ ॥ ೧೩ ॥

ದ್ವಾರಿ ಸ್ಥಿತಾ ಮಹಾಲಕ್ಷ್ಮೀಃ ಕೃತ್ರಿಮಾ ರಚಿತಾದ್ಭುತಾ ।
ಸರ್ವಲಕ್ಷಣಸಂಯುಕ್ತಾ ಗತಾ ಸಾಕ್ಷಾತ್ಪಯೋರ್ಣವಾತ್ ॥ ೧೪ ॥

ಗಜಾಶ್ಚಾಲಂಕೃತಾ ಹಾಸ್ಯರ್ಕ ಕೃತ್ರಿಮಾ ಅಕೃತೋಪಮಾಃ ।
ತಥಾಶ್ವಾಃ ಸಾದಿಭಿಶ್ಚೈವ ಗಜಾಶ್ಚ ಗಜಸಾದಿಭಿಃ ॥ ೧೫ ॥

ರಥಾ ರಥಿಭಿರಾಕೃಷ್ಟಾ ಮಹಾಶ್ಚರ್ಯಸಮನ್ವಿತಾಃ ।
ವಾಹನಾನಿ ತಥಾನ್ಯಾನಿ ಪತ್ತ್ರಯಃ ಕೃತ್ರಿಮಾಸ್ತಥಾ ॥ ೧೬ ॥

ಏವಂ ವಿಮೋಹನಾರ್ಥಂ ತು ಕೃತಂ ವೈ ವಿಶ್ವಕರ್ಮಣಾ ।
ದೇವಾನಾಂ ಚ ಮುನೀನಾಂ ಚ ತೇನ ಪ್ರೀತಾತ್ಮನಾ ಮುನೇ ॥ ೧೭ ॥

---

೧೩. ಮತ್ತು ಕೃತ್ರಿಮವಾಗಿ ದ್ವಾರಪಾಲಕರನ್ನು ಸುಂದರವಾಗಿ ನಿರ್ಮಿಸಿದ್ದರು. ಅವರ ಕೈಗಳಲ್ಲಿ ಬಿಲ್ಲುಕೊಟ್ಟು ಜೀವಂತರಾದವರಂತೆ ನಿರ್ಮಿಸಿದ್ದರು.

೧೪. ಬಾಗಿಲಲ್ಲಿ ಕೃತ್ರಿಮವಾಗಿ ಮಹಾಲಕ್ಷ್ಮಿಯನ್ನು ನಿರ್ಮಿಸಿದ್ದರು. ಅವಳು ಸಕಲ ಲಕ್ಷಣಗಳಿಂದ ಕೂಡಿದ್ದು ಕ್ಷೀರಸಮುದ್ರದಿಂದ ಎದ್ದುಬಂದ ಸಾಕ್ಷಾತ್ ಲಕ್ಷ್ಮಿಯಂತಿದ್ದಳು.

೧೫. ಅಲ್ಲದೇ ಕೃತ್ರಿಮವಾಗಿ ಆನೆಗಳನ್ನು ನಿಜವಾದ ಆನೆಗಳಂತೆ ರಚಿಸಿದ್ದರು. ಕುದುರೆಗಳನ್ನು ಸವಾರರುಗಳೊಡನಿರುವಂತೆ ನಿರ್ಮಿಸಿದ್ದರು.

೧೬. ಮತ್ತು ರಥಗಳಲ್ಲಿ ರಥಿಕರು ಕುಳಿತಿರುವಂತೆ ಆಶ್ಚರ್ಯಕರವಾಗಿ ನಿರ್ಮಿಸಿದ್ದರು. ಇನ್ನೂ ಅನೇಕ ವಾಹನಗಳು ಕಾಲಾಳುಗಳು ಇವುಗಳನ್ನು ಕೃತ್ರಿಮವಾಗಿ ನಿರ್ಮಿಸಿದ್ದರು.

೧೭. ಹೀಗೆ ವಿಶ್ವಕರ್ಮನು, ದೇವತೆಗಳು ಮತ್ತು ಮುನಿಗಳು ಮೋಹಗೊಳ್ಳುವಂತೆ ಕೃತ್ರಿಮವಸ್ತುಗಳನ್ನು ಪ್ರೀತಿಯಿಂದ ನಿರ್ಮಿಸಿದ್ದನು.

ಮಹಾದ್ವಾರಿ ಸ್ಥಿತೋ ನಂದೀ ಕೃತ್ರಿಮಶ್ಚ ಕೃತೋ ಮುನೇ ।
ಶುದ್ಧಸ್ಫಟಿಕಸಂಕಾಶೋ ಯಥಾ ನಂದೀ ತಥೈವ ಸಃ ॥ ೧೮ ॥

ತಸ್ಯೋಪರಿ ಮಹಾದಿವ್ಯಂ ಪುಷ್ಪಕಂ ರತ್ನಭೂಷಿತಂ ।
ರಾಜಿತಂ ಪಲ್ಲವೈಶ್ಶುಭ್ರೈಶ್ಚಾಮರೈಶ್ಚ ಸುಶೋಭಿತಂ ॥ ೧೯ ॥

ವಾಮಪಾರ್ಶ್ವೇ ಗಜೌ ದ್ವೌ ಚ ಶುದ್ಧಕಾಶ್ಮೀರಸನ್ನಿಭೌ ।
ಚತುರ್ದಂತೌ ಷಷ್ಟಿವರ್ಷೌ ಭೇದಮಾನೌ ಮಹಾಪ್ರಭೌ ॥ ೨೦ ॥

ತಥೈವಾರ್ಕನಿಭೌ ತೇನ ಕೃತೌ ಚಾಶ್ವೌ ಮಹಾಪ್ರಭೌ ।
ಚಾಮರಾಲಂಕೃತೌ ದಿವ್ಯೌ ದಿವ್ಯಾಲಂಕಾರಭೂಷಿತೌ ॥ ೨೧ ॥

ದಂಶಿತಾ ವರರತ್ನಾಢ್ಯಾ ಲೋಕಪಾಲಾಸ್ತಥೈವ ಚ ।
ಸರ್ವೇ ದೇವಾ ಯಥಾರ್ಥಂ ವೈ ಕೃತಾ ವೈ ವಿಶ್ವಕರ್ಮಣಾ ॥ ೨೨ ॥

---

೧೮. ಮಹಾದ್ವಾರದಲ್ಲಿ ಕೃತ್ರಿಮವಾಗಿ ಶುದ್ಧ ಸ್ಫಟಿಕದಿಂದ ನಂದಿಯ ಮೂರ್ತಿಯನ್ನು ನಿರ್ಮಿಸಿದ್ದನು ಅದು ನಿಜವಾದ ನಂದಿಯಂತೆ ತೋರುತ್ತಲಿದ್ದಿತು.

೧೯. ಆ ನಂದಿಯ ಮೇಲೆ ರತ್ನಮಯವಾದ ದಿವ್ಯಪುಷ್ಪಕವಿಮಾನವನ್ನು ನಿರ್ಮಿಸಿದ್ದನು. ಅದು ಶುಭ್ರವಾದ ಚಿಗುರುಗಳಿಂದಲೂ ಚಾಮರಗಳಿಂದಲೂ ಶೋಭಿಸುತ್ತಲಿದ್ದಿತು.

೨೦. ಎಡಗಡೆಯಲ್ಲಿ ಶುದ್ಧಸ್ಫಟಿಕದ ವರ್ಣವುಳ್ಳ ಎರಡು ಆನೆಗಳನ್ನು ನಿರ್ಮಿಸಿದ್ದನು. ಅವು ನಾಲ್ಕುದಂತಗಳುಳ್ಳವಾಗಿ ಅರವತ್ತು ವಯಸ್ಸಿನವುಗಳಾಗಿದ್ದು ಪರಸ್ಪರ ಕಾಳಗವಾಡುವಂತೆ ಶೋಭಿಸುತ್ತಲಿದ್ದುವು.

೨೧. ಅದರಂತೆಯೇ ಸೂರ್ಯನಂತೆ ತೇಜಸ್ವಿಗಳಾದ ಎರಡು ಕುದುರೆಗಳನ್ನು ನಿರ್ಮಿಸಿದ್ದನು. ಅವು ಚಾಮರಗಳಿಂದಲೂ ದಿವ್ಯಾಭರಣಗಳಿಂದಲೂ ಅಲಂಕರಿಸಲ್ಪಟ್ಟಿದ್ದುವು.

೨೨. ಲೋಕಪಾಲಕರು ಮೊದಲಾದ ದೇವತೆಗಳನ್ನೆಲ್ಲಾ ನಿಜವಾಗಿರುವಂತೆ ನಿರ್ಮಿಸಿ ವಿಶ್ವಕರ್ಮನು ಆ ಮೂರ್ತಿಗಳನ್ನು ರತ್ನಗಳಿಂದಲಂಕರಿಸಿದನು.

ತಥಾ ಹಿ ಋಷಯಸ್ಸರ್ವೇ ಭೃಗ್ವಾದ್ಯಾಶ್ಚ ತಪೋಧನಾಃ ।
ಅನ್ಯೇ ಹ್ಯುಪಸುರಾಸ್ತದ್ವತ್ಸಿದ್ಧಾಶ್ಚಾನ್ಯೇಽಪಿ ವೈ ಕೃತಾಃ ॥ ೨೩ ॥

ವಿಷ್ಣುಶ್ಚ ಪಾರ್ಷದೈಸ್ಸರ್ವೈರ್ಗರುಡಾದ್ಯೈಸ್ಸಮನ್ವಿತಃ ।
ಕೃತ್ರಿಮೋ ನಿರ್ಮಿತಸ್ತದ್ವತ್ಪರಮಾಶ್ಚರ್ಯರೂಪವಾನ್ ॥ ೨೪ ॥

ತಥೈವಾಹಂ ಸುತೈರ್ವೇದೈಸ್ಸಿದ್ಧೈಶ್ಚ ಪರಿವಾರಿತಃ ।
ಕೃತ್ರಿಮೋ ನಿರ್ಮಿತಸ್ತದ್ವತ್ಪಠನ್ ಸೂಕ್ತಾನಿ ನಾರದ ॥ ೨೫ ॥

ಐರಾವತಗಜಾರೂಢಃ ಶಕ್ರಃ ಸ್ವದಲಸಂಯುತಃ ।
ಕೃತ್ರಿಮೋ ನಿರ್ಮಿತಸ್ತದ್ವತ್ಪರಿಪೂರ್ಣೇಂದುಸನ್ನಿಭಃ ॥ ೨೬ ॥

ಕಿಂ ಬಹೂಕ್ತೇನ ದೇವರ್ಷೇ ಸರ್ವೋ ವೈ ವಿಶ್ವಕರ್ಮಣಾ ।
ಹಿಮಾಗಪ್ರೇರಿತೇನಾಶು ಕ್ಲೃಪ್ತಃ ಸುರಸಮಾಜಕಃ ॥ ೨೭ ॥

---

೨೩. ಅಲ್ಲದೆ ಭೃಗುಮುನಿ ಮೊದಲಾದ ಋಷಿಗಳನ್ನೂ ಸಿದ್ಧರು ಮೊದಲಾದ ದೇವತಾವಿಶೇಷರನ್ನೂ ಅಲ್ಲಿ ನಿರ್ಮಿಸಿದನು.

೨೪ ಗರುಡನೇ ಮೊದಲಾದ ವಿಷ್ಣುದೂತರೊಡನೆ ವಿಷ್ಣುವನ್ನೂ ಸಹ ಕೃತ್ರಿಮವಾಗಿ ನಿರ್ಮಿಸಿದನು. ನಿಜವಾದ ಹರಿಯಂತೆ ಆ ಮೂರ್ತಿಯು ಆಶ್ಚರ್ಯಕರವಾದ ರೂಪವುಳ್ಳದ್ದಾಗಿತ್ತು.

೨೫. ಮತ್ತು ನನ್ನ (ಬ್ರಹ್ಮನ) ನ್ನೂ ಸಹ ನಿರ್ಮಿಸಿದ್ದನು. ನನ್ನ ಸುತ್ತಲೂ ವೇದಗಳು ನನ್ನ ಪುತ್ರರು ನಿರ್ಮಿಸಲ್ಪಟ್ಟಿದ್ದರು. ನಾನು ವೇದಸೂಕ್ತಗಳನ್ನು ಹೇಳುತ್ತಿರುವನಂತೆ ಇದ್ದೆನು.

೨೬. ಇಂದ್ರನು ಐರಾವತದ ಮೇಲೆ ಕುಳಿತಿರುವಂತೆ ಮೂರ್ತಿಯನ್ನು ನಿರ್ಮಿಸಿದ್ದನು. ಅವನ ಸುತ್ತಲೂ ದೇವಸೈನ್ಯಗಳಿದ್ದು ಪೂರ್ಣಚಂದ್ರನಂತೆ ಅವನು ರಾಜಿಸುತ್ತಲಿದ್ದನು.

೨೭. ಎಲೈ ನಾರದ, ಹೆಚ್ಚು ಹೇಳಿ ಪ್ರಯೋಜನವೇನು? ಹಿಮವಂತನಿಂದ ಪ್ರೇರಿತನಾದ ದೇವಶಿಲ್ಪಿಯು ಸ್ವಲ್ಪಕಾಲದಲ್ಲೇ ದೇವಸಮೂಹವನ್ನೇ ವಿವಾಹ ಮಂಟಪದಲ್ಲಿ ನಿರ್ಮಿಸಿದನು.

ಏವಂ ಭೂತಃ ಕೃತಸ್ತೇನ ಮಂಡಪೋ ದಿವ್ಯರೂಪವಾನ್ ।
ಅನೇಕಾಶ್ಚರ್ಯಸಂಭೂತೋ ಮಹಾನ್ದೇವವಿಮೋಹನಃ ॥ ೨೮ ॥

ಅಥಾಽಽಜ್ಞಪ್ತೋ ಗಿರೀಶೇನ ವಿಶ್ವಕರ್ಮಾ ಮಹಾಮತಿಃ ।
ನಿವಾಸಾರ್ಥಂ ಸುರಾದೀನಾಂ ತತ್ರಲ್ಲೋಕಾಂಶ್ಚಕಾರ ಸಃ ॥ ೨೯ ॥

ತತ್ರೈವ ಚ ಮಹಾಮಂಚಾಃ ಸುಪ್ರಭಾಃ ಪರಮಾದ್ಭುತಾಃ ।
ರಚಿತಾಸ್ಸುಖದಾ ದಿವ್ಯಾಸ್ತೇಷಾಂ ವೈ ವಿಶ್ವಕರ್ಮಣಾ ॥ ೩೦ ॥

ತಥಾಪ್ತಸಪ್ತಲೋಕಂ ವೈ ವಿರೇಚೇ ಕ್ಷಣತೋಽದ್ಭುತಂ ।
ದೀಪ್ತ್ಯಾ ಪರಮಯಾ ಯುಕ್ತಂ ನಿವಾಸಾರ್ಥಂ ಸ್ವಯಂಭುವಃ ॥ ೩೧ ॥

ತಥೈವ ವಿಷ್ಣೋಸ್ತ್ವಪರಂ ವೈಕುಂಠಾಖ್ಯಂ ಮಹೋಜ್ಜ್ವಲಂ ।
ವಿರೇಚೇ ಕ್ಷಣತೋ ದಿವ್ಯಂ ನಾನಾಶ್ಚರ್ಯಸಮನ್ವಿತಂ ॥ ೩೨ ॥

---

೨೮. ಹೀಗೆ ಆ ದೇವಶಿಲ್ಪಿಯು ಮಹಾಶ್ಚರ್ಯಕರವೂ ದಿವ್ಯರೂಪವುಳ್ಳದೂ, ದೇವತೆಗಳನ್ನೂ ಮೋಹಗೊಳಿಸುವುದೂ ಆದ ಮಂಟಪವನ್ನು ನಿರ್ಮಿಸಿದನು.

೨೯. ಆಮೇಲೆ ಹಿಮವಂತನ ಅಪ್ಪಣೆಯಂತೆ ಮಹಾ ಬುದ್ಧಿಶಾಲಿಯಾದ ವಿಶ್ವಕರ್ಮನು ದೇವತೆಗಳ ವಾಸಕ್ಕಾಗಿ ಆ ದೇವತೆಗಳ ಲೋಕಗಳನ್ನು ನಿರ್ಮಿಸಿದನು.

೩೦. ಆ ಲೋಕಗಳಲ್ಲಿ ಮಹಾ ಪ್ರಭೆಯುಳ್ಳವುಗಳೂ ಆಶ್ಚರ್ಯವನ್ನುಂಟು ಮಾಡುವಂತಹವೂ ಸುಖದಾಯಕಗಳೂ ಆದ ಸಿಂಹಾಸನಗಳನ್ನು ರಚಿಸಿದನು.

೩೧. ಏಳು ಕಕ್ಷೆ (ಪುರಸಾಲು) ಗಳಿರುವಂತಹ ಸತ್ಯಲೋಕವನ್ನು ಬ್ರಹ್ಮನ ವಾಸಕ್ಕಾಗಿ ರಚಿಸಿದನು. ಆ ಲೋಕವು ಮಹಾಪ್ರಕಾಶವುಳ್ಳದ್ದಾಗಿ ತುಂಬಾ ಆಶ್ಚರ್ಯಕರವಾಗಿದ್ದಿತು.

೩೨. ಆಮೇಲೆ ಮಹೋಜ್ವಲವಾದ ವೈಕುಂಠಲೋಕವನ್ನು ವಿಷ್ಣುವಾಸಕ್ಕಾಗಿ ಒಂದುಕ್ಷಣದಲ್ಲಿಯೇ ನಿರ್ಮಿಸಿದನು. ಆ ಲೋಕವು ದಿವ್ಯವೂ ಅತ್ಯಾಶ್ಚರ್ಯಕರವೂ ಆಗಿದ್ದಿತು.

ಅಮರೇಶಗೃಹಂ ದಿವ್ಯಂ ತಥೈವಾದ್ಭುತಮುತ್ತಮಂ ।
ವಿರೇಚೇ ವಿಶ್ವಕರ್ಮಾಸೌ ಸರ್ವೈಶ್ವರ್ಯಸಮನ್ವಿತಂ ॥ ೩೩ ॥

ಗೃಹಾಣಿ ಲೋಕಪಾಲಾನಾಂ ವಿರೇಚೇ ಸುಂದರಾಣಿ ಚ ।
ತದ್ವತ್ಸ ಪ್ರೀತಿತೋ ದಿವ್ಯಾನ್ಯದ್ಭುತಾನಿ ಮಹಾಂತಿ ಚ ॥ ೩೪ ॥

ಅನ್ಯೇಷಾಮಮರಾಣಾಂ ಚ ಸರ್ವೇಷಾಂ ಕ್ರಮಶಸ್ತಥಾ ।
ಸದನಾನಿ ವಿಚಿತ್ರಾಣಿ ರಚಿತಾನಿ ಚ ತೇನ ವೈ ॥ ೩೫ ॥

ವಿಶ್ವಕರ್ಮಾ ಮಹಾಬುದ್ಧಿಃ ಪ್ರಾಪ್ತಶಂಭುಮಹಾವರಃ ।
ವಿರೇಚೇ ಕ್ಷಣತಸ್ಸರ್ವಂ ಶಿವತುಷ್ಟ್ಯರ್ಥಮೇವ ಹಿ ॥ ೩೬ ॥

ತಥೈವ ಚಿತ್ರಂ ಪರಮಂ ಮಹೋಜ್ಜ್ವಲಂ
ಮಹಾಪ್ರಭಂ ದೇವವರೈಸ್ಸುಪೂಜಿತಂ ।
ಗಿರೀಶಚಿಹ್ನಂ ಶಿವಲೋಕಸಂಸ್ಥಿತಂ
ಸುಶೋಭಿತಂ ಶಂಭುಗೃಹಂ ಚಕಾರ ॥ ೩೭ ॥

---

೩೩. ಮತ್ತು ದೇವೇಂದ್ರನ ಮನೆಯನ್ನು ನಿರ್ಮಿಸಿದನು. ಅದು ಆತ್ಯಾಶ್ಚರ್ಯಕರವೂ ಸಕಲೈಶ್ವರ್ಯಗಳಿಂದ ಕೂಡಿದುದೂ ದಿವ್ಯವೂ ಆಗಿದ್ದಿತು.

೩೪. ಮಿಕ್ಕ ಎಲ್ಲಾ ಲೋಕಪಾಲಕರ ಮನೆಗಳನ್ನೂ ಅದ್ಭುತವಾಗಿಯೂ ಸುಂದರವಾಗಿಯೂ ಆ ವಿಶ್ವಕರ್ಮನು ನಿರ್ಮಿಸಿದನು.

೩೫. ಮಿಕ್ಕ ಎಲ್ಲಾ ದೇವತೆಗಳಿಗೂ ಕ್ರಮವಾಗಿ ಮನೆಗಳನ್ನು ಆ ದೇವ ಶಿಲ್ಪಿಯು ವಿಚಿತ್ರವಾಗಿ ಕಲ್ಪಿಸಿದನು.

೩೬. ಶಂಕರನ ವರದಿಂದಲೇ ಮಹಾ ಬುದ್ಧಿಶಾಲಿಯೂ ಶಿಲ್ಪಕಲೆಯಲ್ಲಿ ಚತುರನೂ ಆದ ಆ ವಿಶ್ವಕರ್ಮನು ಶಿವನ ಪ್ರೀತಿಗಾಗಿಯೇ ಎಲ್ಲವನ್ನೂ ಕ್ಷಣದಲ್ಲಿ ನಿರ್ಮಿಸಿದನು.

೩೭. ಮತ್ತು ಅತಿ ವಿಚಿತ್ರವೂ ಮಹಾ ತೇಜಸ್ವಿಯೂ ಶಿವಗೃಹವನ್ನು ಕೈಲಾಸದಲ್ಲಿರುವಂತೆಯೇ ನಿರ್ಮಿಸಿದನು. ಆ ಗೃಹವನ್ನು ದೇವತೆಗಳು ಪೂಜಿಸುವರು. ಶಂಕರನ ಧ್ವಜವು ಅದರಮೇಲೆ ಹಾರಾಡುತ್ತಿದ್ದತು. ತುಂಬಾ ಮನೋಹರವಾಗಿದ್ದಿತು.

ಏವಂ ಭೂತಾ ಕೃತಾ ತೇನ ರಚನಾ ವಿಶ್ವಕರ್ಮಣಾ ।
ವಿಚಿತ್ರಾ ಶಿವತುಷ್ಟ್ಯರ್ಥಂ ಹರಾಶ್ಚರ್ಯಾ ಮಹೋಜ್ಜ್ವಲಾ ॥ ೩೮ ॥

ಏವಂ ಕೃತ್ವಾಖಿಲಂ ಚೇದಂ ವ್ಯವಹಾರಂ ಚ ಲೌಕಿಕಂ ।
ಪರ್ಯೈಕ್ಷಿಷ್ಟ ಮುದಾ ಶಂಭ್ವಾಗಮನಂ ಸ ಹಿಮಾಚಲಃ ॥ ೩೯ ॥

ಇತಿ ಪ್ರೋಕ್ತಂ ವಿಶೇಷೇಣ ವೃತ್ತಾಂತಂ ಪ್ರಮುದಾವಹಂ ।
ಹಿಮಾಲಯಸ್ಯ ದೇವರ್ಷೇ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಅಷ್ಟತ್ರಿಂಶೋಽಧ್ಯಾಯಃ



---

೩೮. ಹೀಗೆ ಹರನಿಗೂ ಆಶ್ಚರ್ಯಕರವಾದಂತಹ ಶಿಲ್ಪವನ್ನು ವಿಶ್ವಕರ್ಮನು ವಿಚಿತ್ರವಾಗಿಯೂ ಉಜ್ವಲವಾಗಿಯೂ ರಚಿಸಿದನು.

೩೯. ಹೀಗೆ ಎಲ್ಲಾ ಲೋಕಸಂಪ್ರದಾಯಗಳನ್ನೂ ಮಾಡಿಸಿ ಹಿಮವಂತನು ಶಂಕರನ ಬರುವಿಕೆಯನ್ನು ನಿರೀಕ್ಷಿಸಿಕೊಂಡಿದ್ದನು.

೪೦. ಎಲೈ ನಾರದ, ಈರೀತಿಯಾಗಿ ನಿನಗೆ ಹಿಮವಂತನ ಮಹಾನಂದಕರವಾದ ವೃತ್ತಾಂತವನ್ನು ಸಂಪೂರ್ಣವಾಗಿ ಹೇಳಿರುವೆನು. ಇನ್ನೇನನ್ನು ಕೇಳಲಿಚ್ಛಿಸುವೆ? ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಏಕೋನಚತ್ವಾರಿಂಶೋಽಧ್ಯಾಯಃ

---

॥ ನಾರದ ಉವಾಚ ॥

ವಿಧೇ ತಾತ ಮಹಾಪ್ರಾಜ್ಞ ವಿಷ್ಣುಶಿಷ್ಯ ನಮೋಽಸ್ತು ತೇ ।
ಅದ್ಭುತೇಯಂ ಕಥಾಽಶ್ರಾವಿ ತ್ವತ್ತೋಽಸ್ಮಾಭಿಃ ಕೃಪಾನಿಧೇ ॥ ೧ ॥

ಇದಾನೀಂ ಶ್ರೋತುಮಿಚ್ಛಾಮಿ ಚರಿತಂ ಶಶಿಮೌಲಿನಃ ।
ವೈವಾಹಿಕಂ ಸುಮಾಂಗಲ್ಯಂ ಸರ್ವಾಘೌಘವಿನಾಶನಂ ॥ ೨ ॥

ಕಿಂ ಚಕಾರ ಮಹಾದೇವಃ ಪ್ರಾಪ್ಯ ಮಂಗಲಪತ್ರಿಕಾಂ ।
ತಾಂ ಶ್ರಾವಯ ಕಥಾಂ ದಿವ್ಯಾಂ ಶಂಕರಸ್ಯ ಪರಾತ್ಮನಃ ॥ ೩ ॥

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ನಾರದನು ಕೇಳಿದನು:—ಮಹಾಬುದ್ಧಿಶಾಲಿಯಾದ ಓ ಬ್ರಹ್ಮನೆ, ವಿಷ್ಣು ಶಿಷ್ಯನಾದ ನಿನಗೆ ನಮಸ್ಕಾರವು. ನಿನ್ನ ಅನುಗ್ರಹದಿಂದ ನಾನು ಈ ಅದ್ಭುತಕಥೆಯನ್ನು ಕೇಳಿದಂತಾಯಿತು.

೨. ಈಗ ಮಂಗಲಕರವೂ, ಪಾಪನಾಶಕವೂ ಆದ ಚಂದ್ರಶೇಖರನ ಮದುವೆಯ ವೃತ್ತಾಂತವನ್ನು ಕೇಳಲಿಚ್ಛಿಸುವೆನು.

೩. ಮಹಾದೇವನು ಲಗ್ನಪತ್ರಿಕೆಯನ್ನು ತೆಗೆದುಕೊಂಡು ಮುಂದೇನು ಮಾಡಿದನು? ಪರಮಾತ್ಮನಾದ ಶಿವನ ಆ ದಿವ್ಯಕಥೆಯನ್ನು ಹೇಳು ಎನ್ನಲು,

॥ ಬ್ರಹ್ಮೋವಾಚ ॥

ಶೃಣು ವತ್ಸ ಮಹಾಭಾಗ ಶಾಂಕರಂ ಪರಮಂ ಯಶಃ ।
ಯಚ್ಚಕಾರ ಮಹಾದೇವಃ ಪ್ರಾಪ್ಯ ಮಂಗಲಪತ್ರಿಕಾಂ ॥ ೪ ॥

ಅಥ ಶಂಭುರ್ಗೃಹೀತ್ವಾ ತಾಂ ಮುದಾ ಮಂಗಲಪತ್ರಿಕಾಂ ।
ವಿಜಹಾಸ ಪ್ರಹೃಷ್ಟಾತ್ಮಾ ಮಾನಂ ತೇಷಾಂ ವ್ಯಧಾದ್ವಿಭುಃ ॥ ೫ ॥

ವಾಚಯಿತ್ವಾ ಚ ತಾಂ ಸಮ್ಯಕ್ಸ್ವೀಚಕಾರ ವಿಧಾನತಃ ।
ತಜ್ಜನಾನ್ಸ್ಯಾಪಯಾಮಾಸ ಬಹು ಸಮ್ಮಾನ್ಯ ಚಾದೃತಃ ॥ ೬ ॥

ಉವಾಚ ಮುನಿವರ್ಗಾಂಸ್ತಾನ್ ಕಾರ್ಯಂ ಸಮ್ಯಕ್ಕೃತಂ ಶುಭಂ ।
ಆಗಂತವ್ಯಂ ವಿವಾಹೇ ಮೇ ವಿವಾಹಃ ಸ್ವೀಕೃತೋ ಮಯಾ ॥ ೭ ॥

ಇತ್ಯಾಕರ್ಣ್ಯ ವಚಶ್ಶಂಭೋಃ ಪ್ರಹೃಷ್ಟಾಸ್ತೇ ಪ್ರಣಮ್ಯ ತಂ ।
ಪರಿಕ್ರಮ್ಯ ಯಯುರ್ಧಾಮ ಶಂಸಂತಃ ಸ್ವಂ ವಿಧಿಂ ಪರಂ ॥ ೮ ॥

---

೪. ಬ್ರಹ್ಮನು ಹೇಳಿದನು :—ಮಹಾಭಾಗ್ಯಶಾಲಿಯಾದ ಎಲೈ ನಾರದ, ಶಂಕರನ ಯಶಸ್ಸನ್ನು ವರ್ಣಿಸುವೆನು. ಲಗ್ನಪತ್ರಿಕೆಯನ್ನು ತೆಗೆದುಕೊಂಡಮೇಲೆ ಶಿವನು ಏನು ಮಾಡಿದನೆಂಬುದನ್ನೂ ಹೇಳುವೆನು ಕೇಳು.

೫. ಹಿಂದೆ ಹೇಳಿದಂತೆ ಶಂಕರನು ಲಗ್ನಪತ್ರಿಕೆಯನ್ನು ತೆಗೆದುಕೊಂಡು ತುಂಬಾ ಹರ್ಷಗೊಂಡನು. ಮತ್ತು ಆ ಲಗ್ನ ಪತ್ರಿಕೆಯನ್ನು ತಂದವರಿಗೆ ಸಂಭಾವನೆಯನ್ನು ಕೊಟ್ಟು ಚನ್ನಾಗಿ ಗೌರವಿಸಿದನು.

೬. ಆ ಮಂಗಲ ಪತ್ರಿಕೆಯನ್ನು ಓದಿಸಿ ಕೇಳಿ ಬಂದ ಜನಗಳನ್ನು ವಿಧಿವತ್ತಾಗಿ ಗೌರವಿಸಿ ಆದರದಿಂದ ಕಳುಹಿಸಿದನು.

೭. ಮುಂದೆ ಅವನು ಸಪ್ತಋಷಿಗಳನ್ನು ಕುರಿತು ಹೋದ 'ಕಾರ್ಯವನ್ನು ನೀವು ಚನ್ನಾಗಿ ಸಾಧಿಸಿರುವಿರಿ. ವಿವಾಹವನ್ನು ನಾನು ಅಂಗೀಕರಿಸಿರುವೆನು. ಅದಕ್ಕೆ ನೀವೆಲ್ಲರೂ ಬರಬೇಕು, ಎಂದು ಹೇಳಿದನು.

೮. ಈ ರೀತಿಯಾದ ಶಂಕರನ ವಚನವನ್ನು ಕೇಳಿ ಆ ಮುನಿಗಳು ತಮ್ಮ ಅದೃಷ್ಟವನ್ನು ಹೊಗಳಿಕೊಳ್ಳುತ್ತಾ ಹಾಗೆಯೇ ಆಗಲೆಂದು ಹೇಳಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಅಥ ದೇವೇಶ್ವರಃ ಶಂಭುಸ್ಸಸ್ಮಾರ ತ್ವಾಂ ಮುನೇ ದ್ರುತಂ ।
ಲೌಕಿಕಾಚಾರಮಾಶ್ರಿತ್ಯ ಮಹಾಲೀಲಾಕರಃ ಪ್ರಭುಃ ॥ ೯ ॥

ತ್ವಮಾಗತಃ ಪರಪ್ರೀತ್ಯಾ ಪ್ರಶಂಸನ್ ಸ್ವಂ ವಿಧಿಂ ಪರಂ ।
ಪ್ರಣಮಂಶ್ಚ ನತಸ್ಕಂಧೋ ವಿನೀತಾತ್ಮಾ ಕೃತಾಂಜಲಿಃ ॥ ೧೦ ॥

ಅಸ್ತೌಃ ಸುಜಯಶಬ್ದಾನಿ ಸಮುಚ್ಚಾರ್ಯ ಮುಹುರ್ಮುಹುಃ ।
ನಿದೇಶಂ ಪ್ರಾರ್ಥಯಂಸ್ತಸ್ಯ ಪ್ರಶಂಸನ್ ಸ್ವಂ ವಿಧಿಂ ಪರಂ ॥ ೧೧ ॥

ತತಶ್ಶಂಭುಃ ಪ್ರಹೃಷ್ಟಾತ್ಮಾ ದರ್ಶಯನ್ ಲೌಕಿಕೀಂ ಗತಿಂ ।
ಉವಾಚ ಮುನಿವರ್ಯ ತ್ವಾಂ ಪ್ರೀಣಯನ್ ಶುಭಯಾ ಗಿರಾ ॥ ೧೨ ॥

॥ ಶಿವ ಉವಾಚ ॥

ಪ್ರೀತ್ಯಾ ಶೃಣು ಮುನಿಶ್ರೇಷ್ಠ ಹ್ಯಸ್ಮತ್ತೋಽದ್ಯ ವದಾಮಿ ತೇ ।
ಬ್ರುವೇ ತತ್ತ್ವಾಂ ಪ್ರಿಯೋ ಯನ್ಮೇ ಭಕ್ತರಾಜಶಿರೋಮಣಿಃ ॥ ೧೩ ॥

ಕೃತಂ ಮಹತ್ತಪೋ ದೇವ್ಯಾ ಪಾರ್ವತ್ಯಾ ತವ ಶಾಸನಾತ್ ।
ತಸ್ಯೈ ವರೋ ಮಯಾ ದತ್ತಃ ಪತಿತ್ವೇ ತೋಷಿತೇನ ವೈ ॥ ೧೪ ॥

---

೯. ಬಳಿಕ ಲೀಲಾಮಯನೂ ದೇವದೇವನೂ ಆದ ಶಂಕರನು ಲೋಕಾಚಾರಕ್ಕಾಗಿ ನಿನ್ನನ್ನು ಸ್ಮರಿಸಿದನು.

೧೦-೧೧. ಎಲೈ ನಾರದ, ಆಕೂಡಲೇ ನೀನು ಶಿವನ ಬಳಿಗೆ ಬಂದು ಶಿರಸ್ಸನ್ನು ಬಗ್ಗಿಸಿ ವಿನಯದಿಂದ ನಿಂತು ಅಂಜಲಿಯನ್ನು ಧರಿಸಿ ಜಯಶಬ್ದವನ್ನುಚ್ಚರಿಸುತ್ತಾ ಶಂಕರನ ಅಪ್ಪಣೆಯನ್ನೆದುರುನೋಡುತ್ತಾ ನಿಂತಿದ್ದೆಯಷ್ಟೆ.

೧೨-೧೩. ಆಗ ಶಂಕರನು ಸಂತುಷ್ಟನಾಗಿ ನಿನ್ನನ್ನು ಮಧುರವಾಕ್ಕಿನಿಂದ ಸಂತೋಷಗೊಳಿಸುತ್ತಾ ಲೋಕರೀತಿಯಂತೆ ಎಲೈ ನಾರದಮುನೀಂದ್ರ ನೀನು ನನ್ನ ಭಕ್ತೋತ್ತಮರಲ್ಲಿ ಶ್ರೇಷ್ಠನಾಗಿರುವ ಕಾರಣ ಈಗ ನಿನಗೊಂದು ಮಾತನ್ನು ಹೇಳುವೆನು.

೧೪ ನಿನ್ನ ಉಪದೇಶದಂತೆ ಗಿರಿಜೆಯು ಮಹಾ ತಪಸ್ಸನ್ನಾಚರಿಸಿದಳು. ಆದರಿಂದ ಸಂತುಷ್ಟನಾಗಿ "ನಾನು ನಿನ್ನ ಪತಿಯಾಗುವೆನೆಂದು" ಅವಳಿಗೆ ವರವನ್ನು ಕೊಟ್ಟಿರುವೆನು.

ಕರಿಷ್ಯೇಽಹಂ ವಿವಾಹಂ ಚ ತಸ್ಯಾ ವಶ್ಯೋ ಹಿ ಭಕ್ತಿತಃ ।
ಸಪ್ತರ್ಷಿಭಿಸ್ಸಾಧಿತಂ ಚ ತಲ್ಲಗ್ನಂ ಶೋಧಿತಂ ಚ ತೈಃ ॥ ೧೫ ॥

ಅದ್ಯತಸ್ಸಪ್ತಮೇ ಚಾಹ್ನಿ ತದ್ಭವಿಷ್ಯತಿ ನಾರದ ।
ಮಹೋತ್ಸವಂ ಕರಿಷ್ಯಾಮಿ ಲೌಕಿಕೀಂ ಗತಿಮಾಶ್ರಿತಃ ॥ ೧೬ ॥

॥ ಬ್ರಹ್ಮೋವಾಚ ॥
ಇತಿ ಶ್ರುತ್ವಾ ವಚಸ್ತಸ್ಯ ಶಂಕರಸ್ಯ ಪರಾತ್ಮನಃ ।
ಪ್ರಸನ್ನಧೀಃ ಪ್ರಭುಂ ನತ್ವಾ ತಾತ ತ್ವಂ ವಾಕ್ಯಮಬ್ರವೀಃ ॥ ೧೭ ॥

॥ ನಾರದ ಉವಾಚ ॥
ಭವತಸ್ತು ವ್ರತಮಿದಂ ಭಕ್ತವಶ್ಯೋ ಭವಾನ್ಮತಃ ।
ಸಮ್ಯಕ್ಕೃತಂ ಚ ಭವತಾ ಪಾರ್ವತೀಮಾನಸೇಪ್ಸಿತಂ ॥ ೧೮ ॥

ಕಾರ್ಯಂ ಮತ್ಸದೃಶಂ ಕಿಂಚಿತ್ಕಥನೀಯಂ ತ್ವಯಾ ವಿಭೋ ।
ಮತ್ವಾ ಸ್ವಸೇವಕಂ ಮಾಂ ಹಿ ಕೃಪಾ ಕುರು ನಮೋಽಸ್ತು ತೇ ॥ ೧೯ ॥

---

೧೫. ಆ ಗಿರಿಜೆಯ ಭಕ್ತಿಗೆ ವಶನಾದ ನಾನು ಈಗ ಅವಳನ್ನು ಮದುವೆಯಾಗುವೆನು. ಲಗ್ನವು ನಿಶ್ಚಿತವಾಗಿರುವುದು. ಸಪ್ತರ್ಷಿಗಳು ಆ ಲಗ್ನವನ್ನು ಶೋಧಿಸಿರುವರು. ಮತ್ತು ಈ ಸಂಬಂಧವನ್ನು ಅವರೇ ಸಾಧಿಸಿರುವರು.

೧೬. ಎಲೈ ನಾರದ, ಇಂದಿಗೆ ಏಳನೆಯ ದಿನದಲ್ಲಿ ಆ ಲಗ್ನವಿರುವುದು. ಅಂದು ಲೋಕಸಂಪ್ರದಾಯದಂತೆ ವಿವಾಹಮಹೋತ್ಸವವನ್ನು ಮಾಡಿಕೊಳ್ಳುವೆನು ಎಂದನು.

೧೭. ಬ್ರಹ್ಮನು ಹೇಳಿದನು:—ಎಲೈ ನಾರದ, ನೀನು ಆಗ ಪರಮಾತ್ಮನಾದ ಶಂಕರನ ಮಾತನ್ನು ಕೇಳಿ ಅವನನ್ನು ನಮಸ್ಕರಿಸಿ ಶಾಂತತೆಯಿಂದ,

೧೮. ಓ ಶಂಕರ, ನಿನ್ನ ವ್ರತ (ನಿಯಮ) ವೇ ಅಂತಹುದು. ನೀನು ಭಕ್ತಪರಾಧೀನನು. ನಿನ್ನ ಭಕ್ತಳಾದ ಗಿರಿಜೆಗೆ ನೀನು ಕೊಟ್ಟ ವರವೂ ಕೈಗೊಂಡ (ವಿವಾಹ) ಕಾರ್ಯವೂ ನ್ಯಾಯವಾದುದು.

೧೯. ಎಲೈ ಸ್ವಾಮಿಯೇ ನಾನು ನಿನ್ನ ಸೇವಕನು. ನನ್ನಲ್ಲಿ ಅನುಗ್ರಹವಿಟ್ಟು ನಾನು ಮಾಡಬಹುದಾದಂತಹ ಕಾರ್ಯವನ್ನು ಅಪ್ಪಣೆಮಾಡು. ನಿನಗೆ ನಮಸ್ಕಾರವು ಎನ್ನಲು,

॥ ಬ್ರಹ್ಮೋವಾಚ ॥

ಇತ್ಯುಕ್ತಸ್ತು ತ್ವಯಾ ಶಂಭುಶ್ಶಂಕರೋ ಭಕ್ತವತ್ಸಲಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಸಾದರಂ ತ್ವಾಂ ಮುನೀಶ್ವರ ॥ ೨೦ ॥

॥ ಶಿವ ಉವಾಚ ॥

ವಿಷ್ಣುಪ್ರಭೃತಿದೇವಾಂಶ್ಚ ಮುನೀನ್ ಸಿದ್ಧಾನಪಿ ಧ್ರುವಂ ।
ತ್ವಂ ನಿಮಂತ್ರಯ ಮದ್ವಾಣ್ಯಾ ಮುನೇಽನ್ಯಾನಪಿ ಸರ್ವತಃ ॥ ೨೧ ॥

ಸರ್ವ ಆಯಾಂತು ಸೋತ್ಸಾಹಾಃ ಸರ್ವಶೋಭಾಸಮನ್ವಿತಾಃ ।
ಸಸ್ತ್ರೀಸುತಗಣಾಃ ಪ್ರೀತ್ಯಾ ಮಮ ಶಾಸನಗೌರವಾತ್ ॥ ೨೨ ॥

ನಾಗಮಿಷ್ಯಂತಿ ಯೇ ತ್ವತ್ರ ಮದ್ವಿವಾಹೋತ್ಸವೇ ಮುನೇ ।
ತೇ ಸ್ವಕೀಯಾ ನ ಮಂತವ್ಯಾ ಮಯಾ ದೇವಾದಯಃ ಖಲು ॥ ೨೩ ॥

॥ ಬ್ರಹ್ಮೋವಾಚ ॥

ಇತೀಶಾಜ್ಞಾಂ ತತೋ ಧೃತ್ವಾ ಭವಾನ್ ಶಂಕರವಲ್ಲಭಃ ।
ಸರ್ವಾನ್ನಿಮಂತ್ರಯಾಮಾಸ ತಂ ತಂ ಗತ್ವಾ ದ್ರುತಂ ಮುನೇ ॥ ೨೪ ॥

---

೨೦-೨೧. ಬ್ರಹ್ಮನು ಹೇಳಿದನು:—ಎಲೈ ನಾರದ, ನಿನ್ನ ಈ ರೀತಿಯಾದ ಮಾತನ್ನು ಕೇಳಿ ಭಕ್ತವತ್ಸಲನಾದ ಶಂಕರನು ಪ್ರಸನ್ನನಾಗಿ ಆದರದಿಂದ ನಿನ್ನನ್ನು ಕುರಿತು ಎಲೈ ನಾರದ, ನನ್ನ ಮಾತಿನಮೇಲೆ ವಿಷ್ಣು ಮೊದಲಾದ ದೇವತೆಗಳನ್ನೂ ಮುನಿಗಳನ್ನೂ, ಸಿದ್ಧರನ್ನೂ ನನ್ನ ಮದುವೆಗೆ ಆಹ್ವಾನಿಸು. ಇನ್ನೂ ಕರೆಯಬೇಕಾದವರೆಲ್ಲರನ್ನೂ ಬರಮಾಡು.

೨೨. ಎಲ್ಲರೂ ತಮ್ಮ ತಮ್ಮ ಪರಿವಾರಗಳು ಮಕ್ಕಳು ಹೆಂಡಿರುಗಳೊಡನೆ ನನ್ನ ಅಪ್ಪಣೆಯನ್ನು ಗೌರವಿಸಿ ಆದರದಿಂದ ಮದುವೆಗೆ ಬರಲಿ.

೨೩. ಈ ನನ್ನ ಮದುವೆಯ ಉತ್ಸವಕ್ಕೆ ಯಾರು ಬರುವುದಿಲ್ಲವೋ ಅವರು, ದೇವತೆಗಳಾಗಲೀ ಯಾರೇ ಆಗಲಿ ಅವರು ನನ್ನ ಆಪ್ತರಲ್ಲ ಎಂದನು.

೨೪. ಎಲೈ ನಾರದ, ಹೀಗೆ ಶಿವಭಕ್ತನಾದ ನೀನು ಶಂಕರನ ಆಜ್ಞೆಯಂತೆ ದೇವತೆಗಳೇ ಮೊದಲಾದ ಎಲ್ಲರನ್ನೂ ಅವರವರ ಮನೆಗಳಿಗೆ ಹೋಗಿ ಕರೆದುಬಂದೆ.

ಶಂಭೂಪಕಂಠಮಾಗತ್ಯ ದ್ರುತಂ ಮುನಿವರೋ ಭವಾರ್ನ ।
ತದ್ಭೂತ್ಯಾತ್ತತ್ರ ಸಂತಸ್ಥೌ ತದಾಜ್ಞಾಂ ಪ್ರಾಪ್ಯ ನಾರದ ॥ ೨೫ ॥

ಶಿವೋಽಪಿ ತಸ್ಥೌ ಸೋತ್ಕಂಠಸ್ತ್ವದಾಗಮನಲಾಲಸಃ ।
ಸ್ವಗಣೈಸ್ಸೋತ್ಸವೈಃ ಸರ್ವೈಃ ನೃತ್ಯದ್ಭಿಸ್ಸರ್ವತೋ ದಿಶಂ ॥ ೨೬ ॥

ಏತಸ್ಮಿನ್ನೇವ ಕಾಲೇ ತು ರಚಯಿತ್ವಾ ಸ್ವವೇಷಕಂ ।
ಆಜಗಾಮಾಚ್ಯುತಶ್ಶೀಘ್ರಂ ಕೈಲಾಸಂ ಸುಪರಿಚ್ಛದಃ ॥ ೨೭ ॥

ಶಿವಂ ಪ್ರಣಮ್ಯ ಸದ್ಭಕ್ತ್ಯಾ ಸದಾರಸ್ಸದಲೋ ಮುದಾ ।
ತದಾಜ್ಞಾಂ ಪ್ರಾಪ್ಯ ಸಂತಸ್ಥೌ ಸುಸ್ಥಾನೇ ಪ್ರೀತಮಾನಸಃ ॥ ೨೮ ॥

ತಥಾಹಂ ಸ್ವಗಣೈರಾಶು ಕೈಲಾಸಮಗಮಂ ಮುದಾ ।
ಪ್ರಭುಂ ಪ್ರಣಮ್ಯಾತಿಷ್ಠಂ ವೈ ಸಾನಂದಃ ಸ್ವಗಣಾನ್ವಿತಃ ॥ ೨೯ ॥

ಇಂದ್ರಾದಯೋ ಲೋಕಪಾಲಾ ಆಯಯುಸ್ಸಪರಿಚ್ಛದಾಃ ।
ತಥೈವಾಲಂಕೃತಾಸ್ಸರ್ವೇ ಸೋತ್ಸವಾಃ ಸಕಲತ್ರಕಾಃ ॥ ೩೦ ॥

---

೨೫. ಆಮೇಲೆ ಶಿವನ ಬಳಿಗೆ ಬಂದು ಅವನ ಅಪ್ಪಣೆಯಂತೆ ಆ ಶಿವನ ಸೇವೆಯಲ್ಲಿ ನಿರತನಾದೆ.

೨೬. ಶಿವನೂ ಸಹ ದೇವತೆಗಳೇ ಮೊದಲಾದವರ ಬರುವಿಕೆಯನ್ನೇ ನಿರೀಕ್ಷಿಸುತ್ತಾ ಸಂಭ್ರಮದಿಂದಿದ್ದನು. ಅವನ ಗಣಗಳು ಹರ್ಷದಿಂದ ಸುತ್ತಲೂ ನರ್ತನ ಮಾಡುತ್ತಾ ಮಹೋತ್ಸಾಹಭರಿತರಾಗಿದ್ದರು.

೨೭-೨೮. ಅದೇ ಕಾಲದಲ್ಲಿ ಹರಿಯು ಸುಂದರವೇಷವನ್ನು ಧರಿಸಿ ತನ್ನ ಪರಿವಾರದೊಡನೆ ಕೂಡಲೇ ಕೈಲಾಸಕ್ಕೆ ಬಂದು ಶಿವನನ್ನು ಪತ್ನಿ ಮತ್ತು ಪರಿವಾರದೊಡನೆ ಭಕ್ತಿಯಿಂದ ನಮಸ್ಕರಿಸಿ ಅವನಪ್ಪಣೆಯನ್ನು ಪಡೆದು ಸಂತೋಷದಿಂದ ಆಸನದಲ್ಲಿ ಕುಳಿತನು.

೨೯. ಆಗ ನಾನೂ (ಬ್ರಹ್ಮನೂ) ಸಹ ಪರಿವಾರದೊಡನೆ ಕೈಲಾಸಕ್ಕೆ ಹೋಗಿ ಶಿವನನ್ನು ನಮಸ್ಕರಿಸಿ ಅವನಪ್ಪಣೆಯಂತೆ ಆನಂದದಿಂದ ಆಸನದಲ್ಲಿ ಕುಳಿತೆನು.

೩೦. ಇಂದ್ರಮೊದಲಾದ ಲೋಕಪಾಲರೂ ಸಹ ಸುಂದರವೇಷವನ್ನು ಧರಿಸಿ ತಮ್ಮ ತಮ್ಮ ಪತ್ನಿ ಮತ್ತು ಪರಿವಾರದೊಡನೆ ಸಂತೋಷದಿಂದ ಕೈಲಾಸಕ್ಕೆ ಬಂದರು.

ತಥೈವಂ ಮುನಯೋ ನಾಗಾಸ್ಸಿದ್ಧಾ ಉಪಸುರಾಸ್ತಥಾ ।
ಆಯಯುಶ್ಚಾಪರೇಽಪೀಹ ಸೋತ್ಸವಾಸ್ಸುನಿಮಂತ್ರಿತಾಃ ॥ ೩೧ ॥

ಮಹೇಶ್ವರಸ್ತದಾ ತತ್ರಾಗತಾನಾಂ ಚ ಪೃಥೆಕ್ ಪೃಥಕ್ ।
ಸರ್ವೇಷಾಮಮರಾದ್ಯಾನಾಂ ಸತ್ಕಾರಂ ವ್ಯದಧಾನ್ಮುದಾ ॥ ೩೨ ॥

ಅಥೋತ್ಸವೋ ಮಹಾನಾಸೀತ್ಕೈಲಾಸೇ ಪರಮೋಽದ್ಭುತಃ ।
ನೃತ್ಯಾದಿಕಂ ತದಾ ಚಕ್ರುರ್ಯಥಾಯೋಗ್ಯಂ ಸುರಸ್ತ್ರಿಯಃ ॥ ೩೩ ॥

ಏತಸ್ಮಿನ್ ಸಮಯೇ ದೇವಾ ವಿಷ್ಣ್ವಾದ್ಯಾ ಯೇ ಸಮಾಗತಾಃ ।
ಯಾತ್ರಾಂ ಕಾರಯಿತುಂ ಶಂಭೋಸ್ತತ್ರೋಷುಸ್ತೇಽಖಿಲಾ ಮುನೇ॥ ೩೪ ॥

ಶಿವಾಽಽಜ್ಞಪ್ತಾಸ್ತದಾ ಸರ್ವೇ ಮದೀಯಮಿತಿ ಯಂತ್ರಿತಾಃ ।
ಶಿವಕಾರ್ಯಮಿದಂ ಸರ್ವಂ ಚಕ್ರಿರೇ ಶಿವಸೇವನಂ ॥ ೩೫ ॥

ಮಾತರಸ್ಸಪ್ತ ತಾಸ್ತತ್ರ ಶಿವಭೂಷಾವಿಧಿಂ ಪರಂ ।
ಚಕ್ರಿರೇ ಚ ಮುದಾ ಯುಕ್ತಾ ಯಥಾಯೋಗ್ಯಂ ತಥಾ ಪುನಃ ॥ ೩೬ ॥

---

೩೧. ಅದರಂತೆ ಮುನಿಗಳು, ನಾಗಗಳು, ಸಿದ್ಧರು, ಗಂಧರ್ವ, ಕಿನ್ನರ ಮೊದಲಾದ ದೇವಯೋನಿಗಳೂ ಸಹ ನಾರದನ ಆಹ್ವಾನದಂತೆ ಕೈಲಾಸಕ್ಕೆ ಬಂದರು.

೩೨. ಆಗ ಮಹೇಶ್ವರನು ಅಲ್ಲಿಗೆ ಬಂದ ದೇವತೆಗಳೇ ಮೊದಲಾದವರೆಲ್ಲರಿಗೂ ಸಂತೋಷದಿಂದ ಸತ್ಕಾರವನ್ನು ಬೇರೆಬೇರೆಯಾಗಿ ಮಾಡಿದನು.

೩೩. ಆಗ ಕೈಲಾಸದಲ್ಲಿ ಅದ್ಭುತವಾದ ಮಹೋತ್ಸವವು ಜರುಗಿತು. ದೇವ ಸ್ತ್ರೀಯರು ಮನೋಹರವಾಗಿ ನರ್ತನ ಮೊದಲಾದುವುಗಳನ್ನು ಮಾಡಿದರು.

೩೪. ಈ ಸಮಯದಲ್ಲಿ ಹರಿಯೇ ಮೊದಲಾದ ದೇವತೆಗಳು ಶಂಕರನ ಮದುವೆಗಾಗಿ ಉತ್ಸವವನ್ನು ಬೆಳೆಸಲು ಸಿದ್ಧರಾದರು.

೩೫. ಅವರೆಲ್ಲರೂ ಸಹ ಈ ಶಿವಕಾರ್ಯವು ನಮಗೆ ಸಂಬಂಧಪಟ್ಟುದು ಎಂದು ಶ್ರದ್ಧೆಯಿಂದ ಕಾರ್ಯವನ್ನು ನೆರವೇರಿಸಿದರು.

೩೬. ಬ್ರಾಹ್ಮೀ ಮೊದಲಾದ ಸಪ್ತಮಾತೃಕಾದೇವಿಯರು ಆಗ ಶಿವನನ್ನು ಆಯಾಯ ಅಂಗಗಳಿಗೆ ತಕ್ಕಂತೆ ಸಂತೋಷದಿಂದ ಅಲಂಕರಿಸಿದರು.

ತಸ್ಯ ಸ್ವಾಭಾವಿಕೋ ವೇಷೋ ಭೂಷಾವಿಧಿರಭೂತ್ತದಾ ।
ತಸ್ಯೇಚ್ಛಯಾ ಮುನಿಶ್ರೇಷ್ಠ ಪರಮೇಶಸ್ಯ ಸುಪ್ರಭೋಃ ॥ ೩೭ ॥

ಚಂದ್ರಶ್ಚ ಮುಕುಟಸ್ಥಾನೇ ಸಾನ್ನಿಧ್ಯಮಕರೋತ್ತದಾ ।
ಲೋಚನಂ ಸುಂದರಂ ಹ್ಯಾಸೀತ್ತೃತೀಯಂ ತಿಲಕಂ ಶುಭಂ ॥ ೩೮ ॥

ಕರ್ಣಾಭರಣರೂಪೌ ಚ ಯೌ ಹಿ ಸರ್ಪೌ ಪ್ರಕೀರ್ತಿತೌ ।
ಕುಂಡಲೇಽಭವತಾಂ ತಸ್ಯ ನಾನಾರತ್ನಾನ್ವಿತೇ ಮುನೇ ॥ ೩೯ ॥

ಅನ್ಯಾಂಗಸಂಸ್ಥಿತಾಸ್ಸರ್ಪಾಸ್ತದಂಗಾಭರಣಾನಿ ಚ ।
ಬಭೂವುರತಿರಮ್ಯಾಣಿ ನಾನಾರತ್ನಮಯಾನಿ ಚ ॥ ೪೦ ॥

ವಿಭೂತಿರಂಗರಾಗೋಽಭೂಚ್ಚಂದನಾದಿಸಮುದ್ಭವಃ ।
ತದ್ದುಕೂಲಮಭೂದ್ದಿವ್ಯಂ ಗಜಚರ್ಮಾದಿ ಸುಂದರಂ ॥ ೪೧ ॥

---

೩೭. ಪರಮೇಶ್ವರನಾದ ಶಿವನ ಇಚ್ಛೆಯಂತೆ ಅವನ ನಿತ್ಯದ ವೇಷವೂ ಅಲಂಕಾರವಾಗಿ ಪರಿಣಮಿಸಿತು.

೩೮. ಚಂದ್ರನು ಶಿವನ ಕಿರೀಟಸ್ಥಾನವನ್ನಲಂಕರಿಸಿದನು. ಅವನ ಮೂರನೆಯ ಕಣ್ಣು ಸುಂದರವಾದ ತಿಲಕವಾಯಿತು.

೩೯. ಹಿಂದೆ ಕರ್ಣಾಭರಣಗಳಾಗಿದ್ದ ಶೇಷ, ವಾಸುಕಿ ಎಂಬ ಎರಡು ಸರ್ಪಗಳು ಈಗ ಅನೇಕ ರತ್ನಮಯವಾದ ಕುಂಡಲಗಳಾಗಿ ಶಿವನ ಕರ್ಣವನ್ನಲಂಕರಿಸಿದುವು.

೪೦. ಮಿಕ್ಕ ಅಂಗಗಳಲ್ಲಿದ್ದ ಸರ್ಪಗಳು ರತ್ನಾಭರಣಗಳಾಗಿ ಆಯಾಯ ಅಂಗಗಳನ್ನು ರಮ್ಯವಾಗಿ ಅಲಂಕರಿಸಿದುವು.

೪೧. ಶಿವನ ಶರೀರದ ವಿಭೂತಿಯು ಚಂದನವೇ ಮೊದಲಾದ ಅಂಗರಾಗವಾಯಿತು. ಗಜಚರ್ಮವೇ ಮೊದಲಾದ ಪರಿಧಾನವು ಸುಂದರವೂ ಮನೋಹರವೂ ಆದ ವಸ್ತ್ರವಾಯಿತು.

ಈದೃಶಂ ಸುಂದರಂ ರೂಪಂ ಜಾತಂ ವರ್ಣಾತಿದುಷ್ಕರಂ ।
ಈಶ್ವರೋऽಪಿ ಸ್ವಯಂ ಸಾಕ್ಷಾದೈಶ್ವರ್ಯಂ ಲಬ್ಧವಾನ್ ಸ್ವತಃ ॥ ೪೨ ॥

ತತಶ್ಚ ಸರ್ವೇ ಸುರಪಕ್ಷದಾನವಾ
ನಾಗಾಃ ಪತಂಗಾಪ್ಸರಸೋ ಮಹರ್ಷಯಃ ।
ಸಮೇತ್ಯ ಸರ್ವೇ ಶಿವಸನ್ನಿಧಿಂ ತದಾ
ಮಹೋತ್ಸವಾಃ ಪ್ರೋಚುರಹೋ ಮುದಾನ್ವಿತಾಃ ॥ ೪೩ ॥

॥ ಸರ್ವ ಊಚುಃ ॥

ಗಚ್ಛ ಗಚ್ಛ ಮಹಾದೇವ ವಿವಾಹಾರ್ಥಂ ಮಹೇಶ್ವರ ।
ಗಿರಿಜಾಯಾ ಮಹಾದೇವ್ಯಾ ಸಹಾಸ್ಮಾಭಿಃ ಕೃಪಾಂ ಕುರು ॥ ೪೪ ॥

ತತೋ ವಿಷ್ಣುರುವಾಚೇದಂ ಪ್ರಸ್ತಾವಸದೃಶಂ ವಚಃ ।
ಪ್ರಣಮ್ಯ ಶಂಕರಂ ಭಕ್ತ್ಯಾ ವಿಜ್ಞಾನಪ್ರೀತಿಮಾನಃ ॥ ೪೫ ॥

---

೪೨. ಶಿವನಿಗೆ ವರ್ಣಿಸಲಸಾಧ್ಯವಾದಂತಹ ಇಂತಹ ರೂಪವು ಉಂಟಾಯಿತು. ಅವನೂ ಸಹ ತನ್ನ ಅಣಿಮಾದ್ಯಷ್ಟೈಶ್ವರ್ಯಗಳನ್ನು ಪ್ರಕಟಿಸಿದನು.

೪೩. ಆಮೇಲೆ ಎಲ್ಲಾ ದೇವದಾನವರು ಸರ್ಪಗಳು, ಪಕ್ಷಿಗಳು, ಅಪ್ಸರೆಯರು, ಮಹರ್ಷಿಗಳು ಎಲ್ಲರೂ ಶಿವನ ಸನ್ನಿಧಿಗೆ ಬಂದು ಆಶ್ಚರ್ಯದಿಂದಲೂ ಸಂತೋಷ ದಿಂದಲೂ ಇಂತೆಂದರು.

೪೪. ದೇವದೇವನಾದ ಓ ಮಹೇಶ್ವರನೆ, ಮಹಾದೇವಿಯಾದ ಗಿರಿಜೆಯನ್ನೂ ನಮ್ಮನ್ನೂ ಅನುಗ್ರಹಿಸಲು ವಿವಾಹಾರ್ಥವಾಗಿ ಪ್ರಯಾಣಬೆಳಸು ಎಂದು ಪ್ರಾರ್ಥಿಸಿದರು.

೪೫. ಅನಂತರ ಮಹಾಜ್ಞಾನಿಯಾದ ಹರಿಯು ಶಂಕರನನ್ನು ಭಕ್ತಿಯಿಂದ ನಮಸ್ಕರಿಸಿ, ಆ ಕಾಲಕ್ಕೆ ಯೋಗ್ಯವಾದ ಮಾತನ್ನು ಹೇಳಿದನು.

॥ ವಿಷ್ಣುರುವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಕಾರ್ಯಕರ್ತಾ ಸ್ವಭಕ್ತಾನಾಂ ವಿಜ್ಞಪ್ತಿಂ ಶೃಣು ಮೇ ಪ್ರಭೋ ॥ ೪೬ ॥

ಗೃಹ್ಯೋಕ್ತವಿಧಿನಾ ಶಂಭೋ ಸ್ವವಿವಾಹಸ್ಯ ಶಂಕರ ।
ಗಿರೀಶಸುತಯಾ ದೇವ್ಯಾ ಕರ್ಮ ಕರ್ತುಮಿಹಾರ್ಹಸಿ ॥ ೪೭ ॥

ತ್ವಯಾ ಚ ಕ್ರಿಯಮಾಣೇ ತು ವಿವಾಹಸ್ಯ ವಿಧೌ ಹರ ।
ಸ ಏವ ಹಿ ತಥಾ ಲೋಕೇ ಸರ್ವಃ ಸುಖ್ಯಾತಿಮಾಪ್ನುಯಾತ್ ॥ ೪೮ ॥

ಮಂಟಪಸ್ಥಾಪನಂ ನಾಂದೀಮುಖಂ ತತ್ಕುಲಧರ್ಮತಃ ।
ಕಾರಯ ಪ್ರೀತಿತೋ ನಾಥ ಲೋಕೇ ಸ್ವಂ ಖ್ಯಾಪಯನ್ ಯಶಃ ॥ ೪೯ ॥

॥ ಬ್ರಹ್ಮೋವಾಚ ॥

ಏವಮುಕ್ತಸ್ತದಾ ಶಂಭುರ್ವಿಷ್ಣುನಾ ಪರಮೇಶ್ವರಃ ।
ಲೌಕಿಕಾಚಾರನಿರತೋ ವಿಧಿನಾ ತಚ್ಚಕಾರ ಸಃ ॥ ೫೦ ॥

---

೪೬. ದೇವದೇವನಾದ ಓ ಮಹಾದೇವನೆ, ನೀನು ಶರಣಾಗತರನ್ನು ಸಲಹುವೆ. ಭಕ್ತರ ಇಷ್ಟಾರ್ಥವನ್ನು ನೆರವೇರಿಸುವೆ. ಇಂತಹ ನೀನು ನನ್ನ ಈ ವಿಜ್ಞಾಪನೆಯನ್ನು ದಯವಿಟ್ಟು ಕೇಳು.

೪೭. ಓ ದೇವನೆ, ಪಾರ್ವತಿಯೊಡನೆ ನಿನ್ನ ಮದುವೆಯನ್ನು ಗೃಹ್ಯಸೂತ್ರಗಳಲ್ಲಿನ ವಿಧಿಯಂತೆ ಮಾಡಿಕೊಳ್ಳಬೇಕು.

೪೮. ನೀನು ವಿಧಿವತ್ತಾಗಿ ಮದುವೆಯನ್ನು ಮಾಡಿಕೊಂಡರೆ ಆ ವಿಧಿಯೇ ಲೋಕದಲ್ಲಿ ಪ್ರಸಿದ್ಧವಾಗಿ ಹರಡುವುದು.

೪೯. ಮಂಟಪಸ್ಥಾಪನ, ನಾಂದೀಮುಖ ಮುಂತಾದ ಕರ್ಮಗಳನ್ನು ಕುಲಧರ್ಮದಂತೆ ವಿಧಿವತ್ತಾಗಿ ಆಚರಿಸು. ಅದರಿಂದ ನೀನು ಧರ್ಮದೇವನೆಂದು ಖ್ಯಾತಿಗೊಳ್ಳುವೆ ಎಂದನು.

೫೦. ಬ್ರಹ್ಮನು ಹೇಳಿದನು :—ಹೀಗೆ ಹರಿಯು ಹೇಳಲು ಪರಮೇಶ್ವರನು ಲೋಕಾಚಾರದಂತೆ ಆಯಾಯ ವಿಧಿಗಳನ್ನು ಮಾಡಿದನು.

ಕಶ್ಯಪೋಽತ್ರಿರ್ವಸಿಷ್ಠಶ್ಚ ಗೌತಮೋ ಭಾಗುರಿರ್ಗುರುಃ ।
ಕಣ್ವೋ ಬೃಹಸ್ಪತಿಃ ಶಕ್ತಿರ್ಜಮದಗ್ನಿಃ ಪರಾಶರಃ ॥ ೩೧ ॥

ಮಾರ್ಕಾಂಡೇಯಶ್ಶಿಲಾಪಾಕೋಽರುಣಪಾಲೋಽಕೃತಶ್ರಮಃ ।
ಅಗಸ್ತ್ಯಶ್ಚ್ಯವನೋ ಗರ್ಗಶ್ಶಿಲಾದೋಽಥ ಮಹಾಮುನೇ ॥ ೩೨ ॥

ದಧೀಚಿರುಪಮನ್ಯುಶ್ಚ ಭರದ್ವಾಜೋಽಕೃತವ್ರಣಃ ।
ಪಿಪ್ಪಲಾದೋಽಥ ಕುಶಿಕಃ ಕೌತ್ಸೋ ವ್ಯಾಸಃ ಸಶಿಷ್ಯಕಃ ॥ ೩೩ ॥

ಏತೇ ಚಾನ್ಯೇ ಚ ಬಹವ ಆಗತಾಶ್ಶಿವಸನ್ನಿಧಿಂ ।
ಮಯಾ ಸುನೋದಿತಾಸ್ತತ್ರ ಚಕ್ರುಸ್ತೇ ವಿಧಿವತ್ಕ್ರಿಯಾಂ ॥ ೩೪ ॥

ಅಹಂ ಹ್ಯಧಿಕೃತಸ್ತೇನ ಸರ್ವಮಭ್ಯುದಯೋಚಿತಂ ।
ಅಕುರ್ವಂ ಮುನಿಭಿಃ ಪ್ರೀತ್ಯಾ ತತ್ರ ತತ್ಕರ್ಮ ಚಾದರಾತ್ ॥ ೩೫ ॥

ವೇದೋಕ್ತವಿಧಿನಾ ಸರ್ವೇ ವೇದವೇದಾಂಗಪಾರಗಾಃ ।
ರಕ್ಷಾಂ ಚಕ್ರುರ್ಮಹೇಶಸ್ಯ ಕೃತ್ವಾ ಕೌತುಕಮಂಗಲಂ ॥ ೩೬ ॥

---

೩೧-೩೪. ವಿವಾಹಕ್ಕಾಗಿ ಬಂದಿದ್ದ ಕಶ್ಯಪ, ಅತ್ರಿ, ವಸಿಷ್ಠ, ಗೌತಮ, ಭಾಗುರಿ, ಗುರು, ಕಣ್ವ, ಬೃಹಸ್ಪತಿ, ಶಕ್ತಿಮುನಿ, ಜಮದಗ್ನಿ, ಪರಾಶರ, ಮಾರ್ಕಾಂಡೇಯ, ಶಿಲಾಪಾಕ, ಅರುಣಪಾಲ, ಅಕೃತಶ್ರಮ, ಅಗಸ್ತ್ಯ, ಚ್ಯವನ, ಗರ್ಗ, ಶಿಲಾದ, ದಧೀಚಿ, ಉಪಮನ್ಯು, ಭರದ್ವಾಜ, ಅಕೃತವ್ರಣ, ಪಿಪ್ಪಲಾದ, ಕುಶಿಕ, ಕೌತ್ಸ, ವ್ಯಾಸ ಮೊದಲಾದ ಮುನಿಗಳೂ ಇನ್ನೂ ಕೆಲವರು ಮುನಿಗಳೂ ನನ್ನ ಅಪ್ಪಣೆಯಂತೆ ವಿಧಿವತ್ತಾಗಿ ಕರ್ಮಗಳನ್ನು ಮಾಡಿಸಿದರು.

೩೫. ಆ ಕರ್ಮಗಳಲ್ಲಿ ನಾನು ಅಧಿಕಾರಿಯಾಗಿ ನಿಂತು ಅಭ್ಯುದಯಕ್ಕುಚಿತವಾದಂತಹ ಎಲ್ಲ ಕರ್ಮಗಳನ್ನೂ ಮುನಿಗಳೊಡನೆ ಪ್ರೀತಿಯಿಂದ ನಿರ್ವಹಿಸಿದೆನು.

೩೬. ವೇದ ಮತ್ತು ವೇದಾಂತಗಳಲ್ಲಿ ಪಾರಂಗತರಾದ ಆ ಮುನಿಗಳು ವೇದೋಕ್ತವಿಧಿಯಂತೆ ಕೌತುಕಬಂಧನ ಕರ್ಮವನ್ನು ಮಾಡಿ ಶಿವನಿಗೆ ರಕ್ಷಾಕಂಕಣವನ್ನು ಕಟ್ಟಿದರು.

ಋಗ್ಯಜುಸ್ಸಾಮಸೂಕ್ತೈಸ್ತು ತಥಾ ನಾನಾವಿಧೈಃ ಪರೈಃ ।
ಮಂಗಲಾನಿ ಚ ಭೂರಿಣಿ ಚಕ್ರುಃ ಪ್ರೀತ್ಯರ್ಷಯೋಽಖಿಲಾಃ ॥ ೫೭ ॥

ಗ್ರಹಾಣಾಂ ಪೂಜನಂ ಪ್ರೀತ್ಯಾ ಚಕ್ರುಸ್ತೇ ಶಂಭುನಾ ಮಯಾ ।
ಮಂಡಲಸ್ಥಸುರಾಣಾಂ ಚ ಸರ್ವೇಷಾಂ ವಿಘ್ನಶಾಂತಯೇ ॥ ೫೮ ॥

ತತಶ್ಶಿವಸ್ಸುಸಂತುಷ್ಟಃ ಕೃತ್ವಾ ಸರ್ವಂ ಯತೋಚಿತಂ ।
ಲೌಕಿಕಂ ವೈದಿಕಂ ಕರ್ಮ ನನಾಮ ಚ ಮುದಾ ದ್ವಿಜಾನ್ ॥ ೫೯ ॥

ಅಥ ಸರ್ವೇಶ್ವರೋ ವಿಪ್ರಾನ್ ದೇವಾನ್ ಕೃತ್ವಾ ಪುರಸ್ಸರಾನ್ ।
ನಿಸ್ಸಸಾರ ಮುದಾ ತಸ್ಮಾತ್ಕೈಲಾಸಾತ್ಪರ್ವತೋತ್ತಮಾತ್ ॥ ೬೦ ॥

ಬಹಿಃ ಕೈಲಾಸಕುಧರಂ ಶಂಭುಸ್ತಸ್ಥೌ ಮುದಾನ್ವಿತಃ ।
ದೈವೇಸ್ಸಹ ದಿಜೈಶ್ಚೈವ ನಾನಾಸ್ವೀಕಾರಕಃ ಪ್ರಭುಃ ॥ ೬೧ ॥

---

೫೭. ಋಗ್ವೇದ, ಯಜುರ್ವೇದ, ಸಾಮವೇದಗಳ ಸೂಕ್ತಗಳಿಂದಲೂ ಮಿಕ್ಕ ಸೂಕ್ತಗಳಿಂದಲೂ ಋಷಿಗಳು ಶಿವನಿಗೆ ಅನೇಕ ಮಂಗಲಗಳನ್ನು ಮಾಡಿದರು.

೫೮. ಮತ್ತು ಗ್ರಹಮಂಡಲದಲ್ಲಿರುವ ಎಲ್ಲಾ ಗ್ರಹಗಳ ದೋಷವು ನಿವೃತ್ತಿಯಾಗಲೋಸುಗ ನವಗ್ರಹಪೂಜೆಯನ್ನು ಶಂಕರನಿಂದ ಮಾಡಿಸಿದರು.

೫೯. ಆಗ ಶಿವನು ಸಂತೋಷದಿಂದ ವಿವಾಹಕ್ಕೆ ಯೋಗ್ಯವಾದ ಲೌಕಿಕ ಮತ್ತು ವೈದಿಕ ಕರ್ಮಗಳೆರಡನ್ನೂ ವಿಧಿವತ್ತಾಗಿ ಮಾಡಿ ಬ್ರಾಹ್ಮಣರನ್ನು ವಂದಿಸಿದನು.

೬೦. ಅನಂತರ ಆ ಪರಮೇಶ್ವರನು ದೇವತೆಗಳನ್ನೂ ಬ್ರಾಹ್ಮಣರನ್ನೂ ಮುಂದಿಟ್ಟುಕೊಂಡು ಪರ್ವತಶ್ರೇಷ್ಠವಾದ ಕೈಲಾಸದಿಂದ ಹಿಮಾಲಯಕ್ಕೆ ಹೊರಟನು.

೬೧. ಅನೇಕ ಮಂಗಳದ್ರವ್ಯಗಳನ್ನು ತೆಗೆದುಕೊಂಡು ಕೈಲಾಸಪರ್ವತದ ಹೊರಭಾಗದಲ್ಲಿ ದೇವತೆಗಳು ಮತ್ತು ಮುನಿಗಳೊಡನೆ ಸಂತೋಷದಿಂದ ಹೊರಡಲನುವಾಗಿದ್ದನು.

ತದೋತ್ಸವೋ ಮಹಾನಾಸೀತ್ತತ್ರ ದೇವಾದಿಭಿಃ ಕೃತಃ ।
ಸಂತುಷ್ಟ್ಯರ್ಥಂ ಮಹೇಶಸ್ಯ ಗಾನವಾದ್ಯಸುನೃತ್ಯಕಃ ॥ ೬೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಏಕೋನಚತ್ವಾರಿಂಶೋಽಧ್ಯಾಯಃ



---

೬೨. ಅಲ್ಲಿ ದೇವತೆಗಳು ಶಿವನ ಸಂತೋಷಕ್ಕಾಗಿ ಗಾನ, ವಾದ್ಯ, ನರ್ತನ ಇವುಗಳನ್ನು ಮಾಡುತ್ತಾ ಮಹೋತ್ಸವವನ್ನು ಮಾಡಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥ ಶಂಭುಸ್ಸಮಾಹೂಯ ನಂದ್ಯಾದೀನ್ ಸಕಲಾನ್ ಗಣಾನ್ ।
ಆಜ್ಞಾಪಯಾಮಾಸ ಮುದಾ ಗಂತುಂ ಸ್ವೇನ ಚ ತತ್ರ ವೈ ॥ ೧ ॥

॥ ಶಿವ ಉವಾಚ ॥

ಅಪಿ ಯೂಯಂ ಸಹ ಮಯಾ ಸಂಗಚ್ಛಧ್ವಂ ಗಿರೇಃ ಪುರಂ ।
ಕಿಯದ್ಗಣಾನಿಹಾಸ್ಥಾಪ್ಯ ಮಹೋತ್ಸವಪುರಸ್ಸರಂ ॥ ೨ ॥

---

### ನಲವತ್ತನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಆಮೇಲೆ ಶಿವನು ನಂದಿಯೇ ಮೊದಲಾದ ತನ್ನ ಗಣಗಳನ್ನು ಕರೆದು ತನ್ನೊಡನೆ ಮದುವೆಗೆ ಬರುವಂತೆ ಆಜ್ಞಾಪಿಸಿದನು.

೨. ಶಿವನು ಹೇಳಿದನು:—ಎಲೈ ಗಣಗಳೇ, ನೀವೂ ಸಹ ನನ್ನೊಡನೆ ಹಿಮವಂತನ ರಾಜಧಾನಿಗೆ ಉತ್ಸವಪೂರ್ವಕವಾಗಿ ಬನ್ನಿರಿ, ಕೆಲವು ಗಣಗಳು ಕಾವಲಿಗಾಗಿ ಇಲ್ಲಿಯೇ ಇರಲಿ ಎಂದನು.

॥ ಬ್ರಹ್ಮೋವಾಚ ॥

ಅಥ ತೇ ಸಮನುಜ್ಞಪ್ತಾ ಗಣೇಶಾ ನಿರ್ಯಯುರ್ಮುದಾ ।
ಸ್ವಂ ಸ್ವಂ ಬಲಮುಪಾದಾಯ ತಾನ್ ಕಥಂಚಿದ್ವದಾಮ್ಯಹಂ ॥ ೩ ॥

ಅಭ್ಯಗಾಚ್ಛಂಖಕರ್ಣಶ್ಚ ಗಣಕೋಟ್ಯಾ ಗಣೇಶ್ವರಃ ।
ಶಿವೇನ ಸಾರ್ಧಂ ಸಂಗತುಂ ಹಿಮಾಚಲಪುರಂ ಪ್ರತಿ ॥ ೪ ॥

ದಶಕೋಟ್ಯಾ ಕೇಕರಾಕ್ಷೋ ಗಣಾನಾಂ ಸಮಹೋತ್ಸವಃ ।
ಅಷ್ಟಕೋಟ್ಯಾ ಚ ವಿಕೃತೋ ಗಣಾನಾಂ ಗಣನಾಯಕಃ ॥ ೫ ॥

ಚತುಷ್ಕೋಟ್ಯಾ ವಿಶಾಖಶ್ಚ ಗಣಾನಾಂ ಗಣನಾಯಕಃ ।
ಪಾರಿಜಾತಶ್ಚ ನವಭಿಃ ಕೋಟಿಭಿರ್ಗಣಪುಂಗವಃ ॥ ೬ ॥

ಷಷ್ಟ್ಯಾ ಸರ್ವಾಂತಕಃ ಶ್ರೀಮಾನ್ ತಥೈವ ವಿಕೃತಾನನಃ ।
ಗಣಾನಾಂ ದುಂದುಭೋಽಷ್ಟಾಭಿಃ ಕೋಟಿಭಿರ್ಗಣನಾಯಕಃ ॥ ೭ ॥

---

೩. ಬ್ರಹ್ಮನು ಹೇಳಿದನು:—ಹೀಗೆ ಶಂಕರನು ಆಜ್ಞಾಪಿಸಲು ಗಣನಾಯಕರುಗಳು ಸಂತೋಷದಿಂದ ತಮ್ಮ ತಮ್ಮ ಬಲವನ್ನು ತೆಗೆದುಕೊಂಡು ಹೊರಟರು. ಅದನ್ನು ಸಂಕ್ಷೇಪವಾಗಿ ವರ್ಣಿಸುವೆನು.

೪. ಶಂಖಕರ್ಣನೆಂಬ ಗಣನಾಯಕನು ಶಿವನೊಡನೆ ಹಿಮವಂತನ ನಗರಕ್ಕೆ ತೆರಳಲೋಸುಗ ತನ್ನ ಕೋಟಿ ಗಣಗಳೊಡನೆ ಹೊರಟನು.

೫. ಹತ್ತುಕೋಟಿ ಗಣಗಳೊಡನೆ ಕೇಕರಾಕ್ಷನೆಂಬ ಗಣನಾಯಕನು ಹೊರಟನು. ವಿಕೃತನೆಂಬುವವನು ಎಂಟುಕೋಟಿ ಗಣಗಳೊಡನೆ ಮಹೋತ್ಸವದಿಂದ ಹೊರಟನು.

೬-೭. ವಿಶಾಖನೆಂಬ ಗಣನಾಯಕನು ನಾಲ್ಕುಕೋಟಿ ಗಣಗಳೊಡನೆಯೂ ಪಾರಿಜಾತನೆಂಬುವವನು ಒಂಭತ್ತುಕೋಟಿ ಗಣಗಳೊಡನೆಯೂ ಸರ್ವಾಂತಕ ಮತ್ತು ವಿಕೃತಾನನರೆಂಬುವವರು ಅರವತ್ತುಕೋಟಿ ಗಣಗಳೊಡನೆಯೂ ದುಂದುಭನೆಂಬು

ಪಂಚಭಿಶ್ಚ ಕಪಾಲಾಖ್ಯೋ ಗಣೇಶಃ ಕೋಟಿಭಿಸ್ತಥಾ ।
ಷಡ್ಭಿಃ ಸಂದಾರಕೋ ವೀರೋ ಗಣಾನಾಂ ಕೋಟಿಭಿರ್ಮುನೇ ॥ ೮ ॥

ಕೋಟಿಕೋಟಿಭಿರೇವೇಹ ಕಂದುಕಃ ಕುಂಡಕಸ್ತಥಾ ।
ವಿಷ್ಟಂಭೋ ಗಣಪೋಽಷ್ಟಾಭಿರ್ಗಣಾನಾಂ ಗಣಪಸ್ತಥಾ ॥ ೯ ॥

ಸಹಸ್ರಕೋಟ್ಯಾ ಗಣಪಃ ಪಿಪ್ಪಲೋ ಮುದಿತೋ ಯಯೌ ।
ತಥಾ ಸನಾದಕೋ ವೀರೋ ಗಣೇಶೋ ಮುನಿಸತ್ತಮ ॥ ೧೦ ॥

ಆವೇಶನಸ್ತಥಾಷ್ಟಾಭಿಃ ಕೋಟಿಭಿರ್ಗಣನಾಯಕಃ ।
ಮಹಾಕೇಶಸ್ಸಹಸ್ರೇಣ ಕೋಟಿನಾಂ ಗಣಪೋ ಯಯೌ ॥ ೧೧ ॥

ಕುಂಡೋ ದ್ವಾದಶಕೋಟ್ಯಾ ಹಿ ತಥಾ ಪರ್ವತಕೋ ಮುನೇ ।
ಅಷ್ಟಾಭಿಃ ಕೋಟಿಭಿರ್ವೀರಸ್ಸಮಗಾಂಚ್ಚಂದ್ರತಾಪನಃ ॥ ೧೨ ॥

ಕಾಲಶ್ಚ ಕಾಲಕಶ್ಚೈವ ಮಹಾಕಾಲಶ್ಶತೇನ ವೈ ।
ಕೋಟೀನಾಂ ಗಣನಾಥೋ ಹಿ ತಥೈವಾಗ್ನಿಕನಾಮಕಃ ॥ ೧೩ ॥

---

ವವನು ಒಂದುಕೋಟಿ ಗಣಗಳೊಡನೆಯೂ ವೀರನಾದ ಸಂದಾರಕನೆಂಬ ಗಣನಾಯಕನು ಆರುಕೋಟಿ ಗಣಗಳೊಡನೆಯೂ ಹೊರಟರು.

೯-೧೧. ಕಂದುಕ, ಕುಂಡಕರೆಂಬ ಗಣನಾಯಕರು ಕೋಟಿಕೋಟಿ ಗಣಗಳೊಡನೆ ತೆರಳಿದರು. ವಿಷ್ಟಂಭನೆಂಬುವವನು ಎಂಟುಕೋಟಿ ಗಣಗಳೊಡನೆಯೂ ಪಿಪ್ಪಲನೆಂಬುವವನೂ ವೀರನಾದ ಸನಾದಕನೆಂಬುವವನೂ ಸಾವಿರಕೋಟಿ ಗಣಗಳೊಡನೆಯೂ, ಆವೇಶನನೆಂಬುವವನು ಎಂಟುಕೋಟಿ ಗಣಗಳೊಡನೆಯೂ ಮಹಾಕೇಶನೆಂಬ ಗಣನಾಯಕನು ಸಾವಿರಕೋಟಿ ಗಣಗಳೊಡನೆಯೂ ಪರ್ವದಿಂದ ಹೊರಟರು

೧೨. ಕುಂಡ ಮತ್ತು ಪರ್ವತಕರೆಂಬ ಗಣನಾಯಕರು ಹನ್ನೆರಡುಕೋಟಿ ಗಣಗಳೊಡನೆಯೂ ಚಂದ್ರತಾಪನೆಂಬ ವೀರನು ಎಂಟುಕೋಟಿ ಗಣಗಳೊಡನೆಯೂ ಹೊರಟರು.

೧೩-೧೫. ಕಾಲ, ಕಾಲಕ, ಅಗ್ನಿಕರೆಂಬ ಗಣನಾಯಕರು ನೂರುನೂರು ಕೋಟಿ ಗಣಗಳೊಡನೆಯೂ, ಅಗ್ನಿಮುಖನೆಂಬುವವನೂ, ಆದಿತ್ಯಮೂರ್ಧಾ, ಘನಾ

ಕೋಟ್ಯಾಗ್ನಿಮುಖ ಏವಾಗಾದ್ಗಣಾನಾಂ ಗಣನಾಯಕಃ ।
ಆದಿತ್ಯಮೂರ್ಧಾ ಕೋಟ್ಯಾ ಚ ತಥಾ ಚೈವ ಘನಾವಹಃ ॥ ೧೪ ॥

ಸನ್ನಾಹಶ್ಶತಕೋಟ್ಯಾ ಹಿ ಕುಮುದೋ ಗಣಪಸ್ತಥಾ ।
ಅಮೋಘಃ ಕೋಕಿಲಶ್ಚೈವ ಶತಕೋಟ್ಯಾ ಗಣಾಧಿಪಃ ॥ ೧೫ ॥

ಸುಮಂತ್ರಃ ಕೋಟಿಕೋಟ್ಯಾ ಚ ಗಣಾನಾಂ ಗಣನಾಯಕಃ ।
ಕಾಕಪಾದೋದರಃ ಕೋಟಿಷಷ್ಟ್ಯಾ ಸಂತಾನಕಸ್ತಥಾ ॥ ೧೬ ॥

ಮಹಾಬಲಶ್ಚ ನವಭಿರ್ಮಧುಪಿಂಗಶ್ಚ ಕೋಕಿಲಃ ।
ನೀಲೋ ನವತ್ಯಾ ಕೋಟಿನಾಂ ಪೂರ್ಣಭದ್ರಸ್ತಥೈವ ಚ ॥ ೧೭ ॥

ಸಪ್ತಕೋಟ್ಯಾ ಚತುರ್ವಕ್ತ್ರಃ ಕರಣೋ ವಿಂಶಕೋಟಿಭಿಃ ।
ಯಯೌ ನವತಿಕೋಟ್ಯಾ ತು ಗಣೇಶಾನೋಽಹಿರೋಮಕಃ ॥ ೧೮ ॥

ಯಜ್ವಾಕ್ಷಃ ಶತಮನ್ಯುಶ್ಚ ಮೇಘಮನ್ಯುಶ್ಚ ನಾರದ ।
ತಾವತ್ಕೋಟ್ಯಾ ಯಯುಸ್ಸರ್ವೇ ಗಣೇಶಾ ಹಿ ಪೃಥಕ್ ಪೃಥಕ್ ॥ ೧೯ ॥

---

ವಹ ಎಂಬುವವರೂ ಸಹ ಕೋಟಿಕೋಟಿ ಗಣಗಳೊಂದಿಗೆ ತೆರಳಿದರು. ಸನ್ನಾಹ, ಕುಮುದ, ಅಮೋಘ, ಕೋಕಿಲರೆಂಬ ಗಣನಾಯಕರು ನೂರುನೂರುಕೋಟಿ ಗಣಗಳೊಡನೆ ತೆರಳಿದರು.

೧೬. ಸುಮಂತ್ರನೆಂಬುವವನು ಕೋಟಿಕೋಟಿ ಗಣಗಳೊಡನೆ ಹೊರಟನು. ಕಾಕಪಾದೋದರ, ಸಂತಾನಕರೆಂಬುವವರು ಅರವತ್ತರವತ್ತುಕೋಟಿ ಗಣಗಳೊಡನೆ ತೆರಳಿದರು.

೧೭-೧೯. ಮಹಾಬಲ, ಮಧುಪಿಂಗರೆಂಬ ಗಣನಾಯಕರು ಒಂಭತ್ತೊಂಭತ್ತು ಕೋಟಿ ಗಣಗಳೊಡನೆಯೂ, ನೀಲ ಮತ್ತು ಪೂರ್ಣಭದ್ರರೆಂಬುವವರು ತೊಂಭತ್ತು ಕೋಟಿ ಗಣಗಳೊಡನೆಯೂ, ಚತುರ್ವಕ್ತ್ರನೆಂಬುವವನು ಏಳುಕೋಟಿ ಗಣಗಳೊಡನೆಯೂ ಕರಣನೆಂಬುವವನು ಇಪ್ಪತ್ತುಕೋಟಿ ಗಣಗಳೊಡನೆಯೂ ನಡೆದರು. ಅಹಿರೋಮಕನು ತೊಂಭತ್ತುಕೋಟಿ ಗಣಗಳೊಡನೆಯೂ ಯಜ್ವಾಕ್ಷ, ಶತಮನ್ಯು, ಮೇಘಮನ್ಯುಗಳೆಂಬುವವರು ತೊಂಭತ್ತುತೊಂಭತ್ತುಕೋಟಿ ಗಣಗಳೊಡನೆ ಹೊರಟರು.

ಕಾಷ್ಠಾಗೂಷ್ಟಶ್ಚತುಷ್ಷಷ್ಟ್ಯಾ ಕೋಟೀನಾಂ ಗಣನಾಯಕಃ ।
ವಿರೂಪಾಕ್ಷಸ್ಸುಕೇಶಶ್ಚ ವೃಷಭಶ್ಚ ಸನಾತನಃ ॥ ೨೦ ॥

ತಾಲಕೇತುಷ್ಷಡಾಸ್ಯಶ್ಚ ಚಂಚ್ವಾಸ್ಯಶ್ಚ ಸನಾತನಃ ।
ಸಂವರ್ತಕಸ್ತಥಾ ಚೈತ್ರೋ ನಕುಲೀಶಃ ಸ್ವಯಂಪ್ರಭುಃ ॥ ೨೧ ॥

ಲೋಕಾಂತಕಶ್ಚ ದೀಪ್ತಾತ್ಮಾ ತಥಾ ದೈತ್ಯಾಂತಕೋ ಮುನೇ ।
ದೇವೋ ಭೃಂಗಿರಿಟಿಃ ಶ್ರೀಮಾನ್ ದೇವದೇವಪ್ರಿಯಸ್ತಥಾ ॥ ೨೨ ॥

ಅಶನಿರ್ಭಾನುಕಶ್ಚೈವ ಚತುಷಷ್ಟ್ಯಾ ಸಹಸ್ರಶಃ ।
ಯಯುಃ ಶಿವವಿವಾಹಾರ್ಥಂ ಶಿವೇನ ಸಹ ಸೋತ್ಸವಾಃ ॥ ೨೩ ॥

ಭೂತಾಃ ಕೋಟಿಸಹಸ್ರೇಣ ಪ್ರಮಥಾಃ ಕೋಟಿಭಿಸ್ತ್ರಿಭಿಃ ।
ವೀರಭದ್ರಶ್ಚತುಷ್ಷಷ್ಟ್ಯಾ ರೋಮಜಾನಾಂ ತ್ರಿಕೋಟಿಭಿಃ ॥ ೨೪ ॥

ಕೋಟಿಕೋಟಿಸಹಸ್ರಾಣಾಂ ಶತೈರ್ವಿಂಶತಿಭಿರ್ವೃತಾಃ ।
ತತ್ರ ಜಗ್ಮುಶ್ಚ ನಂದ್ಯಾದ್ಯಾ ಗಣಪಾಶ್ಶಂಕರೋತ್ಸವೇ ॥ ೨೫ ॥

---

೨೦-೨೨. ಕಾಷ್ಠಾಗೂಷ್ಟನೆಂಬ ಗಣನಾಯಕನು ಅರವತ್ತನಾಲ್ಕುಕೋಟಿ ಗಣಗಳೊಡನೆ ತೆರಳಿದನು. ವಿರೂಪಾಕ್ಷ, ಸುಕೇಶ, ವೃಷಭ, ಸನಾತನ, ತಾಲಕೇತು, ಷಡಾಸ್ಯ, ಚಂಚ್ವಾಸ್ಯ, ಸಂವರ್ತಕ, ಚೈತ್ರ, ನಕುಲೀಶ, ಸ್ವಯಂಪ್ರಭು, ಲೋಕಾಂತಕ, ಈ ಗಣಗಳು ಅರವತ್ತುಕೋಟಿ ಗಣಗಳೊಡನೆ ತೆರಳಿದರು. ಶಂಕರನಿಗೆ ಪ್ರಿಯನಾದ ಭೃಂಗಿರಿಟಿಯೂ ಸಹ ಅರವತ್ತುಕೋಟಿ ಗಣಗಳೊಡನೆ ತೆರಳಿದನು.

೨೩. ಅಶನಿ ಮತ್ತು ಭಾನುಕರೆಂಬುವವರು ಅರವತ್ತನಾಲ್ಕುಸಾವಿರಕೋಟಿ ಗಣಗಳೊಡನೆ ಶಿವನ ಮದುವೆಗಾಗಿ ಅವನೊಡನೆ ಉತ್ಸವದಿಂದ ಹೊರಟುಬಂದನು.

೨೪. ಇದಲ್ಲದೆ ಸಾವಿರಕೋಟಿ ಭೂತಗಳೂ ಮೂರುಕೋಟಿ ಪ್ರಮಥಗಳೂ ಶಿವನೊಡನೆ ತೆರಳಿದುವು ವೀರಭದ್ರನು ಅರವತ್ತನಾಲ್ಕುಕೋಟಿ ಗಣಗಣೊಡನೆಯೂ ಮೂರುಕೋಟಿ ರೋಮಜರೆಂಬ ಗಣಗಳೊಡನೆಯೂ ತೆರಳಿದನು.

೨೫. ನಂದಿ ಮೊದಲಾದ ಗಣನಾಯಕರು ಇಪ್ಪತ್ತುಕೋಟಿ, ನೂರುಕೋಟಿ, ಸಾವಿರಕೋಟಿ ಗಣಗಳೊಡನೆ ಪ್ರತ್ಯೇಕವಾಗಿ ಶಂಕರನೊಡನೆ ಉತ್ಸವದಿಂದ ಹೊರಟರು.

ಕ್ಷೇತ್ರಪಾಲೋ ಭೈರವಶ್ಚ ಕೋಟಿಕೋಟಿಗಣೈರ್ಯುತಃ ।
ಉದ್ವಾಹಶ್ಶಂಕರಸ್ಯೇತ್ಯಾಯಯೌ ಪ್ರೀತ್ಯಾ ಮಹೋತ್ಸವಃ ॥ ೨೬ ॥

ಏತೇ ಚಾನ್ಯೇ ಚ ಗಣಪಾ ಅಸಂಖ್ಯಾತಾ ಮಹಾಬಲಾಃ ।
ತತ್ರ ಜಗ್ಮುರ್ಮಹಾಪ್ರೀತ್ಯಾ ಸೋತ್ಸಾಹಾಶ್ಶಂಕರೋತ್ಸವೇ ॥ ೨೭ ॥

ಸರ್ವೇ ಸಹಸ್ರಹಸ್ತಾಶ್ಚ ಜಟಾಮುಕುಟಧಾರಿಣಃ ।
ಚಂದ್ರರೇಖಾವತಂಸಾಶ್ಚ ನೀಲಕಂಠಾಸ್ತ್ರಿಲೋಚನಾಃ ॥ ೨೮ ॥

ರುದ್ರಾಕ್ಷಾಭರಣಾಸ್ಸರ್ವೇ ತಥಾ ಸದ್ಭಸ್ಮಧಾರಿಣಃ ।
ಹಾರಕುಂಡಲಕೇಯೂರಮುಕುಟಾದ್ಯೈರಲಂಕೃತಾಃ ॥ ೨೯ ॥

ಬ್ರಹ್ಮವಿಷ್ಣ್ವಿಂದ್ರಸಂಕಾಶಾ ಅಣಿಮಾದಿಗುಣೈರ್ಯುತಾಃ ।
ಸೂರ್ಯಕೋಟಿಪ್ರತೀಕಾಶಾಸ್ತತ್ರ ರೇಜುರ್ಗಣೇಶ್ವರಾಃ ॥ ೩೦ ॥

---

೨೬. ಕ್ಷೇತ್ರಪಾಲ, ಭೈರವರೆಂಬುವವರು ಶಂಕರನ ಮದುವೆಯೆಂದು ತಿಳಿದು ಸಂತೋಷದಿಂದ ಕೋಟಿಕೋಟಿ ಗಣಗಳೊಡನೆ ಅಲ್ಲಿಗೆ ಬಂದರು.

೨೭. ಇವರಲ್ಲದೆ ಇನ್ನೂ ಲೆಕ್ಕವಿಲ್ಲದಷ್ಟು ಗಣನಾಯಕರು ಮಹಾ ಸೈನ್ಯದಿಂದ ಕೂಡಿ ಆದರದಿಂದ ಶಂಕರನ ಮದುವೆಯ ದಿಬ್ಬಣದಲ್ಲಿ ಬಂದು ಸೇರಿದರು.

೨೮. ಆ ಗಣಗಳೆಲ್ಲರಿಗೂ ಸಾವಿರ ಕೈಗಳಿದ್ದವು. ಜಟೆ ಮತ್ತು ಕಿರೀಟಗಳನ್ನು ಧರಿಸಿದ್ದರು. ಶಿರಸ್ಸಿನಲ್ಲಿ ಚಂದ್ರಕಲೆಯು ಬೆಳಗುತ್ತಿತ್ತು. ಎಲ್ಲರ ಕತ್ತೂ ನೀಲವಾಗಿತ್ತು. ಎಲ್ಲರಿಗೂ ಮೂರು ಕಣ್ಣುಗಳಿದ್ದವು.

೨೯-೩೦. ಎಲ್ಲರೂ ರುದ್ರಾಕ್ಷಿಯನ್ನು ಧರಿಸಿದ್ದರು. ಪವಿತ್ರವಾದ ಭಸ್ಮವನ್ನು ಹಚ್ಚಿಕೊಂಡಿದ್ದರು. ಬ್ರಹ್ಮ, ವಿಷ್ಣು, ಇಂದ್ರರಂತೆ ತೇಜಸ್ವಿಗಳಾಗಿದ್ದರು. ಎಲ್ಲರೂ ಅಣಿಮಾ ಮೊದಲಾದ ಸಿದ್ಧಿಗಳನ್ನು ಪಡೆದವರು. ಅವರೆಲ್ಲರೂ ಆ ಉತ್ಸವದಲ್ಲಿ ಕೋಟಿಸೂರ್ಯರಂತೆ ಬೆಳಗುತ್ತಿದ್ದರು.

ಪೃಥಿವೀಚಾರಿಣಃ ಕೇಚಿತ್ಕೇಚಿತ್ಪಾತಾಲಚಾರಿಣಃ ।
ಕೇಚಿದ್ವ್ಯೋಮಚರಾಃ ಕೇಚಿತ್ಸಪ್ತಸ್ವರ್ಗಚರಾ ಅಪಿ ॥ ೩೧ ॥

ಕಿಂ ಬಹೂಕ್ತೇನ ದೇವರ್ಷೇ ಸರ್ವಲೋಕನಿವಾಸಿನಃ ।
ಆಯಯುಃ ಸ್ವಗಣಾಃ ಶಂಭೋಃ ಪ್ರೀತ್ಯಾ ವೈ ಶಂಕರೋತ್ಸವೇ ॥ ೩೨ ॥

ಇತ್ಥಂ ದೇವಗಣೈಶ್ಚಾನ್ಯೈಸ್ಸಹಿತಶ್ಶಂಕರಃ ಪ್ರಭುಃ ।
ಯಯೌ ಹಿಮಗಿರಿಪುರಂ ವಿವಾಹಾರ್ಥಂ ನಿಜಸ್ಯ ವೈ ॥ ೩೩ ॥

ಯದಾ ಜಗಾಮ ಸರ್ವೇಶೋ ವಿವಾಹಾರ್ಥಂ ಸುರಾದಿಭಿಃ ।
ತದಾ ತತ್ರ ಹ್ಯಭೂದ್ವೃತ್ತಂ ತಚ್ಛೃಣು ತ್ವಂ ಮುನೀಶ್ವರ ॥ ೩೪ ॥

ರುದ್ರಸ್ಯ ಭಗಿನೀ ಭೂತ್ವಾ ಚಂಡೀ ಸೂತ್ಸವಸಂಯುತಾ ।
ತತ್ರಾಽಽಜಗಾಮ ಸುಪ್ರೀತ್ಯಾ ಪರೇಷಾಂ ಸುಭಯಾವಹಾ ॥ ೩೫ ॥

---

೩೧. ಅವರಲ್ಲಿ ಕೆಲವರು ಇಡೀ ಭೂಲೋಕವನ್ನು ಸಂಚರಿಸುವಂತಹವರು. ಕೆಲವರು ಪಾತಾಳದಲ್ಲಿ ಸಂಚರಿಸುವ ಶಕ್ತಿಯುಳ್ಳವರು. ಕೆಲವರು ಆಕಾಶದಲ್ಲಿ ಸಂಚರಿಸುವವರು. ಇನ್ನು ಕೆಲವರು ಏಳು ಲೋಕಗಳಲ್ಲೂ ಸಂಚರಿಸಲು ಸಮರ್ಥರಾಗಿದ್ದರು.

೩೨. ಎಲೈ ದೇವಮುನಿ, ಹೆಚ್ಚು ಹೇಳಿಯೇನು? ಆ ಶಂಕರನ ಮದುವೆಯ ದಿಬ್ಬಣಕ್ಕೆ ಎಲ್ಲಾ ಲೋಕಗಳಿಂದಲೂ ಶಂಕರನ ಗಣಗಳು ಪ್ರೀತಿಯಿಂದ ಬಂದು ಸೇರಿದರು.

೩೩. ಹೀಗೆ ದೇವತೆಗಳಿಂದಲೂ, ಗಣಗಳಿಂದಲೂ, ಮಿಕ್ಕವರಿಂದಲೂ ಪರಿವೃತನಾಗಿ ಜಗದೊಡೆಯನಾದ ಶಿವನು ತನ್ನ ಮದುವೆಗಾಗಿ ಹಿಮವಂತನ ನಗರಕ್ಕೆ ಪ್ರಯಾಣಬೆಳಸಿದನು.

೩೪. ಶಂಕರನು ವಿವಾಹಕ್ಕಾಗಿ ದೇವತೆಗಳೇ ಮೊದಲಾದವರೊಡನೆ ಹಿಮವಂತನ ರಾಜಧಾನಿಗೆ ತೆರಳುವಾಗ ಅಲ್ಲಿ ಮತ್ತೊಂದು ವಿಷಯವು ನಡೆಯಿತು. ಅದನ್ನು ಹೇಳುವೆನು.

೩೫. ಚಂಡಿಯು ರುದ್ರನ ಸಹೋದರಿಯಾಗಿ ಶಿವನ ಮದುವೆಯ ಆ ಉತ್ಸವದಲ್ಲಿ ತನ್ನ ಪರಿವಾರದೊಡನೆ ಪ್ರೀತಿಯಿಂದ ಬಂದು ಸೇರಿದಳು. ಅವಳು ದುಷ್ಟರಿಗೆ ಭಯಂಕರಿಯು.

ಪ್ರೇತಾಽಽಸನಸಮಾರೂಢಾ ಸರ್ಪಾಭರಣಭೂಷಿತಾ ।
ಪೂರ್ಣಂ ಕಲಶಮಾದಾಯ ಹೈಮಂ ಮೂರ್ಧ್ನಿ ಮಹಾಪ್ರಭಂ ॥ ೩೬ ॥

ಸ್ವಪರೀವಾರಸಂಯುಕ್ತಾ ದೀಪ್ತಾಸ್ಯಾ ದೀಪ್ತಲೋಚನಾ ।
ಕುತೂಹಲಂ ಪ್ರಕುರ್ವಂತೀ ಜಾತಹರ್ಷಾ ಮಹಾಬಲಾ ॥ ೩೭ ॥

ತತ್ರ ಭೂತಗಣಾ ದಿವ್ಯಾ ವಿರೂಪಾಃ ಕೋಟಿಶೋ ಮುನೇ ।
ವಿರಾಜಂತೇಽಸ್ಮ ಬಹುಶಸ್ತಥಾ ನಾನಾವಿಧಾಸ್ತದಾ ॥ ೩೮ ॥

ತೈಸ್ಸಮೇತಾಗ್ರತಶ್ಚಂಡೀ ಜಗಾಮ ವಿಕೃತಾಽಽನನಾ ।
ಕುತೂಹಲಾನ್ವಿತಾ ಪ್ರೀತಾ ಪ್ರೀತ್ಯುಪದ್ರವಕಾರಿಣೀ ॥ ೩೯ ॥

ಚಂಡ್ಯಾ ಸರ್ವೇ ರುದ್ರಗಣಾಃ ಪೃಷ್ಠತಶ್ಚ ಕೃತಾಸ್ತದಾ ।
ಕೋಟ್ಯೇಕಾದಶಸಂಖ್ಯಾಕಾ ರೌದ್ರಾ ರುದ್ರಪ್ರಿಯಾಶ್ಚ ತೇ ॥ ೪೦ ॥

ತದಾ ಡಮರುನಿರ್ಘೋಷೈರ್ವ್ಯಾಪ್ತಮಾಸೀಜ್ಜಗತ್ರಯಂ ।
ಭೇರೀಝುಂಕಾರಶಬ್ದೇನ ಶಂಖಾನಾಂ ನಿನದೇನ ಚ ॥ ೪೧ ॥

---

೩೬-೩೭. ಆ ಚಂಡಿಯು ಪ್ರೇತಾಸನವನ್ನೇರಿದ್ದಳು. ಮೈಗೆಲ್ಲಾ ಹಾವುಗಳನ್ನು ಸುತ್ತಿಕೊಂಡಿದ್ದಳು. ಅವಳ ಕಣ್ಣು ಮತ್ತು ಮುಖಗಳು ಕೆಂಡದಂತೆ ಪ್ರಕಾಶಿಸುತ್ತಿದ್ದುವು. ಇಂತಹ ಚಂಡಿಯು ಹೊಳೆಯುತ್ತಿರುವ ಚಿನ್ನದ ಪೂರ್ಣಕಲಶವನ್ನು ತಲೆಯಮೇಲಿಟ್ಟುಕೊಂಡು ತನ್ನ ಪರಿವಾರದೊಡನೆ ಅಲ್ಲಿಗೆ ಬಂದಳು. ಮಹಾಬಲಶಾಲಿಯಾಗಿ ಆರೀತಿಯಿರುವ ಅವಳನ್ನು ನೋಡಿ ಎಲ್ಲರೂ ಆಶ್ಚರ್ಯಗೊಂಡರು.

೩೮. ಅವಳ ಪರಿವಾರದಲ್ಲಿ ಕೋಟಿ ಭೂತಗಣಗಳಿದ್ದುವು. ಅವುಗಳಲ್ಲಿ ಕೆಲವು ವಿಕಾರವಾದುವುಗಳೂ, ಕೆಲವು ಸುಂದರವಾದುವುಗಳೂ ಆಗಿದ್ದವು. ಕೆಲವು ನಾನಾ ವಿಧವಾಗಿದ್ದುವು.

೩೯-೪೦. ಆ ಭೂತಗಳೊಡನೆ ಇದ್ದ ಚಂಡಿಯು ವಿಕಾರವಾದ ಮುಖದಿಂದ ಬಹು ಭಯಂಕರಳಾಗಿದ್ದಳು. ಜನಗಳಿಗೆ ಆಶ್ಚರ್ಯ ಮತ್ತು ಭಯಗಳನ್ನು ಹುಟ್ಟಿಸುವಂತಿದ್ದಳು. ಇಂತಹ ಚಂಡಿಯು ಆ ವಿವಾಹಮಹೋತ್ಸವಕ್ಕೆ ಬಂದು ಭಯಂಕರರೂ ರುದ್ರಪ್ರಿಯರೂ ಆದ ಹನ್ನೊಂದುಕೋಟಿ ರುದ್ರಗಣಗಳ ಮುಂದೆ ನಿಂತಳು.

೪೧-೪೨. ಆಗ ಡಮರು ಮತ್ತು ಭೇರಿಗಳನ್ನು ಬಾರಿಸಿದರು. ಶಂಖಗಳನ್ನೂದಿದರು. ದುಂದುಭಿಗಳನ್ನು ಬಾರಿಸಿದರು. ಈ ಶಬ್ದಗಳಿಂದುಂಟಾದ ಕೋಲಾ

ತಥಾ ದುಂದುಭಿನಿರ್ಘೋಷೈಶ್ಶಬ್ದಃ ಕೋಲಾಹಲೋಽಭವತ್ ।
ಕುರ್ವನ್ ಜಗನ್ಮಂಗಲಂ ಚ ನಾಶಯೇಽಮಂಗಲೇತರತ್ ॥ ೪೨ ॥

ಗಣಾನಾಂ ಪೃಷ್ಠತೋ ಭೂತ್ವಾ ಸರ್ವೇ ದೇವಾಸ್ಸಮುತ್ಸುಕಾಃ ।
ಅನ್ವಯುಸ್ಸರ್ವಸಿದ್ಧಾಶ್ಚ ಲೋಕಪಾಲಾದಿಕಾ ಮುನೇ ॥ ೪೩ ॥

ಮಧ್ಯೇ ವ್ರಜನ್ ರಮೇಶೋಽಥ ಗರುಡಾಸನಮಾಶ್ರಿತಃ ।
ಶುಶುಭೇ ಧ್ರಿಯಮಾಣೇನ ಛತ್ರೇಣ ಮಹತಾ ಮುನೇ ॥ ೪೪ ॥

ಚಾಮರೈರ್ವೀಜ್ಯಮಾನೋಽಸೌ ಸ್ವಗಣೈಃ ಪರಿವಾರಿತಃ ।
ಪಾರ್ಷದೈರ್ವಿಲಸದ್ಭಿಶ್ಚ ಸ್ವಭೂಷಾವಿಧಿಭೂಷಿತಃ ॥ ೪೫ ॥

ತಥಾಹಮಪ್ಯಶೋಭಂ ವೈ ವ್ರಜನ್ಮಾರ್ಗೇ ವಿರಾಜಿತಃ ।
ವೇದೈರ್ಮೂರ್ತಿಧರೈಶ್ಶಾಸ್ತ್ರೈಃ ಪುರಾಣೈರಾಗಮೈಸ್ತಥಾ ॥ ೪೬ ॥

---

ಹಲವು ಪ್ರಪಂಚವನ್ನು ವ್ಯಾಪಿಸಿತು. ಇದು ಜಗತ್ತಿಗೆ ಮಂಗಲವನ್ನುಂಟುಮಾಡು ವಂತಹುದೂ ಅಮಂಗಲವನ್ನು ಹೋಗಲಾಡಿಸುವುದೂ ಆಗಿದ್ದಿತು.

೪೩. ಲೋಕಪಾಲಕರೇ ಮೊದಲಾದ ಎಲ್ಲ ದೇವತೆಗಳೂ, ಸಿದ್ಧರೂ ಸಹ ಗಣಗಳ ಹಿಂಭಾಗದಲ್ಲಿ ನಿಂತು ಉತ್ಸವದಲ್ಲಿ ಭಾಗಿಗಳಾಗಿದ್ದರು.

೪೪-೪೫. ಆ ದೇವತೆಗಳ ಮಧ್ಯದಲ್ಲಿ ಹರಿಯು ಗರುಡನನ್ನೇರಿ ಹೋಗುತ್ತ ಲಿದ್ದನು. ಅವನ ಮೇಲೆ ಸುಂದರವಾದ ಛತ್ರಿಯನ್ನು ಹಿಡಿದಿದ್ದರು ಚಾಮರ ಗಳಿಂದ ಬೀಸುತ್ತಿದ್ದರು. ಸರ್ವಾಲಂಕಾರಗಳಿಂದ ಒಪ್ಪುತ್ತ ಪಾರ್ಷದಗಣಗಳೊಡನೆ ಹೊರಟನು.

೪೬-೪೭. ಹಾಗೆಯೇ ನಾನೂ ಸಹ ಪ್ರಮಥಗಣಗಳ ಹಿಂಭಾಗದಲ್ಲಿ ಉತ್ಸವ ವನ್ನನುಸರಿಸಿ ಹೋಗುತ್ತಿದ್ದೆನು. ನನ್ನ ಸುತ್ತಲೂ ವೇದಗಳೂ, ಶಾಸ್ತ್ರಗಳೂ, ಪುರಾಣಗಳೂ, ಆಗಮಗಳೂ ಸಹ ಶರೀರವನ್ನು ಧರಿಸಿ ಬರುತ್ತಲಿದ್ದರು. ಸನಕಾದಿ ಮಹಾಸಿದ್ಧರು, ಪ್ರಜಾಪತಿಗಳು ಮತ್ತು ನನ್ನ ಮಾನಸಪುತ್ರರು ನನ್ನನ್ನು ಸುತ್ತುವರೆದು

ಸನಕಾದಿಮಹಾಸಿದ್ಧೈಸ್ಸಪ್ರಜಾಪತಿಭಿಸ್ಸುತೈಃ ।
ಪರಿವಾರೈಸ್ಸಂಯುತೋ ಹಿ ಶಿವಸೇವನತತ್ಪರಃ ॥ ೪೭ ॥

ಸ್ವಸೈನ್ಯಮಧ್ಯಗಶ್ಶಕ್ರ ಐರಾವತಗಜಸ್ಥಿತಃ ।
ನಾನಾವಿಭೂಷಿತೋಽತ್ಯಂತಂ ವ್ರಜನ್ ರೇಜೇ ಸುರೇಶ್ವರಃ ॥ ೪೮ ॥

ತದಾ ತು ವ್ರಜಮಾನಾಸ್ತೇ ಋಷಯೋ ಬಹವಶ್ಚ ತೇ ।
ವಿರೇಜುರತಿ ಸೋತ್ಕಂಠಾಶ್ಶಿವಸ್ಯೋದ್ವಾಹಸಂ ಪ್ರತಿ ॥ ೪೯ ॥

ಶಾಕಿನ್ಯೋ ಯಾತುಧಾನಾಶ್ಚ ವೇತಾಲಾ ಬ್ರಹ್ಮರಾಕ್ಷಸಾಃ ।
ಭೂತಪ್ರೇತಪಿಶಾಚಾಶ್ಚ ತಥಾನ್ಯೇ ಪ್ರಮಾಥಾದಯಃ ॥ ೫೦ ॥

ತುಂಬುರುರ್ನಾರದೋ ಹಾಹಾ ಹೂಹೂಶ್ಚೇತ್ಯಾದಯೋ ವರಾಃ ।
ಗಂಧರ್ವಾಃ ಕಿನ್ನರಾ ಜಗ್ಮುರ್ವಾದ್ಯಾನಾಧ್ಮಾಯ ಹರ್ಷಿತಾಃ ॥ ೫೧ ॥

---

ಬರುತ್ತಿದ್ದರು. ಹೀಗೆ ಪರಿವಾರದಿಂದ ಕೂಡಿ ನಾನು ಶಿವನನ್ನು ಓಲೈಸುತ್ತಾ ತೆರಳುತ್ತಿದ್ದೆನು.

೪೮. ದೇವೇಂದ್ರನು ಅನೇಕ ಆಭರಣಗಳಿಂದ ಅಲಂಕೃತನಾಗಿ ಐರಾವತವೆಂಬ ಆನೆಯಮೇಲೆ ಕುಳಿತು ತನ್ನ ಸೈನ್ಯದ ಮಧ್ಯದಲ್ಲಿ ರಾರಾಜಿಸುತ್ತಲಿದ್ದನು.

೪೯. ಅವನ ಹಿಂದೆ ಬಹುಜನ ಋಷಿಗಳು ಶಿವನ ಮದುವೆಯನ್ನು ನೋಡುವ ಉತ್ಸಾಹದಿಂದ ಹೊರಟಿದ್ದರು.

೫೦-೫೧. ಶಾಕಿನೀದೇವಿಯರು, ರಾಕ್ಷಸರು, ವೇತಾಲಗಳು, ಬ್ರಹ್ಮರಾಕ್ಷಸಗಳು, ಭೂತಪ್ರೇತಪಿಶಾಚ ಮುಂತಾದುವುಗಳು, ಮಿಕ್ಕ ಪ್ರಮಥಗಳು, ನಾರದಮುನಿ, ತುಂಬುರುಮುನಿ, ಹಾಹಾಗಾಯಕ, ಹೂಹೂಗಾಯಕ, ಗಂಧರ್ವರು, ಕಿನ್ನರರು ಮೊದಲಾದವರು ವಾದ್ಯಗಳನ್ನು ಬಾರಿಸುತ್ತಾ ಹರ್ಷದಿಂದ ಹೊರಟರು.

ಜಗತೋ ಮಾತರಾಸ್ಸರ್ವಾ ದೇವಕನ್ಯಾಶ್ಚ ಸರ್ವಶಃ ।
ಗಾಯತ್ರೀ ಚೈವ ಸಾವಿತ್ರೀ ಲಕ್ಷ್ಮೀರನ್ಯಾಸ್ಸುರಸ್ತ್ರಿಯಃ ॥ ೫೨ ॥

ಏತಾಶ್ಚಾನ್ಯಾಶ್ಚ ದೇವಾನಾಂ ಪತ್ನ್ಯೋ ಭವಮಾತರಃ ।
ಉದ್ವಾಹಶ್ಶಂಕರಸ್ಯೇತಿ ಜಗ್ಮುಸ್ಸರ್ವಾ ಮುದಾನ್ವಿತಾಃ ॥ ೫೩ ॥

ಶುದ್ಧಸ್ಫಟಿಕಸಂಕಾಶೋ ವೃಷಭಸ್ಸರ್ವಸುಂದರಃ ।
ಯೋ ಧರ್ಮ ಉಚ್ಯತೇ ವೇದೈಶ್ಶಾಸ್ತ್ರೈಸ್ಸಿದ್ಧಮಹರ್ಷಿಭಿಃ ॥ ೫೪ ॥

ತಮಾರೂಢೋ ಮಹಾದೇವೋ ವೃಷಭಂ ಧರ್ಮವತ್ಸಲಃ ।
ಶುಶುಭೇಽತೀವ ದೇವರ್ಷಿಸೇವಿತಸ್ಸಕಲೈರ್ವ್ರಜನ್ ॥ ೫೫ ॥

ಏಭಿಸ್ಸಮೇತೈಸ್ಸಕಲೈರ್ಮಹರ್ಷಿಭಿ-
ರ್ಬಭೌ ಮಹೇಶೋ ಬಹುಶೋಽತ್ಯಲಂಕೃತಃ ।
ಹಿಮಾಲಯಾಹ್ವಸ್ಯ ಧರಸ್ಯ ಸಂವ್ರಜನ್
ಪಾಣಿಗ್ರಹಾರ್ಥಂ ಸದನಂ ಶಿವಾಯಾಃ ॥ ೫೬ ॥

---

೫೨-೫೩. ಬ್ರಾಹ್ಮೀ ಮೊದಲಾದ ಏಳು ಜಗನ್ಮಾತೆಯರು, ದೇವಕನ್ಯೆಯರು, ಗಾಯತ್ರೀದೇವಿ, ಸಾವಿತ್ರೀದೇವಿ, ಲಕ್ಷ್ಮೀದೇವಿ, ಮಿಕ್ಕ ದೇವಸ್ತ್ರೀಯರು, ದೇವಪತ್ನಿಯರು ಮೊದಲಾದ ಜಗನ್ಮಾತೆಯರು, ಇವರೆಲ್ಲರೂ ಶಂಕರನ ಮದುವೆಯನ್ನು ನೋಡಬೇಕೆಂದು ಸಂತೋಷದಿಂದ ಹೊರಟರು.

೫೪-೫೫. ವೇದಶಾಸ್ತ್ರಗಳಲ್ಲಿ ಹೇಳಿರುವುದೂ, ಮತ್ತು ಸಿದ್ಧರು ಮಹರ್ಷಿಗಳು ಯಾವುದನ್ನು ಧರ್ಮವೆನ್ನುವರೋ ಆ ಧರ್ಮವೇ ನಿರ್ಮಲಸ್ಫಟಿಕದಂತಿರುವ ವೃಷಭ (ನಂದಿ) ರೂಪವನ್ನು ಧರಿಸಿದ್ದಿತು. ಅತಿಸುಂದರವಾದ ಆ ವೃಷಭವನ್ನೇರಿ ಧರ್ಮಪ್ರಿಯನಾದ ಮಹಾದೇವನು ದೇವತೆಗಳು, ಋಷಿಗಳು ಮುಂತಾದವರಿಂದ ಸೇವಿಸಲ್ಪಡುತ್ತಾ ಶೋಭಿಸುತ್ತಲಿದ್ದನು.

೫೬. ಹೀಗೆ ಈ ಎಲ್ಲಾ ದೇವತೆಗಳೂ, ಮಹರ್ಷಿಗಳೂ ಓಲೈಸುತ್ತಿರಲು, ಮಹೇಶನು ಸರ್ವಾಭರಣಭೂಷಿತನಾಗಿ ಗಿರಿಜೆಯನ್ನು ಮದುವೆಯಾಗಲು ಹಿಮವಂತನ ಮನೆಗೆ ಹೊರಟನು.

ಇತ್ಯುಕ್ತಂ ಶಂಭುಚರಿತಂ ಗಮನಂ ಪರಮೋತ್ಸವಂ ।
ಹಿಮಾಲಯಪುರೋದ್ಭೂತಂ ಸದ್ವೃತ್ತಂ ಶೃಣು ನಾರದ ॥ ೫೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಚತ್ವಾರಿಂಶೋಽಧ್ಯಾಯಃ



---

೫೭. ಎಲೈ ನಾರದ, ಹೀಗೆ ಶಿವನು ಮದುವೆಗೆ ಹೊರಟ ಮಹೋತ್ಸವ ಚರಿತ್ರವನ್ನು ನಿನಗೆ ಹೇಳಿರುವೆನು. ಇನ್ನು ಹಿಮವಂತನ ನಗರದಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ವಿಸ್ತಾರವಾಗಿ ವರ್ಣಿಸುವೆನು ಅದನ್ನು ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಏಕಚತ್ವಾರಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ತತಸ್ಸಮ್ಮಂತ್ರ್ಯ ಚ ಮಿಥಃ ಪ್ರಾಪ್ಯಾಜ್ಞಾಂ ಶಾಂಕರೀಂ ಹರಿಃ ।
ಮುನೇ ತ್ವಾಂ ಪ್ರೇಷಯಾಮಾಸ ಪ್ರಥಮಂ ಕುಧರಾಲಯಂ ॥ ೧ ॥

ಅಥ ಪ್ರಣಮ್ಯ ಸರ್ವೇಶಂ ಗತಸ್ತ್ವಂ ನಾರದಾಗ್ರತಃ ।
ಹರಿಣಾ ನೋದಿತಃ ಪ್ರೀತ್ಯಾ ಹಿಮಾಚಲಗೃಹಂ ಪ್ರತಿ ॥ ೨ ॥

ತ್ವಂ ಮುನೇಽಪಶ್ಯ ಆತ್ಮಾನಂ ಗತ್ವಾ ದದ್ವ್ರೀಡಯಾನ್ವಿತಂ ।
ಕೃತ್ರಿಮಂ ರಚಿತಂ ತತ್ರ ವಿಸ್ಮಿತೋ ವಿಶ್ವಕರ್ಮಣಾ ॥ ೩ ॥

---

## ನಲವತ್ತೊಂದನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಬಳಿಕ ಹರಿಯು ಶಿವನೊಡನೆ ಆಲೋಚನೆಮಾಡಿ ಅವನ ಅಪ್ಪಣೆಯನ್ನು ಪಡೆದು, ಮೊದಲು ನಿನ್ನನ್ನು ಹಿಮವಂತನ ಅರಮನೆಗೆ ಕಳುಹಿಸಿದನು.

೨. ಆಗ ನೀನು ಶಿವನನ್ನು ನಮಸ್ಕರಿಸಿ ಹರಿಯ ಪ್ರೇರಣೆಯಂತೆ ಸಂತೋಷದಿಂದ ಹಿಮವಂತನ ಮನೆಗೆ ಹೋಗಿ,

೩. ಅಲ್ಲಿ ವಿಶ್ವಕರ್ಮನು ಅದ್ಭುತವಾಗಿ ರಚಿಸಿದ ವಿವಾಹಮಂಟಪ ಮೊದಲಾದುವುಗಳನ್ನು ನೋಡಿ ತುಂಬಾ ಆಶ್ಚರ್ಯಯುಕ್ತನಾದೆ.

ಶ್ರಾಂತಸ್ತ್ವಮಾತ್ಮನಾ ತೇನ ಕೃತ್ರಿಮೇಣ ಮಹಾಮುನೇ ।
ಅವಲೋಕಪರಸ್ಸೋಽಭೂಚ್ಚರಿತಂ ವಿಶ್ವಕರ್ಮಣಃ ॥ ೪ ॥

ಪ್ರವಿಷ್ಟೋ ಮಂಟಪಂ ತಸ್ಯ ಹಿಮಾದ್ರೇ ರತ್ನಚಿತ್ರಿತಂ ।
ಸುವರ್ಣಕಲಶೈರ್ಜುಷ್ಟಂ ರಂಭಾದಿಬಹುಶೋಭಿತಂ ॥ ೫ ॥

ಸಹಸ್ರಸ್ತಂಭಸಂಯುಕ್ತಂ ವಿಚಿತ್ರಂ ಪರಮಾದ್ಭುತಂ ।
ವೇದಿಕಾಂ ಚ ತಥಾ ದೃಷ್ಟ್ವಾ ವಿಸ್ಮಯಂ ತ್ವಂ ಮುನೇ ಹ್ಯಯಾಃ ॥ ೬ ॥

ತದೋವಾಚ ಸ ಮುನೇ ನಾರದಶ್ಚ ನಗೇಶ್ವರಂ ।
ವಿಸ್ಮಿತೋಽತೀವ ಮನಸಿ ನಷ್ಟಜ್ಞಾನೋ ವಿಮೂಢಧೀಃ ॥ ೭ ॥

ಆಗತಾಸ್ತೇ ಕಿಮಧುನಾ ದೇವಾ ವಿಷ್ಣುಪುರೋಗಮಾಃ ।
ತಥಾ ಮಹರ್ಷಯಸ್ಸರ್ವೇ ಸಿದ್ಧಾ ಉಪಸುರಾಸ್ತಥಾ ॥ ೮ ॥

---

೪. ಆಮೇಲೆ ವಿಶ್ವಕರ್ಮನು ರಚಿಸಿದ ಆ ಕೃತ್ರಿಮಮಂಟಪ ಮೊದಲಾದುವುಗಳನ್ನು ನೋಡುತ್ತಾ ಅಲ್ಲೆಲ್ಲಾ ಬಹಳ ಸುತ್ತಿದ್ದರಿಂದ ನಿನಗೆ ಆಯಾಸವಾಯಿತು.

೫-೬. ಅಲ್ಲಿ ಪರ್ವತರಾಜನು ವಿವಾಹಮಂಟಪವನ್ನು ಅತಿ ರಮಣೀಯವಾಗಿ ನಿರ್ಮಿಸಿದ್ದನು. ಅದು ರತ್ನಗಳಿಂದ ಕೆತ್ತಲ್ಪಟ್ಟಿದ್ದಿತು. ಚಿನ್ನದ ಕಳಸಗಳನ್ನು ಅದಕ್ಕೆ ಹಾಕಿದ್ದರು. ಬಾಳೆಗಂಬ ಮೊದಲಾದ ಮಂಗಳ ವಸ್ತುಗಳಿಂದ ಅಲಂಕರಿಸಿದ್ದರು. ಆ ಮಂಟಪಕ್ಕೆ ಸಾವಿರ ಕಂಬಗಳಿದ್ದುವು. ಅದರ ಹಸೆಜಗುಲಿಯಂತೂ ತುಂಬಾ ಅದ್ಭುತವಾಗಿತ್ತು. ಇಂತಹ ಮಂಟಪವನ್ನು ನೋಡಿ ನಿನಗೆ ಬಹು ಆಶ್ಚರ್ಯವಾಯಿತು.

೭-೮. ಅಲ್ಲಿ ಸಜೀವರಾಗಿದ್ದಂತೆ ನಿರ್ಮಿಸಿದ ಹರಿಹರ ಮೊದಲಾದವರ ಮೂರ್ತಿಗಳನ್ನು ನೋಡಿ ತುಂಬಾ ಆಶ್ಚರ್ಯಗೊಂಡು ಅವರೇ ಇಲ್ಲಿಗೆ ಬಂದಿರುವರೆಂದು ತಿಳಿದು, ಪರ್ವತರಾಜನನ್ನು ಕುರಿತು ಎಲೈ ಹಿಮವಂತನೆ, ಹರಿಮೊದಲಾದ ದೇವತೆಗಳು, ಮಹರ್ಷಿಗಳು, ಸಿದ್ಧರು, ಗಂಧರ್ವರು ಮೊದಲಾದವರೆಲ್ಲರೂ ಆಗಲೇ ಇಲ್ಲಿಗೆ ಬಂದುಬಿಟ್ಟರೇನು ?

ಮಹಾದೇವೋ ವೃಷಾರೂಢೋ ಗಣೈಶ್ಚ ಪರಿವಾರಿತಃ ।
ಆಗತಃ ಕಿಂ ವಿವಾಹಾರ್ಥಂ ತಥ್ಯಂ ವದ ನಗೇಶ್ವರ ॥ ೯ ॥

॥ ಬ್ರಹ್ಮೋವಾಚ ॥
ಇತ್ಯೇವಂ ವಚನಂ ಶ್ರುತ್ವಾ ತವ ವಿಸ್ಮಿತಚೇತಸಃ ।
ಉವಾಚ ತ್ವಾಂ ಮುನೇ ತಥ್ಯಂ ವಾಕ್ಯಂ ಸ ಹಿಮವಾನ್ ಗಿರಿಃ ॥ ೧೦ ॥

॥ ಹಿಮವಾನುವಾಚ ॥
ಹೇ ನಾರದ ಮಹಾಪ್ರಾಜ್ಞ್ಯಾಽಗತೋ ನೈವಾಧುನಾ ಶಿವಃ ।
ವಿವಾಹಾರ್ಥಂ ಚ ಪಾರ್ವತ್ಯಾ ಸಗಣಸ್ಸವರಾತಕಃ ॥ ೧೧ ॥

ವಿಶ್ವಕರ್ಮಕೃತಂ ಚಿತ್ರಂ ವಿದ್ಧಿ ನಾರದ ಸದ್ಧಿಯಾ ।
ವಿಸ್ಮಯಂ ತ್ಯಜ ದೇವರ್ಷೇ ಸ್ವಸ್ಥೋ ಭವ ಶಿವಂ ಸ್ಮರ ॥ ೧೨ ॥

ಭುಕ್ತ್ವಾ ವಿಶ್ರಮ್ಯ ಸುಪ್ರೀತಃ ಕೃಪಾಂ ಕೃತ್ವಾ ಮಮೋಪರಿ ।
ಮೈನಾಕಾದಿಧರೈಸ್ಸಾರ್ಥಂ ಗಚ್ಛ ತ್ವಂ ಶಂಕರಾಂತಿಕಂ ॥ ೧೩ ॥

---

೯. ಮಹಾದೇವನು ನಂದಿಯನ್ನೇರಿ ಗಣಗಳೊಡನೆ ಕೂಡಿ ಮದುವೆಗಾಗಿ ಇಷ್ಟು ಬೇಗ ಇಲ್ಲಿಗೆ ಬಂದನೇ? ಎಲೈ ಪರ್ವತರಾಜ, ನಿಜವಾದುದನ್ನು ಹೇಳು ಎನ್ನಲು,

೧೦-೧೧. ನೀನು ಹೇಳಿದ ಮಾತನ್ನು ಕೇಳಿ ಹಿಮವಂತನು, ಮಹಾಜ್ಞಾನಿಯಾದ ಓ ನಾರದಮುನಿ, ಮದುವೆಗಾಗಿ ತನ್ನ ಪರಿವಾರ ಮತ್ತು ದೇವತೆಗಳು ಮುಂತಾದವರೊಡನೆ ಶಿವನು ಇನ್ನೂ ಇಲ್ಲಿಗೆ ಬಂದಿಲ್ಲ.

೧೨. ಇದೆಲ್ಲವೂ ವಿಶ್ವಕರ್ಮನ ಕೃತ್ರಿಮಶಿಲ್ಪವು. ಇದನ್ನು ನೋಡಿ ಏಕೆ ಆಶ್ಚರ್ಯಪಡುವೆ? ಶಾಂತಮನಸ್ಕನಾಗಿ ಶಿವನನ್ನು ಸ್ಮರಿಸು.

೧೩-೧೪, ಓ ನಾರದಮುನಿ, ನನ್ನಲ್ಲಿ ಅನುಗ್ರಹವನ್ನಿಟ್ಟು ನಮ್ಮಲ್ಲಿ ಭೋಜನವನ್ನು ಮಾಡಿ, ಸ್ವಲ್ಪ ವಿಶ್ರಾಂತಿ ಪಡೆದು, ಆಮೇಲೆ ಮೈನಾಕ ಮೊದಲಾದವರೊಡನೆ ಶಿವನ ಬಳಿಗೆ ತೆರಳಿ ದೇವತೆಗಳು, ಮಹರ್ಷಿಗಳು, ಅಸುರರು ಇವರುಗಳಿಂದ ಪೂಜಿ

ಏಭಿಸ್ಸಮೇತೋ ಗಿರಿಭಿರ್ಮಹಾಮತೇ
ಸಂಪ್ರಾರ್ಥ್ಯ ಶೀಘ್ರಂ ಶಿವಮತ್ರ ಚಾನಯ ।
ದೇವೈಸ್ಸಮೇತಂ ಚ ಮಹರ್ಷಿಸಂಘೈಃ
ಸುರಾಸುರೈರರ್ಚಿತಪಾದಪಲ್ಲವಂ ॥ ೧೪ ॥

॥ ಬ್ರಹ್ಮೋವಾಚ ॥

ತಥೇತಿ ಚೋಕ್ತ್ವಾಗಮ ಆಶು ಹಿ ತ್ವಂ
ಸದೈವತೈಶ್ಶೈಲಸುತಾದಿಭಿಶ್ಚ ।
ತತ್ರತ್ಯಕೃತ್ಯಂ ಸುವಿಧಾಯ ಭುಕ್ತ್ವಾ
ಮಹಾಮನಾಸ್ತ್ವಂ ಶಿವಸನ್ನಿಧಾನಂ ॥ ೧೫ ॥

ತತ್ರ ದೃಷ್ಟೋ ಮಹಾದೇವೋ ದೇವಾದಿಪರಿವಾರಿತಃ ।
ನಮಸ್ಕೃತಸ್ತ್ವಯಾ ದೀಪ್ತಶ್ಶೈಲೈಸ್ತ್ರೈರ್ಭಕ್ತಿತಶ್ಚ ವೈ ॥ ೧೬ ॥

ತದಾ ಮಯಾ ವಿಷ್ಣುನಾ ಚ ಸರ್ವೇ ದೇವಾಸ್ಸವಾಸವಾಃ ।
ಪಪ್ರಚ್ಛುಸ್ತ್ವಾಂ ಮುನೇ ದೃಷ್ಟ್ವಾ ರುದ್ರಸ್ಯಾನುಚರಾಸ್ತಥಾ ॥ ೧೭ ॥

---

ಸಲ್ಪಡುವ ಆ ಶಿವನನ್ನು ಪ್ರಾರ್ಥಿಸಿ, ಅವರೆಲ್ಲರೊಡನೆ ಇಲ್ಲಿಗೆ ಶಿವನನ್ನು ಕರೆದು ಕೊಂಡು ಬಾ ಎಂದನು.

೧೫. ಬ್ರಹ್ಮನು ಹೇಳಿದನು:—ಹಾಗೆಯೇ ಆಗಲಿ ಎಂದು ನೀನು ಹಿಮವಂತನ ಮನೆಯಲ್ಲಿ ಭೋಜನಮಾಡಿ, ವಿಶ್ರಾಂತಿ ತೆಗೆದುಕೊಂಡು ಅಲ್ಲಿ ಮಾಡಬೇಕಾದ ಕಾರ್ಯಗಳನ್ನು ಮಾಡಿ ಮೈನಾಕ ಮೊದಲಾದವರೊಡನೆ ಸಂತೋಷದಿಂದ ಶಿವನ ಬಳಿಗೆ ಹೋಗಿ,

೧೬. ಅಲ್ಲಿ ದೇವತೆಗಳು ಮೊದಲಾದವರಿಂದ ಕೂಡಿರುವ ಮಹಾದೇವನನ್ನು ಮೈನಾಕ ಮೊದಲಾದವರೊಡನೆ ಭಕ್ತಿಯಿಂದ ನಮಸ್ಕರಿಸಲು,

೧೭-೧೮. ಆಗ ನಾನು ವಿಷ್ಣು, ಇಂದ್ರ ಮೊದಲಾದ ದೇವತೆಗಳೂ ಎಲ್ಲರೂ ಸಹ ನಿನ್ನನ್ನೂ, ಅನೇಕಾಲಂಕಾರಗಳಿಂದ ಶೋಭಿಸುತ್ತಲಿರುವ ಮೈನಾಕ, ಸಹ್ಯ,

ವಿಸ್ಮಿತಾಃ ಪರ್ವತಾನ್ ದೃಷ್ಟ್ವಾ ಸಂದೇಹಾಕುಲಮಾನಸಾಃ ।
ಮೈನಾಕಸಹ್ಯಮೇರ್ವಾದ್ಯಾನ್ನಾನಾಲಂಕಾರಸಂಯುತಾನ್ ॥ ೧೮ ॥

॥ ದೇವಾ ಊಚುಃ ॥

ಹೇ ನಾರದ ಮಹಾಪ್ರಾಜ್ಞ ವಿಸ್ಮಿತಸ್ತ್ವಂ ಹಿ ದೃಶ್ಯಸೇ ।
ಸತ್ಕೃತೋಽಸಿ ಹಿಮಾಗೇನ ಕಿಂ ನ ವಾ ವದ ವಿಸ್ತರಾತ್ ॥ ೧೯ ॥

ಏತೇ ಕಸ್ಮಾತ್ಸಮಾಯಾತಾಃ ಪರ್ವತಾ ಇಹ ಸತ್ತಮಾಃ ।
ಮೈನಾಕಸಹ್ಯಮೇರ್ವಾದ್ಯಾಸ್ಸುಪ್ರತಾಪಾಸ್ಸ್ವಲಂಕೃತಾಃ ॥ ೨೦ ॥

ಕನ್ಯಾಂ ದಾಸ್ಯತಿ ಶೈಲೋಽಸೌ ಸ ಭವೇ ವಾ ನ ನಾರದ ।
ಹಿಮಾಲಯಗೃಹೇ ತಾತ ಕಿಂ ಭವತ್ಯದ್ಯ ತದ್ವದ ॥ ೨೧ ॥

ಇತಿ ಸಂದಿಗ್ಧಮನಸಾಮಸ್ಮಾಕಂ ಚ ದಿವೌಕಸಾಂ ।
ವದ ತ್ವಂ ಪೃಚ್ಛಮಾನಾನಾಂ ಸಂದೇಹಂ ಹರ ಸುವ್ರತ ॥ ೨೨ ॥

---

ಮೇರು, ಮೊದಲಾದ ಪರ್ವತಗಳನ್ನೂ ನೋಡಿ, ಇದೇನು ವಿಚಾರವೆಂದು ಸಂಶಯ ಗೊಂಡು,

೧೯. ಮಹಾ ಬುದ್ಧಿಶಾಲಿಯಾದ ಎಲೈ ನಾರದ, ನೀನು ತುಂಬಾ ಆಶ್ಚರ್ಯ ಗೊಂಡವನಂತೆ ತೋರುವೆ. ಹಿಮವಂತನು ನಿನ್ನನ್ನು ಸತ್ಕರಿಸಲಿಲ್ಲವೇ? ನಡೆದ ಸಮಾಚಾರವೇನು? ಎಲ್ಲವನ್ನೂ ವಿಶದವಾಗಿ ಹೇಳು.

೨೦. ಈ ಮೈನಾಕ, ಸಹ್ಯ ಮೇರು ಮೊದಲಾದ ಪರ್ವತೋತ್ತಮರು ಅಲಂಕೃತರಾಗಿ ಇಲ್ಲಿಗೆ ಏಕೆ ಬಂದಿರುವರು?

೨೧. ಹಿಮವಂತನು ಶಂಕರನಿಗೆ ಕನ್ಯೆಯನ್ನು ಕೊಡುವನೇ? ಇಲ್ಲವೇ? ಎಲೈ ನಾರದ, ಹಿಮವಂತನ ಮನೆಯಲ್ಲಿ ಈಗ ಏನು ನಡೆಯುತ್ತಲಿದೆ? ಅದನ್ನು ಹೇಳು.

೨೨. ನಮಗೆ ಈ ವಿಚಾರದಲ್ಲಿ ತುಂಬಾ ಸಂದೇಹವುಂಟಾಗಿದೆ. ನಡೆದ ಸಮಾಚಾರವನ್ನು ಬೇಗನೆ ಹೇಳಿ ನಮ್ಮ ಸಂದೇಹವನ್ನು ಹೋಗಲಾಡಿಸು ಎಂದರು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ವಿಷ್ಣ್ವಾದೀನಾಂ ದಿವೌಕಸಾಂ ।
ಅವೋಚಸ್ತ್ವಂ ಮುನೇ ತ್ವಂ ಹಿ ವಿಸ್ಮಿತಸ್ತ್ವಾಷ್ಟ್ರಮಾಯಯಾ ॥ ೨೩ ॥

ಏಕಾಂತಮಾಶ್ರಿತ್ಯ ಚ ಮಾಂ ಹಿ ವಿಷ್ಣು-
ಮಾಭಾಷಥಾ ವಾಕ್ಯಮಿದಂ ಮುನೇ ತ್ವಂ ।
ಶಚೀಪತಿಂ ಸರ್ವಸುರೇಶ್ವರಂ ವೈ
ಪಕ್ಷಚ್ಛಿದಂ ಪೂರ್ವರಿಪುಂ ಧರಾಣಾಂ ॥ ೨೪ ॥

॥ ನಾರದ ಉವಾಚ ॥

ತ್ವಷ್ಟ್ರಾ ಕೃತಂ ತದ್ವಿಕೃತಂ ವಿಚಿತ್ರಂ
ವಿಮೋಹನಂ ಸರ್ವದಿವೌಕಸಾಂ ಹಿ ।
ಯೇನೈವ ಸರ್ವಾನ್ ಸ ವಿಮೋಹಿತುಂ ಸುರಾನ್
ಸಮಿಚ್ಛತಿ ಪ್ರೇಮತ ಏವ ಯುಕ್ತ್ಯಾ ॥ ೨೫ ॥

ಪುರಾ ಕೃತಂ ತಸ್ಯ ವಿಮೋಹನಂ ತ್ವಯಾ
ಸುವಿಸ್ಮೃತಂ ತತ್ಸಕಲಂ ಶಚೀಪತೇ ।
ತಸ್ಮಾದಸೌ ತ್ವಾಂ ವಿಜಗೀಷುರೇವ
ಗೃಹಂ ಧ್ರುವಂ ತಸ್ಯ ಗಿರೇರ್ಮಹಾತ್ಮನಃ ॥ ೨೬ ॥

---

೨೩-೨೪. ಬ್ರಹ್ಮನು ಹೇಳಿದನು:—ಎಲೈ ನಾರದ, ಹರಿಯೇ ಮೊದಲಾದವರು ಹೇಳಿದ ಆ ಮಾತನ್ನು ಕೇಳಿ, ವಿಶ್ವಕರ್ಮನ ಮಾಯೆಯಿಂದ ಆಶ್ಚರ್ಯಗೊಂಡ ನೀನು ಬ್ರಹ್ಮ, ವಿಷ್ಣು, ದೇವೇಂದ್ರ ಮೊದಲಾದವರಿದ್ದೆಡೆಗೆ ಬಂದು,

೨೫. ಓ ದೇವೋತ್ತಮರೇ, ಹಿಮವಂತನರಮನೆಯಲ್ಲಿ ವಿಶ್ವಕರ್ಮನು, ದೇವತೆಗಳೆಲ್ಲರೂ ಮೋಹಗೊಳ್ಳುವಂತೆ ಅದ್ಭುತವಾದ ಶಿಲ್ಪವನ್ನು ರಚಿಸಿರುವನು. ಅದೊಂದು ಚಾತುರ್ಯದಿಂದಲೇ ಅವನು ನಿಮ್ಮೆಲ್ಲರನ್ನೂ ಮೋಹಗೊಳಿಸುವನು ಮತ್ತು ನಿಮ್ಮೆಲ್ಲರ ಪ್ರೀತಿಯನ್ನೂ ಸಂಪಾದಿಸುವನು.

೨೬. ಎಲೈ ದೇವೇಂದ್ರ ಹಿಂದೆ ನೀನು ಆ ವಿಶ್ವಕರ್ಮನನ್ನು ಮೋಹಗೊಳಿಸಿರುವೆ. ಅದನ್ನು ನೀನೀಗ ಮರೆತಿರುವೆ. ಆದರವನು ಹಿಮವಂತರ ಮನೆಯಲ್ಲಿ ತನ್ನ ಶಿಲ್ಪಚಾತುರ್ಯದಿಂದ ನಿನ್ನನ್ನು ಮೋಹಗೊಳಿಸಿ ಬೆರಗುಗೊಳಿಸುವನು ಇದು ನಿಜವು.

ಅಹಂ ವಿಮೋಹಿತಸ್ತೇನ ಪ್ರತಿರೂಪೇಣ ಭಾಸ್ವತಾ ।
ತಥಾ ವಿಷ್ಣುಃ ಕೃತಸ್ತೇನ ಬ್ರಹ್ಮಾ ಶಕ್ರೋಽಪಿ ತಾದೃಶಃ ॥ ೨೭ ॥

ಕಿಂ ಬಹೂಕ್ತೇನ ದೇವೇಶ ಸರ್ವೇ ದೇವಗಣಾಃ ಕೃತಾಃ ।
ಕೃತ್ರಿಮಾಶ್ಚಿತ್ರರೂಪೇಣ ನ ಕಿಂಚಿದವಶೇಷಿತಂ ॥ ೨೮ ॥

ವಿಮೋಹನಾರ್ಥಂ ಸರ್ವೇಷಾಂ ದೇವಾನಾಂ ಚ ವಿಶೇಷತಃ ।
ಕೃತಾ ಮಾಯಾ ಚಿತ್ರಮಯೀ ಪರಿಹಾಸವಿಕಾರಿಣೀ ॥ ೨೯ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತಸ್ಯ ದೇವೇಂದ್ರೋ ವಾಕ್ಯಮಬ್ರವೀತ್ ।
ವಿಷ್ಣುಂ ಪ್ರತಿ ತದಾ ಶೀಘ್ರಂ ಭಯಾಕುಲತನುರ್ಹರಿಂ ॥ ೩೦ ॥

॥ ದೇವೇಂದ್ರ ಉವಾಚ ॥

ದೇವದೇವ ರಮಾನಾಥ ತ್ವಷ್ಟಾ ಮಾಂ ನಿಹನಿಷ್ಯತಿ ।
ಪುತ್ರಶೋಕೇನ ತಪ್ತೋಽಸೌ ವ್ಯಾಜೇನಾನೇನ ನಾನ್ಯಥಾ ॥ ೩೧ ॥

---

೨೭. ಜೀವಂತವಾಗಿರುವಂತೆ ರಚಿಸಿರುವ ತೇಜಸ್ವಿಯಾದ ನನ್ನ ವಿಗ್ರಹವನ್ನು ನೋಡಿ ನಾನೇ ಮೋಹಗೊಂಡೆನು. ಅದರಂತೆ ವಿಷ್ಣು, ಬ್ರಹ್ಮ, ಇಂದ್ರ ಎಲ್ಲರನ್ನೂ ಕೃತ್ರಿಮವಾಗಿ ಅವನು ರಚಿಸಿರುವನು.

೨೮. ಹೆಚ್ಚು ಹೇಳಿ ಪ್ರಯೋಜನವೇನು? ಎಲ್ಲಾ ದೇವತೆಗಳನ್ನೂ ಅವನು ಕೃತ್ರಿಮವಾಗಿ ಚಿತ್ರರೂಪದಿಂದ ಜೀವಂತರಾಗಿರುವಂತೆ ನಿರ್ಮಿಸಿರುವನು. ಅವನು ಮಾಡದೆ ಬಿಟ್ಟಿರುವ ಕೆಲಸವೇನೂ ಇಲ್ಲ.

೨೯. ಎಲ್ಲರನ್ನೂ, ವಿಶೇಷವಾಗಿ ದೇವತೆಗಳನ್ನೂ ಮೋಹಗೊಳಿಸುವುದಕ್ಕಾಗಿ ಆಶ್ಚರ್ಯಕರವಾದ ಚಿತ್ರರೂಪವಾದ ಮಾಯೆಯನ್ನೂ ಆ ವಿಶ್ವಕರ್ಮನು ನಿರ್ಮಿಸಿರುವನು ಎನ್ನಲು,

೩೦. ನಾರದನ ಆ ಮಾತನ್ನು ಕೇಳಿ ದೇವೇಂದ್ರನು ಭಯಗೊಂಡು ಹರಿಯನ್ನು ಕುರಿತು,

೩೧. ದೇವೇಂದ್ರನು ಹೇಳಿದನು:—ದೇವದೇವನಾದ ಓ ಲಕ್ಷ್ಮೀಪತಿಯೇ, ವಿಶ್ವಕರ್ಮನು ನನ್ನನ್ನು ಹಿಂಸಿಸಬೇಕೆಂದಿರುವನು. ಅವನ ಪುತ್ರನನ್ನು ನಾನು

॥ ಬ್ರಹ್ಮೋವಾಚ ॥
ತಸ್ಯ ತದ್ವಚನಂ ಶ್ರುತ್ವಾ ದೇವದೇವೋ ಜನಾರ್ದನಃ ।
ಉವಾಚ ಪ್ರಹಸನ್ ವಾಕ್ಯಂ ಶಕ್ರಮಾಶ್ವಾಸಯಂಸ್ತದಾ ॥ ೩೨ ॥

॥ ವಿಷ್ಣುರುವಾಚ ॥
ನಿವಾತಕವಚೈಃ ಪೂರ್ವಂ ಮೋಹಿತೋಽಸಿ ಶಚೀಪತೇ ।
ಮಹಾವಿದ್ಯಾಬಲೇನೈವ ದಾನವೈಃ ಪೂರ್ವವೈರಿಭಿಃ ॥ ೩೩ ॥

ಪರ್ವತೋ ಹಿಮವಾನೇಷ ತಥಾನ್ಯೇಽಖಿಲಪರ್ವತಾಃ ।
ವಿಪಕ್ಷಾ ಕೃತಾಸ್ಸರ್ವೇ ಮಮ ವಾಕ್ಯಾಚ್ಚ ವಾಸವ ॥ ೩೪ ॥

ತೇಽನುಸ್ಮೃತ್ಯಾ ತು ವೈ ವೃಷ್ಟ್ವಾ ಮಾಯಯಾ ಗಿರಯೋ ಹ್ಯಮೀ ।
ಜೇತುಮಿಚ್ಛಂತಿ ಯೇ ಮೂಢಾ ನ ಭೇತವ್ಯಮುರಾವಪಿ ॥ ೩೫ ॥

ಈಶ್ವರೋ ನೋ ಽಹಿ ಸರ್ವೇಷಾಂ ಶಂಕರೋ ಭಕ್ತವತ್ಸಲಃ ।
ಸರ್ವಥಾ ಕುಶಲಂ ಶಕ್ರ ಕರಿಷ್ಯತಿ ನ ಸಂಶಯಃ ॥ ೩೬ ॥

---

ಹಿಂದೆ ಸಂಹರಿಸಿರುವೆನು. ಆ ಪುತ್ರಶೋಕದಿಂದ ದುಃಖಿತನಾದ ಅವನು ಈಗ ಶಿಲ್ಪ ವ್ಯಾಜದಿಂದ ನನ್ನನ್ನು ಹಿಂಸಿಸುವನು ಎಂದನು.

೩೨-೩೩. ಬ್ರಹ್ಮನು ಹೇಳಿದನು:—ಇಂದ್ರನ ಆ ಮಾತನ್ನು ಕೇಳಿ ದೇವ ದೇವನಾದ ಜನಾರ್ದನನು ನಗುತ್ತಾ ಇಂದ್ರನನ್ನು ಸಮಾಧಾನಗೊಳಿಸಿ ಎಲೈ ಇಂದ್ರ, ನಿನ್ನ ಹಿಂದಿನ ಶತ್ರುಗಳಾದ ನಿವಾತಕವಚರೆಂಬ ದೈತ್ಯರೂ ಸಹ ತಮ್ಮ ಮಾಯಾ ಬಲದಿಂದ ನಿನ್ನನ್ನು ಮೋಹಗೊಳಿಸಿದ್ದರು.

೩೪. ಪರ್ವತರಾಜನಾದ ಈ ಹಿಮವಂತನ ಮತ್ತು ಮಿಕ್ಕ ಎಲ್ಲಾ ಪರ್ವತಗಳ ರೆಕ್ಕೆಯನ್ನೂ ನೀನು ನನ್ನ ಮಾತಿನಂತೆ ಹಿಂದೆ ಕತ್ತರಿಸಿರುವೆ.

೩೫. ಆ ಗಿರಿಗಳೆಲ್ಲವೂ ಈಗ ಹಿಂದಿನ ನಿನ್ನ ವೈರವನ್ನು ಸ್ಮರಿಸಿ ನಿನ್ನನ್ನು ಜಯಿಸಲಿಚ್ಛಿಸಿರಬಹುದು. ಅದಕ್ಕೆ ನೀನು ಹೆದರಬೇಕಾದುದಿಲ್ಲ. ಆ ಗಿರಿಗಳಿಗೆ ತಿಳಿವಳಿಕೆಯಿಲ್ಲ.

೩೬. ಪರಮೇಶ್ವರನು ಭಕ್ತವತ್ಸಲನು. ಅವನು ಭಕ್ತರಾದ ನಮ್ಮ ಆಪತ್ತನ್ನು ಪರಿಹರಿಸಿ ಕ್ಷೇಮವನ್ನುಂಟುಮಾಡುವನು. ಇದು ನಿಶ್ಚಯವು ಎಂದನು.

॥ ಬ್ರಹ್ಮೋವಾಚ ॥

ಏವಂ ಸಂವದಮಾನಂ ತಂ ಶಕ್ರಂ ವಿಕೃತಮಾನಸಂ ।
ಹರಿಣೋಕ್ತಶ್ಚ ಗಿರಿಶೋ ಲೋಕಗತ್ಯಾ ವಚೋಽಬ್ರವೀತ್ ॥ ೩೭ ॥

॥ ಈಶ್ವರ ಉವಾಚ ॥

ಹೇ ಹರೇ ಹೇ ಸುರೇಶಾನ ಕಿಂ ಬ್ರೂಥೋಽದ್ಯ ಪರಸ್ಪರಂ ।
ಇತ್ಯುಕ್ತ್ವಾ ತೌ ಮಹೇಶಾನೋ ಮುನೇ ತ್ವಾಂ ಪ್ರತ್ಯುವಾಚ ಹ ॥ ೩೮ ॥

ಕಿಂ ನು ವಕ್ತಿ ಮಹಾಶೈಲೋ ಯಥಾರ್ಥಂ ವದ ನಾರದ ।
ವೃತ್ತಾಂತಂ ಸಕಲಂ ಬ್ರೂಹಿ ನ ಗೋಪ್ಯಂ ಕರ್ತುಮರ್ಹಸಿ ॥ ೩೯ ॥

ದದಾತಿ ವಾ ನೈವ ದದಾತಿ ಶೈಲಃ
ಸುತಾಂ ಸ್ವಕೀಯಾಂ ವದ ತಚ್ಚ ಶೀಘ್ರಂ ।
ಕಿಂ ತೇ ದೃಷ್ಟಂ ಕಿಂ ಕೃತಂ ತತ್ರ ಗತ್ವಾ
ಪ್ರೀತ್ಯಾ ಸರ್ವಂ ತದ್ವದಾಶ್ವದ್ಯ ತಾತ ॥ ೪೦ ॥

---

೩೭. ಹೀಗೆ ಹರಿಯೂ, ಭೀತನಾದ ಇಂದ್ರನೂ ಪರಸ್ಪರ ಮಾತನಾಡುತ್ತಿರುವುದನ್ನು ನೋಡಿ ಶಿವನು ಲೋಕಾಚಾರರೀತಿಯಾಗಿ ಇಂತೆಂದನು.

೩೮-೩೯. ಈಶ್ವರನು ಹೇಳಿದನು:—ಎಲೈ ಹರಿ, ಎಲೈ ದೇವೇಂದ್ರ, ನೀವೀರ್ವರೂ ಪರಸ್ಪರ ಏನು ಮಾತಾಡಿಕೊಳ್ಳುವಿರಿ? ಹೀಗೆಂದು ಕೇಳಿ ಬಳಿಕ ಆ ಪರಮೇಶ್ವರನು ನಿನ್ನನ್ನು ಕುರಿತು, ಎಲೈ ನಾರದ, ಹಿಮವಂತನು ಏನು ಹೇಳಿದನು? ನಿಜವಾದುದನ್ನು ಹೇಳು. ಅಲ್ಲಿ ನಡೆಯುತ್ತಿರುವ ಸಮಾಚಾರನೆಲ್ಲವನ್ನೂ ಹೇಳು. ಯಾವುದನ್ನೂ ಮರೆಮಾಚಬೇಡ.

೪೦. ಗಿರಿರಾಜನು ಮಗಳನ್ನು ಕೊಡಬೇಕೆಂದಿರುವನೋ, ಇಲ್ಲವೋ? ಅದನ್ನು ಬೇಗನೆ ಹೇಳು. ನೀನು ಅಲ್ಲಿಗೆ ಹೋಗಿ ಏನು ಮಾಡಿದೆ? ಏನೇನನ್ನು ನೋಡಿದೆ? ಅದೆಲ್ಲವನ್ನೂ ಬೇಗನೆ ಹೇಳು ಎಂದನು.

॥ ಬ್ರಹ್ಮೋವಾಚ ॥

ಇತ್ಯುಕ್ತಃ ಶಂಭುನಾ ತತ್ರ ಮುನೇ ತ್ವಂ ದೇವದರ್ಶನಃ ।
ಸರ್ವಂ ರಹಸ್ಯಮೋಚೋ ವೈ ಯದ್ದೃಷ್ಟಂ ತತ್ರ ಮಂಟಪೇ ॥ ೪೧ ॥

॥ ನಾರದ ಉವಾಚ ॥

ದೇವದೇವ ಮಹಾದೇವ ಶೃಣು ಮದ್ವಚನಂ ಶುಭಂ ।
ನಾಸ್ತಿ ವಿಘ್ನಂ ಭಯಂ ನಾಥ ವಿವಾಹೇ ಕಿಂಚಿದೇವ ಹಿ ॥ ೪೨ ॥

ಅವಶ್ಯಮೇವ ಶೈಲೇಶಸ್ತುಭ್ಯಂ ದಾಸ್ಯತಿ ಕನ್ಯಕಾಂ ।
ತ್ವಾಮಾನಯಿತುಮಾಯಾತಾ ಇಮೇ ಶೈಲಾ ನ ಸಂಶಯಃ ॥ ೪೩ ॥

ಕಿಂತು ಪ್ಯಮರಮೋಹಾರ್ಥಂ ಮಾಯಾ ವಿರಚಿತಾದ್ಭುತಾ ।
ಕುತೂಹಲಾರ್ಥಂ ಸರ್ವಜ್ಞ ನ ಕಶ್ಚಿದ್ವಿಘ್ನಸಂಭವಃ ॥ ೪೪ ॥

ವಿಚಿತ್ರಂ ಮಂಟಪಂ ಗೇಹೇsಕಾರ್ಷೀತ್ತಸ್ಯ ತದಾಜ್ಞಯಾ ।
ವಿಶ್ವಕರ್ಮಾ ಮಹಾಮಾಯೀ ನಾನಾಶ್ಚರ್ಯಮಯಂ ವಿಭೋ ॥ ೪೫ ॥

---

೪೧. ಬ್ರಹ್ಮನು ಹೇಳಿದನು:—ಹೀಗೆ ಪರಮೇಶ್ವರನು ಕೇಳಲು, ದಿವ್ಯ ದೃಷ್ಟಿಯುಳ್ಳ ನೀನು ಆಗ ಹಿಮವಂತನ ಅರಮನೆಯಲ್ಲಿ ನೋಡಿದ ಎಲ್ಲಾ ರಹಸ್ಯ ಗಳನ್ನೂ ವಿವರಿಸಿದೆ.

೪೨. ದೇವದೇವನಾದ ಓ ಮಹಾದೇವನೆ, ನನ್ನ ಮಾತನ್ನು ಕೇಳು. ನಿನ್ನ ಮದುವೆಗೆ ಯಾವ ತೊಂದರೆಯೂ ಭಯವೂ ಇಲ್ಲ.

೪೩. ಹಿಮವಂತನು ಖಂಡಿತವಾಗಿ ನಿನಗೆ ಮಗಳನ್ನು ಕೊಡುವನು. ನಿನ್ನನ್ನು ಎದುರುಗೊಂಡು ಕರೆದುಕೊಂಡುಹೋಗುವುದಕ್ಕಾಗಿಯೇ ಈ ಪರ್ವತಗಳು ಬಂದಿರುವುವು.

೪೪. ಆದರೆ ಅಲ್ಲಿ ವಿಶ್ವಕರ್ಮನು ದೇವತೆಗಳನ್ನು ಮೋಹಗೊಳಿಸಲು ಮಹಾ ಮಾಯೆಯನ್ನು ಕುತೂಹಲಕ್ಕಾಗಿ ರಚಿಸಿರುವನು. ಆದರಿಂದ ಮದುವೆಗೆ ಯಾವ ವಿಘ್ನವೂ ಇಲ್ಲ.

೪೫. ಮಾಯಾವಿದ್ಯೆಯನ್ನು ಬಲ್ಲ ವಿಶ್ವಕರ್ಮನು ಆ ಹಿಮವಂತನ ಅರಮನೆ ಯಲ್ಲಿ ಅವನಪ್ಪಣೆಯಂತೆ ತುಂಬಾ ಆಶ್ಚರ್ಯಕರವಾದ ಒಂದು ವಿವಾಹಮಂಟಪವನ್ನು ರಚಿಸಿರುವನು.

ಸರ್ವದೇವಸಮಾಜಶ್ಚ ಕೃತಸ್ತತ್ರ ವಿಮೋಹನಃ ।
ತಂ ದೃಷ್ಟ್ವಾ ವಿಸ್ಮಯಂ ಪ್ರಾಪ್ತೋಽಹಂ ತನ್ಮಾಯಾವಿಮೋಹಿತಃ ॥ ೪೬ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ತದ್ವಚಸ್ತಾತ ಲೋಕಾಚಾರಕರಃ ಪ್ರಭುಃ ।
ಹಯಾನ್‌ದೀನ್ ಪ್ರಹರ್ಸ ಶಂಭುರುವಾಚ ಸಕಲಾ ಸುರಾ ॥ ೪೭ ॥

॥ ಈಶ್ವರ ಉವಾಚ ॥

ಕನ್ಯಾಂ ದಾಸ್ಯತಿ ಚೇನ್ಮಹ್ಯಂ ಪರ್ವತೋ ಹಿ ಹಿಮಾಚಲಃ ।
ಮಾಯಾಯಾ ಮಮ ಕಿಂ ಕಾರ್ಯಂ ವದ ವಿಷ್ಣೋ ಯಥಾತಥಂ ॥ ೪೮ ॥

ಹೇ ಬ್ರಹ್ಮ ಹೇ ಶಕ್ರ ಮುನಯಸ್ಸುರಾ ಬ್ರೂತ ಯಥಾರ್ಥತಃ ।
ಮಾಯಯಾ ಮಮ ಕಿಂ ಕಾರ್ಯಂ ಕನ್ಯಾಂ ದಾಸ್ಯತಿ ಚೇದ್ಗಿರಿಃ ॥ ೪೯ ॥

ಕೇನಾಪ್ಯುಪಾಯೇನ ಫಲಂ ಹಿ ಸಾಧ್ಯ-
ಮಿತ್ಯುಚ್ಯತೇ ಪಂಡಿತೈರ್ನ್ಯಾಯವಿದ್ಭಿಃ ।
ತಸ್ಮಾತ್ಸರ್ವೈರ್ಗರ್ಗವ್ಯತಾಂ ಶೀಘ್ರಮೇವ
ಕಾರ್ಯಾರ್ಥಿಭಿರ್ವಿಷ್ಣುಪುರೋಗಮೈಶ್ಚ ॥ ೫೦ ॥

---

೪೬. ನಿಜವಾದ ದೇವತೆಗಳೇ ಎಂದು ಮೋಹಗೊಳ್ಳುವಂತೆ ವಿಶ್ವಕರ್ಮನು ಎಲ್ಲಾ ದೇವತೆಗಳನ್ನೂ ಅಲ್ಲಿ ಕೃತಕವಾಗಿ ರಚಿಸಿರುವನು. ಅದನ್ನು ನೋಡಿ ನಾನೂ ಸಹ ಆ ಮಾಯೆಯಿಂದ ಮೋಹಿತನಾಗಿ ಆಶ್ಚರ್ಯಗೊಂಡೆನು ಎಂದನು.

೪೭. ಬ್ರಹ್ಮನು ಹೇಳಿದನು:—ನಾರದನ ಈ ಪ್ರಕಾರವಾದ ಮಾತನ್ನು ಕೇಳಿ ಲೋಕವ್ಯವಹಾರವನ್ನನುಸರಿಸಿ ನಡೆಯುವ ಶಂಕರನು ನಗುತ್ತಾ, ಹರಿಯೇ ಮೊದಲಾದ ದೇವತೆಗಳನ್ನು ಕುರಿತು,

೪೮. ಎಲೈ ವಿಷ್ಣು, ಪರ್ವತರಾಜನು ನನಗೆ ತನ್ನ ಪುತ್ರಿಯನ್ನು ಮದುವೆ ಮಾಡಿಕೊಡುವನಾದರೆ ಮಾಯೆಯಿಂದ ನನಗೇನು ಆಗಬೇಕು? ನೀನೇ ಹೇಳು.

೪೯. ಎಲೈ ಬ್ರಹ್ಮ, ಇಂದ್ರ, ಮುನಿಗಳೇ, ಮತ್ತು ಮಿಕ್ಕ ದೇವತೆಗಳೇ, ನಿಜಾಂಶವನ್ನು ಹೇಳಿರಿ. ಹಿಮವಂತನು ನನಗೆ ಕನ್ಯೆಯನ್ನು ಕೊಡುವನಾದರೆ ಆ ಮಾಯೆಯನ್ನು ಕಟ್ಟಿಕೊಂಡು ನಮಗೆ ಆಗಬೇಕಾದುದೇನು?

೫೦. ಯಾವುದಾದರೂ ಉಪಾಯದಿಂದ ಕಾರ್ಯವನ್ನು ಸಾಧಿಸಬೇಕು

॥ ಬ್ರಹ್ಮೋವಾಚ ॥
ಏವಂ ಸಂವದಮಾನೋಽಸೌ ದೇವೈಶ್ಶಂಭುರಭೂತ್ತದಾ ।
ಕೃತಃ ಸ್ಮರಣೇವ ವಶೀ ವಶಂ ವಾ ಪ್ರಾಕೃತೋ ನರಃ ॥ ೫೧ ॥

ಅಥ ಶಂಭ್ವಾಜ್ಞಯಾ ಸರ್ವೇ ವಿಷ್ಣ್ವಾದ್ಯಾ ನಿರ್ಜರಾಸ್ತದಾ ।
ಋಷಯಶ್ಚ ಮಹಾತ್ಮಾನೋ ಯಯುರ್ಗೇಹಂ ಭ್ರಮಾಪಹಂ ॥ ೫೨ ॥

ಪುರಸ್ಕೃತ್ಯ ಮುನೇ ತ್ವಾಂ ಚ ಪರ್ವತಾಂಸ್ತಾರ್ ಸವಿಸ್ಮಯಾಃ ।
ಹಿಮಾದ್ರೇಶ್ಚ ತದಾ ಜಗ್ಮುರ್ಮಂದಿರಂ ಪರಮಾದ್ಭುತಂ ॥ ೫೩ ॥

ಅಥ ವಿಷ್ಣ್ವಾದಿಸಂಯುಕ್ತೋ ಮುದಿತೈಃ ಸ್ವಬಲೈರ್ಯುತಃ ।
ಆಜಗಾಮೋಪಹೈಮಾಗಪುರಂ ಪ್ರಮುದಿತೋ ಹರಃ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಏಕಚತ್ವಾರಿಂಶೋಽಧ್ಯಾಯಃ

---

ಎಂದು ನ್ಯಾಯವನ್ನು ಬಲ್ಲ ಪಂಡಿತರು ಹೇಳುವರು. ಆದುದರಿಂದ ಹರಿ ಮೊದಲಾದ ನೀವೆಲ್ಲರೂ ನಮ್ಮ ಕಾರ್ಯವನ್ನು ಸಾಧಿಸಲು ಜಾಗ್ರತೆ ಮುಂದೆ ತೆರಳಿರಿ ಎಂದನು.

೫೧. ಬ್ರಹ್ಮನು ಹೇಳಿದನು:—ಎಲೈ ನಾರದ, ಆ ಶಂಕರನು ಸಾಮಾನ್ಯ ಮಾನವನಂತೆ ಹೀಗೆ ಮಾತನಾಡುತ್ತಾ ಮನ್ಮಥನಿಗೆ ತಾನು ವಶನಾದಂತೆ ಪ್ರಕಟಿಸಿದನು. ಎಂದರೆ ಕಾಮಪರವಶನಾಗಿ ಆತುರಪಟ್ಟವನಂತೆ ತೋರ್ಪಡಿಸಿದನು.

೫೨-೫೩. ಬಳಿಕ ಶಂಕರನಪ್ಪಣೆಯಂತೆ ಹರಿಯೇ ಮೊದಲಾದ ಎಲ್ಲಾ ದೇವತೆಗಳೂ ಮಹಾತ್ಮರಾದ ಋಷಿಗಳೂ ಸಹ ಹಿಮವಂತನ ಸಂಬಂಧಿಕರಾದ ಆ ಪರ್ವತೋತ್ತಮರನ್ನು ಮುಂದುಮಾಡಿಕೊಂಡು ಮಹಾ ಅದ್ಭುತವಾದ ಆ ಹಿಮವಂತನ ಅರಮನೆಗೆ ಹೊರಟರು.

೫೪. ಆಮೇಲೆ ಹರನು, ಹರಿಯೇ ಮೊದಲಾದವರೊಡನೆಯೂ ತನ್ನ ಪರಿವಾರದೊಡನೆಯೂ ಹಿಮವಂತನ ರಾಜಧಾನಿಯ ಸಮೀಪಕ್ಕೆ ಬಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ದ್ವಿಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥಾಽಽಕರ್ಣ್ಯ ಗಿರೀಶಶ್ಚ ನಿಜಪುರ್ಯುಪಕಂಠತಃ ।
ಪ್ರಾಪ್ತಮೀಶಂ ಸರ್ವಗಂ ವೈ ಮುಮುದೇಽತಿ ಹಿಮಾಲಯಃ ॥ ೧ ॥

ಅಥ ಸಂಭೃತಸಂಭಾರಸ್ಸಂಭಾಷಾಂ ಕರ್ತುಮೀಶ್ವರಂ ।
ಶೈಲಾರ್ನ್ ಪ್ರಸ್ಥಾಪಯಾಮಾಸ ಬ್ರಾಹ್ಮಣಾನಪಿ ಸರ್ವಶಃ ॥ ೨ ॥

ಸ್ವಯಂ ಜಗಾಮ ಸದ್ಭಕ್ತ್ಯಾ ಪ್ರಾಣೇಪ್ಸುಂ ದ್ರಷ್ಟುಮೀಶ್ವರಂ ।
ಭಕ್ತ್ಯುದ್ರುತಮನಾಃ ಶೈಲಃ ಪ್ರಶಂಸರ್ನ್ ಸ್ವವಿಧಿಂ ಮುದಾ ॥ ೩ ॥

---

### ನಲವತ್ತೆರಡನೆಯ ಅಧ್ಯಾಯವು.

೧-೨. ಬ್ರಹ್ಮನು ಹೇಳಿದನು:—ಎಲೈ ನಾರದ, ತನ್ನ ನಗರಸಮೀಪಕ್ಕೆ ಶಿವನು ಪರಿವಾರದೊಡನೆ ಬಂದಿರುವುದನ್ನು ಹಿಮವಂತನು ಕೇಳಿ ತುಂಬಾ ಹರ್ಷಗೊಂಡು ಅವನನ್ನೆದುರುಗೊಳ್ಳಲು ತನ್ನ ಬಂಧುಗಳಾದ ಶೈಲಗಳನ್ನೂ, ಬ್ರಾಹ್ಮಣರನ್ನೂ ಮಂಗಳವಸ್ತುಗಳೊಡನೆ ಕಳುಹಿಸಿದನು.

೩. ತನಗೆ ಇಂತಹ ಅದೃಷ್ಟವು ಲಭಿಸಿತಲ್ಲಾ ಎಂದು ಮನದಲ್ಲೇ ಹಿಗ್ಗಿ, ಆ ಹಿಮವಂತನು ಮದುವಣಿಗನಾದ ಆ ಈಶ್ವರನನ್ನು ನೋಡಲು ಭಕ್ತಿಯಿಂದ ತೆರಳಿದನು.

ದೇವಸೇನಾಂ ತದಾ ದೃಷ್ಟ್ವಾ ಹಿಮವಾನ್ ವಿಸ್ಮಯಂ ಗತಃ ।
ಜಗಾಮ ಸಂಮುಖಸ್ತತ್ರ ಧನ್ಯೋಽಹಮಿತಿ ಚಿಂತಯನ್ ॥ ೪ ॥

ದೇವಾ ಹಿ ತದ್ಬಲಂ ದೃಷ್ಟ್ವಾ ವಿಸ್ಮಯಂ ಪರಮಂ ಗತಾಃ ।
ಆನಂದಂ ಪರಮಂ ಪ್ರಾಪುರ್ದೇವಾಶ್ಚ ಗಿರಯಸ್ತಥಾ ॥ ೫ ॥

ಪರ್ವತಾನಾಂ ಮಹಾಸೇನಾ ದೇವಾನಾಂ ಚ ಮಹಾಮುನೇ ।
ಮಿಲಿತ್ವಾ ವಿರರಾಜೇವ ಪೂರ್ವಪಶ್ಚಿಮಸಾಗರೌ ॥ ೬ ॥

ಪರಸ್ಪರಂ ಸಮ್ಮಿಲಿತ್ವಾ ದೇವಾಶ್ಚ ಪರ್ವತಾಸ್ತಥಾ ।
ಕೃತಕೃತ್ಯಂ ತಥಾತ್ಮಾನಂ ಮೇನಿರೇ ಪರಯಾ ಮುದಾ ॥ ೭ ॥

ಅಥೇಶ್ವರಂ ಪುರೋ ದೃಷ್ಟ್ವಾ ಪ್ರಣನಾಮ ಹಿಮಾಲಯಃ ।
ಸರ್ವೇ ಪ್ರಣೇಮುರ್ಗಿರಯೋ ಬ್ರಾಹ್ಮಣಾಶ್ಚ ಸದಾಶಿವಂ ॥ ೮ ॥

---

೪. ಶಿವನ ಮುಂದೆ ಬರುತ್ತಲಿರುವ ದೇವಸೇನೆಯನ್ನು ನೋಡಿ ಆಶ್ಚರ್ಯ ಗೊಂಡು ತಾನು ಧನ್ಯನಾದೆನೆಂದು ತಿಳಿದುಕೊಂಡನು.

೫. ದೇವತೆಗಳೂ ಸಹ ಹಿಮವಂತನ ಪರಿವಾರವನ್ನು ನೋಡಿ ತುಂಬಾ ಆಶ್ಚರ್ಯಗೊಂಡರು. ಆಗ ದೇವತೆಗಳೂ ಗಿರಿಗಳೂ ಸಹ ತುಂಬಾ ಹರ್ಷ ಗೊಂಡರು.

೬. ಪರ್ವತಗಳ ಸೇನೆ ಮತ್ತು ದೇವತೆಗಳ ಸೇನೆ ಇವುಗಳು ಪರಸ್ಪರಸೇರಿ ರಲು ಪೂರ್ವಪಶ್ಚಿಮಸಾಗರಗಳೆರಡೂ ಸೇರಿದಂತೆ ಶೋಭಿಸುತ್ತಲಿದ್ದವು.

೭. ದೇವತೆಗಳೂ ಗಿರಿಗಳೂ ಸಹ ಪರಸ್ಪರ ಭೇಟಿಯಾಗಿ ಹರ್ಷದಿಂದ ತಾವು ಕೃತಕೃತ್ಯರಾದವೆಂದುಕೊಂಡರು.

೮. ಆಮೇಲೆ ಎದುರಿನಲ್ಲಿ ಬರುತ್ತಲಿರುವ ಸದಾಶಿವನನ್ನು ನೋಡಿ ಹಿಮಾ ಲಯನು ಭಕ್ತಿಯಿಂದ ನಮಸ್ಕರಿಸಿದನು. ಮಿಕ್ಕ ಎಲ್ಲಾ ಗಿರಿಗಳೂ ಬ್ರಾಹ್ಮಣರೂ ನಮಸ್ಕರಿಸಿದರು.

ವೃಷಭಸ್ಥಂ ಪ್ರಸನ್ನಾಸ್ಯಂ ನಾನಾಭರಣಭೂಷಿತಂ ।
ದಿವ್ಯಾವಯುಲಾವಣ್ಯಪ್ರಕಾಶಿತದಿಗಂತರಂ ॥ ೯ ॥

ಸುಸೂಕ್ಷ್ಮಾಹತಸತ್ಪಟ್ಟವಸ್ತ್ರಶೋಭಿತವಿಗ್ರಹಂ ।
ಸದ್ರತ್ನವಿಲಸನ್ಮೌಳಿಂ ವಿಹಸಂತಂ ಶುಚಿಪ್ರಭಂ ॥ ೧೦ ॥

ಭೂಷಾಭೂತಾಹಿಯುಕ್ತಾಂಗಮದ್ಭುತಾವಯವಪ್ರಭಂ ।
ದಿವ್ಯದ್ಯುತಿಂ ಸುರೇಶೈಶ್ಚ ಸೇವಿತಂ ಕರಚಾಮರೈಃ ॥ ೧೧ ॥

ದಕ್ಷಸ್ಥಿತಾಚ್ಯುತಂ ವಾಮಭಾಗಸ್ಥಿತವಿಭುಂ ಪ್ರಭುಂ ।
ಪೃಷ್ಠಸ್ಥಿತಹರಿಂ ಪೃಷ್ಠಪಾರ್ಶ್ವಸ್ಥಿತಸುರಾದಿಕಂ ॥ ೧೨ ॥

ನಾನಾವಿಧಿಸುರಾದ್ಯೈಶ್ಚ ಸಂಸ್ತುತಂ ಲೋಕಶಂಕರಂ ।
ಸ್ವಹೇಲಾತ್ತತನುಂ ಬ್ರಹ್ಮ ಸರ್ವೇಶಂ ವರದಾಯಕಂ ॥ ೧೩ ॥

---

೯. ಆ ಶಿವನು ನಂದಿಯನ್ನೇರಿದ್ದನು. ಪ್ರಸನ್ನಮುಖ ಮುದ್ರೆಯಿಂದ ಒಪ್ಪುತ್ತಿದ್ದನು. ಅನೇಕ ಆಭರಣಗಳನ್ನಲಂಕರಿಸಿಕೊಂಡಿದ್ದನು. ತೇಜಸ್ವಿಯಾದ ತನ್ನ ಅಂಗಗಳ ಪ್ರಕಾಶದಿಂದ ದಿಕ್ಕುಗಳನ್ನು ಬೆಳಗುತ್ತಿದ್ದನು.

೧೦. ಸೂಕ್ಷ್ಮವೂ ನಯವೂ ಆದ ರೇಶಿಮೆ ಬಟ್ಟೆಯನ್ನುಟ್ಟಿದ್ದನು. ಕಿರೀಟದಲ್ಲಿ ಸುಂದರ ರತ್ನವನ್ನು ಧರಿಸಿದ್ದನು. ಮಂದಹಾಸವನ್ನು ಬೀರುತ್ತಲಿದ್ದನು.

೧೧. ಅವನು ಸುತ್ತಿಕೊಂಡಿದ್ದ ಸರ್ಪಗಳೆಲ್ಲವೂ ಆಭರಣಗಳಾಗಿದ್ದುವು. ಅವನ ಶರೀರಕಾಂತಿಯು ಅದ್ಭುತವಾಗಿದ್ದಿತು. ದೇವನಾಯಕರು ಚಾಮರಗಳನ್ನು ಹಿಡಿದು ಅವನಿಗೆ ಬೀಸುತ್ತಲಿದ್ದರು.

೧೨. ಆ ಶಿವನ ಬಲಭಾಗದಲ್ಲಿ ವಿಷ್ಣುವು ಇದ್ದನು. ಎಡಭಾಗದಲ್ಲಿ ಬ್ರಹ್ಮನಿದ್ದನು. ಹಿಂಭಾಗದಲ್ಲಿ ಇಂದ್ರನಿದ್ದನು. ಇಂದ್ರನ ಹಿಂದೆ ಮಿಕ್ಕ ದೇವತೆಗಳು ಮೊದಲಾದವರಿದ್ದರು.

೧೩. ಹರಿ, ಬ್ರಹ್ಮ ಮೊದಲಾದವರು ಅವನನ್ನು ಅನೇಕ ವಿಧವಾಗಿ ಸ್ತುತಿಸುತ್ತಿದ್ದರು. ಆ ಶಿವನು ಲೋಕಕ್ಕೆ ಸುಖವನ್ನುಂಟುಮಾಡುವವನು. ನಿರ್ಗುಣನಾದ

ಸಗುಣಂ ನಿರ್ಗುಣಂ ಚಾಪಿ ಭಕ್ತಾಧೀನಂ ಕೃಪಾಕರಂ ।
ಪ್ರಕೃತೇಃ ಪುರುಷಸ್ಯಾಪಿ ಪರಂ ಸಚ್ಚಿತ್ಸುಖಾತ್ಮಕಂ ॥ ೧೪ ॥

ಪ್ರಭೋರ್ದಕ್ಷಿಣಭಾಗೇ ತು ದದರ್ಶ ಹರಿಮುಚ್ಯುತಂ ।
ವಿನತಾತನಯಾರೂಢಂ ನಾನಾಭೂಷಣಭೂಷಿತಂ ॥ ೧೫ ॥

ಪ್ರಭೋಶ್ಚ ವಾಮಭಾಗೇ ತು ಮುನೇ ಮಾಂ ಸಂದದರ್ಶ ಹ ।
ಚತುರ್ಮುಖಂ ಮಹಾಶೋಭಂ ಸ್ವಪರೀವಾರಸಂಯುತಂ ॥ ೧೬ ॥

ಏತೌ ಸುರೇಶ್ವರೌ ದೃಷ್ಟ್ವಾ ಶಿವಸ್ಯಾತಿಪ್ರಿಯೌ ಸದಾ ।
ಪ್ರಣನಾಮ ಗಿರೀಶಶ್ಚ ಸಪರೀವಾರ ಆದರಾತ್ ॥ ೧೭ ॥

---

ಪರಬ್ರಹ್ಮನು. ಆದರೂ ತನ್ನ ಲೀಲೆಯಿಂದಲೇ ಭಕ್ತಾನುಗ್ರಹಕ್ಕಾಗಿ ಶರೀರವನ್ನು ಧರಿಸುವವನು ಜಗದೊಡೆಯನು. ಸರ್ವರಿಗೂ ಅವರವರ ಇಷ್ಟಾರ್ಥಗಳನ್ನು ಕರುಣಿಸುವವನು.

೧೪. ಆ ಮಹೇಶ್ವರನು ವಸ್ತುತಃ ನಿರ್ಗುಣನು. ತನ್ನ ಮಾಯೆಯಿಂದ ಸಗುಣ (ಈಶ್ವರ) ಸ್ವರೂಪನಾಗುವನು. ಈಶ್ವರರೂಪನಾದ ಅವನು ಭಕ್ತಾಧೀನನು. ದಯಾಮಯನು. ಪ್ರಕೃತಿ ಮತ್ತು ಪುರುಷರಿಗಿಂತಲೂ ಅವನು ಭಿನ್ನನು, ಸರ್ವಶ್ರೇಷ್ಠನು, ಜ್ಞಾನಸ್ವರೂಪನು, ಆನಂದಸ್ವರೂಪನು, ಪ್ರಕಾಶಸ್ವರೂಪನು.

೧೫. ಶಂಕರನ ಬಲಭಾಗದಲ್ಲಿ ಹರಿಯಿದ್ದನು. ಆ ಹರಿಯು ಅನೇಕ ಆಭರಣಗಳನ್ನು ಧರಿಸಿ ಗರುಡನ ಮೇಲೆ ಕುಳಿತಿದ್ದನು.

೧೬. ಎಡಭಾಗದಲ್ಲಿ ನಾಲ್ಕು ಮುಖಗಳುಳ್ಳ ನಾನು (ಬ್ರಹ್ಮನು) ನನ್ನ ಪರಿವಾರದೊಡನೆ ಇದ್ದೆನು. ಈ ರೀತಿ ಇರುವ ನಮ್ಮಿಬ್ಬರನ್ನೂ ಹಿಮವಂತನು ನೋಡಿದನು.

೧೭. ದೇವನಾಯಕರೂ, ಶಿವನಿಗೆ ಮಹಾಪ್ರಿಯರೂ ಆದ ಆ ಹರಿಬ್ರಹ್ಮರನ್ನು ನೋಡಿ ಗಿರಿರಾಜನು ತನ್ನ ಪರಿವಾರದೊಡನೆ ಅವರನ್ನು ಭಕ್ತಿಯಿಂದ ನಮಸ್ಕರಿಸಿದನು.

ತಥಾ ಶಿವಸ್ಯ ಪೃಷ್ಠೇ ಚ ಪಾರ್ಶ್ವಯೋಸ್ಸುವಿರಾಜಿತಾ೯ ।
ದೇವಾದೀ೯ ಪ್ರಣನಾಮಾಸೌ ದೃಷ್ಟ್ವಾ ಗಿರಿವರೇಶ್ವರಃ ॥ ೧೮ ॥

ಶಿವಾಜ್ಞಯಾ ಪುರೋ ಭೂತ್ವಾ ಜಗಾಮ ಸ್ವಪುರಂ ಗಿರಿಃ ।
ಶೇಷಹರ್ಯಾತ್ಮಭೂಶ್ಶೀಘ್ರಂ ಮುನಿಭಿರ್ನಿರ್ಜರಾದಿಭಿಃ ॥ ೧೯ ॥

ಸರ್ವೇ ಮುನಿಸುರಾದ್ಯಾಶ್ಚ ಗಚ್ಛಂತಃ ಪ್ರಭುಣಾ ಸಹ ।
ಗಿರೇಃ ಪುರಂ ಸಮುದಿತಾಃ ಶಶಂಸುರ್ಬಹು ನಾರದ ॥ ೨೦ ॥

ರಚಿತೇ ಶಿಖರೇ ರಮ್ಯೇ ಸಂಸ್ಥಾಪ್ಯ ದೇವತಾದಿಕಂ ।
ಜಗಾಮ ಹಿಮವಾಂಸ್ತತ್ರ ಯತ್ರಾಸ್ತಿ ವಿಧಿವೇದಿಕಾ ॥ ೨೧ ॥

ಕಾರಯಿತ್ವಾ ವಿಶೇಷೇಣ ಚತುಷ್ಕಂ ತೋರಣೈರ್ಯುತಂ ।
ಸ್ನಾನದಾನಾದಿಕಂ ಕೃತ್ವಾ ಪರೀಕ್ಷಾಮಕರೋತ್ತದಾ ॥ ೨೨ ॥

---

೧೮. ಹಾಗೆಯೇ ಶಿವನ ಎಡಬಲಗಳಲ್ಲಿಯೂ, ಹಿಂಭಾಗದಲ್ಲಿಯೂ ಇರುವಂತಹ ಮಿಕ್ಕ ದೇವತೆಗಳೇ ಮೊದಲಾದವರನ್ನೂ ಭಕ್ತಿಯಿಂದ ನಮಸ್ಕರಿಸಿದನು.

೧೯. ಬಳಿಕ ಆ ಹಿಮವಂತನು ಶಿವನ ಅಪ್ಪಣೆಯಂತೆ ಉತ್ಸವದ ಎದುರಿನಲ್ಲಿ ಹೋಗುತ್ತಾ ಹರಿ ಬ್ರಹ್ಮ ಮುನಿಗಳು ಮತ್ತು ದೇವತೆಗಳು ಮೊದಲಾದವರೊಡನೆ ಹೊರಟು ತನ್ನ ನಗರಾಭಿಮುಖನಾದನು.

೨೦. ಮುನಿಗಳು ದೇವತೆಗಳು ಮೊದಲಾದವರು ಪರಮೇಶ್ವರನೊಡನೆ ಹೋಗುತ್ತಿರುವಾಗ ಹಿಮವಂತನ ರಾಜಧಾನಿಯ ಸೌಂದರ್ಯವನ್ನು ನೋಡಿ ತುಂಬಾ ಆಶ್ಚರಿಗೊಂಡರು.

೨೧. ಬಳಿಕ ಹಿಮವಂತನು ತಾನು ಕಲ್ಪಿಸಿದ ಸುಂದರವಾದ ಮಂದಿರದಲ್ಲಿ ದೇವತೆಗಳು ಮೊದಲಾದವರನ್ನು ಇಳಿಸಿ, ತಾನು ಬ್ರಹ್ಮವೇದಿಕೆಯಿರುವಲ್ಲಿಗೆ ಬಂದನು.

೨೨. ಸುಂದರವಾದ ಚೌಕವೊಂದನ್ನು ನಿರ್ಮಿಸಿ ಅದನ್ನು ತೋರಣಗಳಿಂದ ಅಲಂಕರಿಸಿ, ಸ್ನಾನದಾನಾದಿಗಳನ್ನು ಮಾಡಿ ವಿವಾಹಮುಹೂರ್ತದ ಪರೀಕ್ಷೆಯನ್ನು ಮಾಡಿಸಿದನು.

ಸ್ವಪುತ್ರಾನ್ ಪ್ರೇಷಯಾಮಾಸ ಶಿವಸ್ಯ ನಿಕಟೇ ತಥಾ ।
ಹಿಮೋ ವಿಷ್ಣ್ವಾದಿಸಂಪೂರ್ಣವರ್ಗಯುಕ್ತಸ್ಯ ಶೈಲರಾಟ್ ॥ ೨೩ ॥

ಕರ್ತುಮೈಚ್ಛದ್ವರಾಚಾರಂ ಮಹೋತ್ಸವಪುರಸ್ಸರಂ ।
ಮಹಾಹರ್ಷಯುತಸ್ಸರ್ವಬಂಧುಯುಗ್ಧಿಮರಾಟ್ತದಾ ॥ ೨೪ ॥

ಅಥ ತೇ ಗಿರಿಪುತ್ರಾಶ್ಚ ತತ್ರ ಗತ್ವಾ ಪ್ರಣಮ್ಯ ತಂ ।
ಸಸ್ವವರ್ಗಂ ಪ್ರಾರ್ಥನಾಂ ತಾಮೂಚುಶ್ಶೈಲೇಶ್ವರಸ್ಯ ಹಿ ॥ ೨೫ ॥

ತತಸ್ತೇ ಸ್ವಾಲಯಂ ಜಗ್ಮುಶ್ಶೈಲಪುತ್ರಾಸ್ತದಾಜ್ಞಯಾ ।
ಶೈಲರಾಜಾಯ ಸಂಚಖ್ಯುಸ್ತೇ ಚಾಯಾಂತೀತಿ ಹರ್ಷಿತಾಃ ॥ ೨೬ ॥

ಅಥ ದೇವಾಃ ಪ್ರಾರ್ಥನಾಂ ತಾಂ ಗಿರೇಃ ಶ್ರುತ್ವಾತಿಹರ್ಷಿತಾಃ ।
ಮುನೇ ವಿಷ್ಣ್ವಾದಯಸ್ಸರ್ವೇ ಸೇಶ್ವರಾ ಮುಮುದುರ್ಭೃಶಂ ॥ ೨೭ ॥

---

೨೩-೨೪. ನಂತರ ಹಿಮವಂತನು ವಿಷ್ಣು ಮೊದಲಾದವರೊಡನಿರುವ ಶಿವನ ಬಳಿಗೆ ತನ್ನ ಮಕ್ಕಳನ್ನು ಕಳುಹಿಸಿ ತಾನು ಬಂಧುಗಳಿಂದ ಕೂಡಿ ಮಹೋತ್ಸವ ದೊಡನೆ ವರಪೂಜೆಯನ್ನು ಮಾಡಲು ಸಿದ್ಧನಾದನು.

೨೫. ಶಿವನ ಬಳಿಗೆ ತೆರಳಿದ ಹಿಮವಂತನ ಪುತ್ರರು ಶಿವನನ್ನು ನಮಸ್ಕರಿಸಿ ಬಂಧುಗಳೊಡನೆ ಹಿಮವಂತನು ಮಾಡುವ ವರಪೂಜೆಗೆ ಬರಬೇಕೆಂದು ಪ್ರಾರ್ಥಿಸಿದರು.

೨೬. ಆಮೇಲೆ ಆ ಗಿರಿಪುತ್ರರು ಶಿವನಪ್ಪಣೆಯನ್ನು ಪಡೆದು ತಮ್ಮ ಮನೆಗೆ ಬಂದು ವರನ ದಿಬ್ಬಣವು ಬರುತ್ತಲಿದೆಯೆಂದು ಸಂತಸದಿಂದ ಹಿಮವಂತನಿಗೆ ತಿಳಿಸಿದರು.

೨೭. ಆಗ ಹರಿಯೇ ಮೊದಲಾದ ದೇವತೆಗಳೂ ಪರಮೇಶ್ವರನೂ ಸಹ ಹಿಮವಂತನು ಕಳುಹಿದ ಪ್ರಾರ್ಥನೆಯನ್ನು ಕೇಳಿ ತುಂಬಾ ಹರ್ಷಗೊಂಡರು.

ಕೃತ್ವಾ ಸುವೇಷಂ ಸರ್ವೇಽಪಿ ನಿರ್ಜರಾ ಮುನಯೋ ಗಣಾಃ ।
ಗಮನಂ ಚಕ್ರುರನ್ಯೇಽಪಿ ಪ್ರಭುಣಾ ಪ್ರೇರಿತಾಸ್ತದಾ ॥ ೨೮ ॥

ತಸ್ಮಿನ್ನವಸರೇ ಮೇನಾ ದ್ರಷ್ಟುಕಾಮಾಭವಚ್ಛಿವಂ ।
ಪ್ರಭೋರಾಹ್ವಾಪಯಾಮಾಸ ಮುನೇ ತ್ವಾಂ ಮುನಿಸತ್ತಮಂ ॥ ೨೯ ॥

ಅಗಮಸ್ತ್ವಂ ಮುನೇ ತತ್ರ ಪ್ರಭುಣಾ ಪ್ರೇರಿತಸ್ತದಾ ।
ಮನಸಾ ಶಿವಹೃದ್ಧೇತುಂ ಪೂರ್ಣಂ ಕರ್ತುಂ ತಮಿಚ್ಛಿತಾ ॥ ೩೦ ॥

ತ್ವಾಂ ಪ್ರಣಮ್ಯ ಮುನೇ ಮೇನಾ ಪ್ರಾಪ ವಿಸ್ಮಿತಮಾನಸಾ ।
ದ್ರಷ್ಟುಕಾಮಾ ಪ್ರಭೋ ರೂಪಂ ಶಂಕರಸ್ಯ ಮುದಾವಹಂ ॥ ೩೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ದ್ವಿಚತ್ವಾರಿಂಶೋಽಧ್ಯಾಯಃ

---

೨೮. ಆಮೇಲೆ ಆ ದೇವತೆಗಳು, ಮುನಿಗಳು, ಗಣಗಳು, ಎಲ್ಲರೂ ಸುಂದರ ವೇಷವನ್ನು ಧರಿಸಿ, ಶಿವನಪ್ಪಣೆಯಂತೆ ಅವನೊಡನೆ ಹಿಮವಂತನ ನಗರಕ್ಕೆ ತೆರಳಿದರು.

೨೯. ಎಲೈ ನಾರದ, ಆ ಸಮಯದಲ್ಲಿ ಮೇನಾದೇವಿಯು ವರನಾದ ಶಿವನನ್ನು ನೋಡಲಿಚ್ಛೆಪಟ್ಟು ನಿನ್ನನ್ನು ತನ್ನ ಬಳಿಗೆ ಬರಹೇಳಲು,

೩೦. ಶಿವನಿಂದ ಪ್ರೇರಿತನಾದ ನೀನು ಮೇನಾದೇವಿಯ ಇಚ್ಛೆಯಂತೆ ಅವಳ ಬಳಿಗೆ ಹೋದೆಯಷ್ಟೆ.

೩೧. ಆಗ ಮೇನಾದೇವಿಯು ನಿನ್ನನ್ನು ನಮಸ್ಕರಿಸಿ, ಶಿವನ ಸುಂದರರೂಪವನ್ನು ನೋಡುವ ಕುತೂಹಲದಿಂದ ಇಂತೆಂದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ತ್ರಿಚತ್ವಾರಿಂಶೋಽಧ್ಯಾಯಃ

---

॥ ಮೇನೋವಾಚ ॥

ನಿರೀಕ್ಷಿಷ್ಯಾಮಿ ಪ್ರಥಮಂ ಮುನೇ ತಂ ಗಿರಿಜಾಪತಿಂ ।
ಕೀದೃಶಂ ಶಿವರೂಪಂ ಹಿ ಯದರ್ಥೇ ತಪ ಉತ್ತಮಂ ॥ ೧ ॥

॥ ಬ್ರಹ್ಮೋವಾಚ ॥

ಇತ್ಯಜ್ಞಾನಪರಾ ಸಾ ಚ ದರ್ಶನಾರ್ಥಂ ಶಿವಸ್ಯ ಚ ।
ತ್ವಯಾ ಮುನೇ ಸಮಂ ಸದ್ಯಶ್ಚಂದ್ರಶಾಲಾಂ ಸಮಾಗತಾ ॥ ೨ ॥

---

## ನಲವತ್ತಮೂರನೆಯ ಅಧ್ಯಾಯವು

೧. ಮೇನಾದೇವಿಯು ಹೇಳಿದಳು:—ಓ ನಾರದಮುನಿ, ಮೊದಲು ನಾನು ಗಿರಿಜೆಗೆ ಪತಿಯಾಗುವ ಆ ಶಿವನನ್ನು ನೋಡಬೇಕು. ಆ ಗಿರಿಜೆಯು ಘೋರ ತಪಸ್ಸನ್ನು ಮಾಡಿ ಒಲಿಸಿಕೊಂಡ ಆ ಶಿವರೂಪವು ಎಂತಿರುವುದು? ಅದನ್ನು ನಾನು ನೋಡಬೇಕು ಎಂದಳು.

೨. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಅಜ್ಞಾನಿಯಾದ ಆ ಮೇನೆಯು ಶಿವನನ್ನು ನೋಡಲು ನಿನ್ನೊಡನೆ ಚಂದ್ರಶಾಲೆಗೆ ಬಂದಳು.

ಶಿವೋಽಪಿ ಚ ತದಾ ತಸ್ಯಾಂ ಜ್ಞಾತ್ವಾಹಂಕಾರಮಾತ್ಮನಃ ।
ಪ್ರಾಹ ವಿಷ್ಣುಂ ಚ ಮಾಂ ತಾತ ಲೀಲಾಂ ಕೃತ್ವಾದ್ಭುತಾಂ ಪ್ರಭುಃ ॥ ೩ ॥

ಮದಾಜ್ಞಯಾ ಯುವಾಂ ತಾತೌ ಸದೇವೌ ಚ ಪೃಥಕ್ ಪೃಥಕ್ ।
ಗಚ್ಛತಂ ಚ ಗಿರಿದ್ವಾರಂ ವಯಂ ಪಶ್ಚಾದ್ವ್ರಜೇಮಹಿ ॥ ೪ ॥

॥ ಬ್ರಹ್ಮೋವಾಚ ॥

ಇತ್ಯಾಽಽಕರ್ಣ್ಯ ಹರಿಸ್ಸರ್ವಾನಾಹೂಯೋವಾಚ ತನ್ಮಯಾಃ ।
ಸುರಾಸ್ಸರ್ವೇ ತಥೈವಾಽಽಶು ಗಮನಂ ಚಕ್ರುರುತ್ಸುಕಾಃ ॥ ೫ ॥

ಸ್ಥಿತಾಂ ಶಿರೋಗೃಹೇ ಮೇನಾಂ ಮುನೇ ವಿಶ್ವೇಶ್ವರಸ್ತ್ವಯಾ ।
ತಥೈವ ದರ್ಶಯಾಮಾಸ ಹೃದ್ವಿಭ್ರಂಶೋ ಯಥಾ ಭವೇತ್ ॥ ೬ ॥

ಏತಸ್ಮಿನ್ ಸಮಯೇ ಮೇನಾ ಸೇನಾಂ ಚ ಪರಮಾಂ ಶುಭಾಂ ।
ನಿರೀಕ್ಷಂತೀ ಮುನೇ ದೃಷ್ಟ್ವಾ ಸಾಮಾನ್ಯಂ ಹರ್ಷಿತಾಭವತ್ ॥ ೭ ॥

---

೩-೪. ಆಗ ಶಿವನೂ ಸಹ ಮೇನೆಗೆ ಅಹಂಕಾರವಿರುವುದನ್ನು ತಿಳಿದು ತನ್ನ ಯಾವ ಅದ್ಭುತ ಲೀಲೆಯನ್ನೂ ಆಗ ಪ್ರದರ್ಶಿಸಲಿಲ್ಲ. ಮತ್ತು ಆ ರುದ್ರನು ನನ್ನನ್ನೂ ಹರಿಯನ್ನೂ ಕುರಿತು ಎಲೈ ಹರಿಬ್ರಹ್ಮರೇ, ನನ್ನ ಅಪ್ಪಣೆಯಂತೆ ನೀವು ಬೇರೆಬೇರೆ ಯಾಗಿ ದೇವತೆಗಳೊಡನೆ ಹಿಮಾಲಯನ ಅರಮನೆಯ ಬಾಗಿಲಿಗೆ ತೆರಳಿರಿ. ನಾವು ಹಿಂದಿನಿಂದ ಬರುವೆವು ಎಂದನು.

೫. ಬ್ರಹ್ಮನು ಹೇಳಿದನು:—ಶಂಕರನ ಮಾತನ್ನು ಕೇಳಿ ಹರಿಯು ಎಲ್ಲ ದೇವತೆಗಳಿಗೂ ಅದರಂತೆ ಅಪ್ಪಣೆಮಾಡಿದನು. ದೇವತೆಗಳೆಲ್ಲರೂ ಕುತೂಹಲದಿಂದ ಹೊರಟರು.

೬. ಆಗ ಜಗದೊಡೆಯನಾದ ಶಿವನು ಚಂದ್ರಶಾಲೆಯಲ್ಲಿ ನಿನ್ನೊಡನೆ ನಿಂತಿರುವ ಮೇನೆಯು ಭ್ರಾಂತಿಗೊಳ್ಳುವಂತೆ ನಾನಾವಿಧವಾಗಿ ಪ್ರದರ್ಶನಮಾಡಿದನು.

೭. ಮೇನಾದೇವಿಯು ನೋಡುತ್ತಲಿರಲು, ಮೊದಲು ಅವಳಿಗೆ ಅದ್ಭುತವಾದ ಸೇನೆಯೊಂದು ಕಾಣಿಸಿತು. ಅದನ್ನು ನೋಡಿ ಆ ಮೇನೆಗೆ ಸಂತೋಷವಾಯಿತು.

ಪ್ರಥಮಂ ಚೈವ ಗಂಧರ್ವಾಸ್ಸುಂದರಾಸ್ಸುಭಗಾಸ್ತದಾ ।
ಆಯಾತಾಶ್ಚಾಪ್ಸರಸ್ತ್ರಾಢ್ಯಾ ನಾನಾಲಂಕಾರಭೂಷಿತಾಃ ॥ ೮ ॥

ನಾನಾವಾಹನಸಂಯುಕ್ತಾ ನಾನಾವಾದ್ಯಪರಾಯಣಾಃ ।
ಪತಾಕಾಭಿರ್ವಿಚಿತ್ರಾಭಿರಪ್ಸರೋಗಣಸಂಯುತಾಃ ॥ ೯ ॥

ಅಥ ದೃಷ್ಟ್ವಾ ವಸುಂ ತತ್ರ ತತ್ಪತಿಂ ಪರಮಪ್ರಭುಂ ।
ಮೇನಾ ಪ್ರಹರ್ಷಿತಾ ಹ್ಯಾಸೀಚ್ಛಿವೋಽಯಮಿತಿ ಚಾಬ್ರವೀತ್ ॥ ೧೦ ॥

ಶಿವಸ್ಯ ಗಣಕಾ ಏತೇ ನ ಶಿವೋಽಯಂ ಶಿವಾಪತಿಃ ।
ಇತ್ಯೇವಂ ತ್ವಂ ತತಸ್ತಾಂ ವೈ ಅವೋಚ ಋಷಿಸತ್ತಮ ॥ ೧೧ ॥

ಏವಂ ಶ್ರುತ್ವಾ ತದಾ ಮೇನಾ ವಿಚಾರೇ ತತ್ಪರಾಭವತ್ ।
ಇತಶ್ಚಾಭ್ಯಧಿಕೋ ಯೋ ವೈ ಸ ಚ ಕೀದೃಗ್ಭವಿಷ್ಯತಿ ॥ ೧೨ ॥

---

೮-೯. ಮೊದಲು ಆ ಸೇನೆಯ ಮುಂದುಗಡೆಯಲ್ಲಿ ಸುಂದರರೂ ಮಹಾ ತೇಜಸ್ವಿಗಳೂ ಆದ ಗಂಧರ್ವರೂ ಅಪ್ಸರೆಯರೂ ಬಂದರು. ಅವರೆಲ್ಲರೂ ಅನೇಕ ಬಗೆಯಾದ ವಾಹನಗಳಲ್ಲಿ ಕುಳಿತಿದ್ದರು. ವಿವಿಧಾಲಂಕಾರಗಳಿಂದ ಭೂಷಿತರಾಗಿದ್ದರು. ವಾದ್ಯಗಳನ್ನು ಬಾರಿಸುತ್ತಲಿದ್ದರು. ವಿಚಿತ್ರವಾದ ಪತಾಕೆಗಳನ್ನು ಹಿಡಿದಿದ್ದರು.

೧೦. ಆ ಗಣಗಳಲ್ಲಿ ಅಷ್ಟವಸುಗಳೂ ಬರುತ್ತಿದ್ದುವು. ಮಹಾ ತೇಜಸ್ವಿಯಾದ ಆ ವಸುನಾಯಕವನ್ನು ನೋಡಿ ಮೇನೆಯು ಹರ್ಷದಿಂದ ಇವನೇ ಶಿವನಿರಬಹುದೆನ್ನಲು,

೧೧. ಆಗ ನೀನು ಇವರೆಲ್ಲರೂ ಮಹದೇವನ ಗಣಗಳು. ಭವಾನೀಪತಿಯಾದ ಶಿವನು ಇವನಲ್ಲ. ಮುಂದೆ ಬರುವನು, ಎಂದು ಮೇನೆಗೆ ಹೇಳಿದೆ.

೧೨. ನಿನ್ನ ಮಾತನ್ನು ಕೇಳಿ ಆಗ ಮೇನೆಯು ಇದಕ್ಕಿಂತಲೂ ಶಿವನು ಶ್ರೇಷ್ಠನಾಗಿರುವುದಾದರೆ ಅವನು ಹೇಗಿರಬಹುದು? ಎಂದು ಆಶ್ಚರ್ಯಚಕಿತಳಾದಳು.

ಏತಸ್ಮಿನ್ನಂತರೇ ಯಕ್ಷಾ ಮಣಿಗ್ರೀವಾದಯಶ್ಚ ಯೇ ।
ತೇಷಾಂ ಸೇನಾ ತಯಾ ದೃಷ್ಟಾ ಶೋಭಾಪಿ ದ್ವಿಗುಣೀಕೃತಾ ॥ ೧೩ ॥

ತತ್ಪತಿಂ ಚ ಮಣಿಗ್ರೀವಂ ದೃಷ್ಟ್ವಾ ಶೋಭಾನ್ವಿತಂ ಹಿ ಸಾ ।
ಅಯಂ ರುದ್ರಃ ಶಿವಾಸ್ವಾಮೀ ಮೇನಾ ಪ್ರಾಹೇತಿ ಹರ್ಷಿತಾ ॥ ೧೪ ॥

ನಾಯಂ ರುದ್ರಃ ಶಿವಾಸ್ವಾಮೀ ಸೇವಕೋಽಯಂ ಶಿವಸ್ಯ ವೈ ।
ಇತ್ಯವೋಚೋಽಗಪತ್ನ್ಯೈ ತ್ವಂ ತಾವದ್ವಹ್ನಿಸ್ಸ ಆಗತಃ ॥ ೧೫ ॥

ತತೋಽಪಿ ದ್ವಿಗುಣಾಂ ಶೋಭಾಂ ದೃಷ್ಟ್ವಾ ತಸ್ಯ ಚ ಸಾಬ್ರವೀತ್ ।
ರುದ್ರೋಽಯಂ ಗಿರಿಜಾಸ್ವಾಮೀ ತದಾ ನೇತಿ ತ್ವಮಬ್ರವೀಃ ॥ ೧೬ ॥

ತಾವದ್ಯಮಸ್ಸಮಾಯಾತಸ್ತತೋಽಪಿ ದ್ವಿಗುಣಪ್ರಭಃ ।
ತಂ ದೃಷ್ಟ್ವಾ ಪ್ರಾಹ ಸಾ ಮೇನಾ ರುದ್ರೋಽಯಮಿತಿ ಹರ್ಷಿತಾ ॥ ೧೭ ॥

---

೧೩. ಈ ಸಮಯದಲ್ಲಿ ಮಣಿಗ್ರೀವ ಮೊದಲಾದ ಯಕ್ಷರು ಬಂದರು. ಅವರ ಸೇನೆಯು ಹಿಂದಿನ ಸೇನೆಗಿಂತಲೂ ಹೆಚ್ಚಾಗಿ ಶೋಭಿಸುತ್ತಲಿತ್ತು.

೧೪. ಆ ಯಕ್ಷರಿಗೆ ಪತಿಯಾದ ಮಣಿಗ್ರೀವನು ತುಂಬಾ ತೇಜಸ್ವಿಯಾಗಿದ್ದನು. ಅವನನ್ನು ನೋಡಿ ಮೇನೆಯು ಹರ್ಷದಿಂದ ಇವನೇ ಗಿರಿಜಾಪತಿಯಾದ ರುದ್ರನೇ? ಎನ್ನಲು,

೧೫. ಇವನೂ ಪಾರ್ವತೀಪತಿಯಾದ ರುದ್ರನಲ್ಲ. ಶಿವನ ಸೇವಕನಿವನು. ಹೀಗೆಂದು ನೀನು ಮೇನಾದೇವಿಗೆ ಹೇಳಲು, ಅಷ್ಟರಲ್ಲಿ ಅಲ್ಲಿಗೆ ಅಗ್ನಿಪುರುಷನು ಬಂದನು.

೧೬. ಮಣಿಗ್ರೀವನಿಗಿಂತಲೂ ಎರಡರಷ್ಟು ಕಾಂತಿಶಾಲಿಯಾದ ಅಗ್ನಿಪುರುಷನನ್ನು ನೋಡಿ ಮೇನೆಯು ಇವನು ಗಿರಿಜಾಪತಿಯಾದ ರುದ್ರನು ಎಂದಳು. ಆಗ ನೀನು ಇವನೂ ಶಿವನಲ್ಲವೆಂದು ಹೇಳಿದೆ.

೧೭. ಅಷ್ಟರಲ್ಲಿ ಅಗ್ನಿಗಿಂತಲೂ ತೇಜಸ್ವಿಯಾದ ಯಮನು ಬಂದನು. ಅವನನ್ನು ನೋಡಿ ಹರ್ಷಗೊಂಡು ಮೇನೆಯು ಇವನು ರುದ್ರನೆಂದಳು.

ನೇತಿ ತ್ವಮಬ್ರವೀಸ್ತಾಂ ವೈ ತಾವನ್ನಿರ್ಋತಿರಾಗತಃ ।
ಬಿಭ್ರಾಣೋ ದ್ವಿಗುಣಾಂ ಶೋಭಾಂ ಶುಭಃ ಪುಣ್ಯಜನಪ್ರಭುಃ ॥ ೧೮ ॥

ತಂ ದೃಷ್ಟ್ವಾ ಪ್ರಾಹ ಸಾ ಮೇನಾ ರುದ್ರೋಽಯಮಿತಿ ಹರ್ಷಿತಾ ।
ನೇತಿ ತ್ವಮಬ್ರವೀಸ್ತಾಂ ವೈ ತಾವದ್ವರುಣ ಆಗತಃ ॥ ೧೯ ॥

ತತೋಽಪಿ ದ್ವಿಗುಣಾಂ ಶೋಭಾಂ ದೃಷ್ಟ್ವಾ ತಸ್ಯ ಚ ಸಾಬ್ರವೀತ್ ।
ರುದ್ರೋಽಯಂ ಗಿರಿಜಾಸ್ವಾಮೀ ತದಾ ನೇತಿ ತ್ವಮಬ್ರವೀಃ ॥ ೨೦ ॥

ತಾವದ್ವಾಯುಸ್ಸಮಾಯಾತಸ್ತತೋಽಪಿ ದ್ವಿಗುಣಪ್ರಭಃ ।
ತಂ ದೃಷ್ಟ್ವಾ ಪ್ರಾಹ ಸಾ ಮೇನಾ ರುದ್ರೋಽಯಮಿತಿ ಹರ್ಷಿತಾ ॥ ೨೧ ॥

ನೇತಿ ತ್ವಮಬ್ರವೀಸ್ತಾಂ ವೈ ತಾವದ್ಧನದ ಆಗತಃ ।
ತತೋಽಪಿ ದ್ವಿಗುಣಾಂ ಶೋಭಾಂ ಬಿಭ್ರಾಣೋ ಗುಹ್ಯಕಾಧಿಪಃ ॥ ೨೨ ॥

---

೧೮. ಆಗ ನೀನು ಇವನೂ ಶಿವನಲ್ಲವೆಂದು ಹೇಳಿದೆ. ಅಷ್ಟರಲ್ಲಿಯೇ ದಾನವಾಧಿಪತಿಯಾದ ನಿರ್ಋತಿಯು ಬಂದನು. ಅವನು ಯಮನಿಗಿಂತಲೂ ತೇಜಸ್ವಿಯಾಗಿದ್ದನು.

೧೯. ಆ ನಿರ್ಋತಿಯನ್ನು ನೋಡಿ ಮೇನೆಯು ಹರ್ಷದಿಂದ ಇವನೇ ರುದ್ರನೆಂದು ಹೇಳಿದಳು. ಆಗ ನೀನು ಇವನೂ ರುದ್ರನಲ್ಲವೆಂದು ಹೇಳುವಷ್ಟರಲ್ಲಿಯೇ ವರುಣನು ಬಂದನು.

೨೦. ನಿರ್ಋತಿಗಿಂತಲೂ ತೇಜಸ್ವಿಯಾದ ವರುಣನನ್ನು ನೋಡಿ ಮೇನೆಯು "ಇವನು ರುದ್ರನು" ಎಂದು ಹೇಳಲು ಆಗ ನೀನು ಇವನು ರುದ್ರನಲ್ಲವೆಂದು ಹೇಳಿದೆ.

೨೧. ಅಷ್ಟರಲ್ಲಿ ವರುಣಗಿಂತಲೂ ಇಮ್ಮಡಿಯಾಗಿ ಕಾಂತಿಶಾಲಿಯಾದ ವಾಯುದೇವನು ತನ್ನ ಪರಿವಾರದೊಡನೆ ಬಂದನು. ಅವನನ್ನು ನೋಡಿ ಮೇನಾದೇವಿಯು ಹರ್ಷಗೊಂಡು ಇವನೇ ರುದ್ರನೆಂದಳು.

೨೨. ಇವನೂ ರುದ್ರನಲ್ಲವೆಂದು ನೀನು ಹೇಳುತ್ತಿರುವಂತೆಯೇ ಅಲ್ಲಿಗೆ ಕುಬೇರನು ಬಂದನು. ಅವನು ವಾಯುವಿಗಿಂತಲೂ ಎರಡರಷ್ಟು ತೇಜಸ್ವಿಯಾಗಿದ್ದನು.

ತಂ ದೃಷ್ಟ್ವಾ ಪ್ರಾಹ ಸಾ ಮೇನಾ ರುದ್ರೋಽಯಮಿತಿ ಹರ್ಷಿತಾ ।
ನೇತಿ ತ್ವಮಬ್ರವೀಸ್ತ್ರಾಂ ವೈ ತಾವದೀಶಾನ ಆಗತಃ ॥ ೨೩ ॥

ತತೋಽಪಿ ದ್ವಿಗುಣಾಂ ಶೋಭಾಂ ದೃಷ್ಟ್ವಾ ತಸ್ಯ ಚ ಸಾಬ್ರವೀತ್ ।
ರುದ್ರೋಽಯಂ ಗಿರಿಜಾಸ್ವಾಮೀ ತದಾ ನೇತಿ ತ್ವಮಬ್ರವೀಃ ॥ ೨೪ ॥

ತಾವದಿಂದ್ರಸ್ಸಮಾಯಾತಸ್ತತೋಽಪಿ ದ್ವಿಗುಣಪ್ರಭಃ ।
ಸರ್ವಾಮರವರೋ ನಾನಾದಿವ್ಯಭಸ್ತ್ರಿದಶೇಶ್ವರಃ ॥ ೨೫ ॥

ತಂ ದೃಷ್ಟ್ವಾ ಶಂಕರಸ್ಸೋಽಯಮಿತಿ ಸಾ ಪ್ರಾಹ ಮೇನಕಾ ।
ಶಕ್ರಸ್ಸುರಪತಿಶ್ಚಾಯಂ ಸ ನೇತಿ ತ್ವಂ ತದಾಬ್ರವೀಃ ॥ ೨೬ ॥

ತಾವಚ್ಚಂದ್ರಸ್ಸಮಾಯಾತಶ್ಶೋಭಾಂ ತದ್ದ್ವಿಗುಣಾಂ ದಧತ್ ।
ದೃಷ್ಟ್ವಾ ತಂ ಪ್ರಾಹ ರುದ್ರೋಽಯಂ ತಾಂ ತು ನೇತಿ ತ್ವಮಬ್ರವೀಃ ॥ ೨೭ ॥

---

೨೩. ಆ ಕುಬೇರನನ್ನು ನೋಡಿ ಮೇನೆಯು ಹರ್ಷಗೊಂಡು ಇವನು ರುದ್ರನೆಂದು ಹೇಳಿದಳು. ಆಗ ನೀನು ಇವನು ರುದ್ರನಲ್ಲವೆಂದು ಹೇಳಲು, ಅಷ್ಟರಲ್ಲಿ ಈಶಾನನು ಬಂದನು.

೨೪. ಕುಬೇರನಿಗಿಂತಲೂ ಇಮ್ಮಡಿ ತೇಜಸ್ವಿಯಾದ ಈಶಾನನ್ನು ನೋಡಿ ಹರ್ಷಗೊಂಡು ಮೇನೆಯು ಇವನು ಉಮಾಪತಿಯಾದ ರುದ್ರನು ಎನ್ನಲು, ಆಗ ನೀನು ಇವನೂ ರುದ್ರನಲ್ಲವೆಂದು ಹೇಳಿದೆ.

೨೫. ಅಷ್ಟರಲ್ಲಿ ದೇವರಾಜನೂ, ಸ್ವರ್ಗಾಧಿಪತಿಯೂ ಆದ ಇಂದ್ರನು ಈಶಾನನಿಗಿಂತಲೂ ಹೆಚ್ಚಾದ ಕಾಂತಿಯುಳ್ಳವನಾಗಿ ಸೇನೆಯೊಡನೆ ಅಲ್ಲಿಗೆ ಬಂದನು.

೨೬. ಅವನನ್ನು ನೋಡಿ ಮೇನಾದೇವಿಯು ಇವನೇ ಆ ಶಂಕರನೇ ? ಎಂದು ಕೇಳಿದಳು. ಆಗ ನೀನು ಇವನು ದೇವೇಶ್ವರನಾದ ಇಂದ್ರನು. ಶಂಕರನಲ್ಲವೆಂದು ಹೇಳಿದೆ.

೨೭. ಅಷ್ಟರಲ್ಲಿ ಇಂದ್ರನಿಗಿಂತಲೂ ಹೆಚ್ಚು ತೇಜಸ್ವಿಯಾಗಿ ಚಂದ್ರನು ಬಂದನು. ಅವನನ್ನು ನೋಡಿ ಮೇನೆಯು "ಇವನು ರುದ್ರನು" ಎಂದು ಹೇಳಿದಳು. ಆಗ ನೀನು ಇವನೂ ರುದ್ರನಲ್ಲವೆಂದು ಹೇಳಿದೆ.

ತಾವತ್ಸೂರ್ಯಸ್ಸಮಾಯಾತಶ್ಶೋಭಾಂ ತದ್ದ್ವಿಗುಣಾಂ ದಧತ್ ।
ದೃಷ್ಟ್ವಾ ತಂ ಪ್ರಾಹ ಸಾ ಸೋಽಯಂ ತಾಂ ತು ನೇತಿ ತ್ವಮಬ್ರವೀಃ ॥ ೨೮ ॥

ತಾವತ್ಸಮಾಗತಾಸ್ತತ್ರ ಭೃಗ್ವಾದ್ಯಾಶ್ಚ ಮುನೀಶ್ವರಾಃ ।
ತೇಜಸೋ ರಾಶಯಸ್ಸರ್ವೇ ಸ್ವಶಿಷ್ಯಗಣಸಂಯುತಾಃ ॥ ೨೯ ॥

ತನ್ಮಧ್ಯೇ ಚೈವ ವಾಗೀಶಂ ದೃಷ್ಟ್ವಾ ಸಾ ಪ್ರಾಹ ಮೇನಕಾ ।
ರುದ್ರೋಽಯಂ ಗಿರಿಜಾಸ್ವಾಮೀ ತದಾ ನೇತಿ ದ್ವಮಬ್ರವೀಃ ॥ ೩೦ ॥

ತಾವದ್ಬ್ರಹ್ಮಾ ಸಮಾಯಾತಸ್ತೇಜಸಾಂ ರಾಶಿರುತ್ತಮಃ ।
ಋಷಿವರ್ಯಸ್ತುತಸ್ಸಾಕ್ಷಾದ್ಧರ್ಮಪುಂಜ ಇವ ಸ್ಥಿತಃ ॥ ೩೧ ॥

ದೃಷ್ಟ್ವಾ ಮಾಂ ತಂ ತದಾ ಮೇನಾ ಮಹಾಹರ್ಷವತೀ ಮುನೇ ।
ಸೋಽಯಂ ಶಿವಾಪತಿಃ ಪ್ರಾಹ ತಾಂ ತು ನೇತಿ ತ್ವಮಬ್ರವೀಃ ॥ ೩೨ ॥

---

೨೮. ಬಳಿಕ ಇನ್ನೂ ತೇಜಸ್ವಿಯಾದ ಸೂರ್ಯನು ಅಲ್ಲಿಗೆ ಬಂದನು. ಇವನು ರುದ್ರನೆಂದು ಮೇನೆಯು ಹೇಳಲು, ಇವನೂ ಅಲ್ಲವೆಂದು ನೀನು ಹೇಳಿದೆ.

೨೯. ಅನಂತರ ಭೃಗು ಮೊದಲಾದ ಮುನಿಗಳು ಶಿಷ್ಯರೊಡನೆ ಅಲ್ಲಿಗೆ ಬಂದರು. ಅವರೆಲ್ಲರೂ ಮಹಾ ತೇಜಸ್ವಿಗಳಾಗಿದ್ದರು.

೩೦. ಆ ಮುನಿಗಳ ಮಧ್ಯದಲ್ಲಿ ದೇವಗುರುವಾದ ಬೃಹಸ್ಪತಿಯು ತೇಜಸ್ಸಿನಿಂದ ಬೆಳಗುತ್ತಿದ್ದನು. ಅವನನ್ನು ನೋಡಿ "ಇವನು ಗಿರಿಜಾಪತಿಯಾದ ರುದ್ರನು" ಎಂದು ಹೇಳಿದಳು. ಆಗ ನೀನು ಇವನು ರುದ್ರನಲ್ಲವೆಂದು ಹೇಳಿದೆ.

೩೧. ಅಷ್ಟರಲ್ಲಿ ಮಹಾ ತೇಜಸ್ವಿಯಾದ ಬ್ರಹ್ಮನು ಬಂದನು. ಅವನು ಸಾಕ್ಷಾತ್ ಧರ್ಮಮೂರ್ತಿಯಂತೆ ಇದ್ದನು. ಋಷಿಗಳು ಸುತ್ತಲೂ ನಿಂತು ಅವನನ್ನು ಸ್ತುತಿಸುತ್ತಿದ್ದರು.

೩೨. ಇಂತಹ ನನ್ನನ್ನು ನೋಡಿ ಮೇನೆಯು ತುಂಬಾ ಹರ್ಷಗೊಂಡು ಇವನು ಗಿರಿಜಾಪತಿಯಾದ ರುದ್ರನೇ? ಎಂದು ಕೇಳಿದಳು. ಆಗ ನೀನು ಇವನು ರುದ್ರನಲ್ಲವೆಂದು ಹೇಳಿದೆ.

ಏತಸ್ಮಿನ್ನಂತರೇ ತತ್ರ ವಿಷ್ಣುರ್ದೇವಸ್ಸಮಾಗತಃ ।
ಸರ್ವಶೋಭಾನ್ವಿತಃ ಶ್ರೀಮಾನ್ ಮೇಘಶ್ಯಾಮಶ್ಚತುರ್ಭುಜಃ ॥ ೩೩ ॥

ಕೋಟಿಕಂದರ್ಪಲಾವಣ್ಯಃ ಪೀತಾಂಬರಧರಃ ಸ್ವರಾಟ್ ।
ರಾಜೀವಲೋಚನಃ ಶಾಂತಃ ಪಕ್ಷೀಂದ್ರವರವಾಹನಃ ॥ ೩೪ ॥

ಶಂಖಾದಿಲಕ್ಷಣೈರ್ಯುಕ್ತೋ ಮುಕುಟಾದಿವಿಭೂಷಿತಃ ।
ಶ್ರೀವತ್ಸವಕ್ಷಾ ಲಕ್ಷ್ಮೀಶೋ ಹ್ಯಪ್ರಮೇಯಪ್ರಭಾನ್ವಿತಃ ॥ ೩೫ ॥

ತಂ ದೃಷ್ಟ್ವಾ ಚಕಿತಾಕ್ಷ್ಯಾಸೀನ್ಮಹಾಹರ್ಷೇಣ ಸಾಬ್ರವೀತ್ ।
ಸೋಽಯಂ ಶಿವಾಪತಿಸ್ಸಾಕ್ಷಾಚ್ಛಿವೋ ವೈ ನಾತ್ರ ಸಂಶಯಃ ॥ ೩೬ ॥

ಅಥ ತ್ವಂ ಮೇನಕಾವಾಕ್ಯಮಾಕರ್ಣ್ಯೋವಾಚ ಸೂತಿಕೃತ್ ।
ನಾಯಂ ಶಿವಾಪತಿರಯಂ ಕಿಂ ತ್ವಯಂ ಕೇಶವೋ ಹರಿಃ ॥ ೩೭ ॥

---

೩೩-೩೫. ಈ ಸಮಯದಲ್ಲಿ ಮಹಾ ತೇಜಸ್ವಿಯಾದ ವಿಷ್ಣುವು ಅಲ್ಲಿಗೆ ಬಂದನು. ಅವನು ತುಂಬಾ ತೇಜಸ್ವಿಯಾಗಿಯೂ ಮೇಘದಂತೆ ಶರೀರಕಾಂತಿಯುಳ್ಳವನಾಗಿಯೂ ಇದ್ದನು. ಅವನಿಗೆ ನಾಲ್ಕು ಕೈಗಳಿದ್ದವು. ಕೋಟಿ ಮನ್ಮಥರ ಸೌಂದರ್ಯಳ್ಳವನಾಗಿದ್ದನು. ಪೀತಾಂಬರವನ್ನುಟ್ಟಿದ್ದನು. ಅವನ ಕಣ್ಣುಗಳು ಕಮಲದಂತಿದ್ದವು. ಗರುಡನನ್ನೇರಿದ್ದನು. ಶಂಖ ಮೊದಲಾದವುಗಳನ್ನು ಧರಿಸಿ ಪ್ರಸನ್ನಮುಖದಿಂದ ಒಪ್ಪುತ್ತಿದ್ದನು. ಸುಂದರವಾದ ಕಿರೀಟವನ್ನೂ, ಎದೆಯಲ್ಲಿ ಶ್ರೀವತ್ಸವನ್ನೂ ಧರಿಸಿದ್ದನು. ಅವನ ಪ್ರಭೆಯು ತರ್ಕಿಸಲು ಸಹ ಅಸಾಧ್ಯವಾಗಿದ್ದಿತು.

೩೬. ಆ ಹರಿಯನ್ನು ನೋಡಿ ಮೇನೆಯು ಹರ್ಷಾಶ್ಚರ್ಯಗಳಿಂದ ಕೂಡಿ ಇವನೇ ಉಮಾಪತಿಯಾದ ರುದ್ರನು. ಇದರಲ್ಲಿ ಸಂಶಯವಿಲ್ಲ ಎನ್ನಲು,

೩೭. ಆಗ ಮೇನೆಯ ಮಾತನ್ನು ಕೇಳಿ ನೀನು ಇವನು ಗಿರಿಜಾಪತಿಯಾದ ಶಿವನಲ್ಲ. ಇವನು ಕೇಶವನು. ಲಕ್ಷ್ಮೀಪತಿಯಾದ ವಿಷ್ಣುವು ಎಂದು ಹೇಳಿದೆ.

ಶಂಕರೋಽಖಿಲಕಾರ್ಯಸ್ಯ ಹ್ಯಧಿಕಾರೀ ಚ ತತ್ಪ್ರಿಯಃ ।
ಅತೋಽಧಿಕೋ ವರೋ ಜ್ಞೇಯಸ್ಸ ಶಿವಃ ಪಾರ್ವತೀಪತಿಃ ॥ ೩೮ ॥

ತಚ್ಛೋಭಾಂ ವರ್ಣಿತುಂ ಮೇನೇ ಮಯಾ ನೈವ ಹಿ ಶಕ್ಯತೇ ।
ಸ ಏವಾಖಿಲಬ್ರಹ್ಮಾಂಡಪತಿಃ ಸರ್ವೇಶ್ವರಃ ಸ್ವರಾಟ್ ॥ ೩೯ ॥

॥ ಬ್ರಹ್ಮೋವಾಚ ॥

ಇತ್ಯಾಽಽಕರ್ಣ್ಯ ವಚಸ್ತಸ್ಯ ಮೇನಾ ಮೇನೆ ಚ ತಾಂ ಶುಭಾಂ ।
ಮಹಾಧನಾಂ ಭಾಗ್ಯವತೀಂ ಕುಲತ್ರಯಸುಖಾವಹಾಂ ॥ ೪೦ ॥

ಉವಾಚ ಚ ಪ್ರಸನ್ನಾಸ್ಯಾ ಪ್ರೀತಿಯುಕ್ತೇನ ಚೇತಸಾ ।
ಸ್ವಭಾಗ್ಯಮಧಿಕಂ ಚಾಪಿ ವರ್ಣಯಂತೀ ಮುಹುರ್ಮುಹುಃ ॥ ೪೧ ॥

॥ ಮೇನೋವಾಚ ॥

ಧನ್ಯಾಹಂ ಸರ್ವಥಾ ಜಾತಾ ಪಾರ್ವತ್ಯಾ ಜನ್ಮನಾಧುನಾ ।
ಧನ್ಯೋ ಗಿರೀಶ್ವರೋಽಪ್ಯದ್ಯ ಸರ್ವಂ ಧನ್ಯತಮಂ ಮಮ ॥ ೪೨ ॥

---

೩೮. ಶಂಕರನು ಎಲ್ಲಾ ಕಾರ್ಯಗಳಿಗೂ ಅಧಿಕಾರಿಯು. ಕರ್ಮದಿಂದ ಅವನು ಪ್ರೀತನಾಗುವನು. ಅವನು ಈ ಹರಿಗಿಂತಲೂ ಶ್ರೇಷ್ಠನು. ಇಂತಹ ಶಂಕರನೇ ನಿನ್ನ ಗಿರಿಜೆಯ ಪತಿಯು ಇವರಾರೂ ಅಲ್ಲ.

೩೯. ಎಲೌ ಮೇನೆ, ಆ ಶಿವನ ಮಹಿಮೆಯನ್ನು ವರ್ಣಿಸಲು ನನ್ನಿಂದ ಸಾಧ್ಯವಿಲ್ಲ. ಅವನೇ ಎಲ್ಲಾ ಜಗತ್ತಿಗೂ ಒಡೆಯನು, ಪರಮೇಶ್ವರನು, ವಿಶ್ವ ರೂಪನು ಎಂದು ಹೇಳಿದೆ.

೪೦. ಬ್ರಹ್ಮನು ಹೇಳಿದನು:—ಹೀಗೆ ನಾರದನ ಮಾತನ್ನು ಕೇಳಿ ಮೇನಾ ದೇವಿಯು ತನ್ನ ಮಗಳಾದ ಪಾರ್ವತಿಯು ಮಹಾ ಐಶ್ವರ್ಯವಂತಳೂ, ಭಾಗ್ಯ ವಂತಳೂ, ಮಾತೃಪಿತೃ ಕುಲಗಳೆರಡನ್ನೂ ಉದ್ಧರಿಸುವಳೆಂದೂ ತಿಳಿದಳು.

೪೧. ಇಂತಹ ಅಳಿಯನು ತನಗೆ ಸಿಕ್ಕಿದನಲ್ಲಾ ಎಂದು ತನ್ನ ಅದೃಷ್ಟಕ್ಕೆ ಸಂತೋಷಪಡುತ್ತಾ ಆ ಮೇನೆಯು ಇಂತೆಂದಳು.

೪೨. ಮೇನಾದೇವಿಯು ಹೇಳಿದಳು:—ಪಾರ್ವತಿಯನ್ನು ಹಡೆದು ನಾನು ಧನ್ಯಳಾದೆನು. ಹಿಮವಂತನೂ ಧನ್ಯನಾದನು. ನಾನು ಮಾಡಿದುದೆಲ್ಲವೂ ಸಾರ್ಥಕ ವಾಯಿತು.

ಯೇ ಯೇ ದೃಷ್ಟಾ ಮಯಾ ದೇವನಾಯಕಾಸ್ಸುಪ್ರಭಾನ್ವಿತಾಃ ।
ಏತೇಷಾಂ ಯಃ ಪತಿಸ್ಸೋಽತ್ರ ಪತಿರಸ್ಯಾ ಭವಿಷ್ಯತಿ ॥ ೪೩ ॥

ಅಸ್ಯಾಃ ಕಿಂ ವರ್ಣ್ಯತೇ ಭಾಗ್ಯಮಪಿ ವರ್ಷಶತೈರಪಿ ।
ವರ್ಣಿತುಂ ಶಕ್ಯತೇ ನೈವ ತತ್ಪ್ರಭುಪ್ರಾಪ್ತಿದರ್ಶನಾತ್ ॥ ೪೪ ॥

॥ ಬ್ರಹ್ಮೋವಾಚ ॥

ಇತ್ಯವಾದೀಚ್ಚ ಸಾ ಮೇನಾ ಪ್ರೇಮನಿರ್ಭರಮಾನಸಾ ।
ತಾವತ್ಸಮಾಗತೋ ರುದ್ರೋಽದ್ಭುತೋಽತೀಕಾರಕಃ ಪ್ರಭುಃ ॥ ೪೫ ॥

ಅದ್ಭುತಾತ್ಮಗಣಾಸ್ತಾತ ಮೇನಾಗರ್ವಾಪಹಾರಕಾಃ ।
ಆತ್ಮಾನಂ ದರ್ಶಯರ್ಥ ಮಯಾನಿರ್ಲಿಪ್ತಂ ನಿರ್ವಿಕಾರಕಂ ॥ ೪೬ ॥

ತಮಾಗತಮಭಿಪ್ರೇತ್ಯ ನಾರದ ತ್ವಂ ಮುನೇ ತದಾ ।
ಮೇನಾಮವೋಚಃ ಸುಪ್ರೀತ್ಯಾ ದರ್ಶಯಂಸ್ತಂ ಶಿವಾಪತಿಂ ॥ ೪೭ ॥

---

೪೩. ಈಗ ನಾನು ನೋಡಿದ ಅನೇಕ ದೇವತೆಗಳಿಗೂ ಒಡೆಯನಾದ ಮಹಾಪುರುಷನೇ ನನ್ನ ಮಗಳಾದ ಪಾರ್ವತಿಗೆ ಪತಿಯಾಗುವನು.

೪೪. ನಮ್ಮ ಗಿರಿಜೆಯ ಅದೃಷ್ಟವನ್ನು ಎಷ್ಟೆಂದು ವರ್ಣಿಸಲಿ? ಶಿವನನ್ನು ಸ್ವಾಮಿಯಾಗಿ ಪಡೆದ ಅವಳ ಭಾಗ್ಯವನ್ನು ನೂರುವರ್ಷಗಳಾದರೂ ವರ್ಣಿಸಲಶಕ್ಯವು.

೪೫. ಬ್ರಹ್ಮನು ಹೇಳಿದನು :—ಹೀಗೆ ಆ ಮೇನಾದೇವಿಯು ಪ್ರೀತಿಯಿಂದ ಹೇಳುತ್ತಿರಲು ಆ ಸಮಯದಲ್ಲಿ ಮಹಾತೇಜಸ್ವಿಯೂ ಜಗದೊಡೆಯನೂ ಆದ ರುದ್ರನು ಅಲ್ಲಿಗೆ ಬಂದನು.

೪೬. ಆಗ ಅದ್ಭುತಗಳಾದ ಆ ಶಿವಗಣಗಳು ಮೇನಾದೇವಿಯ ಗರ್ವವನ್ನು ಹೋಗಲಾಡಿಸುವುದಕ್ಕಾಗಿ ಮಾಯೆಗೆ ಅಧೀನವಲ್ಲದ ನಿರ್ವಿಕಾರನಾಗಿರುವ ಆತ್ಮನನ್ನು ಅವಳಿಗೆ ತೋರಿಸಿದುವು.

೪೭. ಎಲೈ ನಾರದ, ಶಿವನು ಬಂದಿರುವುದನ್ನು ತಿಳಿದು, ನೀನು ಆಗ ಅವನೇ ಗಿರಿಜೆಯ ಪತಿಯೆಂದು ತಿಳಿಸಿದೆ.

॥ ನಾರದ ಉವಾಚ ॥
ಅಯಂ ಸ ಶಂಕರಸ್ಸಾಕ್ಷಾದ್ದೃಶ್ಯತಾಂ ಸುಂದರಿ ತ್ವಯಾ ।
ಯದರ್ಥೇ ಶಿವಯಾ ತಪ್ತಂ ತಪೋಽಪಿ ವಿಪಿನೇ ಮಹತ್ ॥ ೪೮ ॥

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ಹರ್ಷಿತಾ ಮೇನಾ ತಂ ದದರ್ಶ ಮುದಾ ಪ್ರಭುಂ ।
ಅದ್ಭುತಾಕೃತಿಮೀಶಾನಮದ್ಭುತಾನುಗಮದ್ಭುತಂ ॥ ೪೯ ॥

ತಾವದೇವ ಸಮಾಯಾತಾ ರುದ್ರಸೇನಾ ಮಹಾದ್ಭುತಾ ।
ಭೂತಪ್ರೇತಾದಿಸಂಯುಕ್ತಾ ನಾನಾಗಣಸಮನ್ವಿತಾ ॥ ೫೦ ॥

ವಾತ್ಯಾರೂಪಧರಾಃ ಕೇಚಿತ್ಪತಾಕಾಮರ್ಮರಸ್ವನಾಃ ।
ವಕ್ರತುಂಡಾಸ್ತತ್ರ ಕೇಚಿದ್ವಿರೂಪಾಶ್ಚಾಪರೇ ತಥಾ ॥ ೫೧ ॥

ಕರಾಲಾಃ ಶ್ಮಶ್ರುಲಾಃ ಕೇಚಿತ್ಕೇಚಿತ್ಖಂಜಾಃ ಹ್ಯಲೋಚನಾಃ ।
ದಂಡಪಾಶಧರಾಃ ಕೇಚಿತ್ಕೇಚಿನ್ಮುದ್ಗರಪಾಣಯಃ ॥ ೫೨ ॥

---

೪೮. ನಾರದನು ಹೇಳಿದನು:—ಎಲೌ ಮೇನಾದೇವಿ, ನೋಡು. ಇವನೇ ಸಾಕ್ಷಾತ್ ಶಂಕರನು. ಇವನಿಗಾಗಿಯೇ ಗಿರಿಜೆಯು ವನದಲ್ಲಿ ಘೋರ ತಪಸ್ಸನ್ನಾಚರಿಸಿರುವಳು.

೪೯. ಬ್ರಹ್ಮನು ಹೇಳಿದನು:—ಹೀಗೆ ನಾರದನು ಮೇನೆಗೆ ಹೇಳಲು, ಹರ್ಷದಿಂದ ಅದ್ಭುತವಾದ ಆಕಾರವುಳ್ಳವನೂ ಅದ್ಭುತವಾದ ಪರಿವಾರವುಳ್ಳವನೂ ಆದ ಮಹೇಶ್ವರನನ್ನು ನೋಡಿದಳು.

೫೦. ಅಷ್ಟರಲ್ಲಿಯೇ ಅವನ ಹಿಂದುಗಡೆ ಭೂತಪ್ರೇತಗಳಿಂದಲೂ ನಾನಾ ಗಣಗಳಿಂದಲೂ ಕೂಡಿದಂತಹ ಅದ್ಭುತವಾದ ರುದ್ರಸೇನೆಯು ಬಂದಿತು.

೫೧. ಕೆಲವರು ಗಾಳಿಯರೂಪದಿಂದ ಬರುತ್ತಿದ್ದರು. ಪತಾಕೆಗಳನ್ನು ಹಿಡಿದು ಜಯಧ್ವನಿಯನ್ನು ಮಾಡುತ್ತಿದ್ದರು. ಕೆಲವರು ಡೊಂಕಾದ ಮುಖವುಳ್ಳವರು. ಕೆಲವರು ವಿಕಾರವಾದ ರೂಪವುಳ್ಳವರು.

೫೨. ಅವರಲ್ಲಿ ಕೆಲವರು ಭಯಂಕರರಾಗಿದ್ದರು. ಅವರಿಗೆ ಗಡ್ಡಮೀಸೆಗಳಿದ್ದುವು. ಕೆಲವರು ಕುಂಟರೂ ಕುರುಡರೂ ಆಗಿದ್ದರು. ಕೆಲವರು ದಂಡ, ಪಾಶ, ಮುದ್ಗರ ಮುಂತಾದ ಆಯುಧಗಳನ್ನು ಹಿಡಿದಿದ್ದರು.

ವಿರುದ್ಧವಾಹನಾಃ ಕೇಚಿಚ್ಛೃಂಗನಾದವಿವಾದಿನಃ ।
ಡಮರೋರ್ವಾದಿನಃ ಕೇಚಿತ್ಕೇಚಿದ್ಗೋಮುಖವಾದಿನಃ ॥ ೫೩ ॥

ಅಮುಖಾ ವಿಮುಖಾಃ ಕೇಚಿತ್ಕೇಚಿದ್ಬಹುಮುಖಾ ಗಣಾಃ ।
ಅಕರಾ ವಿಕರಾಃ ಕೇಚಿತ್ಕೇಚಿದ್ಬಹುಕರಾ ಗಣಾಃ ॥ ೫೪ ॥

ಅನೇತ್ರಾ ಬಹುನೇತ್ರಾಶ್ಚ ವಿಶಿರಾಃ ಕುಶಿರಾಸ್ತಥಾ ।
ಅಕರ್ಣಾ ಬಹುಕರ್ಣಾಶ್ಚ ನಾನಾವೇಷಧರಾ ಗಣಾಃ ॥ ೫೫ ॥

ಇತ್ಯಾದಿವಿಕೃತಾಕಾರಾ ಅನೇಕೇ ಪ್ರಬಲಾ ಗಣಾಃ ।
ಅಸಂಖ್ಯಾತಾಸ್ತಥಾ ತಾತ ಮಹಾವೀರಾ ಭಯಂಕರಾಃ ॥ ೫೬ ॥

---

೫೩. ಕೆಲವರು ಕತ್ತೆ ಮೊದಲಾದ ವಿರುದ್ಧವಾಹನಗಳನ್ನೇರಿದ್ದರು. ಕೊಂಬು ವಾದ್ಯವನ್ನು ಕೆಲವರು ಊದುತ್ತಲಿದ್ದರು. ಡಮರು ಮತ್ತು ಗೋಮುಖಗಳನ್ನು ಕೆಲವರು ಬಾರಿಸುತ್ತಲಿದ್ದರು.

೫೪. ಕೆಲವು ಗಣಗಳಿಗೆ ಮುಖವೇ ಇರಲಿಲ್ಲ. ಕೆಲವುಗಳ ಮುಖಗಳು ವಿಕಾರವಾಗಿದ್ದುವು, ಕೆಲವಕ್ಕೆ ಅನೇಕ ಮುಖಗಳಿದ್ದುವು. ಹಾಗೆಯೇ ಕೆಲವು ಗಣಗಳಿಗೆ ಕೈಗಳೇ ಇರಲಿಲ್ಲ, ಕೆಲವರ ಕೈಗಳು ವಿಕಾರವಾಗಿದ್ದುವು, ಅನೇಕ ಕೈಗಳು ಕೆಲವಕ್ಕಿದ್ದುವು.

೫೫. ಕೆಲವು ಕಣ್ಣುಗಳಿಲ್ಲದವು. ಅನೇಕ ಕಣ್ಣುಗಳುಳ್ಳವು ಕೆಲವು. ಕೆಲವರ ತಲೆಯು ವಿಕಾರವಾಗಿದ್ದಿತು. ಕೆಲವಕ್ಕೆ ತಲೆಯೇ ಇರಲಿಲ್ಲ, ಕಿವಿಗಳಿಲ್ಲದ ಕೆಲವು ಗಣಗಳೂ, ಅನೇಕ ಕಿವಿಗಳುಳ್ಳ ಕೆಲವು ಗಣಗಳೂ ಇದ್ದುವು. ಕೆಲವು ಗಣಗಳು ನಾನಾರೂಪವುಳ್ಳವಾಗಿದ್ದುವು.

೫೬. ಈ ರೀತಿಯಾಗಿ ವಿಕಾರವೂ ಭಯಂಕರವೂ ಆದ ರೂಪವುಳ್ಳ ಗಣಗಳು ಎಣಿಸಲಾರದಷ್ಟು ಇದ್ದುವು. ಅವುಗಳೆಲ್ಲವು ಮಹಾವೀರರಾಗಿದ್ದವು.

ಅಂಗುಲ್ಯಾ ದರ್ಶಯಂಸ್ತ್ವಂ ತಾಂ ಮುನೇ ರುದ್ರಗಣಾಂಸ್ತತಃ ।
ಹರಸ್ಯ ಸೇವಕಾನ್ ಪಶ್ಯ ಹರಂ ಚಾಪಿ ವರಾನನೇ ॥ ೫೭ ॥

ಅಸಂಖ್ಯಾತಾನ್ ಗಣಾನ್ ದೃಷ್ಟ್ವಾ ಭೂತಪ್ರೇತಾದಿಕಾನ್ಮುನೇ ।
ತತ್ಕ್ಷಣಾದಭವತ್ಸಾ ವೈ ಮೇನಕಾ ತ್ರಾಸಸಂಕುಲಾ ॥ ೫೮ ॥

ತನ್ಮಧ್ಯೇ ಶಂಕರಂ ಚೈವ ನಿರ್ಗುಣಂ ಗುಣವತ್ತರಂ ।
ವೃಷಭಸ್ಥಂ ಪಂಚವಕ್ತ್ರಂ ತ್ರಿನೇತ್ರಂ ಭೂತಿಭೂಷಿತಂ ॥ ೫೯ ॥

ಕಪರ್ದಿನಂ ಚಂದ್ರಮೌಲಿಂ ದಶಹಸ್ತಂ ಕಪಾಲಿನಂ ।
ವ್ಯಾಘ್ರಚರ್ಮೋತ್ತರೀಯಂ ಚ ಪಿನಾಕವರಪಾಣಿನಂ ॥ ೬೦ ॥

ಶೂಲಯುಕ್ತಂ ವಿರೂಪಾಕ್ಷಂ ವಿಕೃತಾಕಾರಮಾಕುಲಂ ।
ಗಜಚರ್ಮ ವಸಾನಂ ಚ ವೀಕ್ಷ್ಯ ತ್ರೇಸೇ ಶಿವಾಪ್ರಸೂಃ ॥ ೬೧ ॥

---

೫೭. ಎಲೈ ನಾರದ ನೀನು ಆ ಗಣಗಳನ್ನು ಮೇನಾದೇವಿಗೆ ತೋರಿಸಿ, ಎಲಾ ಸಾಧ್ವೀಮಣಿ, ಇವರು ಶಂಕರನ ಸೇವಕರು. ಇವರ ಮಧ್ಯದಲ್ಲಿ ಶಂಕರನು ಬರುತ್ತಿರುವನು, ನೋಡು ಎಂದು ಹೇಳಿದೆ.

೫೮. ಅಸಂಖ್ಯಾತರಾದ ಆ ಭೂತಪ್ರೇತ ಮೊದಲಾದ ಗಣಗಳನ್ನು ನೋಡಿ ಮೇನೆಗೆ ತುಂಬಾ ಭಯವಾಯಿತು.

೫೯-೬೧. ಆ ಗಣಗಳ ಮಧ್ಯದಲ್ಲಿ ನಿರ್ಗುಣಬ್ರಹ್ಮರೂಪನೂ, ಸಗುಣರೂಪದಿಂದ ಪರಮೇಶ್ವರ ರೂಪವನ್ನು ಧರಿಸಿದವನೂ ಆದ ಶಂಕರನು ನಂದಿಯಮೇಲೆ ಕುಳಿತಿದ್ದನು. ಅವನಿಗೆ ಐದು ಮುಖಗಳೂ ಮೂರು ಕಣ್ಣುಗಳೂ ಇದ್ದವು. ಶರೀರಕ್ಕೆ ಭಸ್ಮವನ್ನು ಲೇಪನಮಾಡಿಕೊಂಡಿದ್ದನು. ರುಂಡಮಾಲೆಯನ್ನು ಧರಿಸಿದ್ದನು, ಅವನ ತಲೆಯಲ್ಲಿ ಚಂದ್ರನಿದ್ದನು, ಹತ್ತು ಕೈಗಳಿದ್ದುವು. ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದಿದ್ದನು, ಹುಲಿಯ ಚರ್ಮವನ್ನು ಹೊದೆದಿದ್ದನು, ಪಿನಾಕವೆಂಬ ಧನುಸ್ಸನ್ನೂ, ಶೂಲವನ್ನೂ ಹಿಡಿದಿದ್ದನು. ಅವನ ನೇತ್ರಗಳು ವಿಕಾರವಾಗಿದ್ದುವು. ಆನೆಯ ಚರ್ಮವನ್ನು ಹೊದೆದಿದ್ದನು, ಹೀಗೆ ವಿಕಾರವಾದ ರೂಪವುಳ್ಳ ಶಿವನನ್ನು ನೋಡಿ ಮೇನೆಯು ತುಂಬಾ ಹೆದರಿದಳು.

ಚಕಿತಾಂ ಕಂಪಸಂಯುಕ್ತಾಂ ವಿಹ್ವಲಾಂ ವಿಭ್ರಮದ್ಧಿಯಂ ।
ಶಿವೋಽಯಮಿತಿ ಚಾಂಗುಲ್ಯಾ ದರ್ಶಯಂಸ್ತಾಂ ತ್ವಮಬ್ರವೀಃ ॥ ೬೨ ॥

ತ್ವದೀಯಂ ತದ್ವಚಃ ಶ್ರುತ್ವಾ ವಾತಾಹತಲತಾ ಇವ ।
ಸಾ ಪಪಾತ ದ್ರುತಂ ಭೂಮೌ ಮೇನಾ ದುಃಖಭರಾ ಸತೀ ॥ ೬೩ ॥

ಕಿಮಿದಂ ವಿಕೃತಂ ದೃಷ್ಟ್ವಾ ವಂಚಿತಾಹಂ ದುರಾಗ್ರಹೇ ।
ಇತ್ಯುಕ್ತ್ವಾ ಮೂರ್ಛಿತಾ ತತ್ರ ಮೇನಕಾ ಸಾಭವತ್ಕ್ಷಣಾತ್ ॥ ೬೪ ॥

ಅಥ ಪ್ರಯತ್ನೈರ್ವಿವಿಧೈಸ್ಸಖೀಭಿರುಪಸೇವಿತಾ ।
ಲೇಭೇ ಸಂಜ್ಞಾಂ ಶನೈರ್ಮೇನಾ ಗಿರೀಶ್ವರಪ್ರಿಯಾ ತದಾ ॥ ೬೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ತ್ರಿಚತ್ವಾರಿಂಶೋಽಧ್ಯಾಯಃ

---

೬೨. ಆಶ್ಚರ್ಯದಿಂದಲೂ ಭಯದಿಂದಲೂ ಆ ಮೇನಾದೇವಿಗೆ ಮನಸ್ಸು ಕದಡಿ ಶರೀರವು ಕಂಪಿಸುತ್ತಿರಲು, ಆಗ ನೀನು—ಇಗೋ ನೋಡು, ಇವನೇ ಶಿವನು ಎಂದು ಅವಳಿಗೆ ಹೇಳಿದೆ.

೬೩. ಎಲೈ ನಾರದ, ನಿನ್ನ ಮಾತನ್ನು ಕೇಳಿ ಮೇನೆಗೆ ಅತಿ ದುಃಖವಾಯಿತು. ಗಾಳಿಯಿಂದ ಹೊಡೆಯಲ್ಪಟ್ಟ ಬಳ್ಳಿಯಂತೆ ನೆಲದಲ್ಲಿ ದೊಪ್ಪನೆ ಬಿದ್ದಳು.

೬೪. ಇದೇನು ? ಇಂತಹ ವಿಕಾರರೂಪಗಳು ನನಗೆ ಕಾಣಿಸುತ್ತಿರುವುದಲ್ಲಾ ? ಇವೆಲ್ಲಾ ಭ್ರಾಂತಿಯೇ ಅಥವಾ ನಿಶ್ಚಯವೇ ಎನ್ನುತ್ತಾ, ಆ ಮೇನೆಯು ಕೂಡಲೇ ಮೂರ್ಛೆಗೊಂಡಳು.

೬೫. ಬಳಿಕ ಸಖಿಯರು ಅನೇಕ ಪ್ರಯತ್ನಗಳಿಂದ ಮೇನೆಯನ್ನು ಪಚರಿಸಲು ಅವಳು ಮೆಲ್ಲಮೆಲ್ಲಗೆ ಎಚ್ಚರಗೊಂಡಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ನಲವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಚತುಶ್ಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಸಂಜ್ಞಾಂ ಲಬ್ಧ್ವಾ ತತಸ್ಸಾ ಚ ಮೇನಾ ಶೈಲಪ್ರಿಯಾ ಸತೀ ।
ವಿಲಲಾಪಾತಿಸಂಕ್ಷುಬ್ಧಾ ತಿರಸ್ಕಾರಮಥಾಕರೋತ್ ॥ ೧ ॥

ತತ್ರ ತಾವಸ್ಸ್ವಪುತ್ರಾಂಶ್ಚ ನಿನಿಂದ ಖಲಿತಾ ಮುಹುಃ ।
ಪ್ರಥಮಂ ತೇ ತತಃ ಪುತ್ರೀಂ ಕಥಯಾಮಾಸ ದುರ್ವಚಃ ॥ ೨ ॥

॥ ಮೇನೋವಾಚ ॥

ಮುನೇ ಪುರಾ ತ್ವಯಾ ಪ್ರೋಕ್ತಂ ವರಿಷ್ಯತಿ ಶಿವಾ ಶಿವಂ ।
ಪಶ್ಚಾದ್ಧಿಮವತಃ ಕೃತ್ಯಂ ಪೂಜಾರ್ಥಂ ವಿನಿವೇಶಿತಂ ॥ ೩ ॥

---

### ನಲವತ್ತನಾಲ್ಕನೆಯ ಅಧ್ಯಾಯವು

೧-೨. ಬ್ರಹ್ಮನಿಂತೆಂದನು :—ಎಲೈ ನಾರದ, ಬಳಿಕ ಮೂರ್ಛೆಯಿಂದೆ ಚ್ಚೆತ್ತು ತಿರಸ್ಕಾರಭಾವದಿಂದ ತನ್ನ ಮಕ್ಕಳನ್ನೂ, ಮುಖ್ಯವಾಗಿ ಪಾರ್ವತಿಯನ್ನೂ ಚೆನ್ನಾಗಿ ಬೈದಳು. ದುಃಖದಿಂದ ನಾನಾವಿಧವಾಗಿ ಪ್ರಲಾಪಿಸಿದಳು. ಮತ್ತು ನಿನ್ನನ್ನು ಕುರಿತು,

೩. ಮೇನಾದೇವಿಯು ಹೇಳಿದಳು :—ಓ ಮುನಿ, ಹಿಂದೆ ನೀನು ಗಿರಿಜೆಯು ಶಿವನನ್ನೇ ವರಿಸುವಳು ಎಂದು ಹೇಳಿದೆ. ಆಮೇಲೆ, ಶಿವನನ್ನು ಸೇವಿಸಲು ಹಿಮವಂತನ ಮೂಲಕ ಗಿರಿಜೆಯನ್ನು ನಿಯಮಿಸಿದೆ.

ತತೋ ದೃಷ್ಟಂ ಫಲಂ ಸತ್ಯಂ ವಿಪರೀತಮನರ್ಥಕಂ ।
ಮುನೇऽಥಮಾಹಂ ದುರ್ಬುದ್ಧೇ ಸರ್ವಥಾ ವಂಚಿತಾ ತ್ವಯಾ ॥ ೪ ॥

ಪುನಸ್ತಯಾ ತಪಸ್ತಪ್ತಂ ದುಷ್ಕರಂ ಮುನಿಭಿಶ್ಚ ಯತ್ ।
ತಸ್ಯ ಲಬ್ಧಂ ಫಲಂ ಹೇತತ್ಪಶ್ಯತಾಂ ದುಃಖದಾಯಕಂ ॥ ೫ ॥

ಕಿಂ ಕರೋಮಿ ಕ್ವ ಗಚ್ಛಾಮಿ ಕೋ ಮೇ ದುಃಖಂ ವ್ಯಪೋಹತಾಂ ।
ಕುಲಾದಿಕಂ ವಿನಷ್ಟಂ ಮೇ ವಿಹಿತಂ ಜೀವಿತಂ ಮಮ ॥ ೬ ॥

ಕ್ವ ಗತಾ ಋಷಯೋ ದಿವ್ಯಾಃ ಶ್ಮಶ್ರೂಣಿ ತ್ರೋಟಯಾಮ್ಯಹಂ ।
ತಪಸ್ವಿನೀ ಚ ಯಾ ಪತ್ನೀ ಸಾ ಧೂರ್ತಾ ಸ್ವಯಮಾಗತಾ ॥ ೭ ॥

ಕೇಷಾಂಚೈವಾಪರಾಧೇನ ಸರ್ವಂ ನಷ್ಟಂ ಮಮಾಧುನಾ ।
ಇತ್ಯುಕ್ತ್ವಾ ವೀಕ್ಷ್ಯ ಚ ಸುತಾಮುವಾಚ ವಚನಂ ಕಟು ॥ ೮ ॥

---

೪. ಆದರೆ ಆದಕ್ಕೆ ವಿಪರೀತವಾದ ಫಲವು ಲಭಿಸಿತು. ಎಲೈ ಮುನಿ, ನೀನು ಮೋಸಗಾರನು, ತಿಳಿವಳಿಕೆಯಿಲ್ಲದ ನನ್ನನ್ನು ಮೋಸಗೊಳಿಸಿರುವೆ.

೫. ನಿನ್ನ ಮಾತಿನಂತೆ ಆ ಗಿರಿಜೆಯು ಮುನಿಗಳೂ ಮಾಡಲಸಾಧ್ಯವಾದ ಘೋರತಪಸ್ಸಾಚರಿಸಿದಳು. ಆದರೆ ಆ ತಪಸ್ಸಿಗೆ ಇಂತಹ ದುಃಖಕರವಾದ ಫಲವು ಲಭಿಸಿರುವುದು.

೬. ಈಗ ನಾನೆಲ್ಲಿಗೆ ಹೋಗಲಿ? ಏನು ಮಾಡಲಿ? ನನ್ನ ದುಃಖವನ್ನು ಹೋಗಲಾಡಿಸುವವರಾರು? ನನಗೊಂದೂ ತೋರುವುದಿಲ್ಲ. ನನ್ನ ಕುಲವೂ ಜೀವನವೂ ಹಾಳಾದುವು.

೭. ನನ್ನನ್ನು ಮರಳುಗೊಳಿಸಿದ ಆ ಸಪ್ತಋಷಿಗಳು ಎಲ್ಲಿ ಹೋದರು? ಅವರ ಗಡ್ಡವನ್ನು ಕಿತ್ತುಬಿಸುಡುವೆನು. ತಪಸ್ವಿನಿಯಾದ ಆ ಅರುಂಧತಿಯೆಂಬ ಮೋಸಗಾರಳೂ ಅವರ ಜತೆಯಲ್ಲಿ ಬಂದಿದ್ದಳು. ಈಗ ಅವಳೆಲ್ಲಿ? ಅವಳನ್ನೂ ಶಿಕ್ಷಿಸುವೆನು.

೮-೯. ಇಂತಹ ಮೋಸಗಾರರಿಂದ ನನ್ನ ಸರ್ವಸ್ವವೂ ಹಾಳಾಯಿತು ಎಂದಳು. ಬಳಿಕ ತನ್ನ ಮಗಳಾದ ಪಾರ್ವತಿಯನ್ನು ನೋಡಿ ಎಲೈ ದುಷ್ಟಳಾದ ಮಗಳೇ, ನನಗೆ

ಕಿಂ ಕೃತಂ ತೇ ಸುತೇ ದುಷ್ಟೇ ಕರ್ಮ ದುಃಖಕರಂ ಮಮ ।
ಹೇಮ ದತ್ವಾ ತ್ವಯಾಽಽನೀತಃ ಕಾಚೋ ವೈ ದುಷ್ಟಯಾ ಸ್ವಯಂ ॥ ೯ ॥

ಹಿತ್ವಾ ತು ಚಂದನಂ ಭೂಯೋ ಲೇಪಿತಃ ಕರ್ದಮಸ್ತ್ವಯಾ ।
ಹಂಸಮುಡ್ಡೀಯ ಕಾಕೋ ವೈ ಗೃಹೀತೋ ಹಸ್ತಪಂಜರೇ ॥ ೧೦ ॥

ಹಿತ್ವಾ ಬ್ರಹ್ಮಜಲಂ ದೂರೇ ಪೀತಂ ಕೂಪೋದಕಂ ತ್ವಯಾ ।
ಸೂರ್ಯಂ ಹಿತ್ವಾ ತು ಖದ್ಯೋತೋ ಗೃಹೀತೋ ಯತ್ನತಸ್ತ್ವಯಾ ॥ ೧೧ ॥

ತಂಡುಲಾಂಶ್ಚ ತಥಾ ಹಿತ್ವಾ ಕೃತಂ ವೈ ತುಷಭಕ್ಷಣಂ ।
ಪ್ರಕ್ಷಿಪ್ಯಾಜ್ಯಂ ತಥಾ ತೈಲಂ ಕಾರಂಡಂ ಭುಕ್ತಮಾದರಾತ್ ॥ ೧೨ ॥

ಸಿಂಹಸೇವಾಂ ತಥಾ ಮುಕ್ತ್ವಾ ಶೃಗಾಲಸ್ಸೇವಿತಸ್ತ್ವಯಾ ।
ಬ್ರಹ್ಮವಿದ್ಯಾಂ ತಥಾ ಮುಕ್ತ್ವಾ ಕುಗಾಥಾ ಚ ಶ್ರುತಾ ತ್ವಯಾ ॥ ೧೩ ॥

---

ಇಷ್ಟವಲ್ಲದ ಇಂತಹ ಕಾರ್ಯವನ್ನು ಏಕೆ ಮಾಡಿದೆ? ಚಿನ್ನವನ್ನು ಕೊಟ್ಟು ನೀನು ಗಾಜನ್ನು ಕೊಂಡುಕೊಂಡಿರುವೆ.

೧೦. ಚಂದನವನ್ನು ಬಿಟ್ಟು ಕೆಸರನ್ನು ಮೈಗೆ ಬಳಿದುಕೊಂಡಿರುವೆ. ಹಂಸವನ್ನು ಹಿಡಿಯಲು ಹೋಗಿ ಕಾಗೆಯನ್ನು ಹಿಡಿದಿರುವೆ.

೧೧. ಹತ್ತಿರ ಸಿಗುವಂತಹ ಪವಿತ್ರಜಲವನ್ನು ಬಿಟ್ಟು ದೂರದಲ್ಲಿನ ಕೊಚ್ಚೆಯ ನೀರನ್ನು ಕುಡಿದಿರುವೆ. ಸೂರ್ಯನನ್ನು ಬಿಟ್ಟು ಮಹಾ ಪ್ರಯತ್ನದಿಂದ ದೀಪದ ಹುಳವನ್ನು ಹಿಡಿದುಕೊಂಡಿರುವೆ.

೧೨. ಅಕ್ಕಿಯನ್ನು ಬಿಟ್ಟು ನೀನು ಹೊಟ್ಟನ್ನು ಭಕ್ಷಿಸುತ್ತಲಿರುವೆ. ತುಪ್ಪವನ್ನು ಬಿಟ್ಟು ಹರಳೆಣ್ಣೆಯನ್ನು ಕುಡಿದಿರುವೆ.

೧೩. ಸಿಂಹವನ್ನು ಬಿಟ್ಟು ನರಿಯನ್ನು ಸೇವಿಸಿರುವೆ. ಬ್ರಹ್ಮವಿದ್ಯೆಯನ್ನು ಬಿಟ್ಟು ನಾಸ್ತಿಕವಾದವನ್ನು ಕೇಳಿರುವೆ.

ಗೃಹೇ ಯಜ್ಞವಿಭೂತಿಂ ಹಿ ದೂರೀಕೃತ್ಯ ಸುಮಂಗಲಾಂ ।
ಗೃಹೀತಂ ಚ ಚಿತಾಭಸ್ಮ ತ್ವಯಾ ಪುತ್ರಿ ಹ್ಯಮಂಗಲಂ ॥ ೧೪ ॥

ಸರ್ವಾನ್ ದೇವವರಾನ್ ತ್ಯಕ್ತ್ವಾ ವಿಷ್ಣ್ವಾದೀನ್ ಪರಮೇಶ್ವರಾನ್ ।
ಕೃತಂ ತ್ವಯಾ ಕುಬುದ್ಧ್ಯಾ ವೈ ಶಿವಾರ್ಥಂ ತಪ ಈದೃಶಂ ॥ ೧೫ ॥

ಧಿಕ್ತ್ವಾಂ ಚ ತವ ಬುದ್ಧಿಂ ಚ ಧಿಗ್ರೂಪಂ ಚರಿತಂ ತವ ।
ಧಿಕ್ಚೋಪದೇಶಕರ್ತಾರಂ ಧಿಕ್ಸಖ್ಯಾವಪಿ ತೇ ತಥಾ ॥ ೧೬ ॥

ಆವಾಂ ಚ ಧಿಕ್ತಥಾ ಪುತ್ರಿ ಯೌ ತೇ ಜನ್ಮಪ್ರವರ್ತಕೌ ।
ಧಿಕ್ತೇ ನಾರದ ಬುದ್ಧಿಂ ಚ ಸಪ್ತರ್ಷೀಂಶ್ಚ ಕುಬುದ್ಧಿದಾನ್ ॥ ೧೭ ॥

ಧಿಕ್ಕುಲಂ ಧಿಕ್ಕ್ರಿಯಾದಾಕ್ಷ್ಯಂ ಸರ್ವಂ ಧಿಗ್ಯತ್ಕೃತಂ ತ್ವಯಾ ।
ಗೃಹಂ ತು ಧುಕ್ಷಿತಂ ತ್ವೇತನ್ಮರಣಂ ತು ಮಮೈವ ಹಿ ॥ ೧೮ ॥

---

೧೪. ಮನೆಯಲ್ಲಿರುವ ಪವಿತ್ರವಾದ ಯಜ್ಞಭಸ್ಮವನ್ನು ಬಿಟ್ಟು ನೀನು ಅಪವಿತ್ರವಾದ ಸ್ಮಶಾನದ ಬೂದಿಯನ್ನು ಸ್ವೀಕರಿಸಿರುವೆ.

೧೫. ದೇವೋತ್ತಮರಾದ ಹರಿಯೇ ಮೊದಲಾದ ಜಗದೀಶ್ವರರನ್ನು ಬಿಟ್ಟು ನೀನು ಬುದ್ಧಿಯಿಲ್ಲದೆ ಶಿವನನ್ನು ಕುರಿತು ತಪಸ್ಸನ್ನು ಮಾಡಿರುವೆ.

೧೬. ಇಂತಹ ಕೆಟ್ಟ ಕಾರ್ಯವನ್ನು ಮಾಡಿರುವೆ. ಛೀ, ನಿನಗೇಕೆ ಇಂತಹ ದುರ್ಬುದ್ಧಿಯು ಹುಟ್ಟಿತು? ನಿನಗೆ ಎಂತಹ ರೂಪವಿದ್ದರೇನು? ನೀನು ಮಾಡಿದ ಕಾರ್ಯವೂ, ಅದನ್ನು ಮಾಡುವಂತೆ ಉಪದೇಶಮಾಡಿದ ದುಷ್ಟನೂ, ನಿನಗೆ ಈ ಕೆಟ್ಟ ಕೆಲಸದಲ್ಲಿ ಸಹಾಯಮಾಡಿದ ನಿನ್ನ ಸಖಿಯರೂ ಬಹು ನಿಂದ್ಯರು.

೧೭. ನಿನ್ನನ್ನು ಹಡೆದ ನಮಗೂ ಧಿಕ್ಕಾರವು, ಎಲೈ ನಾರದ, ನಿನಗೂ ನಿನ್ನ ಬುದ್ಧಿಗೂ ಧಿಕ್ಕಾರವಿರಲಿ. ಕೆಟ್ಟ ಬುದ್ಧಿಯನ್ನುಪದೇಶಿಸಿದ ಸಪ್ತಋಷಿಗಳಿಗೂ ಧಿಕ್ಕಾರ.

೧೮. ಎಲೈ ನಾರದ, ನಿನ್ನ ಕುಲಕ್ಕೂ ಕಾರ್ಯಕ್ಕೂ ಧಿಕ್ಕಾರ. ನನ್ನ ಮನೆಗೆ ಬೆಂಕಿಯನ್ನು ನೀನು ಹತ್ತಿಸಿರುವೆ. ಇದರಿಂದ ನನ್ನ ಮರಣವಾಗುವುದು. ಇದು ನಿಶ್ಚಯವು.

ಪರ್ವತಾನಾಮಯಂ ರಾಜಾ ನಾಯಾತು ನಿಕಟೇ ಮಮ ।
ಸಪ್ತರ್ಷಯಸ್ಸ್ವಯಂ ನೈವ ದರ್ಶಯಂತು ಮುಖಂ ಮಮ ॥ ೧೯ ॥

ಸಾಧಿತಂ ಕಿಂಚ ಸರ್ವೈಸ್ತು ಮಿಲಿತ್ವಾ ಘಾತಿತಂ ಕುಲಂ ।
ವಂಧ್ಯಾಹಂ ನ ಕಥಂ ಜಾತಾ ಗರ್ಭೋ ನ ಗಲಿತಃ ಕಥಂ ॥ ೨೦ ॥

ಅಥೋ ನ ವಾ ಮೃತಾ ಚಾಹಂ ಪುತ್ರಿಕಾ ನ ಮೃತಾ ಕಥಂ ।
ರಕ್ಷಸಾದ್ಯ ಕಥಂ ನೋ ವಾ ಭಕ್ಷಿತಾ ಗಗನೇ ಪುನಃ ॥ ೨೧ ॥

ಛೇದಯಾಮಿ ಶಿರಸ್ತೇಽದ್ಯ ಕಿಂ ಕರೋಮಿ ಕಲೇವರೈಃ ।
ತ್ಯಕ್ತ್ವಾ ತ್ವಾಂ ಚ ಕುತೋ ಯಾಯಾಂ ಹಾಹಾ ಮೇ ಜೀವಿತಂ ಹತಂ ॥ ೨೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಪತಿತಾ ಸಾ ಚ ಮೇನಾ ಭೂಮೌ ವಿಮೂರ್ಛಿತಾ ।
ವ್ಯಾಕುಲಾ ಶೋಕರೋಷಾದ್ಯೈರ್ನ ಗತಾ ಭರ್ತೃಸನ್ನಿಧೌ ॥ ೨೩ ॥

---

೧೯. ಈ ಪರ್ವತರಾಜನು ನನ್ನಲ್ಲಿಗೆ ಬರುವುದೇ ಬೇಡ. ಸಪ್ತಋಷಿಗಳು ನನಗೆ ಮುಖವನ್ನೇ ತೋರಿಸಬೇಕಾಗಿಲ್ಲ.

೨೦. ನೀವೆಲ್ಲರೂ ಸೇರಿ ಏನನ್ನು ಸಾಧಿಸಿರುವಿರಿ? ನಮ್ಮ ಕುಲವನ್ನೇ ಹಾಳುಮಾಡದಿರಿ. ನಾನು ಬಂಜೆಯಾಗಿದ್ದರೂ ಚನ್ನಾಗಿತ್ತು. ನನ್ನ ಗರ್ಭವಾದರೂ ಆಗಲೇ ಬಿದ್ದುಹೋಗಬಾರದಿತ್ತೆ ?

೨೧. ಅಥವಾ ಆಗಲೇ ನಾನು ಸತ್ತಿದ್ದರೆ ಚನ್ನಾಗಿತ್ತು. ನನ್ನ ಈ ಮಗ ಳಾದರೂ ಮರಣಹೊಂದಲಿಲ್ಲವೇಕೆ? ಯಾವನಾದರೂ ರಾಕ್ಷಸನು ಇವಳನ್ನು ಗಗನ ಕ್ಕೊಯ್ದು ತಿನ್ನಬಾರದಾಗಿದ್ದಿತೆ?

೨೨. ಎಲೌ ದುಷ್ಟೆ, ನಿನ್ನ ತಲೆಯನ್ನು ಕತ್ತರಿಸುವೆನು. ಈ ನಿನ್ನ ಶರೀರ ದಿಂದೇನು ಪ್ರಯೋಜನ? ಆದರೆ ನಿನ್ನನ್ನು ಬಿಟ್ಟು ನಾನು ಹೇಗೆ ಜೀವಿಸಲಿ? ಅಯ್ಯೋ! ನನ್ನ ಜೀವನವೇ ಹಾಳಾಯಿತಲ್ಲಾ! ಎಂದು ವಿಧವಿಧವಾಗಿ ಪ್ರಲಾಪಿಸುತ್ತಾ,

೨೩. ಆ ಮೇನಾದೇವಿಯು ಆಗ ಮೂರ್ಛೆಗೊಂಡು ನೆಲದಲ್ಲಿ ದೊಪ್ಪನೆ ಬಿದ್ದಳು. ದುಃಖಕೋಪಗಳಿಂದ ಅವಳು ತನ್ನ ಪತಿಯ ಬಳಿಗೆ ಹೋಗಲಿಲ್ಲ.

ಹಾಹಾಕಾರೋ ಮಹಾನಾಸೀತ್ತಸ್ಮಿನ್ಕಾಲೇ ಮುನೀಶ್ವರ ।
ಸರ್ವೇ ಸಮಾಗತಾಸ್ತತ್ರ ಕ್ರಮಾತ್ತತ್ಸನ್ನಿಧೌ ಸುರಾಃ ॥ ೨೪ ॥

ಪುರಾ ದೇವಮುನೇ ಚಾಹಮಾಗತಸ್ತು ಸ್ವಯಂ ತದಾ ।
ಮಾಂ ದೃಷ್ಟ್ವಾ ತ್ವಂ ವಚಸ್ತಾಂ ವೈ ಪ್ರಾವೋಚ ಮುನಿಸತ್ತಮ ॥ ೨೫ ॥

॥ ನಾರದ ಉವಾಚ ॥

ಯಥಾರ್ಥಂ ಸುಂದರಂ ರೂಪಂ ನ ಜ್ಞಾತಂ ತೇ ಶಿವಸ್ಯ ವೈ ।
ಲೀಲಯೇದಂ ಧೃತಂ ರೂಪಂ ನ ಯಥಾರ್ಥಂ ಶಿವೇನ ಚ ॥ ೨೬ ॥

ತಸ್ಮಾತ್ಕ್ರೋಧಂ ಪರಿತ್ಯಜ್ಯ ಸ್ವಸ್ಥಾ ಭವ ಪತಿವ್ರತೇ ।
ಕಾರ್ಯಂ ಕುರು ಹಠಂ ತ್ಯಕ್ತ್ವಾ ಶಿವಾಂ ದೇಹಿ ಶಿವಾಯ ಚ ॥ ೨೭ ॥

॥ ಬ್ರಹ್ಮೋವಾಚ ॥

ತದಾಕರ್ಣ್ಯ ವಚಸ್ತೇ ಸಾ ಮೇನಾ ತ್ವಾಂ ವಾಕ್ಯಮಬ್ರವೀತ್ ।
ಉತ್ತಿಷ್ಠೇತೋ ಗಚ್ಛ ದೂರಂ ದುಷ್ಟಾಧಮವರೋ ಭವಾನ್ ॥ ೨೮ ॥

---

೨೪. ಆ ಕಾಲದಲ್ಲಿ ಅಲ್ಲಿದ್ದ ಪರಿಜನರು ಹಾಹಾಕಾರವನ್ನು ಮಾಡಿದರು. ದೇವತೆಗಳೆಲ್ಲರೂ ಇದೇನೆಂದು ಮೇನಕೆಯಿರುವಲ್ಲಿಗೆ ಬಂದರು.

೨೫-೨೬. ಆಗ ಮೊದಲು ನಾನು ಮೇನಾದೇವಿಯ ಬಳಿಗೆ ಬಂದೆನು. ಆಗ ನೀನು ನನ್ನನ್ನು ನೋಡಿ ಮೇನೆಯನ್ನು ಕುರಿತು ಎಲೌ ಮೇನಕೆ, ನೀನು ಶಿವನ ನಿಜವಾದ ಸುಂದರ ರೂಪವನ್ನು ತಿಳಿದಿಲ್ಲ. ಆ ಶಿವನು ಲೀಲೆಯಿಂದ ಇಂತಹ ರೂಪವನ್ನು ಧರಿಸಿರುವನು. ಇದು ಶಿವನ ನಿಜವಾದ ರೂಪವಲ್ಲ.

೨೭-೨೮. ಎಲೌ ಸಾಧ್ವಿ, ಆದಕಾರಣ ಕೋಪವನ್ನು ಬಿಟ್ಟು ಶಾಂತಳಾಗು, ಹಠವನ್ನು ಮಾಡಬೇಡ. ಶಿವನಿಗೆ ಗಿರಿಜೆಯನ್ನು ಸಂತೋಷದಿಂದ ಕೊಡು ಎನ್ನಲು, ನಿನ್ನ ಆ ಮಾತನ್ನು ಕೇಳಿ ಮೇನಾದೇವಿಯು ಕೋಪದಿಂದ ಎಲೈ ದುಷ್ಟ, ನೀನಿಲ್ಲಿಂದ ಮಾತನಾಡದೆ ಹೊರಡು. ನೀನು ಮಹಾ ನೀಚನು ಎಂದಳು.

ಇತ್ಯುಕ್ತೇ ತು ತಯಾ ದೇವಾ ಇಂದ್ರಾದ್ಯಾಃ ಸಕಲಾಃ ಕ್ರಮಾತ್ ।
ಸಮಾಗತ್ಯ ಚ ದಿಕ್ಪಾಲಾ ವಚನಂ ಚೇದಮಬ್ರುವನ್ ॥ ೨೯ ॥

॥ ದೇವಾ ಊಚುಃ ॥

ಹೇ ಮೇನೇ ಪಿತೃಕನ್ಯೇ ಹಿ ಶೃಣ್ವಸ್ಮದ್ವಚನಂ ಮುದಾ ।
ಅಯಂ ವೈ ಪರಮಸ್ಸಾಕ್ಷಾಚ್ಛಿವಃ ಪರಸುಖಾವಹಃ ॥ ೩೦ ॥

ಕೃಪಯಾ ಚ ಭವತ್ಪುತ್ರ್ಯಾಸ್ತಪೋ ದೃಷ್ಟ್ವಾತಿದುಸ್ಸಹಂ ।
ದರ್ಶನಂ ದತ್ತವಾನ್ ಶಂಭುರ್ವರಂ ಸದ್ಭಕ್ತವತ್ಸಲಃ ॥ ೩೧ ॥

॥ ಬ್ರಹ್ಮೋವಾಚ ॥

ಅಥೋವಾಚ ಸುರಾನ್ಮೇನಾ ವಿಲಪ್ಯಾತಿ ಮುಹುರ್ಮುಹುಃ ।
ನ ದೇಯಾ ತು ಮಯಾ ಕನ್ಯಾ ಗಿರೀಶಾಯೋಗ್ರರೂಪಿಣೇ ॥ ೩೨ ॥

ಕಿಮರ್ಥಂ ತು ಭವಂತಶ್ಚ ಸರ್ವೇ ದೇವಾಃ ಪ್ರಪಂಚಿತಾಃ ।
ರೂಪಮಸ್ಯಾಃ ಪರನ್ನಾಮ ವ್ಯರ್ಥೀಕರ್ತುಂ ಸಮುದ್ಯತಾಃ ॥ ೩೩ ॥

---

೨೯. ಹೀಗೆ ಮೇನೆಯು ಹೇಳಲು, ಆಗ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಒಬ್ಬೊಬ್ಬರಾಗಿ ಬಂದು ಮೇನೆಯನ್ನು ಸಮಾಧಾನಮಾಡಿದರು.

೩೦. ದೇವತೆಗಳು ಹೇಳಿದರು :—ಪಿತೃಪುತ್ರಿಯಾದ ಎಲೌ ಮೇನಕೆ, ನಮ್ಮ ಮಾತನ್ನು ಸಾವಧಾನವಾಗಿ ಕೇಳು. ಇವನೇ ಸಾಕ್ಷಾತ್ ಪರಮೇಶ್ವರನು. ಇವನೇ ಎಲ್ಲರಿಗೂ ಸುಖವನ್ನು ಕೊಡುವವನು.

೩೧. ನಿನ್ನ ಮಗಳ ಕಠೋರ ತಪಸ್ಸನ್ನು ನೋಡಿ ಆ ಶಿವನು ದಯೆಯಿಂದ ಅವಳಿಗೆ ಪ್ರತ್ಯಕ್ಷನಾದನು. ಮತ್ತು ಭಕ್ತವತ್ಸಲನಾದ ಅವನು ಅವಳಿಗೆ ವರವನ್ನೂ ಕೊಟ್ಟಿರುವನು ಎಂದರು.

೩೨. ಬ್ರಹ್ಮನು ಹೇಳಿದನು:—ಆಮೇಲೆ ಮೇನಾದೇವಿಯು ತುಂಬಾ ವಿಲಾಪಿಸಿ ದೇವತೆಗಳನ್ನು ಕುರಿತು ಇಂತಹ ಭಯಂಕರನಾದ ಶಿವನಿಗೆ ಮಗಳನ್ನು ನಾನು ಖಂಡಿತ ಕೊಡುವುದಿಲ್ಲ.

೩೩. ಎಲೈ ದೇವತೆಗಳಿರಾ, ಸುಮ್ಮನೆ ನೀವು ಏಕೆ ಹರಟುತ್ತಿರುವಿರಿ? ಭಯಂಕರನಾದ ಶಿವನಿಗೆ ಕೊಟ್ಟು ಈ ಗಿರಿಜೆಯ ಸುಂದರರೂಪವನ್ನು ವ್ಯರ್ಥ ಮಾಡಲು ಪ್ರಯತ್ನಿಸುತ್ತಿರುವಿರೇನು? ಅದಾಗದು.

ಇತ್ಯುಕ್ತೇ ಚ ತಯಾ ತತ್ರ ಋಷಯಸ್ಸಪ್ತ ಏವ ಹಿ ।
ಊಚುಸ್ತೇ ವಚ ಆಗತ್ಯ ವಸಿಷ್ಠಾದ್ಯಾ ಮುನೀಶ್ವರ ॥ ೩೪ ॥

॥ ಸಪ್ತರ್ಷಯ ಊಚುಃ ॥

ಕಾರ್ಯಂ ಸಾಧಯಿತುಂ ಪ್ರಾಪ್ತಾಃ ಪಿತೃಕನ್ಯೇ ಗಿರಿಪ್ರಿಯೆ ।
ವಿರುದ್ಧಂ ಚಾತ್ರ ಯುಕ್ತಾರ್ಥೇ ಕಥಂ ಮನ್ಯಾಮಹೇ ವಯಂ ॥ ೩೫ ॥

ಅಯಂ ವೈ ಪರಮೋ ಲಾಭೋ ದರ್ಶನಂ ಶಂಕರಸ್ಯ ಯತ್ ।
ದಾನಪಾತ್ರಂ ಸ ತೇ ಭೂತ್ವಾಽಽಗತಸ್ತವ ಚ ಮಂದಿರಂ ॥ ೩೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತೈಸ್ತತೋ ಮೇನಾ ಮುನಿವಾಕ್ಯಂ ಮೃಷಾಕರೋತ್ ।
ಪ್ರತ್ಯುವಾಚ ಚ ರುಷ್ಟಾ ಸಾ ತಾನ್ ಋಷೀನ್ ಜ್ಞಾನದುರ್ಬಲಾ ॥ ೩೭ ॥

॥ ಮೇನೋವಾಚ ॥

ಶಸ್ತ್ರಾದ್ಯೈರ್ಘಾತಯಿಷ್ಯೇಽಹಂ ನ ದಾಸ್ಯೇ ಶಂಕರಾಯ ತಾಂ ।
ದೂರಂ ಗಚ್ಛತ ಸರ್ವೇ ಹಿ ನಾಗಂತವ್ಯಂ ಮದಂತಿಕೇ ॥ ೩೮ ॥

---

೩೪. ಹೀಗೆ ಮೇನೆಯು ಹೇಳಲು, ಆಗ ವಸಿಷ್ಠನೇ ಮೊದಲಾದ ಸಪ್ತಋಷಿಗಳು ಬಂದು ಮತ್ತಿತೆಂದರು.

೩೫. ಸಪ್ತಋಷಿಗಳು ಹೇಳಿದರು:—ಎಲೌ ಮೇನೆ, ವಿವಾಹಕಾರ್ಯವನ್ನು ನೆರವೇರಿಸಲು ನಾವು ಬಂದಿರುವೆವು ಈಗ ನಾವು ನಿನ್ನ ವಿರೋಧವನ್ನು ಮನ್ನಿಸಲಾರೆವು.

೩೬. ನಿನಗೀಗ ಆದ ಶಂಕರದರ್ಶನವು ಮಹಾ ಲಾಭವು. ಆ ಶಂಕರನು ನಿನ್ನ ದಾನಕ್ಕೆ ಪಾತ್ರನಾಗಿ ನಿನ್ನ ಮನೆಗೆ ತಾನಾಗಿಯೇ ಬಂದಿರುವನು ಎಂದರು.

೩೭. ಬ್ರಹ್ಮನು ಹೇಳಿದನು:—ಹೀಗೆ ಋಷಿಗಳು ಹೇಳಲು, ಮೇನೆಯು ಅವರ ಮಾತನ್ನು ತಿರಸ್ಕರಿಸಿದಳು. ಅಜ್ಞಾನಿಯಾದ ಅವಳು ಕೋಪದಿಂದ ಆ ಋಷಿಗಳನ್ನು ಕುರಿತು ಮತ್ತಿಂತೆಂದಳು.

೩೮. ಶಸ್ತ್ರಗಳಿಂದ ಗಿರಿಜೆಯನ್ನು ಕೊಂದುಹಾಕುವೆನೇ ಹೊರತು ಅವಳನ್ನು ಶಂಕರನಿಗೆ ಕೊಡುವುದಿಲ್ಲ. ನೀವೆಲ್ಲರೂ ದೂರಹೋಗಿರಿ ನನ್ನ ಬಳಿಗೆ ಬರಬೇಡಿರಿ.

॥ ಬ್ರಹ್ಮೋವಾಚ ॥
ಇತ್ಯುಕ್ತ್ವಾ ವಿರರಾಮಾಽಽಶು ಸಾ ವಿಲಪ್ಯಾತಿವಿಹ್ವಲಾ ।
ಹಾಹಾಕಾರೋ ಮಹಾನಾಸೀತ್ತತ್ರ ತದ್ವೃತ್ತತೋ ಮುನೇ ॥ ೩೯ ॥

ತತೋ ಹಿಮಾಲಯಸ್ತತ್ರಾಜಗಾಮಾತಿಸಮಾಕುಲಃ ।
ತಾಂ ಚ ಬೋಧಯಿತುಂ ಪ್ರೀತ್ಯಾ ಪ್ರಾಹ ತತ್ತ್ವಂ ಚ ದರ್ಶಯನ್ ॥ ೪೦ ॥

॥ ಹಿಮಾಲಯ ಉವಾಚ ॥
ಶೃಣು ಮೇನೇ ವಚೋ ಮೇಽದ್ಯ ವಿಕಲಾಸಿ ಕಥಂ ಪ್ರಿಯೇ ।
ಕೇ ಕೇ ಸಮಾಗತಾ ಗೇಹಂ ಕಥಂ ಚೈತಾನ್ವಿನಿಂದಸಿ ॥ ೪೧ ॥

ವಿಕಟಂ ತಸ್ಯ ಶಂಭೋಸ್ತು ನಾನಾರೂಪಾಭಿಧಸ್ಯ ಹಿ ।
ಶಂಕರಂ ತ್ವಂ ನ ಜಾನಾಸಿ ರೂಪಂ ದೃಷ್ಟ್ವಾಸಿ ವಿಹ್ವಲಾ ॥ ೪೨ ॥

ಸ ಶಂಕರೋ ಮಯಾ ಜ್ಞಾತಸ್ಸರ್ವೇಷಾಂ ಪ್ರತಿಪಾಲಕಃ ।
ಪೂಜ್ಯಾನಾಂ ಪೂಜ್ಯ ಏವಾಸೌ ಕರ್ತಾನುಗ್ರಹನಿಗ್ರಹೌ ॥ ೪೩ ॥

---

೩೯. ಹೀಗೆ ಹೇಳಿ ಮೇನೆಯು ತುಂಬಾ ಪ್ರಲಾಪಿಸಿ ಕೊನೆಕೆ ಸುಮ್ಮನಾದಳು. ಅವಳ ಈ ಬಗೆಯ ಹಠದಿಂದ ಅಲ್ಲಿ ಎಲ್ಲರಿಗೂ ತುಂಬಾ ಖೇದವಾಯಿತು.

೪೦. ಆಮೇಲೆ ಹಿಮವಂತನು ಬೇಗನೆ ಅಲ್ಲಿಗೆ ಬಂದನು. ಅವನು ಶಿವನ ತತ್ತ್ವವನ್ನು ಆ ಮೇನಕೆಗೆ ಮನದಟ್ಟಾಗುವಂತೆ ಈರೀತಿ ಬೋಧಿಸಿದನು.

೪೧. ಎಲೌ ಪ್ರಿಯೆ, ಹೀಗೇಕೆ ದುಡುಕಿ ಮಾತನಾಡುವೆ? ನನ್ನ ಮಾತನ್ನು ಕೇಳು. ನಮ್ಮ ಮನೆಗೆ ಬಂದಿರುವ ಈ ಪೂಜ್ಯರನ್ನೆಲ್ಲಾ ನಿಂದಿಸಿ ಮಾತನಾಡುತ್ತಿರುವೆಯಲ್ಲಾ? ಇದು ನಿನಗುಚಿತವೇ?

೪೨. ಎಲೌ ಮೇನೆ, ಶಂಕರನ ಈ ವಿಕಾರರೂಪವನ್ನು ನೋಡಿ ಅವನ ನಿಜ ರೂಪವನ್ನು ತಿಳಿಯದವಳಾಗಿರುವೆ. ಅವನು ಅನೇಕ ರೂಪಗಳನ್ನು ಧರಿಸಬಲ್ಲವನು.

೪೩. ಆ ಶಂಕರನ ಮಹಿಮೆಯನ್ನು ನಾನು ಬಲ್ಲೆನು. ಅವನು ಎಲ್ಲರನ್ನೂ ಪಾಲಿಸುವನು. ಪೂಜ್ಯರಿಗಿಂತಲೂ ಮಹಾಪೂಜ್ಯನು. ಅನುಗ್ರಹ ಮತ್ತು ನಿಗ್ರಹಗಳನ್ನು ಅವನೇ ಮಾಡುವವನು.

ಹಠಂ ನ ಕುರು ಮುಂಚ ತ್ವಂ ದುಃಖಂ ಪ್ರಾಣಪ್ರಿಯೇಽನಘೇ ।
ಉತ್ತಿಷ್ಠಾಽರಂ ತಥಾ ಕಾರ್ಯಂ ಕರ್ತುಮರ್ಹಸಿ ಸುವ್ರತೇ ॥ ೪೪ ॥

ಯದ್ವೈ ದ್ವಾರಗತಶ್ಶಂಭುಃ ಪುರಾ ವಿಕಟರೂಪಧೃಕ್ ।
ನಾನಾಲೀಲಾಂ ಚ ಕೃತವಾನ್ ಚೇತಯಾಮಿ ಚ ತಾಮಿಮಾಂ ॥ ೪೫ ॥

ತನ್ಮಾಹಾತ್ಮ್ಯಂ ಪರಂ ದೃಷ್ಟ್ವಾ ಕನ್ಯಾಂ ದಾತುಂ ತ್ವಯಾ ಮಯಾ ।
ಅಂಗೀಕೃತಂ ತದಾ ದೇವಿ ತತ್ಪ್ರಮಾಣಂ ಕುರು ಪ್ರಿಯೇ ॥ ೪೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಸೋಽದ್ರಿನಾಥೋ ಹಿ ವಿರರಾಮ ತತೋ ಮುನೇ ।
ತದಾಽಽಕರ್ಣ್ಯ ಶಿವಾಮಾತಾ ಮೇನೋವಾಚ ಹಿಮಾಲಯಂ ॥ ೪೭ ॥

॥ ಮೇನೋವಾಚ ॥

ಮದ್ವಚಃ ಶ್ರೂಯತಾಂ ನಾಥ ತಥಾ ತ್ವಂ ಕರ್ತುಮರ್ಹಸಿ ।
ಗೃಹೀತ್ವಾ ತನುಜಾಂ ಚೈನಾಂ ಬದ್ಧ್ವಾ ಕಂಠೇ ತು ಪಾರ್ವತೀಂ ॥ ೪೮ ॥

---

೪೪. ಎಲೌ ಪ್ರಿಯಳೇ, ಹಠವನ್ನು ಮಾಡಬೇಡ. ದುಃಖವನ್ನು ಬಿಡು. ಜಾಗ್ರತೆ ಏಳು. ಮುಂದಿನ ಕಾರ್ಯವನ್ನು ತ್ವರೆಯಿಂದ ಮಾಡು.

೪೫. ಹಿಂದೆ ಈ ಶಿವನು ವಿಚಿತ್ರರೂಪವನ್ನು ಧರಿಸಿ ನಮ್ಮ ಮನೆಯ ಬಾಗಿಲಿಗೆ ಬಂದು ಅನೇಕ ಲೀಲೆಗಳನ್ನು ನಿನ್ನೆದುರಿಗೇ ಪ್ರದರ್ಶಿಸಿರುವನು. ಅದು ನಿನಗೆ ಜ್ಞಾಪಕದಲ್ಲಿಲ್ಲವೇ?

೪೬. ಅವನ ಮಹಿಮೆಯನ್ನು ನೋಡಿ ನಾನೂ ನೀನೂ ಸಹ ಆಗ ಅವನಿಗೆ ಮಗಳನ್ನು ಕೊಡಲು ಅಂಗೀಕರಿಸಿರುವೆವು. ಅದನ್ನು ಪೂರ್ಣಮಾಡಿಕೊಡು ಎಂದನು.

೪೭. ಬ್ರಹ್ಮನು ಹೇಳಿದನು:—ಹೀಗೆ ಹೇಳಿ ಆ ಹಿಮವಂತನು ಸುಮ್ಮನಾದನು. ಅದನ್ನು ಕೇಳಿ ಮೇನೆಯು ತನ್ನ ಪತಿಯನ್ನು ಕುರಿತು,

೪೮. ಓ ನಾಥ, ನನ್ನ ಮಾತನ್ನು ಕೇಳು. ಈ ನಿನ್ನ ಮಗಳಾದ ಪಾರ್ವತಿಯನ್ನು ಹಿಡಿದುಕೊಂಡು ಕತ್ತನ್ನು ಹಿಸುಕಿ ಕೊಂದುಹಾಕು. ಖಂಡಿತವಾಗಿ ನಾನು ಇವಳನ್ನು ಶಿವನಿಗೆ ಕೊಡಲಾರೆನು.

ಅಥಃ ಪಾತಯ ನಿಶ್ಯಂಕಂ ದಾಸ್ಯೇ ತಾಂ ನ ಹರಾಯ ಹಿ ।
ತಥೈನಾಮಥವಾ ನಾಥ ಗತ್ವಾ ವೈ ಸಾಗರೇ ಸುತಾಂ ॥ ೪೯ ॥

ನಿಮಜ್ಜಯ ದಯಾಂ ತ್ಯಕ್ತ್ವಾ ತತೋsದ್ರೀಶ ಸುಖೀಭವ ।
ಯದಿ ದಾಸ್ಯಸಿ ಪುತ್ರೀಂ ತ್ವಂ ರುದ್ರಾಯ ವಿಕಟಾತ್ಮನೇ ॥
ತರ್ಹಿ ತ್ಯಕ್ಷ್ಯಾಮ್ಯಹಂ ಸ್ವಾಮಿನ್ ನಿಶ್ಚಯೇನ ಕಲೇವರಂ ॥ ೫೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತೇ ಚ ತದಾ ತತ್ರ ವಚನೇ ಮೇನಯಾ ಹಠಾತ್ ।
ಉವಾಚ ವಚನಂ ರಮ್ಯಂ ಪಾರ್ವತೀ ಸ್ವಯಮಾಗತಾ ॥ ೫೧ ॥

॥ ಪಾರ್ವತ್ಯುವಾಚ ॥

ಮಾತಸ್ತೇ ವಿಪರೀತಾ ಹಿ ಬುದ್ಧಿರ್ಜಾತಾ ಶುಭಾವಹಾ ।
ಧರ್ಮಾವಲಂಬನಾತ್ತ್ವಂ ಹಿ ಕಥಂ ಧರ್ಮಂ ಜಹಾಸಿ ವೈ ॥ ೫೨ ॥

ಅಯಂ ರುದ್ರೋ ಪರಸ್ಸಾಕ್ಷಾತ್ಸರ್ವಪ್ರಭವ ಈಶ್ವರಃ ।
ಶಂಭುಸ್ಸುರೂಪಸ್ಸುಖದಃ ಸರ್ವಶ್ರುತಿಷು ವರ್ಣಿತಃ ॥ ೫೩ ॥

---

೪೯. ಅಥವಾ ಈ ಪಾರ್ವತಿಯನ್ನು ಸಮುದ್ರಕ್ಕೊಯ್ದು ನಿರ್ದಯತೆಯಿಂದ ಮುಳುಗಿಸು. ಆಮೇಲೆ ಸುಖಿತನಾಗುವೆ.

೫೦. ಓ ಸ್ವಾಮಿ, ಆದಲ್ಲದೆ ಈ ಗಿರಿಜೆಯನ್ನು ಕುರೂಪಿಯಾದ ರುದ್ರನಿಗೆ ಕೊಟ್ಟರೆ ನಾನು ಖಂಡಿತವಾಗಿ ಪ್ರಾಣವನ್ನು ಬಿಡುವೆನು ಎಂದಳು.

೫೧. ಹೀಗೆ ಹಠದಿಂದ ಮೇನೆಯು ಹೇಳುತ್ತಿರಲು ಆಗ ಪಾರ್ವತಿಯು ತಾನೇ ಬಂದು ಅವಳನ್ನು ಸಮಾಧಾನಮಾಡಿದಳು.

೫೨. ಓ ಮಾತೆ, ನಿನಗೆ ಅಮಂಗಳವಾದ ಇಂತಹ ದುರ್ಬುದ್ಧಿಯು ಏಕೆ ಉಂಟಾಗಿರುವುದು? ನೀನು ಧರ್ಮಿಷ್ಠಳು. ಇಂತಹವಳು ಧರ್ಮವನ್ನು ಏಕೆ ಬಿಡುತ್ತಲಿರುವೆ?

೫೩. ಈ ರುದ್ರನು ಪರಮೇಶ್ವರು, ಇವನಿಂದಲೇ ಜಗತ್ತೆಲ್ಲವೂ ಜನಿಸಿರುವುದು. ಸುಖಸ್ವರೂಪಸಿವನು, ಸುಂದರನು, ಸುಖವನ್ನುಂಟುಮಾಡುವವನು, ಹೀಗೆಂದು ಎಲ್ಲಾ ವೇದಗಳೂ ಸಾರುತ್ತಿವೆ.

ಮಹೇಶಶ್ಶಂಕರಶ್ಚಾಯಂ ಸರ್ವದೇವಪ್ರಭುಃ ಸ್ವರಾಟ್ ।
ನಾನಾರೂಪಾಭಿದೋ ಮಾತರ್ಹರಿಬ್ರಹ್ಮಾದಿಸೇವಿತಃ ॥ ೫೪ ॥

ಅಧಿಷ್ಠಾನಂ ಚ ಸರ್ವೇಷಾಂ ಕರ್ತಾ ಹರ್ತಾ ಚ ಸ ಪ್ರಭುಃ ।
ನಿರ್ವಿಕಾರೀ ತ್ರಿದೇವೇಶೋ ಹ್ಯವಿನಾಶೀ ಸನಾತನಃ ॥ ೫೫ ॥

ಯದರ್ಥೇ ದೇವತಾಸ್ಸರ್ವಾ ಆಯಾತಾಃ ಕಿಂಕರೀಕೃತಾಃ ।
ದ್ವಾರಿ ತೇ ಸೋತ್ಸವಾಶ್ಚಾದ್ಯ ಕಿಮತೋಽನ್ಯತ್ಪರಂ ಸುಖಂ ॥ ೫೬ ॥

ಉತ್ತಿಷ್ಠಾತಃ ಪ್ರಯತ್ನೇನ ಸಫಲಂ ಜೀವಿತಂ ಕುರು ।
ದೇಹಿ ಮಾಂ ತ್ವಂ ಶಿವಾಯಾಸ್ಮೈ ಸ್ವಾಶ್ರಮಂ ಕುರು ಸಾರ್ಥಕಂ ॥ ೫೭ ॥

ದೇಹಿ ಮಾಂ ಪರಮೇಶಾಯ ಶಂಕರಾಯ ಜನನ್ಯಹೋ ।
ಸ್ವೀಕುರು ತ್ವಮಿಮಂ ಮಾತರ್ವಿನಯಂ ಮೇ ಬ್ರವೀಮಿ ತೇ ॥ ೫೮ ॥

---

೫೪. ಮತ್ತು ಇವನು ಮಹೇಶ್ವರನು, ಸುಖಕರನು, ದೇವತೆಗಳೆಲ್ಲರಿಗೂ ಒಡೆಯನು, ವಿರಾಟ್‌ಪುರುಷನು, ಅನೇಕ ರೂಪ ಮತ್ತು ನಾಮಗಳುಳ್ಳವನು. ಓ ಮಾತೆ, ಇವನನ್ನು ಹರಿ ಬ್ರಹ್ಮ ಮೊದಲಾದ ದೇವಶ್ರೇಷ್ಠರೂ ಸೇವಿಸುವರು.

೫೫. ಇವನು ಜಗತ್ತಿಗೆ ಆಧಾರನು, ಎಲ್ಲರನ್ನೂ ಸೃಷ್ಟಿಸುವನು, ಮತ್ತು ಸಂಹರಿಸುವನು. ಇವನಿಗೆ ಉತ್ಪತ್ತಿ ಮೊದಲಾದ ಯಾವ ವಿಕಾರಗಳೂ ಇಲ್ಲ. ತ್ರಿಮೂರ್ತಿಗಳಿಗೂ ಇವನು ಒಡೆಯನು. ಇವನಿಗೆ ನಾಶವಿಲ್ಲ, ಹುಟ್ಟೂ ಇಲ್ಲ.

೫೬. ಈ ಶಿವನಿಗಾಗಿಯೇ ದೇವತೆಗಳೆಲ್ಲರೂ ಸೇವಕರಾಗಿ ಉತ್ಸವದೊಡನೆ ಬಂದು ನಿನ್ನ ಮನೆಯ ಬಾಗಿಲಲ್ಲಿ ನಿಂತಿರುವರು. ಇದಕ್ಕಿಂತಲೂ ಸುಖದಾಯಕವಾದುದು ಬೇರೊಂದು ಇದೆಯೇ?

೫೭. ಆದುದರಿಂದ ಓ ಮಾತೆ, ಬೇಗನೆ ಎದ್ದು ನನ್ನನ್ನು ಶಿವನಿಗೆ ಧಾರೆ ಯೆರೆದುಕೊಟ್ಟು ನನ್ನ ಜೀವನವನ್ನು ಸಾರ್ಥಕಮಾಡಿಕೊಡು. ನಿನ್ನ ಗೃಹಸ್ಥಾಶ್ರಮವನ್ನೂ ಸಾರ್ಥಕಮಾಡಿಕೊ.

೫೮. ಓ ಜನನಿ, ಪರಮೇಶ್ವರನಾದ ಶಂಕರನಿಗೆ ನನ್ನನ್ನು ಮದುವೆಮಾಡಿಕೊಡು. ನನ್ನ ಈ ವಿನಂತಿಯನ್ನು ದಯವಿಟ್ಟು ನಡೆಸಿಕೊಡು.

ಚೇನ್ನ ದಾಸ್ಯಸಿ ತಸ್ಮೈ ಮಾಂ ನ ವೃಣೇಽನ್ಯಮಹಂ ವರಂ ।
ಭಾಗಂ ಲಭೇತ್ಕಥಂ ಸೈಂಹಂ ಶೃಗಾಲಃ ಪರವಂಚಕಃ ॥ ೫೯ ॥

ಮನಸಾ ವಚಸಾ ಮಾತಃ ಕರ್ಮಣಾ ಚ ಹರಸ್ಸ್ವಯಂ ।
ಮಯಾ ವೃತೋ ವೃತಶ್ಚೈವ ಯದಿಚ್ಛಸಿ ತಥಾ ಕುರು ॥ ೬೦ ॥

॥ ಬ್ರಹ್ಮೋವಾಚ ॥

ಇತ್ಯಾಽಽಕರ್ಣ್ಯ ಶಿವಾವಾಕ್ಯಂ ಮೇನಾ ಶೈಲೇಶ್ವರಪ್ರಿಯಾ ।
ಸುವಿಲಪ್ಯ ಮಹಾಕ್ರುದ್ಧಾ ಗೃಹೀತ್ವಾ ತತ್ಕಲೇವರಂ ॥ ೬೧ ॥

ಮುಷ್ಟಿಭಿಃ ಕೂರ್ಪರೈಶ್ಚೈವ ದಂತೈರ್ಘರ್ಷಯತೀ ಚ ಸಾ ।
ತಾಡಯಾಮಾಸ ತಾಂ ಪುತ್ರೀಂ ವಿಹ್ವಲಾತಿರುಷಾನ್ವಿತಾ ॥ ೬೨ ॥

ಯೇ ತತ್ರ ಋಷಯಸ್ತಾತ ತ್ವದಾದ್ಯಾಶ್ಚಾಪರೇ ಮುನೇ ।
ತದ್ಧಸ್ತಾತ್ತಾಂ ಪರಿಚ್ಛಿದ್ಯ ನಿನ್ಯುರ್ದೂರತರಂ ತತಃ ॥ ೬೩ ॥

---

೫೯. ನನ್ನನ್ನು ಶಿವನಿಗೆ ಕೊಡದಿದ್ದರೆ ನಾನಿನ್ನಾವ ವರನನ್ನೂ ವರಿಸುವುದಿಲ್ಲ. ಸಿಂಹದ ಭಾಗವನ್ನು ಕಪಟಿಯಾದ ನರಿಯು ಪಡೆಯಲು ಸಾಧ್ಯವೆ?

೬೦. ಓ ಮಾತೆ, ಮನಸ್ಸು, ವಾಕ್ಕು, ಕಾಯ, ಈ ಮೂ ಕರಣಗಳಿಂದಲೂ ನಾನು ಹರನನ್ನೇ ವರಿಸಿರುವೆನು, ಇದು ಸತ್ಯವು. ಇನ್ನು ನಿನ್ನಿಷ್ಟದಂತೆ ಮಾಡು ಎಂದಳು.

೬೧-೬೨. ಬ್ರಹ್ಮನು ಹೇಳಿದನು:—ಹೀಗೆ ಗಿರಿಜೆಯು ಹೇಳಲು, ಅವಳ ಮಾತನ್ನು ಕೇಳಿ ಮೇನಾದೇವಿಯು ತುಂಬಾ ಕೋಪಗೊಂಡು ಅವಳನ್ನು ಮುಷ್ಟಿಗಳಿಂದಲೂ, ಮೊಳಕೈನಿಂದಲೂ ಚೆನ್ನಾಗಿ ಹೊಡೆದಳು. ಹಲ್ಲಿನಿಂದ ಕಚ್ಚಿದಳು. ಅವಳಿಗೆ ಬಹು ಕೋಪಬಂದಿತು.

೬೩. ಎಲೈ ನಾರದ, ಆಗ ನೀನೂ ಅಲ್ಲಿದ್ದ ಋಷಿಗಳೂ ಪಾರ್ವತಿಯನ್ನು ಮೇನೆಯ ಕೈಯಿಂದ ಬಿಡಿಸಿ ದೂರ ಕರೆದುಕೊಂಡುಹೋದಿರಿ.

ತಾಂ ವೈ ತಥಾವಿಧಾಂ ದೃಷ್ಟ್ವಾ ಭರ್ತ್ಸಯಿತ್ವಾ ಪುನಃ ಪುನಃ ।
ಉವಾಚ ಶ್ರಾವಯಂತೀ ಸಾ ದುರ್ವಚೋ ನಿಖಿಲಾನ್ ಪುನಃ ॥ ೬೪ ॥

॥ ಮೇನೋವಾಚ ॥

ಕಿಮೇನಾಂ ಹಿ ಕರಿಷ್ಯೇಽಹಂ ದುಷ್ಟಾಂ ಗ್ರಹವತೀಂ ಶಿವಾಂ ।
ದಾಸ್ಯಾಮ್ಯಸ್ಯೈ ಗರಂ ತೀವ್ರಂ ಕೂಪೇ ಕ್ಷೇಪ್ಸ್ಯಾಮಿ ವಾ ದ್ರುತಂ ॥ ೬೫ ॥

ಛೇತ್ಸ್ಯಾಮಿ ಕಾಲೀಮಥವಾ ಶಸ್ತ್ರಾಸ್ತ್ರೈರ್ಭೂರಿಖಂಡಶಃ ।
ನಿಮಜ್ಜಯಿಷ್ಯೇ ವಾ ಸಿಂಧೌ ಸ್ವಸುತಾಂ ಪಾರ್ವತೀಂ ಖಲು ॥ ೬೬ ॥

ಅಥವಾ ಸ್ವಶರೀರಂ ಹಿ ತ್ಯಕ್ಷ್ಯಾಮ್ಯಾಶ್ವನ್ಯಥಾ ಧ್ರುವಂ ।
ನ ದಾಸ್ಯೇ ಶಂಭವೇ ಕನ್ಯಾಂ ದುರ್ಗಾಂ ವಿಕಟರೂಪಿಣೇ ॥ ೬೭ ॥

ವರೋಽಯಂ ಕೀದೃಶೋ ಭೀಮೋಽನಯಾ ಲಬ್ಧಶ್ಚ ದುಷ್ಟಯಾ ।
ಕಾರಿತಶ್ಚೋಪಹಾಸೋ ಮೇ ಗಿರೇಶ್ಚಾಪಿ ಕುಲಸ್ಯ ಹಿ ॥ ೬೮ ॥

---

೬೪. ಹೀಗೆ ಋಷಿಗಳು ದೂರ ಕರೆದುಕೊಂಡುಹೋದುದನ್ನು ನೋಡಿ ಮೇನೆಯು ತಿರುಗಿ ಆ ಗಿರಿಜೆಯನ್ನೂ ಋಷಿಗಳನ್ನೂ ಕೆಟ್ಟಮಾತುಗಳಿಂದ ಬೈಯ್ಯಲಾರಂಭಿಸಿದಳು.

೬೫. ಕೆಟ್ಟ ಹಠವನ್ನು ಮಾಡುವಂತಹ ಈ ದುಷ್ಟ ಗಿರಿಜೆಯನ್ನು ನಾನು ಈಗ ಏನು ಮಾಡಲಿ? ಇವಳಿಗೀಗ ಘೋರವಿಷವನ್ನು ಕುಡಿಸುವೆನು. ಇಲ್ಲವೆ ಭಾವಿಯಲ್ಲಿ ತಳ್ಳಿ ಜಾಗ್ರತೆ ಮುಳುಗಿಸುವೆನು.

೬೬. ಅಥವಾ ಶಸ್ತ್ರಗಳಿಂದ ಇವಳನ್ನು ಚೂರುಚೂರಾಗಿ ಕತ್ತರಿಸುವೆನು. ಇಲ್ಲವೆ ಸಮುದ್ರದಲ್ಲಿ ಈ ನನ್ನ ಮಗಳನ್ನು ನೂಕುವೆನು.

೬೭. ಅದಿಲ್ಲದಿದ್ದರೆ ನಾನೇ ಪ್ರಾಣವನ್ನು ಬಿಡುವೆನು. ಅಂತೂ ಭಯಂಕರ ರೂಪಿಯಾದ ಶಂಕರನಿಗೆ ಮಗಳನ್ನು ಕೊಡುವುದಿಲ್ಲ.

೬೮. ಈ ದುಷ್ಟೆಯು ಎಂತಹ ಭಯಂಕರನಾದ ವರನನ್ನು ವರಿಸಿರುವಳು? ಇವಳಿಂದ ನನಗೂ, ಗಿರಿರಾಜನಿಗೂ, ನಮ್ಮ ಕುಲಕ್ಕೂ ಅಪಮಾನವಾದಂತಾಯಿತು.

ನ ಮಾತಾ ನ ಪಿತಾ ಭ್ರಾತಾ ನ ಬಂಧುರ್ಗೋತ್ರಜೋऽಪಿ ವಾ ।
ನೋ ಸುರೂಪಂ ನ ಚಾತುರ್ಯಂ ನ ಗೃಹಂ ವಾಸ್ಯ ಕಿಂಚನ ॥ ೬೯ ॥

ನ ವಸ್ತ್ರಂ ನಾಪ್ಯಲಂಕಾರಾಃ ಸಹಾಯಾಃ ಕೇऽಪಿ ತಸ್ಯ ನ ।
ವಾಹನಂ ನ ಶುಭಂ ಹ್ಯಸ್ಯ ನ ವಯೋ ನ ಧನಂ ತಥಾ ॥ ೭೦ ॥

ನ ಪಾವಿತ್ರ್ಯಂ ನ ವಿದ್ಯಾ ಚ ಕೀದೃಶಃ ಕಾಯ ಆರ್ತಿದಃ ।
ಕಿಂ ವಿಲೋಕ್ಯ ಮಯಾ ಪುತ್ರೀ ದೇಯಾಸ್ಮೈ ಸ್ಸಾತ್ಸುಮಂಗಲಾ ॥ ೭೧ ॥

॥ ಬ್ರಹ್ಮೋವಾಚ ॥

ಇತ್ಯಾದಿ ಸುವಿಲಪ್ಯಾಥ ಬಹುಶೋ ಮೇನಕಾ ತದಾ ।
ರುರೋದೋಚ್ಚೈರ್ಮುನೇ ಸಾ ಹಿ ದುಃಖಶೋಕಪರಿಪ್ಲುತಾ ॥ ೭೨ ॥

ಅಥಾಹಂ ದ್ರುತಮಾಗತ್ಯಾಕಥಯಂ ಮೇನಕಾಂ ಚ ತಾಂ ।
ಶಿವತತ್ತ್ವಂ ಚ ಪರಮಂ ಕುಜ್ಞಾನಹರಮುತ್ತಮಂ ॥ ೭೩ ॥

---

೬೯. ಈ ಶಿವನಿಗೆ ತಂದೆತಾಯಿಗಳಿಲ್ಲ, ಸಹೋದರರಿಲ್ಲ, ಬಂಧುವಾಗಲೀ ಸಗೋತ್ರನಾಗಲೀ ಇಲ್ಲ. ರೂಪವು ಮೊದಲೇ ಇಲ್ಲ, ಚಾತುರ್ಯವೂ ಇಲ್ಲ, ಮನೆ ಸ್ವತ್ತು ಯಾವುದೂ ಇಲ್ಲ.

೭೦-೭೧. ಇವನಿಗೆ ವಸ್ತ್ರವಿಲ್ಲ, ಅಲಂಕಾರಗಳಿಲ್ಲ, ಸಹಾಯವಿಲ್ಲ. ಸುಂದರ ವಾದುದೊಂದು ವಾಹನವಿಲ್ಲ. ಇವನ ವಯಸ್ಸೆಷ್ಟೋ ತಿಳಿಯದು. ಧನವು ಮೊದಲೇ ಇಲ್ಲ. ಪವಿತ್ರತೆಯೂ ವಿದ್ಯೆಯೂ ಇವನಿಗಿಲ್ಲ. ಇವನ ಶರೀರವನ್ನು ನೋಡಿದರೆ ಅಸಹ್ಯ ವಾಗುವುದು. ಹೀಗಿರಲು ಏನನ್ನು ನೋಡಿ ನಾನು ಈ ಶಿವನಿಗೆ ನನ್ನ ಪ್ರಿಯ ಪುತ್ರಿಯನ್ನು ಕೊಡಲಿ? ಎಂದಳು.

೭೨. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಬಹುವಿಧವಾಗಿ ಪ್ರಲಾ ಪಿಸಿ ಆ ಮೇನಕಾದೇವಿಯು ಆಗ ದುಃಖದಿಂದ ತುಂಬಾ ರೋದಿಸಿದಳು.

೭೩. ಬಳಿಕ ನಾನು ಬೇಗನೆ ಮೇನಕೆಯ ಬಳಿಗೆ ಬಂದು ಅವಳ ಅಜ್ಞಾನ ವನ್ನು ತೊಲಗಿಸುವುದಕ್ಕಾಗಿ ಉತ್ತಮವಾದ ಶಿವತತ್ವವನ್ನು ಉಪದೇಶಿಸಿದೆನು.

॥ ಬ್ರಹ್ಮೋವಾಚ ॥

ಶ್ರೋತವ್ಯಂ ಪ್ರೀತಿತೋ ಮೇನೇ ಮದೀಯಂ ವಚನಂ ಶುಭಂ ।
ಯಸ್ಯ ಶ್ರವಣತಃ ಪ್ರೀತ್ಯಾ ಕುಬುದ್ಧಿಸ್ತೇ ವಿನಶ್ಯತಿ ॥ ೭೪ ॥

ಶಂಕರೋ ಜಗತಃ ಕರ್ತಾ ಭರ್ತಾ ಹರ್ತಾ ತಥೈವ ಚ ।
ನ ತ್ವಂ ಜಾನಾಸಿ ತದ್ರೂಪಂ ಕಥಂ ದುಃಖಂ ಸಮೀಹಸೇ ॥ ೭೫ ॥

ಅನೇಕರೂಪನಾಮಾ ಚ ನಾನಾಲೀಲಾಕರಃ ಪರಃ ।
ಸರ್ವಸ್ವಾಮೀ ಸ್ವತಂತ್ರಶ್ಚ ಮಾಯಾಧೀಶೋಽವಿಕಲ್ಪಕಃ ॥ ೭೬ ॥

ಇತಿ ವಿಜ್ಞಾಯ ಮೇನೇ ತ್ವಂ ಶಿವಾಂ ದೇಹಿ ಶಿವಾಯ ವೈ ।
ಕುಹಠಂ ತ್ಯಜ ಕುಜ್ಞಾನಂ ಸರ್ವಕಾರ್ಯವಿನಾಶನಂ ॥ ೭೭ ॥

॥ ಬ್ರಹ್ಮೋವಾಚ ॥

ಇತ್ಯುಕ್ತಾ ಸಾ ಮಯಾ ಮೇನಾ ವಿಲಪಂತೀ ಮುಹುರ್ಮುಹುಃ ।
ಲಜ್ಜಾಂ ಕಿಂಚಿಚ್ಛನೈಸ್ತ್ಯಕ್ತ್ವಾ ಮುನೇ ಮಾಂ ವಾಕ್ಯಮಬ್ರವೀತ್ ॥ ೭೮ ॥

---

೭೪. ಎಲೌ ಮೇನಾದೇವಿ, ನನ್ನ ಶುಭವಾದ ಮಾತನ್ನು ಪ್ರೀತಿಯಿಂದ ಕೇಳು. ಅದನ್ನು ಕೇಳಿದರೆ ನಿನ್ನ ಅಜ್ಞಾನವು ಕೂಡಲೇ ತೊಲಗುವುದು.

೭೫. ಶಂಕರನು ಜಗತ್ತನ್ನು ಸೃಷ್ಟಿಸುವವನು, ಪಾಲಿಸುವವನು ಮತ್ತು ಸಂಹರಿಸುವವನು. ಇವನ ಸ್ವರೂಪವನ್ನು ನೀನು ತಿಳಿದಿಲ್ಲ. ಸುಮ್ಮನೆ ದುಃಖ ಪಡುತ್ತಲಿರುವೆ.

೭೬. ಶಂಕರನಿಗೆ ಅನೇಕ ರೂಪಗಳೂ ನಾಮಗಳೂ ಇರುವುವು. ಇವನು ಅನೇಕ ಲೀಲೆಗಳನ್ನು ಪ್ರದರ್ಶಿಸುವನು. ಎಲ್ಲರಿಗೂ ಒಡೆಯನು, ಸ್ವತಂತ್ರನು. ಮಾಯೆಯನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿರುವನು. ಇವನಿಗೆ ಯಾವ ವಿಕಾರ ಗಳೂ ಇಲ್ಲ.

೭೭. ಎಲೌ ಮೇನೆ, ಹೀಗೆ ತಿಳಿದುಕೊಂಡು ಶಿವನಿಗೆ ಪಾರ್ವತಿಯನ್ನು ಕೊಡು. ಈ ಕೆಟ್ಟ ಹಠವನ್ನು ಬಿಡು. ಎಲ್ಲಾ ಕಾರ್ಯಗಳನ್ನೂ ನಾಶಮಾಡುವ ಈ ಅಜ್ಞಾನವನ್ನು ಬಿಡು.

೭೮. ಹೀಗೆ ನಾನು ಹೇಳಲು ಆ ಮೇನೆಯು ಲಜ್ಜೆಯನ್ನು ಬಿಟ್ಟು ವಿಲಾಪಿ ಸುತ್ತಾ ಮೆಲ್ಲನೆ ಹೀಗೆ ಹೇಳಿದಳು.

॥ ಮೆನೋವಾಚ ॥

ಕಿಮರ್ಥಂ ತು ಭವಾನ್ ಬ್ರಹ್ಮನ್ರೂಪಮಸ್ಯ ಮಹಾವರಂ ।
ವ್ಯರ್ಥೀಕರೋತಿ ಕಿಮಿಯಂ ಹನ್ಯತಾಂ ನ ಸ್ವಯಂ ಶಿವಾ ॥ ೭೯ ॥

ನ ವಕ್ತವ್ಯಂ ಚ ಭವತಾ ಶಿವಾಯ ಪ್ರತಿದೀಯತಾಂ ।
ನ ದಾಸ್ಯೇಽಹಂ ಶಿವಾಯೈನಾಂ ಸ್ವಸುತಾಂ ಪ್ರಾಣವಲ್ಲಭಾಂ ॥ ೮೦ ॥

॥ ಬ್ರಹ್ಮೋವಾಚ ॥

ಇತ್ಯುಕ್ತೇ ತು ತದಾ ಸಿದ್ಧಾಃ ಸನಕಾದ್ಯಾ ಮಹಾಮುನೇ ।
ಸಮಾಗತ್ಯ ಮಹಾಪ್ರೀತ್ಯಾ ವಚನಂ ಹೀದಮಬ್ರುವನ್ ॥ ೮೧ ॥

॥ ಸಿದ್ಧಾ ಊಚುಃ ॥

ಅಯಂ ವೈ ಪರಮಸ್ಸಾಕ್ಷಾಚ್ಛಿವಃ ಪರಸುಖಾವಹಃ ।
ಕೃಪಯಾ ಚ ಭವತ್ಪುತ್ರ್ಯೈ ದರ್ಶನಂ ದತ್ತವಾನ್ ಪ್ರಭುಃ ॥ ೮೨ ॥

---

೭೯. ಮೇನಾದೇವಿಯು ಹೇಳಿದಳು:—ಓ ಬ್ರಹ್ಮನೇ, ನೀನೂ ಸಹ ಈ ಗಿರಿಜೆಯ ಸುಂದರರೂಪವನ್ನು ವ್ಯರ್ಥಮಾಡಬೇಕೆಂದೆಣಿಸಿರುವೆಯಾ? ಅದರ ಬದಲು ಇವಳನ್ನು ನೀನೇ ಕೊಲ್ಲಬಾರದೆ?

೮೦. ಶಿವನಿಗೆ ಇವಳನ್ನು ಕೊಡುವಂತೆ ನೀನು ಹೇಳಕೂಡದು. ಪ್ರಾಣ ಪ್ರಿಯಳಾದ ಈ ನನ್ನ ಪುತ್ರಿಯನ್ನು ಶಿವನಿಗೆ ನಾನು ಕೊಡಲಾರೆನು ಎಂದಳು.

೮೧. ಬ್ರಹ್ಮನು ಹೇಳಿದನು:—ಹೀಗೆ ಮೇನಕೆಯು ಹೇಳಲು ಆಗ ಸನಕ ಮೊದಲಾದ ಸಿದ್ಧರು ಬಂದು ಪ್ರೀತಿಯಿಂದ ಇಂತೆಂದರು.

೮೨. ಸಿದ್ಧರು ಹೇಳಿದರು:—ಈ ಶಿವನು ಜಗತ್ತಿಗೇ ಸುಖವನ್ನುಂಟು ಮಾಡುವಂತಹ ಪರಮೇಶ್ವರನು. ಇವನು ನಿನ್ನ ಮಗಳಿಗೆ ಕರುಣದೋರಿ ದರ್ಶನ ವನ್ನಿತ್ತಿರುವನು ಎಂದರು.

॥ ಬ್ರಹ್ಮೋವಾಚ ॥

ಅಥೋವಾಚ ತು ತಾಂ ಮೇನಾ ವಿಲಪ್ಯ ಚ ಮುಹುರ್ಮುಹುಃ ।
ನ ದೇಯಾ ತು ಮಯಾ ಸಮ್ಯಗ್ಗಿರಿಶಾಯೋಗ್ರರೂಪಿಣೇ ॥ ೮೩ ॥

ಕಿಮರ್ಥಂ ತು ಭವಂತಶ್ಚ ಸರ್ವೇ ಸಿದ್ಧಾಃ ಪ್ರಪಂಚಿನಃ ।
ರೂಪಮಸ್ಯಾಃ ಪರಂ ನಾಮ ವ್ಯರ್ಥೀಕರ್ತುಂ ಸಮುದ್ಯತಾಃ ॥ ೮೪ ॥

ಇತ್ಯುಕ್ತೇ ಚ ತಯಾ ತತ್ರ ಮುನೇಽಹಂ ಚಕಿತೋಽಭವಂ ।
ಸರ್ವೇ ವಿಸ್ಮಯಮಾಪನ್ನಾ ದೇವಸಿದ್ಧರ್ಷಿಮಾನವಾಃ ॥ ೮೫ ॥

ಏತಸ್ಮಿನ್ ಸಮಯೇ ತಸ್ಯಾ ಹಠಂ ಶ್ರುತ್ವಾ ದೃಢಂ ಮಹತ್ ।
ದ್ರುತಂ ಶಿವಪ್ರಿಯೋ ವಿಷ್ಣುಸ್ಸಮಾಗತ್ಯಾಬ್ರವೀದಿದಂ ॥ ೮೬ ॥

॥ ವಿಷ್ಣುರುವಾಚ ॥

ಪಿತೄಣಾಂ ಚ ಪ್ರಿಯಾ ಪುತ್ರೀ ಮಾನಸೀ ಗುಣಸಂಯುತಾ ।
ಪತ್ನೀ ಹಿಮವತಃ ಸಾಕ್ಷಾದ್ಬ್ರಹ್ಮಣಃ ಕುಲಮುತ್ತಮಂ ॥ ೮೭ ॥

---

೮೩. ಬ್ರಹ್ಮನು ಹೇಳಿದನು :–ಆಗ ಮೇನೆಯು ಪುನಃ ಪುನಃ ಪ್ರಲಾಪಿಸುತ್ತಾ ಹೀಗೆ ಭಯಂಕರರೂಪಿಯಾದ ಶಿವನಿಗೆ ಗಿರಿಜೆಯನ್ನು ಖಂಡಿತವಾಗಿಯೂ ಕೊಡಲಾರೆನು.

೮೪. ಎಲೈ ಸಿದ್ಧರೇ, ವಿರಕ್ತರಾದ ನೀವೆಲ್ಲರೂ ಏಕೆ ಈ ಸಂಸಾರವಿಷಯದಲ್ಲಿ ಕೈಹಾಕಿ ಗಿರಿಜೆಯ ಸುಂದರರೂಪವನ್ನು ಹಾಳುಮಾಡಲು ತೊಡಗಿರುವಿರಿ?

೮೫. ಹೀಗೆ ಮೇನೆಯು ಹೇಳಲು ನಾನು ಗಾಬರಿಗೊಂಡೆನು. ದೇವತೆಗಳು, ಸಿದ್ಧರು ಋಷಿಗಳು ಎಲ್ಲರೂ ಆಶ್ಚರ್ಯಚಕಿತರಾದರು.

೮೬. ಇಷ್ಟರಲ್ಲಿ ಶಿವನ ಪ್ರಿಯ ಭಕ್ತನಾದ ವಿಷ್ಣುವು ಮೇನಾದೇವಿಯ ಹಠವನ್ನು ಕೇಳಿ ಕೂಡಲೇ ಅಲ್ಲಿಗೆ ಬಂದು,

೮೭. ಎಲೌ ಮೇನೆ, ನೀನು ಪಿತೃದೇವತೆಗಳ ಪ್ರಿಯಮಾನಸಪುತ್ರಿಯು, ಮೇಲಾಗಿ ಗುಣವಂತಳು. ಗಿರಿರಾಜನಾದ ಹಿಮವಂತನ ಪತ್ನಿಯು. ನಿನ್ನ ಕುಲವು ಉತ್ತಮವಾದ ಬ್ರಹ್ಮನ ಕುಲವು.

ಸಹಾಯಾಸ್ತಾದೃಶಾ ಲೋಕೇ ಧನ್ಯಾ ಹ್ಯಸಿ ವದಾಮಿ ಕಿಂ ।
ಧರ್ಮಸ್ಯಾಧಾರಭೂತಾಸಿ ಕಥಂ ಧರ್ಮಂ ಜಹಾಸಿ ಹಿ ॥ ೮೮ ॥

ದೇವೈಶ್ಚ ಋಷಿಭಿಶ್ಚೈವ ಬ್ರಹ್ಮಣಾ ವಾ ಮಯಾ ತಥಾ ।
ವಿರುದ್ಧಂ ಕಥ್ಯತೇ ಕಿಂ ನು ತ್ವಯೈವ ಸುವಿಚಾರ್ಯತಾಂ ॥ ೮೯ ॥

ಶಿವಂ ತ್ವಂ ನ ಚ ಜಾನಾಸಿ ನಿರ್ಗುಣಸ್ಸಗುಣಸ್ಸ ಹಿ ।
ವಿರೂಪಸ್ಸ ಸುರೂಪೋ ಹಿ ಸರ್ವಸೇವ್ಯಸ್ಸತಾಂ ಗತಿಃ ॥ ೯೦ ॥

ತೇನೈವ ನಿರ್ಮಿತಾ ದೇವೀ ಮೂಲಪ್ರಕೃತಿರೀಶ್ವರೀ ।
ತತ್ಪಾರ್ಶ್ವೇ ಚ ತದಾ ತೇನ ನಿರ್ಮಿತಃ ಪುರುಷೋತ್ತಮಃ ॥ ೯೧ ॥

ತಾಭ್ಯಾಂ ಚಾಹಂ ತಥಾ ಬ್ರಹ್ಮಾ ತತಶ್ಚ ಗುಣರೂಪತಃ ।
ಅವತೀರ್ಯ ಸ್ವಯಂ ರುದ್ರೋ ಲೋಕಾನಾಂ ಹಿತಕಾರಕಃ ॥ ೯೨ ॥

---

೮೮. ನಿನ್ನ ಪರಿವಾರವೂ ನಿನಗೆ ತಕ್ಕಂತೆ ಇರುವುದು. ಒಟ್ಟಿನಲ್ಲಿ ನೀನು ತುಂಬಾ ಧನ್ಯಳು. ತುಂಬಾ ಧರ್ಮಿಷ್ಠಳಾದ ನೀನೇ ಧರ್ಮವನ್ನು ಬಿಡಲುದ್ಯುಕ್ತಳಾಗಿರುವೆಯಲ್ಲಾ?

೮೯. ದೇವತೆಗಳು, ಋಷಿಗಳು, ಬ್ರಹ್ಮನು, ನಾನು ಎಲ್ಲರೂ ಸಹ ನಿನಗೆ ಅನಿಷ್ಟವಾದುದನ್ನೇ ಹೇಳುತ್ತೇವೆಯೇ? ಚನ್ನಾಗಿ ನೀನೇ ವಿಚಾರಮಾಡು.

೯೦. ಶಿವನ ಸ್ವರೂಪವನ್ನು ನೀನು ತಿಳಿದಿಲ್ಲ. ಅವನು ವಸ್ತುತಃ ನಿರ್ಗುಣನು. ಲೀಲೆಯಿಂದ ಸಗುಣ (ಈಶ್ವರ) ನೂ ಆಗುವನು ಮತ್ತು ಅವನು ವಿಕಾರವಾದ ರೂಪವುಳ್ಳವನೂ ಸುಂದರರೂಪವುಳ್ಳವನೂ ಆಗುವನು. ಅವನನ್ನು ಎಲ್ಲರೂ ಸೇವಿಸುವರು. ಸತ್ಪುರುಷರಿಗೆ ಅವನೇ ಗತಿಯು.

೯೧-೯೨. ಆ ಶಿವನೇ ಜಗದಾದಿಕಾರಣಳಾದ ಪ್ರಕೃತಿಯನ್ನು ನಿರ್ಮಿಸಿರುವನು ಮತ್ತು ಆ ಪ್ರಕೃತಿಯ ಭೋಗಕ್ಕಾಗಿ ಪುರುಷನನ್ನೂ ನಿರ್ಮಿಸಿರುವನು. ಶಿವನು ನಿರ್ಮಿಸಿದ ಪ್ರಕೃತಿಪುರುಷರಿಂದ ನಾನೂ ಬ್ರಹ್ಮನೂ ಜನಿಸಿರುವೆವು. ಪರಮೇಶ್ವರನು ಲೋಕಹಿತಕ್ಕಾಗಿ ರುದ್ರರೂಪದಿಂದ ಅವತರಿಸಿರುವನು.

ತತೋ ವೇದಾಸ್ತಥಾ ದೇವಾ ಯತ್ಕಿಂಚಿದ್ದೃಶ್ಯತೇ ಜಗತ್ ।
ಸ್ಥಾವರಂ ಜಂಗಮಂ ಚೈವ ತತ್ಸರ್ವಂ ಶಂಕರಾದಭೂತ್ ॥ ೯೩ ॥

ತದ್ರೂಪಂ ವರ್ಣಿತುಂ ಕೇನ ಜ್ಞಾಯತೇ ಕೇನ ವಾ ಪುನಃ ।
ಮಯಾ ಚ ಬ್ರಹ್ಮಣಾ ಯಸ್ಯ ಹ್ಯತೋ ಲಬ್ಧಶ್ಚ ನೈವ ಹಿ ॥ ೯೪ ॥

ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿದ್ದೃಶ್ಯತೇ ಜಗತ್ ।
ತತ್ಸರ್ವಂ ಚ ಶಿವಂ ವಿದ್ಧಿ ನಾತ್ರ ಕಾರ್ಯಾ ವಿಚಾರಣಾ ॥ ೯೫ ॥

ಸ ಏವೇದೃಕ್ಸ್ವರೂಪೇಣಾವತೀರ್ಣೋ ನಿಜಲೀಲಯಾ ।
ಶಿವಾತಪಃಪ್ರಭಾವಾದ್ಧಿ ತವ ದ್ವಾರಿ ಸಮಾಗತಃ ॥ ೯೬ ॥

ತಸ್ಮಾತ್ತ್ವಂ ಹಿಮವತ್ಪತ್ನಿ ದುಃಖಂ ಮುಂಚ ಶಿವಂ ಭಜ ।
ಭವಿಷ್ಯತಿ ಮಹಾನಂದಃ ಕ್ಲೇಶೋ ಯಾಸ್ಯತಿ ಸಂಕ್ಷಯಂ ॥ ೯೭ ॥

---

೯೩. ಆಮೇಲೆ ವೇದಗಳು, ದೇವತೆಗಳು ಮತ್ತು ಜಗತ್ತೆಲ್ಲವೂ ಆ ಶಂಕರನಿಂದಲೇ ಆಗಿರುವುವು.

೯೪. ಇಂತಹ ಪರಮೇಶ್ವರನ ರೂಪವನ್ನು ವರ್ಣಿಸಲು ಯಾವನಿಗೂ ಸಾಧ್ಯವಿಲ್ಲ. ನಾನೂ ಬ್ರಹ್ಮನೂ ಸಹ ಅವನ ಸ್ವರೂಪವನ್ನು ತಿಳಿಯಲಾರದವರಾಗಿರುವೆವು.

೯೫. ಬ್ರಹ್ಮ ಮೊದಲುಗೊಂಡು ಸಣ್ಣ ಕ್ರಿಮಿಯವರೆಗೆ ಇರುವ ಈ ಜಗತ್ತೆಲ್ಲವೂ ಶಿವನ ರೂಪವಾದುದೆಂದು ತಿಳಿ. ಇದರಲ್ಲಿ ಸಂಶಯವಿಲ್ಲ.

೯೬. ಆ ಪರಶಿವನೇ ಇಂತಹ ಸುಂದರವಾದ ಶಿವರೂಪವನ್ನು ಧರಿಸಿ ತನ್ನ ಲೀಲೆಯಿಂದ ಪ್ರಕಟನಾಗಿರುವನು. ಗೌರಿಯ ತಪೋಮಹಿಮೆಯಿಂದ ಆ ಶಿವನು ನಿನ್ನ ಮನೆಯ ಬಾಗಿಲಿಗೇ ಬಂದಿರುವನು.

೯೭. ಆದುದರಿಂದ ಎಲೌ ಗಿರಿಪತ್ನಿ, ಈ ದುಃಖವನ್ನು ಬಿಡು. ಶಿವನನ್ನು ಭಜಿಸು, ಅದರಿಂದ ನಿನಗೆ ಸೌಖ್ಯವುಂಟಾಗುವುದು. ದುಃಖವು ನಾಶವಾಗುವುದು ಎಂದನು.

॥ ಬ್ರಹ್ಮೋವಾಚ ॥

ಏವಂ ಪ್ರಬೋಧಿತಾಯಾಸ್ತು ಮೇನಕಾಯಾ ಅಭೂನ್ಮನೇ ।
ತಸ್ಯಾಸ್ತು ಕೋಮಲಂ ಕಿಂಚಿನ್ಮನೋವಿಷ್ಣುಪ್ರಬೋಧಿತಂ ॥ ೯೮ ॥

ಪರಂ ಹಠಂ ನ ತತ್ಯಾಜ ಕನ್ಯಾಂ ದಾತುಂ ಹರಾಯ ನ ।
ಸ್ವೀಚಕಾರ ತದಾ ಮೇನಾ ಶಿವಮಾಯಾವಿಮೋಹಿತಾ ॥ ೯೯ ॥

ಉವಾಚ ಚ ಹರಿಂ ಮೇನಾ ಕಿಂಚಿದ್ಬುದ್ಧಾ ಗಿರಿಪ್ರಿಯಾ ।
ಶ್ರುತ್ವಾ ವಿಷ್ಣುವಚೋ ರಮ್ಯಂ ಗಿರಿಜಾಜನನೀ ಹಿ ಸಾ ॥ ೧೦೦ ॥

ಯದಿರಮ್ಯತನುಸ್ಸ ಸ್ಯಾತ್ತದಾ ದೇಯಾ ಮಯಾ ಸುತಾ ।
ನಾನ್ಯಥಾ ಕೋಟಿಶೋ ಯತ್ನೈರ್ವಚ್ಮಿ ಸತ್ಯಂ ದೃಢಂ ವಚಃ ॥ ೧೦೧ ॥

---

೯೮. ಬ್ರಹ್ಮನು ಹೇಳಿದನು:—ಹೀಗೆ ಹರಿಯು ನಾನಾವಿಧವಾಗಿ ಬೋಧಿಸಲು ಆ ಮೇನಕೆಯ ಮನಸ್ಸು ಸ್ವಲ್ಪ ಮೃದುವಾಯಿತು.

೯೯. ಆದರೂ ಶಿವಮಾಯೆಯಿಂದ ಮೋಹಗೊಂಡ ಆ ಮೇನೆಯು ತನ್ನ ಹಠವನ್ನು ಬಿಡಲಿಲ್ಲ. ಹರನಿಗೆ ಕನ್ಯೆಯನ್ನು ಕೊಡಲು ಸಮ್ಮತಿಸಲಿಲ್ಲ.

೧೦೦. ವಿಷ್ಣುವಿನ ಮನೋಹರವಾದ ಮಾತನ್ನು ಕೇಳಿ ಸ್ವಲ್ಪ ತಿಳಿವಳಿಕೆಯುಳ್ಳವಳಾಗಿ ಆ ಮೇನಾದೇವಿಯು ಹರಿಯನ್ನು ಕುರಿತು,

೧೦೧. ಓ ಹರಿ, ಶಿವನು ಸುಂದರ ಶರೀರವುಳ್ಳವನಾದರೆ ನನ್ನ ಮಗಳನ್ನು ಕೊಡುವೆನು. ಅದಿಲ್ಲದೆ ನೀವು ಕೋಟಿ ಪ್ರಯತ್ನಗಳನ್ನು ಮಾಡಿದರೂ ನಾನು ಕೊಡಲಾರೆನು. ಇದು ನನ್ನ ದೃಢವೂ ಸತ್ಯವೂ ಆದ ಪ್ರತಿಜ್ಞೆಯು ಎಂದಳು.

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಚನಂ ಮೇನಾ ತೂಷ್ಣೀಮಾಸ ದೃಢವ್ರತಾ ।
ಶಿವೇಚ್ಛಾಪ್ರೇರಿತಾ ಧನ್ಯಾ ತಥಾ ಯಾಖಿಲಮೋಹಿನೀ ॥ ೧೦೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಚತುಶ್ಚತ್ವಾರಿಂಶೋಽಧ್ಯಾಯಃ



---

೧೦೨. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಶಿವೇಚ್ಛೆಯಿಂದ ಪ್ರೇರಿತಳಾದ ಆ ಮೇನಾದೇವಿಯು ಸುಮ್ಮನಾದಳು. ಶಿವೇಚ್ಛೆಯು ಎಲ್ಲರನ್ನೂ ಮೋಹಗೊಳಿಸುವುದಷ್ಟೆ ? ಹೀಗಿರುವಲ್ಲಿ ಸ್ತ್ರೀಮಾತ್ರಳಾದ ಮೇನೆಯು ಮೋಹಗೊಂಡುದರಲ್ಲಿ ಆಶ್ಚರ್ಯವೇನು ?

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
# ರುದ್ರಸಂಹಿತಾಯಾಂ ಪಾರ್ವತೀಖಂಡೇ
# ಪಂಚಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ತ್ವಂ ಹಿ ವಿಷ್ಣುನಾ ಪ್ರೇರಿತೋ ದ್ರುತಂ ।
ಅನುಕೂಲಯಿತುಂ ಶಂಭುಮಯಾಸ್ತನ್ನಿಕಟೇ ಮುನೇ ॥ ೧ ॥

ತತ್ರ ಗತ್ವಾ ಸ ವೈ ರುದ್ರೋ ಭವತಾ ಸುಪ್ರಬೋಧಿತಃ ।
ಸ್ತೋತ್ರೈರ್ನಾನಾವಿಧೈಸ್ಸ್ತುತ್ವಾ ದೇವಕಾರ್ಯಚಿಕೀರ್ಷಯಾ ॥ ೨ ॥

ಶ್ರುತ್ವಾ ತ್ವದ್ವಚನಂ ಪ್ರೀತ್ಯಾ ಶಂಭುನಾ ಧೃತಮದ್ಭುತಂ ।
ಸ್ವರೂಪಮುತ್ತಮಂ ದಿವ್ಯಂ ಕೃಪಾಲುತ್ವಂ ಚ ದರ್ಶಿತಂ ॥ ೩ ॥

---

## ನಲವತ್ತೈದನೆಯ ಅಧ್ಯಾಯವು

೧-೨. ಬ್ರಹ್ಮನು ಹೇಳಿದನು:—ಎಲೈ ನಾರದ, ಈ ಸಮಯದಲ್ಲಿ ನೀನು ಶಂಭುವನ್ನು ಒಲಿಸಿಕೊಳ್ಳಲು ಹರಿಯಿಂದ ಪ್ರೇರಿತನಾಗಿ, ಆ ಶಿವನ ಬಳಿಗೆ ಹೋಗಿ ದೇವಕಾರ್ಯಕ್ಕಾಗಿ ಅವನನ್ನು ಸ್ತುತಿಸಿ, ಸುಂದರರೂಪವನ್ನು ಧರಿಸುವಂತೆ ಪ್ರಾರ್ಥಿಸಿದೆ.

೩. ನಿನ್ನ ಮಾತನ್ನು ಪ್ರೀತಿಯಿಂದ ಕೇಳಿ ಶಿವನು ಅತ್ಯಾಶ್ಚರ್ಯಕರವಾದ ಸುಂದರರೂಪವನ್ನು ಧರಿಸಿದನು. ಮತ್ತು ತನ್ನ ದಯಾಲುತ್ವವನ್ನು ಪ್ರಕಟಿಸಿದನು.

ತದ್ದೃಷ್ಟ್ವಾ ಸುಂದರಂ ಶಂಭುಂ ಸ್ವರೂಪಂ ಮನ್ಮಥಾಧಿಕಂ ।
ಅತ್ಯಹೃಷ್ಯೋ ಮುನೇ ತ್ವಂ ಹಿ ಲಾವಣ್ಯಪರಮಾಯನಂ ॥ ೪ ॥

ಸ್ತೋತ್ರೈರ್ನಾನಾವಿಧೈಃ ಸ್ತುತ್ವಾ ಪರಮಾನಂದಸಂಯುತಃ ।
ಆಗಚ್ಛಸ್ತ್ವಂ ಮುನೇ ತತ್ರ ಯತ್ರ ಮೇನಾ ಸ್ಥಿತಾಖಿಲೈಃ ॥ ೫ ॥

ತತ್ರ ಗತ್ವಾ ಸುಪ್ರಸನ್ನೋ ಮುನೇಽತಿಪ್ರೇಮಸಂಕುಲಃ ।
ಹರ್ಷಯಂಸ್ತಾಂ ಶೈಲಪತ್ನೀಂ ಮೇನಾಂ ತಂ ವಾಕ್ಯಮಬ್ರವೀಃ ॥ ೬ ॥

॥ ನಾರದ ಉವಾಚ ॥

ಮೇನೇ ಪಶ್ಯ ವಿಶಾಲಾಕ್ಷಿ ಶಿವರೂಪಮನುತ್ತಮಂ ।
ಕೃತಾ ಶಿವೇನ ತೇನೈವ ಸುಕೃಪಾ ಕರುಣಾತ್ಮನಾ- ॥ ೭ ॥

॥ ಬ್ರಹ್ಮೋವಾಚ ॥

ಶ್ರುತ್ವಾ ಸಾ ತದ್ವಚೋ ಮೇನಾ ವಿಸ್ಮಿತಾ ಶೈಲಕಾಮಿನೀ ।
ದದರ್ಶ ಶಿವರೂಪಂ ತತ್ಪರಮಾನಂದದಾಯಕಂ ॥ ೮ ॥

ಕೋಟಿಸೂರ್ಯಪ್ರತೀಕಾಶಂ ಸರ್ವಾಯವಸುಂದರಂ ।
ವಿಚಿತ್ರವಸನಂ ಚಾತ್ರ ನಾನಾಭೂಷಣಭೂಷಿತಂ ॥ ೯ ॥

---

೪. ಆ ಶಿವನು ಮನ್ಮಥನಿಗಿಂತಲೂ ಮಹಾ ಲಾವಣ್ಯವಂತನಾಗಿದ್ದನು. ಆ ಶಿವನನ್ನು ನೋಡಿ ನಿನಗೆ ತುಂಬಾ ಸಂತೋಷವಾಯಿತು.

೫-೭. ಬಳಿಕ ನೀನು ಸಂತೋಷದಿಂದ ಶಿವನನ್ನು ತುಂಬಾ ಸ್ತುತಿಸಿ ಮೇನಾ ದೇವಿಯಿರುವಲ್ಲಿಗೆ ಹೋಗಿ, ಪ್ರೀತಿಯಿಂದ ಮೇನಾದೇವಿಯನ್ನು ಸಂತೋಷಗೊಳಿಸುತ್ತಾ, ಎಲೌ ವಿಶಾಲಾಕ್ಷಿ, ಶಿವನ ಸುಂದರರೂಪವನ್ನು ನೋಡು, ಕರುಣಾಮಯನಾದ ಅವನು ನಮ್ಮಲ್ಲಿ ಕೃಪೆಯನ್ನು ಮಾಡಿರುವನು ಎನ್ನಲು,

೮. ನಿನ್ನ ಮಾತನ್ನು ಕೇಳಿ ಮೇನಾದೇವಿಯು ಆಶ್ಚರ್ಯಗೊಂಡು ತುಂಬಾ ಆನಂದಕರವಾದ ಶಿವನ ಸುಂದರರೂಪವನ್ನು ಕಣ್ಣುತುಂಬಾ ನೋಡಿದಳು.

೯-೧೦. ಆಗ ಶಿವನು ಕೋಟಿಸೂರ್ಯರಷ್ಟು ತೇಜಸ್ವಿಯಾಗಿದ್ದನು. ಅವನ ಸರ್ವಾವಯವಗಳೂ ಸುಂದರವಾಗಿದ್ದುವು. ವಿಚಿತ್ರವಾದ ವಸ್ತ್ರವನ್ನು ಧರಿಸಿದ್ದನು.

ಸುಪ್ರಸನ್ನಂ ಸುಹಾಸಂ ಚ ಸುಲಾವಣ್ಯಂ ಮನೋಹರಂ ।
ಗೌರಾಭಂ ದ್ಯುತಿಸಂಯುಕ್ತಂ ಚಂದ್ರರೇಖಾವಿಭೂಷಿತಂ ॥ ೧೦ ॥

ಸರ್ವದೇವಗಣೈಃ ಪ್ರೀತ್ಯಾ ವಿಷ್ಣ್ವಾದ್ಯೈಸ್ಸೇವಿತಂ ತಥಾ ।
ಸೂರ್ಯೇಣ ಛತ್ರಿತಂ ಮೂರ್ಧ್ನಿ ಚಂದ್ರೇಣ ಚ ವಿಶೋಭಿತಂ ॥ ೧೧ ॥

ಗಂಗಾ ಚ ಯಮುನಾ ಚೈವ ವಿಧತ್ತಃ ಸ್ಮ ಸುಚಾಮರೇ ।
ಸಿದ್ಧಯೋಽಷ್ಟೌ ಪುನಸ್ತಸ್ಯ ಕುರ್ವಂತಿ ಸ್ಮ ಸುನರ್ತನಂ ॥ ೧೨ ॥

ಸರ್ವಥಾ ಸುರಮಣೀಯಂ ಚ ಭೂಷಿತಸ್ಯ ವಿಭೂಷಣೈಃ ।
ವಾಹನಸ್ಯ ಮಹಾಶೋಭಾ ವರ್ಣಿತುಂ ನೈವ ಶಕ್ಯತೇ ॥ ೧೩ ॥

ಮಯಾ ಚೈವ ತದಾ ವಿಷ್ಣುರಿಂದ್ರಾದ್ಯಾ ಹ್ಯಮರಾಸ್ತಥಾ ।
ಸ್ವಂ ಸ್ವಂ ವೇಷಂ ಸುಸಂಭೂಷ್ಯ ಗಿರಿಶೇನಾಚರನ್ಯುತಾಃ ॥ ೧೪ ॥

---

ಅನೇಕ ಆಭರಣಗಳಿಂದ ಅಲಂಕೃತನಾಗಿದ್ದನು. ಪ್ರಸನ್ನತೆಯಿಂದಲೂ ಮಂದಹಾಸದಿಂದಲೂ ಕೂಡಿ ತುಂಬಾ ಸುಂದರನೂ ಮನೋಹರನೂ ಆಗಿದ್ದನು. ಶುಭ್ರವಾದ ಶರೀರಕಾಂತಿಯಿಂದಲೂ ಶಿರಸ್ಸಿನಲ್ಲಿ ಚಂದ್ರಕಲೆಯಿಂದಲೂ ಒಪ್ಪುತ್ತಿದ್ದನು.

೧೧. ಹರಿಯೇ ಮೊದಲಾದ ದೇವತೆಗಳೆಲ್ಲರೂ ಪ್ರೀತಿಯಿಂದ ಆ ಶಿವನನ್ನು ಸೇವಿಸುತ್ತಿದ್ದರು. ಸೂರ್ಯನು ಛತ್ರಿಯನ್ನು ಹಿಡಿದಿದ್ದನು. ಚಂದ್ರನು ಸಮೀಪದಲ್ಲಿ ನಿಂತು ಓಲೈಸುತ್ತಿದ್ದನು.

೧೨. ಗಂಗಾ ಯಮುನೆಯರು ಶಿವನಿಗೆ ಚಾಮರವನ್ನು ಬೀಸುತ್ತಲಿದ್ದರು. ಅಷ್ಟಸಿದ್ಧಿಗಳು ಶಿವನೆದುರಿಗೆ ನರ್ತನಮಾಡುತ್ತಲಿದ್ದರು.

೧೩. ಹೀಗೆ ಶಿವನು ಮಹಾ ಸುಂದರನಾಗಿದ್ದನು. ಅವನ ವಾಹನವೂ ಸಹ ನಾನಾಭರಣಗಳಿಂದ ಅಲಂಕೃತವಾಗಿದ್ದಿತು. ಅದನ್ನು ವರ್ಣಿಸಲಸದಳವು.

೧೪. ನಾನು, ವಿಷ್ಣು, ಇಂದ್ರನೇ ಮೊದಲಾದ ದೇವತೆಗಳೂ ಸಹ ನಮ್ಮ ನಮ್ಮ ವೇಷಭೂಷಣಾದಿಗಳನ್ನು ಧರಿಸಿ ಶಿವನನ್ನು ಓಲೈಸುತ್ತಿದ್ದೆವು.

ತಥಾ ಜಯೇತಿ ಭಾಷಂತೋ ನಾನಾರೂಪಾ ಗಣಾಸ್ತದಾ ।
ಸ್ವಲಂಕೃತಮಹಾಮೋದಾ ಗಿರೀಶಪುರತೋಽಚರನ್ ॥ ೧೫ ॥

ಸಿದ್ಧಾಶ್ಚೋಪಸುರಾಸ್ಸರ್ವೇ ಮುನಯಶ್ಚ ಮಹಾಸುಖಾಃ ।
ಯಯುಃ ಶಿವೇನ ಸುಪ್ರೀತಾಸ್ಸಕಲಾಶ್ಚಾಪರೇ ತಥಾ ॥ ೧೬ ॥

ಏವಂ ದೇವಾದಯಸ್ಸರ್ವೇ ಕುತೂಹಲಸಮನ್ವಿತಾಃ ।
ಪರಂ ಬ್ರಹ್ಮ ಗೃಣಂತಸ್ತೇ ಸ್ವಪತ್ನೀಭಿರಲಂಕೃತಾಃ ॥ ೧೭ ॥

ವಿಶ್ವಾವಸುಮುಖಾಸ್ತತ್ರ ಹ್ಯಪ್ಸರೋಗಣಸಂಯುತಾಃ ।
ಗಾಯಂತೋಽಪ್ಯಗ್ರತಸ್ತಸ್ಯ ಪರಮಂ ಶಾಂಕರಂ ಯಶಃ ॥ ೧೮ ॥

ಇತ್ಥಂ ಮಹೋತ್ಸವಸ್ತತ್ರ ಬಭೂವ ಮುನಿಸತ್ತಮ ।
ನಾನಾವಿಧೋ ಮಹೇಶೇ ಹಿ ಶೈಲದ್ವಾರಿ ಚ ಗಚ್ಛತಿ ॥ ೧೯ ॥

ತಸ್ಮಿಂಶ್ಚ ಸಮಯೇ ತತ್ರ ಸುಷುಮಾ ಯಾ ಪರಾತ್ಮನಃ ।
ವರ್ಣಿತುಂ ತಾಂ ವಿಶೇಷೇಣ ಕಶ್ಶಕ್ನೋತಿ ಮುನೀಶ್ವರ ॥ ೨೦ ॥

---

೧೫. ನಾನಾ ರೂಪಗಳುಳ್ಳ ಶಿವಗಣಗಳು ಸುಂದರವಾಗಿ ಅಲಂಕರಿಸಿಕೊಂಡು ಜಯಧ್ವನಿಯನ್ನು ಮಾಡುತ್ತಾ ಶಿವನ ಮುಂದೆ ನಡೆದು ಬರುತ್ತಲಿದ್ದವು.

೧೬. ಅಲ್ಲದೆ, ಸಿದ್ಧರೇ ಮೊದಲಾದ ಉಪದೇವತೆಗಳು, ಮುನಿಗಳು ಎಲ್ಲರೂ ಸಹ ಸಂತೋಷದಿಂದ ಶಿವನೊಡನೆ ಹೊರಟುಬಂದರು.

೧೭-೧೮. ದೇವತೆಗಳೆಲ್ಲರೂ ಸಂತೋಷಚಿತ್ತರಾಗಿ ಪರಬ್ರಹ್ಮನಾದ ಶಿವನನ್ನು ಸ್ತುತಿಸುತ್ತಾ ತಮ್ಮ ತಮ್ಮ ಪತ್ನಿಯರೊಡನೆ ಬರುತ್ತಿದ್ದರು. ಮತ್ತು ವಿಶ್ವಾವಸು ಮೊದಲಾದ ಗಂಧರ್ವರು ಅಪ್ಸರೆಯರೊಡನೆ ಶಿವನ ಮಹತ್ತಾದ ಯಶಸ್ಸನ್ನು ಗಾನಮಾಡುತ್ತಾ ಎದುರಿನಲ್ಲಿ ನಡೆದುಬಂದರು.

೧೯. ಹೀಗೆ ಶಿವನು ಹಿಮವಂತನರಮನೆಗೆ ಮಹಾವೈಭವದಿಂದ ತೆರಳುವಾಗ ಮಹತ್ತಾದ ಉತ್ಸವವು ನಡೆಯಿತು.

೨೦. ಉತ್ಸವದಲ್ಲಿ ಹೊರಟುಬರುತ್ತಿರುವ ಪರಮಾತ್ಮನಾದ ಶಿವನ ಅಪೂರ್ವ ತೇಜಸ್ಸನ್ನು ವರ್ಣಿಸಲು ಯಾರು ತಾನೇ ಸಮರ್ಥರು?

ತಥಾವಿಧಂ ಚ ತಂ ದೃಷ್ಟ್ವಾ ಮೇನಾ ಚಿತ್ರಗತಾ ಇವ ।
ಕ್ಷಣಮಾಸೀತ್ತತಃ ಪ್ರೀತ್ಯಾ ಪ್ರೋವಾಚ ವಚನಂ ಮುನೇ ॥ ೨೧ ॥

॥ ಮೇನೋವಾಚ ॥

ಧನ್ಯಾ ಪುತ್ರೀ ಮದೀಯಾ ಚ ಯಯಾ ತಪ್ತಂ ಮಹತ್ತಪಃ ॥
ತತ್ಪ್ರಭಾವಾನ್ಮಹೇಶಾನ ತ್ವಂ ಪ್ರಾಪ್ತ ಇಹ ಮದ್ಗೃಹೇ ॥ ೨೨ ॥

ಮಯಾ ಕೃತಾ ಪುರಾ ಯಾ ವೈ ಶಿವನಿಂದಾ ದುರತ್ಯಯಾ ।
ತಾಂ ಕ್ಷಮಸ್ವ ಶಿವಾಸ್ವಾಮಿನ್ ಸುಪ್ರಸನ್ನೋ ಭವಾಧುನಾ ॥ ೨೩ ॥

॥ ಬ್ರಹ್ಮೋವಾಚ ॥

ಇತ್ಥಂ ಸಂಭಾಷ್ಯ ಸಾ ಮೇನಾ ಸಂಸ್ತೂಯೇಂದುಲಲಾಟಕಂ ।
ಸಾಂಜಲಿಃ ಪ್ರಣತಾ ಶೈಲಪ್ರಿಯಾ ಲಜ್ಜಾಪರಾಭವತ್ ॥ ೨೪ ॥

ತಾವತ್ಸ್ತ್ರೀಯಃ ಸಮಾಜಗ್ಮುರ್ಹಿತ್ವಾ ಕಾಮಾನನೇಕಶಃ ।
ಬಹ್ವ್ಯಸ್ತಾಃ ಪುರವಾಸಿನ್ಯಃ ಶಿವದರ್ಶನಲಾಲಸಾಸಾಃ ॥ ೨೫ ॥

---

೨೧. ಮಹಾ ಸುಂದರನಾಗಿರುವ ಇಂತಹ ಶಿವನನ್ನು ನೋಡಿ ಮೇನಾದೇವಿಯು ಸ್ವಲ್ಪಹೊತ್ತು ಆಶ್ಚರ್ಯದಿಂದ ಚಿತ್ರದ ಬೊಂಬೆಯಂತೆ ಸ್ತಂಭಿತಳಾದಳು. ಆಮೇಲೆ ಅವಳು ಸಂತೋಷದಿಂದ ಇಂತೆಂದಳು.

೨೨. ಓ ಮಹೇಶ್ವರ, ನಿನ್ನಂತಹ ವರನನ್ನು ಕುರಿತು ತಪಸ್ಸುಮಾಡಿದ ನನ್ನ ಪುತ್ರಿಯು ಧನ್ಯಳು ಅವಳ ತಪಸ್ಸಿನ ಪ್ರಭಾವದಿಂದ ನೀನು ನನ್ನ ಮನೆಗೆ ಬಂದಿರುವೆ.

೨೩. ಹಿಂದೆ ನಾನು ಮಹಾ ಪಾಪಕರವಾದ ಶಿವನಿಂದೆಯನ್ನು ಮಾಡಿರುವೆನು. ಓ ಪಾರ್ವತೀಪ್ರಿಯ, ಆ ಪಾಪವನ್ನು ಕ್ಷಮಿಸು, ಪ್ರಸನ್ನನಾಗು, ಎಂದಳು.

೨೪. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಆ ಮೇನಾದೇವಿಯು ಶಿವನನ್ನು ಸ್ತುತಿಸಿ, ಭಕ್ತಿಯಿಂದ ಕೈಮುಗಿದು ನಮಸ್ಕರಿಸಿ ಲಜ್ಜೆಯಿಂದ ಸುಮ್ಮನಾದಳು.

೨೫. ಅಷ್ಟರಲ್ಲಿ ಆ ಊರಿನ ಅನೇಕ ಸ್ತ್ರೀಯರು ಶಿವನನ್ನು ನೋಡಲೋಸುಗ ತಮ್ಮ ಕೆಲಸಗಳನ್ನೆಲ್ಲಾ ಬಿಟ್ಟು ಅಲ್ಲಿಗೆ ಬಂದರು.

ಮಜ್ಜನಂ ಕುರ್ವತೀ ಕಾಚಿತ್ತ್ರಚೂರ್ಣಸಹಿತಾ ಯಯೌ ।
ದ್ರಷ್ಟುಂ ಕುತೂಹಲಾಢ್ಯಾ ಚ ಶಂಕರಂ ಗಿರಿಜಾವರಂ ॥ ೨೬ ॥

ಕಾಚಿತ್ತು ಬಾಲಕಂ ಹಿತ್ವಾ ಪಿಬಂತಂ ಸ್ತನ್ಯಮಾದರಾತ್ ।
ಅತೃಪ್ತಂ ಶಂಕರಂ ದ್ರಷ್ಟುಂ ಯಯೌ ದರ್ಶನಲಾಲಸಾ ॥ ೨೭ ॥

ಕಾಚಿತ್ತು ಸ್ವಾಮಿನಸ್ಸೇವಾಂ ಸಖೀಯುಕ್ತಾ ವಿಹಾಯ ಚ ।
ಸುಚಾಮರಕರಾ ಪ್ರೀತ್ಯಾಗಾಚ್ಛಂಭೋರ್ದರ್ಶನಾಯ ಚ ॥ ೨೮ ॥

ರಶನಾಂ ಬಧ್ನತೀ ಕಾಚಿತ್ತ್ರಯೈವ ಸಹಿತಾ ಯಯೌ ।
ವಸನಂ ವಿಪರೀತಂ ವೈ ಧೃತ್ವಾ ಕಾಚಿದ್ಯಯೌ ತತಃ ॥ ೨೯ ॥

ಭೋಜನಾರ್ಥಂ ಸ್ಥಿತಂ ಕಾಂತಂ ಹಿತ್ವಾ ಕಾಚಿದ್ಯಯೌ ಪ್ರಿಯಾ ।
ದ್ರಷ್ಟುಂ ಶಿವಾವರಂ ಪ್ರೀತ್ಯಾ ಸತೃಷ್ಣಾ ಸಕುತೂಹಲಾ ॥ ೩೦ ॥

---

೨೬. ಓರ್ವ ಸುಂದರಿಯು ಸ್ನಾನಮಾಡುತ್ತಲಿದ್ದವಳು ಶಂಕರನನ್ನು ನೋಡುವ ಕುತೂಹಲದಿಂದ ಸ್ನಾನಚೂರ್ಣವನ್ನು ಕೈಯಲ್ಲಿ ಹಿಡಿದುಕೊಂಡೇ ಬಂದಳು.

೨೭. ಮತ್ತೋರ್ವ ಸುಂದರಿಯು ತನ್ನ ಬಾಲಕನು ಮಲೆಯುಣ್ಣುತ್ತಲಿರುವುದನ್ನೂ ಲೆಕ್ಕಿಸದೆ ಅವನನ್ನಲ್ಲಿಯೇ ಬಿಟ್ಟು ಶಿವನನ್ನು ನೋಡುವುದಕ್ಕಾಗಿ ಬಂದಳು.

೨೮. ಮತ್ತೋರ್ವ ಯುವತಿಯು ತನ್ನ ಪತಿಗೆ ಚಾಮರ ಬೀಸುವುದನ್ನು ಬಿಟ್ಟು ತ್ವರೆಯಿಂದ ಅದೇ ಚಾಮರವನ್ನು ಕೈಯಲ್ಲಿ ಹಿಡಿದುಕೊಂಡೇ ಸಖಿಯರೊಡನೆ ಶಿವನನ್ನು ನೋಡಲು ಬಂದಳು.

೨೯. ಓರ್ವಳು ಒಡ್ಯಾಣವನ್ನು ಕಟ್ಟಿಕೊಳ್ಳುತ್ತಿದ್ದು ಶಿವನು ಬಂದುದನ್ನು ಕೇಳಿ ಕೂಡಲೆ ಆ ಒಡ್ಯಾಣವನ್ನು ಕೈಯಲ್ಲೇ ಹಿಡಿದುಕೊಂಡು ಬಂದಳು. ಮತ್ತೋರ್ವಳು ಸೀರೆಯನ್ನು ತ್ವರೆಯಿಂದ ವ್ಯತ್ಯಾಸವಾಗಿ ಉಟ್ಟುಕೊಂಡು ಬಂದಳು.

೩೦. ಓರ್ವ ತರುಣಿಯು ತನ್ನ ಪತಿಯು ಭೋಜನಕ್ಕೆ ಕುಳಿತಿರುವುದನ್ನೂ ಲೆಕ್ಕಿಸದೆ ಪಾರ್ವತೀವರನಾದ ಶಂಕರನನ್ನು ನೋಡಲು ಕುತೂಹಲದಿಂದ ಬಂದಳು.

ಕಾಚಿದ್ಧಸ್ತೇ ಶಲಾಕಾಂ ಚ ಧೃತ್ವಾಂಜನಕರಾ ಪ್ರಿಯಾ ।
ಅಂಜಿಶ್ಯೈಕಾಕ್ಷಿ ಸಂಪ್ರುಷ್ಟುಂ ಯಯೌ ಶೈಲಸುತಾವರಂ ॥ ೩೧ ॥

ಕಾಚಿತ್ತು ಕಾಮಿನೀ ಪಾದೌ ರಂಜಯಂತೀ ಹ್ಯಲಕ್ತಕೈಃ ।
ಶ್ರುತ್ವಾ ಘೋಷಂ ಚ ತದ್ಧಿತ್ವಾ ದರ್ಶನಾರ್ಥಮುಪಾಗತಾ ॥ ೩೨ ॥

ಇತ್ಯಾದಿ ವಿವಿಧಂ ಕಾರ್ಯಂ ಹಿತ್ವಾ ವಾಸಂ ಸ್ತ್ರಿಯೋಽಯಯುಃ ।
ದೃಷ್ಟ್ವಾ ತು ಶಾಂಕರಂ ರೂಪಂ ಮೋಹಂ ಪ್ರಾಪ್ತಾಸ್ತದಾಭವನ್ ॥ ೩೩ ॥

ತತಸ್ತಾಃ ಪ್ರೇಮಸಂವಿಗ್ನಾಃ ಶಿವದರ್ಶನಹರ್ಷಿತಾಃ ।
ನಿಧಾಯ ಹೃದಿ ತನ್ಮೂರ್ತಿಂ ವಚನಂ ಚೇದಮಬ್ರುವನ್ ॥ ೩೪ ॥

॥ ಪುರವಾಸಿನ್ಯ ಊಚುಃ ॥

ನೇತ್ರಾಣಿ ಸಫಲಾನ್ಯಾಸನ್ ಹಿಮವತ್ಪುರವಾಸಿನಾಂ ।
ಯೋ ಯೋಽಪಶ್ಯದದೋ ರೂಪಂ ತಸ್ಯ ವೈ ಸಾರ್ಥಕಂ ಜನುಃ ॥ ೩೫ ॥

---

೩೧. ಮತ್ತೊಬ್ಬಳು ರಮಣಿಯು ಕಣ್ಣಿಗೆ ಕಪ್ಪನ್ನು ಹಚ್ಚುತ್ತಲಿದ್ದು ಒಂದು ಕಣ್ಣಿಗೆ ಹಚ್ಚಿ ಮುಗಿಸುವಾಗ ಶಿವನು ಬಂದ ಸುದ್ದಿಯನ್ನು ಕೇಳಿ ಬಣ್ಣ ಹಚ್ಚುವ ಕುಂಚಿಕೆಯನ್ನು ಹಿಡಿದುಕೊಂಡೇ ಶಿವನನ್ನು ನೋಡಲು ಬಂದಳು.

೩೨. ಕಾಲಿಗೆ ಅರಗುಬಣ್ಣವನ್ನು ಹಚ್ಚಿಕೊಳ್ಳುತ್ತಲಿದ್ದ ಇನ್ನೊಬ್ಬಳು ಕಾಮಿನಿಯು ಶಿವನು ಬಂದ ಸುದ್ದಿಯನ್ನು ಕೇಳಿ ಕೂಡಲೇ ಅದನ್ನು ಬಿಟ್ಟು ಶಿವನನ್ನು ನೋಡಲು ಓಡಿಬಂದಳು.

೩೩. ಇದೇ ಮೊದಲಾದ ಅನೇಕ ಕಾರ್ಯಗಳನ್ನು ಮಾಡುತ್ತಿದ್ದವರು ಆ ಕಾರ್ಯಗಳನ್ನೆಲ್ಲಾ ಬಿಟ್ಟು ಶಿವನನ್ನು ನೋಡಲು ಬಂದರು. ಶಿವನ ಸುಂದರರೂಪವನ್ನು ನೋಡಿ ಎಲ್ಲರೂ ಮೋಹಗೊಂಡರು.

೩೪. ಆಮೇಲೆ ಆ ಸ್ತ್ರೀಯರೆಲ್ಲರೂ ಪ್ರೇಮಪರವಶರಾಗಿ ಶಿವನ ದರ್ಶನದಿಂದ ಸಂತೋಷಸಾಗರದಲ್ಲಿ ಮುಳುಗಿದರು. ತಮ್ಮ ಹೃದಯದಲ್ಲಿ ಶಿವನ ಮೂರ್ತಿಯನ್ನು ಸ್ಥಾಪಿಸಿಕೊಂಡು ಇಂತೆಂದರು.

೩೫. ಪುರಸ್ತ್ರೀಯರು ಹೇಳಿದರು:—ಈ ಶಿವನನ್ನು ದರ್ಶನಮಾಡಿದ ಹಿಮವಂತನಗರದ ಜನಗಳ ನೇತ್ರಗಳು ಸಫಲವಾದುವು. ಶಿವನ ಈ ರೂಪವನ್ನು ನೋಡಿದವರೆಲ್ಲರ ಜನ್ಮವೂ ಸಾರ್ಥಕವಾಯಿತು.

ತಸ್ಯೈವ ಸಫಲಂ ಜನ್ಮ ತಸ್ಯೈವ ಸಫಲಾಃ ಕ್ರಿಯಾಃ ।
ಯೇನ ದೃಷ್ಟಃ ಶಿವಸ್ಸಾಕ್ಷಾತ್ಸರ್ವಪಾಪಪ್ರಣಾಶಕಃ ॥ ೩೬ ॥

ಪಾರ್ವತ್ಯಾ ಸಾಧಿತಂ ಸರ್ವಂ ಶಿವಾರ್ಥೇ ಯತ್ತಪಃ ಕೃತಂ ।
ಧನ್ಯೇಯಂ ಕೃತಕೃತ್ಯೇಯಂ ಶಿವಾ ಪ್ರಾಪ್ಯ ಶಿವಂ ಪತಿಂ ॥ ೩೭ ॥

ಯದೀದಂ ಯುಗಲಂ ಬ್ರಹ್ಮಾ ನ ಯುಂಜ್ಯಾಚ್ಛಿವಯೋರ್ಮುದಾ ।
ತದಾ ಚ ಸಕಲೋಽಪ್ಯಸ್ಯ ಶ್ರಮೋ ನಿಷ್ಫಲತಾಮಿಯಾತ್ ॥ ೩೮ ॥

ಸಮ್ಯಕ್ಕೃತಂ ತಥಾ ಚಾತ್ರ ಯೋಜಿತಂ ಯುಗ್ಮಮುತ್ತಮಂ ।
ಸರ್ವೇಷಾಂ ಸಾರ್ಥತಾ ಜಾತಾ ಸರ್ವಕಾರ್ಯಸಮುದ್ಭವಾ ॥ ೩೯ ॥

ವಿನಾ ತು ತಪಸಾ ಶಂಭೋರ್ದರ್ಶನಂ ದುರ್ಲಭಂ ನೃಣಾಂ ।
ದರ್ಶನಾಚ್ಛಂಕರಸ್ಯೈವ ಸರ್ವೇ ಯಾತಾಃ ಕೃತಾರ್ಥತಾಂ ॥ ೪೦ ॥

---

೩೬. ಪಾಪಹರನಾದ ಹರನನ್ನು ನೋಡಿದವರೆಲ್ಲರ ಜನ್ಮಗಳೂ ಸಾರ್ಥಕವಾದುವು. ಮಾಡಿದ ಕರ್ಮಗಳೆಲ್ಲವೂ ಸಫಲವಾದುವು.

೩೭. ಶಿವನನ್ನುದ್ದೇಶಿಸಿ ತಪಸ್ಸನ್ನು ಮಾಡಿ ಪಾರ್ವತಿಯು ಮಹತ್ತಾದ ಕಾರ್ಯವನ್ನು ಸಾಧಿಸಿರುವಳು. ಶಿವನನ್ನು ಪತಿಯನ್ನಾಗಿ ಪಡೆದ ಗಿರಿಜೆಯು ಧನ್ಯಳು, ಕೃತಕೃತ್ಯಳು.

೩೮. ಈ ಗಿರಿಜಾಶಿವರನ್ನು ದಂಪತಿಗಳಾಗಿ ಬ್ರಹ್ಮನು ಸೇರಿಸದಿದ್ದರೆ ಅವನ ಮಿಕ್ಕ ಶ್ರಮವೆಲ್ಲವೂ ವ್ಯರ್ಥವಾಗುತ್ತಲಿತ್ತು.

೩೯. ಯೋಗ್ಯವಾದ ಕಾರ್ಯವನ್ನು ಮಾಡಿದಂತಾಯಿತು. ಸರಿಯಾದ ಜೋಡಿಯನ್ನು ಸೇರಿಸಿದಂತಾಯಿತು. ಈ ಕಾರ್ಯಕ್ಕಾಗಿ ಪ್ರಯತ್ನಪಟ್ಟವರೆಲ್ಲರ ಶ್ರಮವೂ ಸಾರ್ಥಕವಾಯಿತು.

೪೦. ತಪಸ್ಸನ್ನು ಮಾಡದೆ ಜನರಿಗೆ ಶಿವನ ದರ್ಶನವು ಆಗಲಾರದು. ಆದರೂ ಈಗ ಅನಾಯಾಸವಾಗಿ ಆದ ಈ ಶಿವನ ದರ್ಶನದಿಂದ ಎಲ್ಲರೂ ಕೃತಾರ್ಥರಾದರು.

ಲಕ್ಷ್ಮೀರ್ನಾರಾಯಣಂ ಲೇಭೇ ಯಥಾ ವೈ ಸ್ವಾಮಿನಂ ಪುರಾ ।
ತಥಾಸೌ ಪಾರ್ವತೀ ದೇವೀ ಹರಂ ಪ್ರಾಪ್ಯ ಸುಭೂಷಿತಾ ॥ ೪೧ ॥

ಬ್ರಹ್ಮಾಣಂ ಚ ಯಥಾ ಲೇಭೆ ಸ್ವಾಮಿನಂ ವೈ ಸರಸ್ವತೀ ।
ತಥಾಸೌ ಪಾರ್ವತೀ ದೇವೀ ಹರಂ ಪ್ರಾಪ್ಯ ಸುಭೂಷಿತಾ ॥ ೪೨ ॥

ವಯಂ ಧನ್ಯಾಃ ಸ್ತ್ರಿಯಸ್ಸರ್ವಾಃ ಪುರುಷಾಃ ಸಕಲಾ ವರಾಃ ।
ಯೇ ಯೇ ಪಶ್ಯಂತಿ ಸರ್ವೇಶಂ ಗಿರಿಶಂ ಗಿರಿಜಾಪತಿಂ ॥ ೪೩ ॥

॥ ಬ್ರಹ್ಮೋವಾಚ ॥

ಇತ್ಥಮುಕ್ತ್ವಾ ತು ವಚನಂ ಚಂದನೈಶ್ಚಾಕ್ಷತೈರಪಿ ।
ಶಿವಂ ಸಮರ್ಚಯಾಮಾಸುರ್ಲಾಜಾ ವವೃಷುರಾದರಾತ್ ॥ ೪೪ ॥

ತಸ್ಥುರತ್ರ ಸ್ತ್ರಿಯಃ ಸರ್ವಾ ಮೇನಯಾ ಸಹ ಸೋತ್ಸುಕಾಃ ।
ವರ್ಣಯಂತ್ಯೋಽಧಿಕಂ ಭಾಗ್ಯಂ ಮೇನಾಯಾಶ್ಚ ಗಿರೇರಪಿ ॥ ೪೫ ॥

---

೪೧. ಹಿಂದೆ ಲಕ್ಷ್ಮೀದೇವಿಯು ನಾರಾಯಣನನ್ನು ಪಡೆವಂತೆ ಈಗ ಈ ಪಾರ್ವತೀದೇವಿಯು ಶಂಕರನನ್ನು ಪಡೆದು ಧನ್ಯಳಾದಳು.

೪೨. ಬ್ರಹ್ಮನನ್ನು ಪತಿಯನ್ನಾಗಿ ಪಡೆದ ಸರಸ್ವತಿಯಂತೆ ಈ ಗಿರಿಜೆಯು ಹರನನ್ನು ಪಡೆದು ಧನ್ಯಳಾದಳು.

೪೩. ಗಿರಿಜೆಯ ವರನಾದ ಈ ಶಿವನನ್ನು ನೋಡಿದ ನಾವು ಸ್ತ್ರೀಯರೆಲ್ಲರೂ ಧನ್ಯರಾದೆವು. ಪುರುಷರೂ ಧನ್ಯರಾದರು.

೪೪. ಬ್ರಹ್ಮನು ಹೇಳಿದನು :—ಹೀಗೆ ಹೇಳಿ ಆ ಸ್ತ್ರೀಯರು ಚಂದನಾಕ್ಷತೆಗಳಿಂದ ಶಿವನನ್ನರ್ಚಿಸಿ ಆದರದಿಂದ ಅರಳನ್ನು ಅವನ ಮೇಲೆ ಎರಚಿದರು.

೪೫. ಆ ಸ್ತ್ರೀಯರೆಲ್ಲರೂ ಮೇನಾಹಿಮವಂತರ ಭಾಗ್ಯವನ್ನು ಕೊಂಡಾಡಿದರು. ಮತ್ತು ಮೇನಾದೇವಿಯೊಂದಿಗೆ ಕುತೂಹಲದಿಂದ ಅಲ್ಲಿಯೇ ನಿಂತಿದ್ದರು.

ಕಥಾಸ್ತಥಾವಿಧಾಃ ಶೃಣ್ವಂಸ್ತದ್ವಾಮಾವರ್ಣಿತಾಃ ಶುಭಾಃ ।
ಪ್ರಹೃಷ್ಟೋಽಭೂತ್ಪ್ರಭುಸ್ಸರ್ವೈರ್ಮುನೇ ವಿಷ್ಣ್ವಾದಿಭಿಸ್ತದಾ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಪಂಚಚತ್ವಾರಿಂಶೋಽಧ್ಯಾಯಃ



---

೪೬. ಹೀಗೆ ಆ ಪುರಸುಂದರಿಯರು ಪರಸ್ಪರವಾಗಿ ನುಡಿಯುತ್ತಿದ್ದ ಮಾತುಗಳನ್ನು ಕೇಳಿ ಪರಮೇಶ್ವರನಿಗೆ ಸಂತೋಷವಾಯಿತು. ಹರಿಯೇ ಮೊದಲಾದವರೂ ಹರ್ಷಗೊಂಡರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಷಟ್ಚತ್ವಾರಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಥ ಶಂಭುಃ ಪ್ರಸನ್ನಾತ್ಮಾ ಸಹೂತಂ ಸ್ವಗಣೈಸ್ಸುರೈಃ ।
ಸರ್ವೈರನ್ಯೈರ್ಗಿರೇರ್ಧಾಮ ಜಗಾಮ ಸಕುತೂಹಲಂ ॥ ೧ ॥

ಮೇನಾಪಿ ಸ್ತ್ರೀಗಣೈಸ್ತತ್ರ ಹಿಮಾಚಲವರಪ್ರಿಯಾ ।
ತತ ಉತ್ಥಾಯ ಸ್ವಗೃಹಾಭ್ಯಂತರಂ ಸಾ ಜಗಾಮ ಹ ॥ ೨ ॥

ನೀರಾಜನಾರ್ಥಂ ಶಂಭೋಶ್ಚ ದೀಪಪಾತ್ರಕರಾ ಸತೀ ।
ಸರ್ವರ್ಷಿಸ್ತ್ರೀಗಣೈಸ್ಸಾಕಮಾಗಚ್ಛದ್ದ್ವಾರಮಾದರಾತ್ ॥ ೩ ॥

---

## ನಲವತ್ತಾರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಆಮೇಲೆ ಪ್ರಸನ್ನನಾದ ಶಂಕರನು ಗಣಗಳಿಂದಲೂ ದೇವತೆಗಳಿಂದಲೂ ಕೂಡಿಕೊಂಡು ಕುತೂಹಲದಿಂದ ಹಿಮವಂತನ ಮನೆಗೆ ಬಂದನು.

೨-೩. ಆಗ ಮೇನಾದೇವಿಯು ಎದ್ದು ಸ್ತ್ರೀಯರೊಡನೆ ಮನೆಯ ಒಳಗೆ ಹೋಗಿ ಶಂಕರನಿಗೆ ಆರತಿಯನ್ನೆತ್ತಲು ಋಷಿಪತ್ನಿಯರೇ ಮೊದಲಾದ ಸುಮಂಗಲಿಯರೊಡನೆ ಆರತಿಯನ್ನು ಹಚ್ಚಿ ಹಿಡಿದುಕೊಂಡು ಹೊರಬಾಗಲಿಗೆ ಬಂದಳು.

ಚಾರುಚಂಪಕವರ್ಣಾಭಮೇಕವಕ್ತ್ರಂ ತ್ರಿಲೋಚನಂ ।
ಈಷದ್ಧಾಸ್ಯಪ್ರಸನ್ನಾಸ್ಯಂ ರತ್ನಸ್ವರ್ಣಾದಿಭೂಷಿತಂ ॥ ೪ ॥

ತತ್ರಾಗತಂ ಮಹೇಶಾನಂ ಶಂಕರಂ ಗಿರಿಜಾವರಂ ।
ದದರ್ಶ ಪ್ರೀತಿತೋ ಮೇನಾ ಸೇವಿತಂ ಸಕಲೈಸ್ಸುರೈಃ ॥ ೫ ॥

ಮಾಲತೀಮಾಲಸಂಯುಕ್ತಂ ಸದ್ರತ್ನಮುಕುಟೋಜ್ಜ್ವಲಂ ।
ಸತ್ಕಂಠಾಭರಣಂ ಚಾರುವಲಯಾಂಗದಭೂಷಿತಂ ॥ ೬ ॥

ವಹ್ನಿಶೌಚೇನಾತುಲೇನ ತ್ವತಿಸೂಕ್ಷ್ಮೇಣ ಚಾರುಣಾ ।
ಅಮೂಲ್ಯವಸ್ತ್ರಯುಗ್ಮೇನ ವಿಚಿತ್ರೇಣಾತಿರಾಜಿತಂ ॥ ೭ ॥

ಚಂದನಾಗರುಕಸ್ತೂರೀಚಾರುಕುಂಕುಮಭೂಷಿತಂ ।
ರತ್ನದರ್ಪಣಹಸ್ತಂ ಚ ಕಜ್ಜಲೋಜ್ಜ್ವಲಲೋಚನಂ ॥ ೮ ॥

---

೪-೫. ಆಗ ಶಿವನು ಸುಂದರವಾದ ಸಂಪಿಗೆ ಹೂವಿನ ಬಣ್ಣದ ಶರೀರಕಾಂತಿಯಿಂದ ಬೆಳಗುತ್ತಿದ್ದನು. ಅವನಿಗೆ ಒಂದೇ ಮುಖವಿದ್ದು ಮೂರು ಕಣ್ಣುಗಳಿಂದೊಪ್ಪುತ್ತಿದ್ದನು. ರತ್ನಾಭರಣಗಳಿಂದ ಅಲಂಕೃತನಾಗಿದ್ದು ಮಂದಹಾಸವನ್ನು ಬೀರುತ್ತಲಿದ್ದನು. ಇಂತಹ ಗಿರಿಜೆಯ ವರನಾದ ದೇವಸೇವಿತನಾದ ಶಿವನನ್ನು ಮೇನೆಯು ನೋಡಿದಳು.

೬. ಮತ್ತು ಆ ಶಿವನು ಕಂಠದಲ್ಲಿ ಮಾಲತೀ ಪುಷ್ಪದ ಹಾರವನ್ನು ಧರಿಸಿದ್ದನು. ಶಿರಸ್ಸಿನಲ್ಲಿ ರತ್ನಖಚಿತವಾದ ಕಿರೀಟವನ್ನು ಧರಿಸಿದ್ದನು. ಸುಂದರವಾದ ಕಂಠಿಹಾರವನ್ನು ಹಾಕಿಕೊಂಡಿದ್ದನು. ಮನೋಹರವಾದ ಕಡಗ ಮತ್ತು ಭುಜಕೀರ್ತಿ (ತೋಳುಬಳೆ) ಗಳನ್ನು ತೊಟ್ಟಿದ್ದನು.

೭. ಅಗ್ನಿಯಂತೆ ತೇಜಸ್ವಿಯೂ ಅತಿಸೂಕ್ಷ್ಮವೂ ವಿಚಿತ್ರವೂ ಅಮೂಲ್ಯವೂ ಆದ ಬಟ್ಟೆಗಳನ್ನು ಧರಿಸಿ ಪ್ರಕಾಶಿಸುತ್ತಲಿದ್ದನು.

೮. ಚಂದನ ಅಗರು ಕಸ್ತೂರಿಗಳಿಂದ ಮಿಶ್ರಿತವಾದ ಕುಂಕುಮವನ್ನು ಹಣೆಯಲ್ಲಿಟ್ಟಿದ್ದನು. ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡಿದ್ದನು. ಕೈಯಲ್ಲಿ ರತ್ನಕನ್ನಡಿಯನ್ನು ಹಿಡಿದಿದ್ದನು.

ಸರ್ವಸ್ವಪ್ರಭಯಾಚ್ಛನ್ನಮತೀವ ಸುಮನೋಹರಂ ।
ಅತೀವ ತರುಣಂ ರಮ್ಯಂ ಭೂಷಿತಾಂಗೈಶ್ಚ ಭೂಷಿತಂ ॥ ೯ ॥

ಕಾಮಿನೀಕಾಂತಮವ್ಯಗ್ರಂ ಕೋಟಿಚಂದ್ರಾನನಾಂಬುಜಂ ।
ಕೋಟಿಸ್ಮರಾಧಿಕತನುಚ್ಛವಿಂ ಸರ್ವಾಂಗಸುಂದರಂ ॥ ೧೦ ॥

ಈದೃಗ್ವಿಧಂ ಸುದೇವಂ ತಂ ಸ್ಥಿತಂ ಸ್ವಪುರತಃ ಪ್ರಭುಂ ।
ದೃಷ್ಟ್ವಾ ಜಾಮಾತರಂ ಮೇನಾ ಜಹೌ ಶೋಕಂ ಮುದಾನ್ವಿತಾ ॥ ೧೧ ॥

ಪ್ರಶಶಂಸ ಸ್ವಭಾಗ್ಯಂ ಸಾ ಗಿರಿಜಾಂ ಭೂಧರಂ ಕುಲಂ ।
ಮೇನೇ ಕೃತಾರ್ಥಮಾತ್ಮಾನಂ ಜಹರ್ಷ ಚ ಪುನಃ ಪುನಃ ॥ ೧೨ ॥

ನೀರಾಜನಂ ಚಕಾರಾಸೌ ಪ್ರಫುಲ್ಲವದನಾ ಸತೀ ।
ಅವಲೋಕಪರಾ ತತ್ರ ಮೇನಾ ಜಾಮಾತರಂ ಮುದಾ ॥ ೧೩ ॥

---

೯. ಹೀಗೆ ಶಿವನು ತುಂಬಾ ಪ್ರಭೆಯಿಂದ ಕೂಡಿ ಮನೋಹರನಾಗಿದ್ದನು. ನವಯೌವನಾನ್ವಿತನಾಗಿ ರಮ್ಯನಾಗಿದ್ದನು. ಅವನ ಸರ್ವಾಯವಗಳೂ ಆಭರಣ ಗಳಿಂದ ಅಲಂಕೃತವಾಗಿದ್ದವು.

೧೦. ಅವನ ಮುಖವು ಕೋಟಿಚಂದ್ರರಂತೆ ಪ್ರಕಾಶಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದಿತು. ಕೋಟಿಮನ್ಮಥರಿಗಿಂತಲೂ ಸುಂದರವಾದ ಶರೀರಕಾಂತಿಯುಳ್ಳವನಾಗಿದ್ದನು. ಹೀಗೆ ಸರ್ವಾಂಗಸುಂದರನಾಗಿ ಶಿವನು ಕಾಮಿನಿಯರಿಗೆ ಮೋಹಕನಾಗಿದ್ದನು.

೧೧. ಹೀಗೆ ಬಹು ಸೌಂದರ್ಯದಿಂದ ಬೆಳಗುತ್ತಾ ತನ್ನೆದುರಿನಲ್ಲಿಯೇ ನಿಂತಿರುವ ಮಹಾದೇವನನ್ನು ನೋಡಿ ಮೇನಾದೇವಿಯು ಸಂತೋಷಗೊಂಡು ತನ್ನ ಹಿಂದಿನ ಶೋಕವನ್ನು ತ್ಯಜಿಸಿದಳು.

೧೨. ಆಗ ಆ ಮೇನೆಯು ತನ್ನ ಮತ್ತು ಹಿಮವಂತನ ಭಾಗ್ಯವನ್ನೂ ಗಿರಿಜೆಯ ಅದೃಷ್ಟವನ್ನೂ ಬಣ್ಣಿಸಿದಳು. ತನ್ನ ಕುಲವನ್ನೂ ಹೊಗಳಿಕೊಂಡಳು. ಮತ್ತು ತಾನು ಕೃತಾರ್ಥಳಾದಳೆಂದು ತಿಳಿದುಕೊಂಡು ಪುನಃ ಪುನಃ ಹರ್ಷದಿಂದ ಹಿಗ್ಗಿದಳು.

೧೩. ಬಳಿಕ ಆ ಮೇನಾದೇವಿಯು ಸುಂದರನಾದ ತನ್ನ ಅಳಿಯನನ್ನು ನೋಡುತ್ತಾ ಸಂತೋಷದಿಂದ ಅರಳಿದ ಮುಖವುಳ್ಳವಳಾಗಿ ಅವನಿಗೆ ಆರತಿಯನ್ನು ಎತ್ತಿದಳು.

ಗಿರಿಜೋಕ್ತಮನುಸ್ಮೃತ್ಯ ಮೇನಾ ವಿಸ್ಮಯಮಾಗತಾ ।
ಮನಸೈವ ಹ್ಯುವಾಚೇದಂ ಹರ್ಷಫುಲ್ಲಾನನಾಂಬುಜಾ ॥ ೧೪ ॥

ಯದ್ವೈ ಪುರೋಕ್ತಂ ಚ ತಯಾ ಪಾರ್ವತ್ಯಾ ಮಮ ತತ್ರ ಚ ।
ತತೋಧಿಕಂ ಪ್ರಪಶ್ಯಾಮಿ ಸೌಂದರ್ಯಂ ಪರಮೇಶಿತುಃ ॥ ೧೫ ॥

ಮಹೇಶಸ್ಯ ಸುಲಾವಣ್ಯಮನಿರ್ವಾಚ್ಯಂ ಚ ಸಂಪ್ರತಿ ।
ಏವಂ ವಿಸ್ಮಯಮಾಪನ್ನಾ ಮೇನಾ ಸ್ವಗೃಹಮಾಯಯೌ ॥ ೧೬ ॥

ಪ್ರಶಶಂಸುರ್ಯುವತಯೋ ಧನ್ಯಾ ಧನ್ಯಾ ಗಿರೇಸ್ಸುತಾ ।
ದುರ್ಗಾ ಭಗವತೀತ್ಯೇವಮೂಚುಃ ಕಾಶ್ಚನ ಕನ್ಯಕಾಃ ॥ ೧೭ ॥

ನ ದೃಷ್ಟೋ ವರ ಇತ್ಯೇವಮಸ್ಮಾಭಿರ್ಗಾನಗೋಚರಃ ।
ಧನ್ಯಾ ಹಿ ಗಿರಿಜಾ ದೇವೀಮೂಚುಃ ಕಾಶ್ಚನ ಕನ್ಯಕಾಃ ॥ ೧೮ ॥

---

೧೪. ಗಿರಿಜೆಯು ಹಿಂದೆ ಹೇಳಿದುದನ್ನು ಸ್ಮರಿಸಿಕೊಂಡು ಆಶ್ಚರ್ಯಗೊಂಡಳು. ಮತ್ತು ಹರ್ಷದಿಂದ ಮನಸ್ಸಿನಲ್ಲಿಯೇ ಹೀಗೆ ಅಂದುಕೊಂಡಳು.

೧೫. ಹಿಂದೆ ಪಾರ್ವತಿಯು ಪರಮೇಶ್ವರನ ಯಾವ ಸೌಂದರ್ಯವನ್ನು ವರ್ಣಿಸಿದ್ದಳೋ ಈಗ ಅದಕ್ಕಿಂತ ಮಿಗಲಾದ ಸೌಂದರ್ಯವನ್ನು ಶಿವನಲ್ಲಿ ನೋಡುತ್ತಲಿರುವೆನು.

೧೬. ಮಹೇಶ್ವರನ ಈ ಲಾವಣ್ಯವು ವರ್ಣಿಸಲಸದಳವಾದುದು. ಹೀಗೆಂದು ಮೇನೆಯು ಆಶ್ಚರ್ಯದಿಂದ ಮುಗ್ಧಳಾಗಿ ತನ್ನರಮನೆಗೆ ಬಂದಳು.

೧೭. ಕೆಲ ಯುವತಿಯರು, ಗಿರಿಜೆಯು ಧನ್ಯಳು, ತುಂಬಾ ಧನ್ಯಳೆಂದರು. ಮತ್ತೆ ಕೆಲವರು ಶಿವನನ್ನು ವರಿಸಿ ಗಿರಿಜೆಯು ಪೂಜ್ಯತೆಯನ್ನು ಪಡೆದವಳೆಂದರು.

೧೮. ಇಂತಹ ವರನನ್ನು ನಾವಾವಾಗಲೂ ನೋಡಿಲ್ಲವು. ಇಂತಹವನನ್ನು ವರಿಸಿ ಗಿರಿಜೆಯು ಧನ್ಯಳಾದಳು, ಎಂದು ಮತ್ತೆ ಕೆಲವರು ಕನ್ಯೆಯರು ಹೇಳಿದರು.

ಜಗುರ್ಗಂಧರ್ವಪ್ರವರಾ ನನೃತುಶ್ಚಾಪ್ಸರೋಗಣಾಃ ।
ದೃಷ್ಟ್ವಾ ಶಂಕರರೂಪಂ ಚ ಪ್ರಹೃಷ್ಟಾಸ್ಸರ್ವದೇವತಾಃ ॥ ೧೯ ॥

ನಾನಾಪ್ರಕಾರವಾದ್ಯಾನಿ ವಾದಕಾ ಮಧುರಸ್ವರಂ ।
ನಾನಾಪ್ರಕಾರಶಿಲ್ಪೇನ ವಾದಯಾಮಾಸುರಾದರಾತ್ ॥ ೨೦ ॥

ಹಿಮಾಚಲೋಽಪಿ ಮುದಿತೋ ದ್ವಾರಾಚಾರಮಥಾಕರೋತ್ ।
ಮೇನಾಪಿ ಸರ್ವನಾರೀಭಿರ್ಮಹೋತ್ಸವಪುರಸ್ಸರಂ ॥ ೨೧ ॥

ವರಪೂಜಾಂ ಚಕಾರಾಸೌ ಮುದಿತಾ ಸ್ವಗೃಹಂ ಯಯೌ ।
ಶಿವೋ ನಿವೇದಿತಂ ಸ್ಥಾನಂ ಜಗಾಮ ಗಣನಿರ್ಜರೈಃ ॥ ೨೨ ॥

ಏತಸ್ಮಿನ್ನಂತರೇ ದುರ್ಗಾಂ ಶೈಲಾಂತಃಪುರಚಾರಿಕಾಃ ।
ಬಹಿರ್ಜಗ್ಮುಸ್ಸಮಾದಾಯ ಪೂಜಿತುಂ ಕುಲದೇವತಾಂ ॥ ೨೩ ॥

---

೧೯. ಶಂಕರನ ಆ ಸುಂದರರೂಪವನ್ನು ನೋಡಿ ದೇವತೆಗಳು ಹರ್ಷಗೊಂಡರು. ಗಂಧರ್ವರು ಸಂತೋಷದಿಂದ ಹಾಡಿದರು. ಅಪ್ಸರೆಯರು ನರ್ತನ ಮಾಡಿದರು.

೨೦. ವಾದ್ಯಗಾರರು ಅನೇಕ ವಿಧವಾದ ವಾದ್ಯಗಳನ್ನು ತುಂಬಾ ಚಮತ್ಕಾರವಾಗಿಯೂ ಶ್ರಾವ್ಯವಾಗಿಯೂ ಆದರದಿಂದ ಬಾರಿಸಿದರು-

೨೧. ಆಮೇಲೆ ಹಿಮವಂತನು ಹರ್ಷದಿಂದ ಗೃಹದ್ವಾರದಲ್ಲಿ ಮಾಡಬೇಕಾದ ಆಚಾರವನ್ನು ಉತ್ಸವದೊಡನೆ ಮಾಡಿದನು. ಮೇನೆಯೂ ಸುಮಂಗಲಿಯರೊಡನೆ ಮಾಡಿದಳು.

೨೨. ಆಮೇಲೆ ಮೇನಾಹಿಮವಂತರು ವರಪೂಜೆಯನ್ನು ಮಾಡಿದರು. ನಂತರ ಶಿವನು ತನಗೆ ಕಲ್ಪಿಸಿದ ವಾಸಸ್ಥಾನಕ್ಕೆ ತನ್ನ ಗಣಗಳೊಡನೆಯೂ ದೇವತೆಗಳೊಡನೆಯೂ ತೆರಳಿದನು. ಇತ್ತ ಮೇನೆಯು ತನ್ನರಮನೆಗೆ ಬಂದಳು.

೨೩. ಈ ಸಮಯದಲ್ಲಿ ಹಿಮವಂತನ ಅಂತಃಪುರಸ್ತ್ರೀಯರು ಕುಲದೇವತೆಯನ್ನು ಪೂಜಿಸಲು ಗಿರಿಜೆಯನ್ನು ಹೊರಗೆ ಕರೆದುಕೊಂಡು ಬಂದರು.

ತತ್ರ ತಾಂ ದದೃಶುರ್ದೇವಾ ನಿಮೇಷರಹಿತಾ ಮುದಾ ।
ಸುನೀಲಾಂಜನವರ್ಣಾಭಾಂ ಸ್ವಾಂಗೈಶ್ಚ ಪ್ರತಿಭೂಷಿತಾಂ ॥ ೨೪ ॥

ತ್ರಿನೇತ್ರಾದ್ಧೃತನೇತ್ರಾಂತಾಮನ್ಯವಾರಿತಲೋಚನಾಂ ।
ಈಷದ್ಧಾಸ್ಯಪ್ರಸನ್ನಾಸ್ಯಾಂ ಸಕಟಾಕ್ಷಾಂ ಮನೋಹರಾಂ ॥ ೨೫ ॥

ಸುಚಾರುಕಬರೀಭಾರಾಂ ಚಾರುಪತ್ರಕಶೋಭಿತಾಂ ।
ಕಸ್ತೂರೀಬಿಂದುಭಿಸ್ಸಾರ್ಧಂ ಸಿಂದೂರಬಿಂದುಶೋಭಿತಾಂ ॥ ೨೬ ॥

ರತ್ನೇಂದ್ರಸಾರಹಾರೇಣ ವಕ್ಷಸಾ ಸುವಿರಾಜಿತಾಂ ।
ರತ್ನಕೇಯೂರವಲಯಾಂ ರತ್ನಕಂಕಣಮಂಡಿತಾಂ ॥ ೨೭ ॥

ಸದ್ರತ್ನಕುಂಡಲಾಭ್ಯಾಂ ಚ ಚಾರುಗಂಡಸ್ಥಲೋಜ್ಜ್ವಲಾಂ ।
ಮಣಿರತ್ನಪ್ರಭಾಮುಷ್ಟಿದಂತರಾಜವಿರಾಜಿತಾಂ ॥ ೨೮ ॥

---

೨೪. ಆಗ ದೇವತೆಗಳು ಆ ಗಿರಿಜೆಯನ್ನು ನೆಟ್ಟದೃಷ್ಟಿಯಿಂದ ನೋಡಿದರು. ಅವಳು ನೀಲಮಣಿಯಂತಿರುವ ಶರೀರಕಾಂತಿಯಿಂದೊಪ್ಪುತ್ತಿದ್ದಳು. ತನ್ನ ಪ್ರತಿಯೊಂದು ಅವಯುವವನ್ನೂ ಅಲಂಕರಿಸಿಕೊಂಡಿದ್ದಳು.

೨೫. ಆ ಗಿರಿಜೆಯು ಪರಮೇಶ್ವರನಲ್ಲಿಯೇ ನೆಟ್ಟದೃಷ್ಟಿಯುಳ್ಳವಳಾಗಿದ್ದಳು. ಮಿಕ್ಕ ಯಾರನ್ನೂ ನೋಡುತ್ತಲಿರಲಿಲ್ಲ. ಮಂದಹಾಸವನ್ನೂ ಸುಂದರ ನೋಟವನ್ನೂ ಬೀರುತ್ತಾ ತುಂಬಾ ಮನೋಹರಳಾಗಿದ್ದಳು.

೨೬. ಮತ್ತು ಆ ಗಿರಿಜೆಯ ಕೇಶಪಾಶಗಳು ಸುಂದರವಾಗಿದ್ದವು. ರಮ್ಯವಾದ ಕರ್ಣಪತ್ರವೆಂಬ ಕರ್ಣಾಭರಣವನ್ನು ಧರಿಸಿದ್ದಳು. ಕಸ್ತೂರೀ ಮಿಶ್ರಿತವಾದ ಕುಂಕುಮವನ್ನು ಇಟ್ಟುಕೊಂಡಿದ್ದಳು.

೨೭. ಅಮೂಲ್ಯವಾದ ರತ್ನಹಾರವು ಅವಳ ಎದೆಯಲ್ಲಿ ಮಿರುಗುತ್ತಲಿತ್ತು. ರತ್ನಖಚಿತವಾದ ಕಡಗ ಮತ್ತು ಕಂಕಣಗಳನ್ನು ಧರಿಸಿದ್ದಳು.

೨೮. ಅವಳ ರತ್ನದೋಲೆಗಳ ಪ್ರಭೆಯು ಅವಳ ಸುಂದರವಾದ ಕಪೋಲಗಳಲ್ಲಿ ಹರಡಿದ್ದಿತು. ದಂತಪಂಕ್ತಿಗಳು ಬಹು ಸುಂದರವಾಗಿದ್ದು ಮುಖಕ್ಕೆ ಅಪೂರ್ವಕಾಂತಿಯನ್ನುಂಟುಮಾಡುತ್ತಿದ್ದುವು.

ಮಧುಬಿಂಬಾಧರೋಷ್ಠಾಂ ಚ ರತ್ನಯೌವಕಸಂಯುತಾಂ ।
ರತ್ನದರ್ಪಣಹಸ್ತಾಂ ಚ ಕ್ರೀಡಾಪದ್ಮವಿಭೂಷಿತಾಂ ॥ ೨೯ ॥

ಚಂದನಾಗರುಕಸ್ತೂರೀಕುಂಕುಮೇನಾತಿಚರ್ಚಿತಾಂ ।
ಕ್ವಣನ್ಮಂಜೀರಪಾದಾಂ ಚ ರಕ್ತಾಂಘ್ರಿತಲರಾಜಿತಾಂ ॥ ೩೦ ॥

ಪ್ರಣೇಮುಃ ಶಿರಸಾ ದೇವೀಂ ಭಕ್ತಿಯುಕ್ತಾಃ ಸಮೇನಕಾಂ ।
ಸರ್ವೇ ಸುರಾದಯೋ ದೃಷ್ಟ್ವಾ ಜಗದಾದ್ಯಾಂ ಜಗತ್ಪ್ರಸೂಂ ॥ ೩೧ ॥

ತ್ರಿನೇತ್ರೋ ನೇತ್ರಕೋಣೇನ ತಾಂ ದದರ್ಶ ಮುದಾನ್ವಿತಃ ।
ಶಿವಃ ಸತ್ಯಾಕೃತಿಂ ದೃಷ್ಟ್ವಾ ವಿಜಹೌ ವಿರಹಜ್ವರಂ. ॥ ೩೨ ॥

ಶಿವಃ ಸರ್ವಂ ವಿಸಸ್ಮಾರ ಶಿವಾಸಂನ್ಯಸ್ತಲೋಚನಃ ।
ಪುಲಕಾಂಚಿತಸರ್ವಾಂಗೋ ಹರ್ಷಾದ್ಗೌರೀವಿಲೋಚನಃ ॥ ೩೩ ॥

---

೨೯. ಅವಳ ಕೆಳದುಟಿಯು ಬಿಂಬಫಲದಂತೆ ಶೋಭಿಸುತ್ತಲಿದ್ದಿತು. ರತ್ನ ಕಂಚುಕ (ಕುಪ್ಪಸ) ವನ್ನು ತೊಟ್ಟಿದ್ದಳು. ರತ್ನಗನ್ನಡಿಯನ್ನು ಹಿಡಿದಿದ್ದಳು. ವಿನೋದಕ್ಕಾಗಿ ಕೈಯಲ್ಲಿ ಕಮಲವನ್ನು ಹಿಡಿದಿದ್ದಳು.

೩೦. ಚಂದನ ಅಗರು ಕಸ್ತೂರಿಗಳಿಂದ ಮಿಶ್ರಿತವಾದ ಕುಂಕುಮವನ್ನು ಲೇಪಿಸಿಕೊಂಡಿದ್ದಳು. ಅವಳ ಕಾಲುಕಡಗವು ಮನೋಹರವಾಗಿ ಧ್ವನಿಮಾಡುತ್ತಲಿದ್ದಿತು. ಅಂಗಾಲು ಕೆಂಬಣ್ಣವಾಗಿದ್ದಿತು.

೩೧. ಈರೀತಿಯಾಗಿ ಮೇನೆಯೊಡನಿರುವ ಸುಂದರಿಯೂ ಜಗನ್ಮಾತೆಯೂ ಆದ ಗಿರಿಜಾದೇವಿಯನ್ನು ದೇವತೆಗಳೇ ಮೊದಲಾದವರೆಲ್ಲರು ಭಕ್ತಿಯಿಂದ ನಮಿಸಿದರು.

೩೨. ಪರಶಿವನು ಆ ಗಿರಿಜೆಯನ್ನು ಓರೆಗಣ್ಣಿನಿಂದ ನೋಡಿದನು. ಸತೀದೇವಿಯಂತೆಯೇ ಇರುವ ಅವಳನ್ನು ನೋಡಿ ಅವನು ಹಿಂದಿನ ವಿರಹದುಃಖವನ್ನು ಮರೆತನು.

೩೩. ಗಿರಿಜೆಯನ್ನು ನೋಡುತ್ತಾ ಆ ಶಿವನು ಎಲ್ಲವನ್ನೂ ಮರೆತನು. ಸಂತೋಷದಿಂದ ಅವನ ಮೈಯೆಲ್ಲೆಲ್ಲಾ ರೋಮಾಂಚವುಂಟಾಯಿತು.

ಅಥ ಕಾಲೀ ಬಹಿಃ ಪುರ್ಯಾ ಗತ್ವಾ ಪೂಜ್ಯ ಕುಲಾಂಬಿಕಾಂ ।
ವಿವೇಶ ಭವನಂ ರಮ್ಯಂ ಸ್ವಪಿತುಸ್ಸದ್ವಿಜಾಂಗನಾ ॥ ೩೪ ॥

ಶಂಕರೋऽಪಿ ಸುರೈಸ್ಸಾರ್ಧಂ ಹರಿಣಾ ಬ್ರಹ್ಮಣಾ ತಥಾ ।
ಹಿಮಾಚಲಸಮುದ್ದಿಷ್ಟಂ ಸ್ವಸ್ಥಾನಮುಗಮನ್ಮುದಾ ॥ ೩೫ ॥

ತತ್ರ ಸರ್ವೇ ಸುಖಂ ತಸ್ಥುಃ ಸೇವಂತಃ ಶಂಕರಂ ತಥಾ ।
ಸಮ್ಮಾನಿತಾ ಗಿರೀಶೇನ ನಾನಾವಿಧಿ ಸುಸಂಪದಾ ॥ ೩೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಷಟ್‌ಚತ್ವಾರಿಂಶೋऽಧ್ಯಾಯಃ



---

೩೪. ಬಳಿಕ ಆ ಪಾರ್ವತಿಯು ಕುಲಾಚಾರದಂತೆ ನಗರದ ಹೊರಗಿರುವ ಕುಲದೇವತೆಯನ್ನು ಪೂಜಿಸಿ ಬ್ರಾಹ್ಮಣ ಸುಮಂಗಲಿಯರೊಡನೆ ತನ್ನ ತಂದೆಯ ಅರಮನೆಯನ್ನು ಪ್ರವೇಶಿಸಿದಳು

೩೫. ಶಂಕರನೂ ಸಹ ಹಿಮವಂತನು ಕಲ್ಪಿಸಿದ ತನ್ನ ಸ್ಥಾನಕ್ಕೆ ಹರಿಬ್ರಹ್ಮ ಮೊದಲಾದ ದೇವತೆಗಳೊಡನೆ ತೆರಳಿದನು

೩೬. ಆ ಶಂಕರನ ಬಿಡಾರದಲ್ಲಿ ಎಲ್ಲ ದೇವತೆಗಳೂ ಸಹ ಶಂಕರನನ್ನು ಸೇವಿಸುತ್ತಾ ಸುಖವಾಗಿದ್ದರು. ಹಿಮವಂತನು ಅವರನ್ನು ಸತ್ಕರಿಸಿ ಎಲ್ಲಾ ಅನುಕೂಲಗಳನ್ನೂ ಕಲ್ಪಿಸಿಕೊಟ್ಟಿದ್ದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ನಲವತ್ತಾರನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಸಪ್ತಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ತತಃ ಶೈಲವರಸ್ಸೋಽಪಿ ಪ್ರೀತ್ಯಾ ದುರ್ಗೋಪವೀತಕಂ ।
ಕಾರಯಾಮಾಸ ಸೋತ್ಸಾಹಂ ವೇದಮಂತ್ರೈಶ್ಶಿವಸ್ಯ ಚ ॥ ೧ ॥

ಅಥ ವಿಷ್ಣ್ವಾದಯೋ ದೇವಾ ಮುನಯಸ್ಸಕುತೂಹಲಂ ।
ಹಿಮಾಚಲಪ್ರಾರ್ಥನಯಾ ವಿವೇಶಾಂತರ್ಗೃಹಂ ಗಿರೇಃ ॥ ೨ ॥

ಶ್ರುತ್ಯಾಚಾರಂ ಭವಾಚಾರಂ ವಿಧಾಯ ಚ ಯಥಾರ್ಥತಃ ।
ಶಿವಾಮಲಂಕೃತಾಂ ಚಕ್ರುಶ್ಶಿವದತ್ತವಿಭೂಷಣೈಃ ॥ ೩ ॥

---

## ನಲವತ್ತೇಳನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಎಲೈ ನಾರದ, ಬಳಿಕ ಗಿರಿರಾಜನು ಶಿವನಿಗೆ ದುರ್ಗೋಪವೀತಕವೆಂಬ ಕರ್ಮವನ್ನು ವೇದಮಂತ್ರಗಳಿಂದ ಪ್ರೀತಿಪೂರ್ವಕವಾಗಿ ಮಾಡಿಸಿದನು.

೨. ಆಮೇಲೆ ಹರಿಯೇ ಮೊದಲಾದ ದೇವತೆಗಳು ಮತ್ತು ಮುನಿಗಳು ಹಿಮವಂತನ ಪ್ರಾರ್ಥನೆಯಂತೆ ಅವನ ಅಂತರ್ಗೃಹಕ್ಕೆ ಬಂದರು.

೩. ಹಿಮವಂತನ ಮನೆಯ ವಳಗೆ ಪ್ರವೇಶಿಸಿ ಆ ದೇವತೆಗಳು ಅಲ್ಲಿ ವೇದೋಕ್ತವಾದ ಆಚಾರವನ್ನೂ ಲೋಕಾಚಾರವನ್ನೂ ವಿಧಿವತ್ತಾಗಿ ಮಾಡಿ ಶಿವನು ಕೊಟ್ಟ ಅಲಂಕಾರಗಳಿಂದ ಗಿರಿಜೆಯನ್ನಲಂಕರಿಸಿದರು.

ಪ್ರಥಮಂ ಸ್ನಾಪಯಿತ್ವಾ ತಾಂ ಭೂಷಯಿತ್ವಾ ಚ ಸರ್ವಶಃ ।
ನೀರಾಜಿತಾ ಸಖೀಭಿಶ್ಚ ವಿಪ್ರಪತ್ನೀಭಿರೇವ ಚ ॥ ೪ ॥

ಅಹತಾಂಬರಯುಗ್ಮೇನ ಶೋಭಿತಾ ವರವರ್ಣಿನೀ ।
ವಿರರಾಜ ಮಹಾಶೈಲದುಹಿತಾ ಶಂಕರಪ್ರಿಯಾ ॥ ೫ ॥

ಕಂಚುಕೀ ಪರಮಾ ದಿವ್ಯಾ ನಾನಾರತ್ನಾನ್ವಿತಾದ್ಭುತಾ ।
ವಿಧೃತಾ ಚ ತಯಾ ದೇವ್ಯಾ ವಿಲಸಂತ್ಯಾಧಿಕಂ ಮುನೇ ॥ ೬ ॥

ಸಾ ಬಭಾರ ತದಾ ಹಾರಂ ದಿವ್ಯರತ್ನಸಮನ್ವಿತಂ ।
ವಲಯಾನಿ ಮಹಾರ್ಹಾಣಿ ಶುದ್ಧಚಾಮೀಕರಾಣಿ ಚ ॥ ೭ ॥

ಸ್ಥಿತಾ ತತ್ರೈವ ಸುಭಗಾ ಧ್ಯಾಯಂತೀ ಮನಸಾ ಶಿವಂ ।
ಶುಶುಭೇಽತಿ ಮಹಾಶೈಲಕನ್ಯಕಾ ತ್ರಿಜಗತ್ಪ್ರಸೂಃ ॥ ೮ ॥

---

೪. ಮೊದಲು ಆ ಗಿರಿಜೆಗೆ ಮಂಗಲವಾದ ಅಭ್ಯಂಜನಮಾಡಿಸಿದರು. ಆಮೇಲೆ ಆಭರಣಗಳಿಂದ ಅವಳನ್ನಲಂಕರಿಸಿದರು. ಸಖಿಯರು ಮತ್ತು ಬ್ರಾಹ್ಮಣ ಪತ್ನಿಯರು ಆರತಿಯನ್ನು ಬೆಳಗಿದರು.

೫. ಹೊಸದಾದ ರೇಶಿಮೆ ಪತ್ತಲಗಳೆರಡನ್ನು ಉಡಿಸಿ ಆ ಗಿರಿಜೆಗೆ ಅಲಂಕರಿಸಿದರು. ಹಾಗೆ ಅಲಂಕರಿಸಲ್ಪಟ್ಟ ಶಂಕರಪ್ರಿಯೆಯಾದ ಗಿರಿಜೆಯು ತುಂಬಾ ಶೋಭಿಸಿದಳು.

೬. ರತ್ನಖಚಿತವಾದ ಕುಪ್ಪಸವನ್ನು ಗಿರಿಜೆಗೆ ತೊಡಿಸಿದರು. ಅದರಿಂದಲಂತೂ ಗಿರಿಜೆಯು ಮತ್ತು ಅದ್ಭುತವಾಗಿ ಶೋಭಿಸಿದಳು.

೭. ರತ್ನ ಖಚಿತವಾದ ಮನೋಹರವಾದ ಹಾರವನ್ನು ಆ ಗಿರಿಜೆಯ ಕಂಠದಲ್ಲಿ ಹಾಕಿ ಶುದ್ಧ ಚಿನ್ನದಿಂದ ನಿರ್ಮಿಸಿದ ಅಮೂಲ್ಯವಾದ ಕಡಗಗಳನ್ನು ಕೋಮಲವಾದ ಅವಳ ಕೈಗಳಿಗೆ ತೊಡಿಸಿದರು.

೮. ಹೀಗೆ ಜಗನ್ಮಾತೆಯಾದ ಗಿರಿಜೆಯು ಅಲಂಕೃತಳಾಗಿ ಮನಸ್ಸಿನಲ್ಲಿ ಶಿವನನ್ನು ಸ್ಮರಿಸುತ್ತಾ ತುಂಬಾ ಶೋಭಿಸಿದಳು.

ತದೋತ್ಸವೋ ಮಹಾನಾಸೀದುಭಯತ್ರ ಸುಖಾವಹಃ ।
ದಾನಂ ಬಭೂವ ವಿವಿಧಂ ಬ್ರಾಹ್ಮಣೇಭ್ಯೋ ವಿವರ್ಣಿತಂ ॥ ೯ ॥

ಅನ್ಯೇಷಾಂ ದ್ರವ್ಯದಾನಂ ಚ ಬಭೂವ ವಿವಿಧಂ ಮಹತ್ ।
ಗೀತವಾದ್ಯವಿನೋದಶ್ಚ ತತ್ರೋತ್ಸವಪುರಸ್ಸರಂ ॥ ೧೦ ॥

ಅಥ ವಿಷ್ಣುರಹಂ ಧಾತಾ ಶಕ್ರಾದ್ಯಾ ಅಮರಾಸ್ತಥಾ ।
ಮುನಯಶ್ಚ ಮಹಾಪ್ರೀತ್ಯಾ ನಿಖಿಲಾಸ್ಸೋತ್ಸವಾ ಮುದಾ ॥ ೧೧ ॥

ಸುಪ್ರಣಮ್ಯ ಶಿವಾಂ ಭಕ್ತ್ಯಾ ಸ್ಮೃತ್ವಾ ಶಿವಪದಾಂಬುಜಂ ।
ಸಂಪ್ರಾಪ್ಯ ಹಿಮಗಿರ್ಯಾಜ್ಞಾಂ ಸ್ವಂ ಸ್ವಂ ಸ್ಥಾನಂ ಸಮಾಶ್ರಿತಾಃ ॥ ೧೨ ॥

ಏತಸ್ಮಿನ್ನಂತರೇ ತತ್ರ ಜ್ಯೋತಿಶ್ಶಾಸ್ತ್ರವಿಶಾರದಃ ।
ಹಿಮವಂತಂ ಗಿರೀಂದ್ರಂ ತಂ ಗರ್ಗೋ ವಾಕ್ಯಮಭಾಷತ ॥ ೧೩ ॥

॥ ಗರ್ಗ ಉವಾಚ ॥

ಹಿಮಾಚಲ ಧರಾಧೀಶ ಸ್ವಾಮಿನ್ ಕಾಲೀಪಿತಃ ಪ್ರಭೋ ।
ಪಾಣಿಗ್ರಹಾರ್ಥಂ ಶಂಭುಂ ಚಾನಯ ತ್ವಂ ನಿಜಮಂದಿರಂ ॥ ೧೪ ॥

---

೯. ಆಗ ಹಿಮವಂತನ ರಾಜಧಾನಿಯಲ್ಲಿ ಮಹಾ ವಿಜೃಂಭಣೆಯಿಂದ ಮಹೋತ್ಸವವು ನಡೆಯಿತು. ಬ್ರಾಹ್ಮಣರಿಗೆ ವಿಧವಿಧವಾಗಿ ದಾನಮಾಡಿದರು.

೧೦. ಮಿಕ್ಕ ಜನಗಳಿಗೂ ವಿವಿಧವಾದ ದ್ರವ್ಯಗಳನ್ನು ದಾನಮಾಡಿದರು. ಸಂಗೀತ ವಾದ್ಯ ಮುಂತಾದ ಅನೇಕ ವಿನೋದಗಳೂ ಅಲ್ಲಿ ನಡೆದುವು.

೧೧-೧೨. ಆಮೇಲೆ ಹರಿ, ನಾನು ಇಂದ್ರನೇ ಮೊದಲಾದ ದೇವತೆಗಳು, ಮುನಿಗಳು ಎಲ್ಲರೂ ಸಹ ಗಿರಿಜೆಯನ್ನು ನಮಸ್ಕರಿಸಿ, ಹಿಮವಂತನ ಅನುಮತಿಯನ್ನು ಪಡೆದು, ಶಿವನ ಪಾದಕಮಲವನ್ನು ಸ್ಮರಿಸುತ್ತಾ ಅವನ ಬಳಿಗೆ ಬಂದು ನಮ್ಮ ನಮ್ಮ ಸ್ಥಾನದಲ್ಲಿ ಕುಳಿತೆವು.

೧೩-೧೪. ಈ ಸಮಯದಲ್ಲಿ ಜ್ಯೋತಿಶ್ಶಾಸ್ತ್ರಪಂಡಿತನಾದ ಗರ್ಗಮುನಿಯು ಹಿಮವಂತನನ್ನು ಕುರಿತು ಎಲೈ ಪರ್ವತರಾಜನೇ, ಪಾಣಿಗ್ರಹಣಕ್ಕಾಗಿ ನಿಶ್ಚಿತವಾದ ಕಾಲವು ಸಮೀಪಿಸಿತು. ವರನಾದ ಶಿವನನ್ನು ಬೇಗನೆ ಅರಮನೆಗೆ ಕರೆದುಕೊಂಡು ಬಾ ಎಂದನು.

॥ ಬ್ರಹ್ಮೋವಾಚ ॥

ಅಥ ತಂ ಸಮಯಂ ಜ್ಞಾತ್ವಾ ಕನ್ಯಾದಾನೋಚಿತಂ ಗಿರಿಃ ।
ನಿವೇದಿತಂ ಚ ಗರ್ಗೇಣ ಮುಮುದೇऽತೀವ ಚೇತಸಿ ॥ ೧೫ ॥

ಮಹೀಧರಾನ್ ದ್ವಿಜಾಂಶ್ಚೈವ ಪರಾನಪಿ ಮುದಾ ಗಿರಿಃ ।
ಪ್ರೇಷಯಾಮಾಸ ಸುಪ್ರೀತ್ಯಾ ಶಿವಾನಯನಕಾಮ್ಯಯಾ ॥ ೧೬ ॥

ತೇ ಪರ್ವತಾ ದ್ವಿಜಾಶ್ಚೈವ ಸರ್ವಮಂಗಲಪಾಣಯಃ ।
ಸಂಜಗ್ಮುಸ್ಸೋತ್ಸವಾಃ ಪ್ರೀತ್ಯಾ ಯತ್ರ ದೇವೋ ಮಹೇಶ್ವರಃ ॥ ೧೭ ॥

ತದಾ ವಾದಿತ್ರಘೋಷೇಣ ಬ್ರಹ್ಮಘೋಷೇಣ ಭೂಯಸಾ ।
ಮಹೋತ್ಸಾಹೋऽಭವತ್ತತ್ರ ಗೀತನೃತ್ಯಾನ್ವಿತೇನ ಚ ॥ ೧೮ ॥

ಶ್ರುತ್ವಾ ವಾದಿತ್ರನಿರ್ಘೋಷಂ ಸರ್ವೇ ಶಂಕರಸೇವಕಾಃ ।
ಉತ್ಥಿತಾಸ್ತ್ವೇಕಪದ್ಯೇನ ಸದೇವರ್ಷಿಗಣಾ ಮುದಾ ॥ ೧೯ ॥

---

೧೫-೧೬. ಬ್ರಹ್ಮನು ಹೇಳಿದನು :—ಆಗ ಹಿಮವಂತನು, ಗರ್ಗಮುನಿಯು ಹೇಳಿದ ಸಮಯವು ಕನ್ಯಾದಾನಕ್ಕೆ ಯೋಗ್ಯವಾದುದೆಂದು ತಿಳಿದು ಮನಸ್ಸಿನಲ್ಲಿ ತುಂಬಾ ಸಂತಸಗೊಂಡು ತನ್ನ ಬಂಧುಗಳಾದ ಗಿರಿಗಳನ್ನೂ ಬ್ರಾಹ್ಮಣರನ್ನೂ ಸಹ ಪರಿವಾರದೊಂದಿಗೆ ಶಿವನನ್ನು ಕರೆದುಕೊಂಡುಬರಲು ಕಳುಹಿಸಿದನು.

೧೭. ಆ ಗಿರಿಗಳೂ ಬ್ರಾಹ್ಮಣರೂ ಮಂಗಳದ್ರವ್ಯಗಳನ್ನು ತೆಗೆದುಕೊಂಡು ಉತ್ಸವದೊಡನೆ ಹೊರಟು ಮಹಾದೇವನ ಬಳಿಗೆ ತೆರಳಿದರು.

೧೮. ಆಗ ಆ ಉತ್ಸವದಲ್ಲಿ ಅನೇಕ ವಾದ್ಯಗಳನ್ನು ಬಾರಿಸುತ್ತಲಿದ್ದರು. ಬ್ರಾಹ್ಮಣರು ವೇದಘೋಷವನ್ನು ಮಾಡುತ್ತಲಿದ್ದರು. ಸಂಗೀತ ನರ್ತನಗಳು ಮಹೋತ್ಸಾಹದಿಂದ ನಡೆಯುತ್ತಲಿದ್ದುವು.

೧೯. ಗಿರಿಗಳ ಮಹೋತ್ಸವದ ಆ ವಾದ್ಯಶಬ್ದಗಳನ್ನು ಕೇಳಿ ಬಿಡಾರದಲ್ಲಿದ್ದ ದೇವತೆಗಳು ಮುನಿಗಳು ಮೊದಲಾದ ಶಂಕರನ ಪರಿವಾರದವರು ಹರ್ಷದಿಂದ ಬೇಗನೆ ಮೇಲೆದ್ದು ಪರಸ್ಪರ ಇಂತೆಂದರು.

ಪರಸ್ಪರಂ ಸಮೂಚುಸ್ತೇ ಹರ್ಷನಿರ್ಭರಮಾನಸಾಃ ।
ಅತ್ರಾಗಚ್ಛಂತಿ ಗಿರಿಯಶ್ಶಿವಾನಯನಕಾಮ್ಯಯಾ ॥ ೨೦ ॥

ಪಾಣಿಗ್ರಹಣಕಾಲೋ ಹಿ ನೂನಂ ಸದ್ಯಸ್ಸಮಾಗತಃ ।
ಮಹದ್ಭಾಗ್ಯಂ ಹಿ ಸರ್ವೇಷಾಂ ಸಂಪ್ರಾಪ್ತಮಿಹ ಮನ್ಮಹೇ ॥ ೨೧ ॥

ಧನ್ಯಾ ವಯಂ ವಿಶೇಷೇಣ ವಿವಾಹಂ ಶಿವಯೋರ್ಧ್ರುವಂ ।
ದ್ರಕ್ಷ್ಯಾಮಃ ಪರಮಪ್ರೀತ್ಯಾ ಜಗತಾಂ ಮಂಗಲಾಯಂ ॥ ೨೨ ॥

॥ ಬ್ರಹ್ಮೋವಾಚ ॥

ಏವಂ ಯಾವದಭೂತ್ತೇಷಾಂ ಸಂವಾದಸ್ತತ್ರ ಚಾದರಾತ್ ।
ತಾವತ್ಸರ್ವೇ ಸಮಾಯಾತಾಃ ಪರ್ವತೇಂದ್ರಸ್ಯ ಮಂತ್ರಿಣಃ ॥ ೨೩ ॥

ತೇ ಗತ್ವಾ ಪ್ರಾರ್ಥಯಾಂಚಕ್ರುಶ್ಶಿವಂ ವಿಷ್ಣ್ವಾದಿಕಾನಪಿ ।
ಕನ್ಯಾದಾನೋಚಿತಃ ಕಾಲೋ ವರ್ತತೇ ಗಮ್ಯತಾಮಿತಿ ॥ ೨೪ ॥

ತೇ ತಚ್ಛ್ರುತ್ವಾ ಸುರಾಸ್ಸರ್ವೇ ಮುನೇ ವಿಷ್ಣ್ವಾದಯೋಽಖಿಲಾಃ ।
ಮುಮುದುಶ್ಚೇತಸಾತೀವ ಜಯೇತ್ಯೂಚುರ್ಗಿರಿಂ ದ್ರುತಂ ॥ ೨೫ ॥

---

೨೦-೨೨. ಶಿವನನ್ನು ಕರೆದುಕೊಂಡುಹೋಗಲು ಗಿರಿಗಳು ಇಲ್ಲಿಗೆ ಬರುತ್ತಲಿರುವರು. ಕನ್ಯಾದಾನಮುಹೂರ್ತವು ಸಮೀಪಿಸಿರಬೇಕು ನಮ್ಮೆಲ್ಲರ ಭಾಗ್ಯೋದಯವಾದಂತಾಯಿತು. ನಾವು ಮಹಾಧನ್ಯರು. ಜಗತ್ತಿಗೇ ಮಂಗಲವನ್ನುಂಟುಮಾಡುವಂತಹ ಗಿರಿಜಾಶಿವರ ಮದುವೆಯನ್ನು ನಾವು ನಮ್ಮ ಕಣ್ಣುಗಳಿಂದಲೇ ನೋಡುತ್ತೇವೆ. ನಮಗಿಂತಲೂ ಧನ್ಯರು ಇನ್ನಾರು?

೨೩-೨೪. ಬ್ರಹ್ಮನು ಹೇಳಿದನು:—ಹೀಗೆ ಆ ದೇವತೆಗಳೇ ಮೊದಲಾದವರು ಮಾತನಾಡುತ್ತಿರುವಾಗ ಗಿರಿರಾಜನಾದ ಆ ಹಿಮವಂತನ ಬಂಧುಗಳೆಲ್ಲರೂ ಶಿವನ ಬಳಿಗೆ ಹೋಗಿ ಅವನನ್ನೂ ಹರಿಯೇ ಮೊದಲಾದವರನ್ನೂ ಕುರಿತು ಕನ್ಯಾದಾನಕ್ಕೆ ಯೋಗ್ಯವಾದ ಕಾಲವು ಪ್ರಾಪ್ತವಾಗಿದೆ. ಎಲ್ಲರೂ ದಯಮಾಡಿ ಹಿಮವಂತನ ಮನೆಗೆ ಚಿತ್ತೈಸಬೇಕೆಂದು ಪ್ರಾರ್ಥಿಸಿದರು.

೨೫. ಆ ಪ್ರಾರ್ಥನೆಯನ್ನು ಕೇಳಿ ಹರಿಯೇ ಮೊದಲಾದ ದೇವತೆಗಳೆಲ್ಲರೂ ಮನಸ್ಸಿನಲ್ಲಿ ಹರ್ಷಗೊಂಡರು. ಮತ್ತು ಶುಭಮಸ್ತು ಎಂದು ಹಿಮವಂತನಿಗೆ ಹೇಳಿ ಜಯಶಬ್ದವನ್ನು ಮಾಡಿದರು.

ಶಿವೋಽಪಿ ಮುಮುದೇಽತೀವ ಕಾಲೀಸ್ಪ್ರಾಪಣಲಾಲಸಃ ।
ಗುಪ್ತಂ ಚಕಾರ ತಚ್ಚಿಹ್ನಂ ಮನಸ್ಯೇವಾದ್ಭುತಾಕೃತಿಃ ॥ ೨೬ ॥

ಅಥ ಸ್ನಾನಂ ಕೃತಂ ತೇನ ಮಂಗಲದ್ರವ್ಯಸಂಯುತಂ ।
ಶೂಲಿನಾ ಸುಪ್ರಸನ್ನೇನ ಲೋಕಾನುಗ್ರಹಕಾರಿಣಾ ॥ ೨೭ ॥

ಸ್ನಾತಸ್ಸುವಾಸಸಾ ಯುಕ್ತಸ್ಸರ್ವೈಸ್ತೈಃ ಪರಿವಾರಿತಃ ।
ಆರೋಪಿತೋ ವೃಷಸ್ಕಂಧೇ ಲೋಕಪಾಲೈಸ್ಸುಸೇವಿತಃ ॥ ೨೮ ॥

ಪುರಸ್ಕೃತ್ಯ ಪ್ರಭುಂ ಸರ್ವೇ ಜಗ್ಮುರ್ಹಿಮಗಿರೇರ್ಗೃಹಂ ।
ವಾದ್ಯಾನಿ ವಾದಯಂತಶ್ಚ ಕೃತವಂತಃ ಕುತೂಹಲಂ ॥ ೨೯ ॥

ಹಿಮಾಗಪ್ರೇಷಿತಾ ವಿಪ್ರಾಸ್ತಥಾ ತೇ ಪರ್ವತೋತ್ತಮಾಃ ।
ಶಂಭೋರಗ್ರಚರಾ ಹ್ಯಾಸರ್ ಕುತೂಹಲಸಮನ್ವಿತಾಃ ॥ ೩೦ ॥

---

೨೬. ಗಿರಿಜೆಯಲ್ಲನುರಕ್ತನಾದ ಶಿವನೂ ಸಹ ಮನಸ್ಸಿನಲ್ಲಿ ತುಂಬಾ ಹರ್ಷಗೊಂಡನು. ಆದರೆ ಲೀಲಾವಿಗ್ರಹನಾದ ಅವನು ತನ್ನ ಸಂತೋಷಮುದ್ರೆಯನ್ನು ಹೊರಗೆ ಪ್ರಕಟಿಸಲಿಲ್ಲ.

೨೭. ಆಮೇಲೆ ಲೋಕಕ್ಕೇ ಸುಖವನ್ನುಂಟುಮಾಡುವ ಆ ಶಂಕರನು ಮಂಗಲಸ್ನಾನವನ್ನು ಪ್ರಸನ್ನತೆಯಿಂದ ಮಾಡಿದನು.

೨೮. ಮಂಗಲಸ್ನಾನ ಮಾಡಿದಮೇಲೆ ಆ ಶಿವನಿಗೆ ದೇವತೆಗಳು ಸುಂದರ ವಸ್ತ್ರಗಳನ್ನುಡಿಸಿ ಅಲಂಕರಿಸಿ ನಂದಿಕೇಶ್ವರನ ಮೇಲೆ ಕುಳ್ಳಿರಿಸಿದರು.

೨೯. ಬಳಿಕ ದೇವತೆಗಳು ಮಂಗಳವಾದ್ಯಗಳನ್ನು ಬಾರಿಸುತ್ತಾ ಶಂಕರನನ್ನು ಮುಂದಿಟ್ಟುಕೊಂಡು ಹಿಮವಂತನ ಅರಮನೆಗೆ ಹೊರಟರು.

೩೦. ಹಿಮವಂತನು ಕಳುಹಿಸಿದ ಬ್ರಾಹ್ಮಣರೂ ಗಿರಿಗಳೂ ಸಹ ಆ ಉತ್ಸವದಲ್ಲಿ ಶಂಕರನೆದುರಿನಲ್ಲಿ ನಡೆದುಬರುತ್ತಿದ್ದರು.

ಬಭೌ ಛತ್ರೇಣ ಮಹತಾ ಧ್ರಿಯಮಾಣೋ ಹಿ ಮೂರ್ಧನಿ ।
ಚಾಮರೈರ್ವೀಜ್ಯಮಾನೋऽಸೌ ಸವಿತಾಸೋ ಮಹೇಶ್ವರಃ ॥ ೩೧ ॥

ಅಹಂ ವಿಷ್ಣುಸ್ತಥಾ ಚೇಂದ್ರೋ ಲೋಕಪಾಲಾಸ್ತಥೈವ ಚ ।
ಅಗ್ರಗಾಃ ಸ್ಮಾತಿಶೋಭಂತೇ ಶ್ರಿಯಾ ಪರಮಯಾ ಶ್ರಿತಾಃ ॥ ೩೨ ॥

ತತಶ್ಶಂಖಾಶ್ಚ ಭೇರ್ಯಶ್ಚ ಪಟಹಾನಕಗೋಮುಖಾಃ ।
ಪುನಃ ಪುನರವಾದ್ಯಂತ ವಾದಿತ್ರಾಣಿ ಮಹೋತ್ಸವೇ ॥ ೩೩ ॥

ತಥೈವ ಗಾಯಕಾಸ್ಸರ್ವೇ ಜಗುಃ ಪರಮಮಂಗಲಂ ।
ನರ್ತಕ್ಯೋ ನನೃತುಸ್ಸರ್ವಾ ನಾನಾತಾಲಸಮನ್ವಿತಾಃ ॥ ೩೪ ॥

ಏಭಿಸ್ಸಮೇತೋ ಜಗದೇಕಬಂಧು-
ರ್ಯಯೌ ತದಾನೀಂ ಪರಮೇಶವರ್ಚಸಾ ।
ಸುಸೇವ್ಯಮಾನಸ್ಸಕಲೈಸ್ಸುರೇಶ್ವರೈ-
ರ್ವಿಕೀರ್ಯಮಾಣಃ ಕುಸುಮೈಶ್ಚ ಹರ್ಷಿತೈಃ ॥ ೩೫ ॥

---

೩೧. ಕೆಲವರು ಶಂಕರನಿಗೆ ಛತ್ರಿಯನ್ನು ಹಿಡಿದಿದ್ದರು. ಆದರಮೇಲೆ ಮೇಲುಕಟ್ಟನ್ನು ಹಿಡಿದಿದ್ದರು. ಕೆಲವರು ಎಡಬಲಗಳಲ್ಲಿ ಚಾಮರವನ್ನು ಬೀಸುತ್ತ ಲಿದ್ದರು.

೩೨. ನಾನು ಹರಿ ಇಂದ್ರ ಮತ್ತು ಮಿಕ್ಕ ಲೋಕಪಾಲರು ಎಲ್ಲರೂ ಮಹಾ ತೇಜಸ್ಸಿನಿಂದ ಬೆಳಗುತ್ತಾ ಶಂಕರನೆದುರಿಗೆ ನಡೆಯುತ್ತಲಿದ್ದೆವು.

೩೩. ಶಂಖ, ಭೇರಿ, ಮದ್ದಳೆ, ನಗಾರಿ, ಗೋಮುಖ ಮುಂತಾದ ವಾದ್ಯ ಗಳನ್ನು ಆ ಮಹಾ ದಿಬ್ಬಣದಲ್ಲಿ ಪುನಃ ಪುನಃ ಬಾರಿಸಿದರು.

೩೪. ಮತ್ತು ಗಾಯಕರು ಮಂಗಲವಾದ ಗಾನವನ್ನು ಮಾಡಿದರು. ನರ್ತಕಿ ಯರು ಅನೇಕ ವಿಧವಾದ ಲಯತಾಳಗಳನ್ನನುಸರಿಸಿ ನರ್ತನಮಾಡಿದರು.

೩೫-೩೬. ಇಂತಹ ಪರಿವಾರದೊಡನೆ ಜಗತ್ತಿಗೇ ಬಂಧುವಾದ ಪರಮೇಶ್ವರನು ದೇವತೆಗಳಿಂದ ಸೇವಿಸಲ್ಪಡುತ್ತಾ ಹೊರಟುಬರುತ್ತಿದ್ದನು. ಅವನ ಮೇಲೆ ಸುವಾ ಸಿತವಾದ ಪುಷ್ಪವೃಷ್ಟಿಯನ್ನು ಕರೆಯುತ್ತಿದ್ದರು. ಬಗೆಬಗೆಯ ಸ್ತೋತ್ರಗಳಿಂದ

ಸಂಪೂಜಿತಸ್ತದಾ ಶಂಭುಃ ಪ್ರವಿಷ್ಟೋ ಯಜ್ಞಮಂಟಪಂ ।
ಸಂಸ್ತೂಯಮಾನೋ ಬಹ್ವೀಭಿಃ ಸ್ತುತಿಭಿಃ ಪರಮೇಶ್ವರಃ ॥ ೩೬ ॥

ವೃಷಾದುತ್ತಾರಯಾಮಾಸುರ್ಮಹೇಶಂ ಪರ್ವತೋತ್ತಮಾಃ ।
ನಿನ್ಯುರ್ಗೃಹಾಂತರಂ ಪ್ರೀತ್ಯಾ ಮಹೋತ್ಸವಪುರಸ್ಸರಂ ॥ ೩೭ ॥

ಹಿಮಾಲಯೋಽಪಿ ಸಂಪ್ರಾಪ್ತಂ ಸದೇವಗಣಮೀಶ್ವರಂ ।
ಪ್ರಣಮ್ಯ ವಿಧಿವದ್ಭಕ್ತ್ಯಾ ನೀರಾಜನಮಥಾಕರೋತ್ ॥ ೩೮ ॥

ಸರ್ವಾನ್ ಸುರಾನ್ಮುನೀನನ್ಯಾನ್ ಪ್ರಣಮ್ಯ ಸಮಹೋತ್ಸವಃ ।
ಸಮ್ಮಾನಮಕರೋತ್ತೇಷಾಂ ಪ್ರಶಂಸನ್ ಸ್ವವಿಧಿಂ ಮುದಾ ॥ ೩೯ ॥

ಸೋಽಗಸ್ಸಾಚ್ಯುತಮೀಶಾನಂ ಸುಪಾದ್ಯಾರ್ಘ್ಯಪುರಸ್ಸರಂ ।
ಸದೇವಮುಖ್ಯವರ್ಗಂ ಚ ನಿನಾಯ ಸ್ವಾಲಯಾಂತರಂ ॥ ೪೦ ॥

---

ಜನರು ಆ ಮಹಾದೇವನನ್ನು ಸ್ತೋತ್ರಮಾಡುತ್ತಿದ್ದರು. ಈರೀತಿ ಸಮಸ್ತರಿಂದಲೂ ಸೇವೆಯನ್ನು ಕೈಗೊಳ್ಳುತ್ತಾ ಆ ಶಿವನು ವಿವಾಹ ಮಂಟಪವನ್ನು ಪ್ರವೇಶಿಸಿದನು.

೩೭. ಆಮೇಲೆ ಪರ್ವತಶ್ರೇಷ್ಠರು ಶಿವನನ್ನು ನಂದಿಯ ಮೇಲಿನಿಂದ ಇಳಿಸಿ ಉತ್ಸವದೊಡನೆ ಅರಮನೆಯ ಒಳಕ್ಕೆ ಕರೆದುಕೊಂಡುಹೋದರು.

೩೮. ಹಿಮವಂತನು, ದೇವಗಣಗಳೊಡನೆ ಬಂದಿರುವ ಈಶ್ವರನನ್ನು ಭಕ್ತಿಯಿಂದ ನಮಸ್ಕರಿಸಿ ವಿಧಿವತ್ತಾಗಿ ಆರತಿಯನ್ನು ಮಾಡಿಸಿದನು.

೩೯. ಎಲ್ಲಾ ದೇವತೆಗಳನ್ನೂ ಮುನಿಗಳನ್ನೂ ಮಿಕ್ಕವರನ್ನೂ ನಮಸ್ಕರಿಸಿ ಆ ಹಿಮಾಲಯನು ತನ್ನ ಅದೃಷ್ಟವನ್ನು ಹೊಗಳಿಕೊಳ್ಳುತ್ತಾ ಎಲ್ಲರಿಗೂ ಸಂತೋಷದಿಂದ ಅತಿಥ್ಯವನ್ನು ವಿಜೃಂಭಣೆಯಿಂದ ಮಾಡಿದನು.

೪೦. ಮತ್ತು ಆ ಗಿರಿರಾಜನು ಪಾದ್ಯ ಅರ್ಘ್ಯ ಮುಂತಾದುವುಗಳನ್ನು ಕೊಟ್ಟು, ಈಶ್ವರನನ್ನು ಹರಿಯೇ ಮೊದಲಾದ ದೇವತೆಗಳೊಡನೆ ತನ್ನ ಮನೆಯ ಒಳಗೆ ಕರೆದುಕೊಂಡುಹೋದನು.

ಪ್ರಾಂಗಣೇ ಸ್ಥಾಪಯಾಮಾಸ ರತ್ನಸಿಹ್ಮಾಸನೇಷು ತಾ೯ ।
ಸರ್ವಾ೯ ವಿಷ್ಣುಂ ಚ ಮಾಮೀಶಂ ವಿಶಿಷ್ಟಾಂಶ್ಚ ವಿಶೇಷತಃ　　॥ ೪೧ ॥

ಸಖೀಭಿರ್ಮೇನಯಾ ಪ್ರೀತ್ಯಾ ಬ್ರಾಹ್ಮಣಸ್ತ್ರೀಭಿರೇವ ಚ ।
ಅನ್ಯಾಭಿಶ್ಚ ಪುರಂಧ್ರೀಭಿಶ್ಚಕ್ರೇ ನೀರಾಜನಂ ಮುದಾ　　॥ ೪೨ ॥

ಪುರೋಧಸಾ ಕೃತ್ಯವಿದಾ ಶಂಕರಾಯ ಮಹಾತ್ಮನೇ ।
ಮಧುಪರ್ಕಾದಿಕಂ ಯದ್ಯತ್ಕೃತ್ಯಂ ತತ್ತತ್ಕೃತಂ ಮುದಾ　　॥ ೪೩ ॥

ಮಯಾ ಸ ನೋದಿತಸ್ತತ್ರ ಪುರೋಧಾಃ ಕೃತವಾ೯ ಮುದಾ ।
ಸುಮಂಗಲಂ ಚ ಯತ್ಕರ್ಮ ಪ್ರಸ್ತಾವಸದೃಶಂ ಮುನೇ　　॥ ೪೪ ॥

ಅಂತರ್ವೇದ್ಯಾಂ ಮಹಾಪ್ರೀತ್ಯಾ ಸಂಪ್ರವಿಶ್ಯ ಹಿಮಾದ್ರಿಣಾ ।
ಯತ್ರ ಸಾ ಪಾರ್ವತೀ ಕನ್ಯಾ ಸರ್ವಾಭರಣಭೂಷಿತಾ　　॥ ೪೫ ॥

ವೇದಿಕೋಪರಿ ತನ್ವಂಗೀ ಸಂಸ್ಥಿತಾ ಸುವಿರಾಜಿತಾ ।
ತತ್ರ ನೀತೋ ಮಹಾದೇವೋ ವಿಷ್ಣುನಾ ಚ ಮಯಾ ಸಹ　　॥ ೪೬ ॥

---

೪೧. ಅಲ್ಲಿನ ಅಂಗಣದಲ್ಲಿ ನನ್ನನ್ನೂ, ಹರಿಯನ್ನೂ, ಶಂಕರನನ್ನೂ, ಮಿಕ್ಕ ದೇವೋತ್ತಮರನ್ನೂ ರತ್ನಸಿಹ್ಮಾಸನದಲ್ಲಿ ಕುಳ್ಳಿರಿಸಿದನು.

೪೨. ಮೇನಾದೇವಿಯು ಸಖಿಯರೊಡನೆಯೂ, ಬ್ರಾಹ್ಮಣಸ್ತ್ರೀಯರೊಡನೆಯೂ ಸಂತಸದಿಂದ ಆರತಿಯನ್ನೆತ್ತಿದಳು.

೪೩. ಕರ್ಮಶಾಸ್ತ್ರವನ್ನು ಬಲ್ಲ ಪುರೋಹಿತನಾದ ಗರ್ಗನು ಮಹಾತ್ಮನಾದ ಶಂಕರನಿಗೆ ಮಧುಪರ್ಕ ಮುಂತಾದ ವಿವಾಹಾಂಗವಿಧಿಗಳನ್ನು ಶಾಸ್ತ್ರೋಕ್ತವಾಗಿ ಮಾಡಿಸಿದನು.

೪೪. ಆ ಪುರೋಹಿತನು ನನ್ನಿಂದ ಪ್ರೇರಿತನಾಗಿ ವಿವಾಹಕ್ಕೆ ಮೊದಲು ಮಾಡಬೇಕಾದ ಮಂಗಲಕರ್ಮವನ್ನು ಹರ್ಷದಿಂದ ಮಾಡಿಸಿದನು.

೪೫-೪೬. ಆಮೇಲೆ ಹಿಮವಂತನು, ವೇದಿಕೆಯ ಮಧ್ಯಕ್ಕೆ ಪಾರ್ವತಿಯನ್ನು ಸರ್ವಾಲಂಕಾರಗಳಿಂದ ಅಲಂಕರಿಸಿ ಕರೆದುಕೊಂಡುಬಂದನು. ನಾನೂ ಹರಿಯೂ ಸಹ ಮಹಾದೇವನನ್ನು ಆ ವೇದಿಕೆಯ ಮಧ್ಯಕ್ಕೆ ಕರೆದೊಯ್ದೆವು.

ಲಗ್ನಂ ನಿರೀಕ್ಷಮಾಣಾಸ್ತೇ ವಾಚಸ್ಪತಿಪುರೋಗಮಾಃ ।
ಕನ್ಯಾದಾನೋಚಿತಂ ತತ್ರ ಬಭೂವುಃ ಪರಮೋತ್ಸವಾಃ ॥ ೪೭ ॥

ತತ್ರೋಪವಿಷ್ಟೋ ಗರ್ಗಶ್ಚ ಯತ್ರಾಸ್ತಿ ಘಟಿಕಾಲಯಂ ।
ಯಾವಚ್ಛೇಷಾ ಘಟೀ ತಾವತ್ಕೃತಂ ಪ್ರಣವಭಾಷಣಂ ॥ ೪೮ ॥

ಪುಣ್ಯಾಹಂ ಪ್ರವದನ್ ಗರ್ಗಸ್ಸಮಾದಧ್ರೇಽಂಜಲಿಂ ಮುದಾ ।
ಪಾರ್ವತ್ಯಾಕ್ಷತಪೂರ್ಣಂ ಚ ವವೃಷೇ ಚ ಶಿವೋಪರಿ ॥ ೪೯ ॥

ತಯಾ ಸಂಪೂಜಿತೋ ರುದ್ರೋ ದಧ್ಯಕ್ಷತಕುಶಾಂಬುಭಿಃ ।
ಪರಮೋದಾಢ್ಯಯಾ ತತ್ರ ಪಾರ್ವತ್ಯಾ ರುಚಿರಾಸ್ಯಯಾ ॥ ೫೦ ॥

ವಿಲೋಕಯಂತೀ ತಂ ಶಂಭುಂ ಯಸ್ಯಾರ್ಥೇ ಪರಮಂ ತಪಃ ।
ಕೃತಂ ಪುರಾ ಮಹಾಪ್ರೀತ್ಯಾ ವಿರರಾಜ ಶಿವಾತಿ ಸಾ ॥ ೫೧ ॥

---

೪೭. ಬೃಹಸ್ಪತಿಯೇ ಮೊದಲಾದ ಶಾಸ್ತ್ರವೇತ್ತರುಗಳು ಹರ್ಷದಿಂದ ಕನ್ಯಾದಾನಕ್ಕೆ ಯೋಗ್ಯವಾದ ಮುಹೂರ್ತವನ್ನು ನಿರೀಕ್ಷಿಸುತ್ತಲಿದ್ದರು.

೪೮. ಪುರೋಹಿತನಾದ ಗರ್ಗಮುನಿಯು ಘಟಿಕಾಯಂತ್ರದ ಬಳಿಯಲ್ಲೇ ಕುಳಿತಿದ್ದು ಲಗ್ನದ ಘಳಿಗೆಯು ಬರುವವರೆಗೆ ಓಂಕಾರವನ್ನು ಪಠಿಸುತ್ತಲಿದ್ದನು.

೪೯. ಗರ್ಗಮುನಿಯು ಪುಣ್ಯಾಹಮಂತ್ರವನ್ನು ಹೇಳಿ ಗಿರಿಜಾಶಿವರಿಗೆ ಅಂಜಲಿಯನ್ನು ಹಿಡಿಯುವಂತೆ ಹೇಳಿದನು. ಪಾರ್ವತಿಯು ತನ್ನ ಅಂಜಲಿಯಲ್ಲಿರುವ ಅಕ್ಷತೆಯನ್ನು ಶಿವನ ಮೇಲೆ ಪ್ರೀತಿಯಿಂದ ಹಾಕಿದಳು.

೫೦. ಮತ್ತು ಸುಂದರಮುಖಿಯಾದ ಆ ಗಿರಿಜೆಯು, ಮಂಗಳದ್ರವ್ಯಗಳಾದ ಮೊಸರು, ಅಕ್ಷತೆ, ಕುಶಜಲ ಇವುಗಳಿಂದ ಶಿವನನ್ನು ಮಹಾ ಪ್ರೇಮದಿಂದ ಪೂಜಿಸಿದಳು.

೫೧. ಯಾವನನ್ನು ಪಡೆಯುವುದಕ್ಕಾಗಿ ತಾನು ಹಿಂದೆ ಮಹಾ ತಪಸ್ಸನ್ನು ಮಾಡಿದ್ದಳೋ ಅಂತಹ ಶಂಕರನನ್ನು ಪ್ರೀತಿಯಿಂದ ನೋಡಿದಳು. ಮತ್ತು ಆಗ ಆ ಗಿರಿಜೆಯು ತುಂಬಾ ಶೋಭಿಸಿದಳು.

ಮಯಾ ಮುನೇ ತದೋಕ್ತಸ್ತು ಗರ್ಗಾದಿಮುನಿಭಿಸ್ಸಹ ।
ಸಮಾನರ್ಚ ಶಿವಾಂ ಶಂಭುರ್ಲೌಕಿಕಾಚಾರಸಮ್ಮತಃ ॥ ೫೨ ॥

ಏವಂ ಪರಸ್ಪರಂ ತೌ ವೈ ಪಾರ್ವತೀಪರಮೇಶ್ವರೌ ।
ಅರ್ಚಯಂತೌ ತದಾನೀಂ ಚ ಶುಶುಭಾತೇ ಜಗನ್ಮಯೌ ॥ ೫೩ ॥

ತ್ರೈಲೋಕ್ಯಲಕ್ಷ್ಮ್ಯಾ ಸಂವೀತೌ ನಿರೀಕ್ಷಂತೌ ಪರಸ್ಪರಂ ।
ತದಾ ನೀರಾಜಿತೌ ಲಕ್ಷ್ಮ್ಯಾದಿಭಿಸ್ತ್ರೀಭಿರ್ವಿಶೇಷತಃ ॥ ೫೪ ॥

ತಥಾ ಪರಾ ವೈ ದ್ವಿಜಯೋಷಿತಶ್ಚ
ನೀರಾಜಯಾಮಾಸುರಥೋ ಪುರಸ್ತ್ರಿಯಃ ।
ಶಿವಾಂ ಚ ಶಂಭುಂ ಚ ವಿಲೋಕಯಂತ್ಯೋಽ-
ವಾಪುರ್ಮುದಂ ತಾಸ್ಸಕಲಾ ಮಹೋತ್ಸವಂ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಸಪ್ತಚತ್ವಾರಿಂಶೋಽಧ್ಯಾಯಃ

---

೫೨. ನನ್ನ ಮತ್ತು ಗರ್ಗ ಮೊದಲಾದ ಮುನಿಗಳ ಮಾತಿನಂತೆ ಶಿವನೂ ಸಹ ಲೋಕಾಚಾರದಂತೆ ಗಿರಿಜೆಯನ್ನು ಪೂಜಿಸಿದನು.

೫೩. ಹೀಗೆ ಅನ್ಯೋನ್ಯವಾಗಿ ಪೂಜಿಸುತ್ತಾ ಆ ಜಗದ್ರೂಪರಾದ ಪಾರ್ವತೀ ಪರಮೇಶ್ವರರು ಆಗ ತುಂಬಾ ಶೋಭಿಸಿದರು.

೫೪. ಮೂರು ಲೋಕದ ಸಂಪತ್ತುಗಳಿಂದ ಕೂಡಿ ವಿರಾಜಿಸುತ್ತಿರುವ ಆ ಆ ಗಿರಿಜಾಶಂಕರರು ಪರಸ್ಪರ ಪ್ರೇಮದಿಂದ ನೋಡಿಕೊಳ್ಳುತ್ತಿದ್ದರು. ಇಂತಹ ವಧೂವರರಿಗೆ ಲಕ್ಷ್ಮೀದೇವಿಯೇ ಮೊದಲಾದ ಸುಮಂಗಲೆಯರು ಆರತಿಯೆತ್ತಿದರು.

೫೫. ಮತ್ತು ಆ ಮಹೋತ್ಸವದಲ್ಲಿ ಬ್ರಾಹ್ಮಣಸುಮಂಗಲೆಯರೂ ಪುರ ಸ್ತ್ರೀಯರೂ ಸಹ ಗಿರಿಜಾಶಂಕರರಿಗೆ ಆರತಿಯನ್ನು ಬೆಳಗಿ ಆ ದಂಪತಿಗಳನ್ನು ನೋಡುತ್ತಾ ತುಂಬಾ ಹರ್ಷಗೊಂಡರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ನಲವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಅಷ್ಟಚತ್ವಾರಿಂಶೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಏತಸ್ಮಿನ್ನಂತರೇ ತತ್ರ ಗರ್ಗಾಚಾರ್ಯಪ್ರಣೋದಿತಃ ।
ಹಿಮವಾನ್ ಮೇನಯಾ ಸಾರ್ಧಂ ಕನ್ಯಾಂ ದಾತುಂ ಪ್ರಚಕ್ರಮೇ ॥ ೧ ॥

ಹೈಮಂ ಕಲಶಮಾದಾಯ ಮೇನಾ ಚಾರ್ಧಾಂಗಮಾಶ್ರಿತಾ ।
ಹಿಮಾದ್ರೀಶ್ಚ ಮಹಾಭಾಗಾ ವಸ್ತ್ರಾಭರಣಭೂಷಿತಾ ॥ ೨ ॥

ಪಾದ್ಯಾದಿಭಿಸ್ತತಃ ಶೈಲಃ ಪ್ರಹೃಷ್ಟಃ ಸುಪುರೋಹಿತಃ ।
ತಂ ವರಂ ವರಯಾಮಾಸ ವಸ್ತ್ರಚಂದನಭೂಷಣೈಃ ॥ ೩ ॥

---

## ನಲವತ್ತೆಂಟನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಈ ಸಮಯದಲ್ಲಿ ಆಚಾರ್ಯನಾದ ಗಾರ್ಗ್ಯ ಮುನಿಯ ಮಾತಿನಂತೆ ಹಿಮವಂತನು ತನ್ನ ಹೆಂಡತಿಯಾದ ಮೇನಾದೇವಿಯೊಡನೆ ಕನ್ಯಾದಾನಮಾಡಲು ಸಿದ್ಧನಾದನು.

೨. ಹಿಮವಂತನ ಅರ್ಧಾಂಗಿಯಾದ ಮೇನೆಯು ವಸ್ತ್ರಾಭರಣಗಳಿಂದ ಅಲಂಕೃತಳಾಗಿ ಚಿನ್ನದ ಪೂರ್ಣಕಲಶವನ್ನು ಹಿಡಿದು ಧಾರೆಗಾಗಿ ನಿಂತಳು.

೩. ಬಳಿಕ ಗಿರಿರಾಜನು ಪಾದ್ಯ, ವಸ್ತ್ರ, ಚಂದನ ಅಲಂಕಾರ ಮುಂತಾದುವುಗಳನ್ನು ಶಿವನಿಗೆ ಕೊಟ್ಟು ಅವನನ್ನು ತನ್ನ ಕನ್ಯೆಗೆ ವರನಾಗಬೇಕೆಂದು ಕೇಳಿಕೊಂಡನು.

ತತೋ ಹಿಮಾದ್ರಿಣಾ ಪ್ರೋಕ್ತಾ ದ್ವಿಜಾಸ್ತಿಥ್ಯಾದಿಕೀರ್ತನೇ ।
ಪ್ರಯೋಗೋ ಭಣ್ಯತಾಂ ತಾವದಸ್ಮಿನ್ ಸಮಯ ಆಗತೇ ॥ ೪ ॥

ತಥೇತಿ ಚೋಕ್ತ್ವಾ ತೇ ಸರ್ವೇ ಕಾಲಜ್ಞಾ ದ್ವಿಜಸತ್ತಮಾಃ ।
ತಿಥ್ಯಾದಿಕೀರ್ತನಂ ಚಕ್ರುಃ ಪ್ರೀತ್ಯಾ ಪರಮನಿರ್ವೃತಾಃ ॥ ೫ ॥

ತತೋ ಹಿಮಾಚಲಃ ಪ್ರೀತ್ಯಾ ಶಂಭುನಾ ಪ್ರೇರಿತೋ ಹೃದಾ ।
ಸೂತೀಕೃತಃ ಪರೇಶೇನ ವಿಹಸನ್ ಶಂಭುಮಬ್ರವೀತ್ ॥ ೬ ॥

ಸ್ವಗೋತ್ರಂ ಕಥ್ಯತಾಂ ಶಂಭೋ ಪ್ರವರಶ್ಚ ಕುಲಂ ತಥಾ ।
ನಾಮ ವೇದಂ ತಥಾ ಶಾಖಾಂ ಮಾಕಾರ್ಷೀಸ್ಸಮಯಾತ್ಯಯಂ ॥ ೭ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಹಿಮಾದ್ರೇಶ್ಶಂಕರಸ್ತದಾ ।
ಸುಮುಖಾವಿಮುಖಃ ಸದ್ಯೋऽಪ್ಯಶೋಚ್ಯಃ ಶೋಚ್ಯತಾಂ ಗತಃ ॥ ೮ ॥

---

೪. ಆಮೇಲೆ ಹಿಮವಂತನು ಬ್ರಾಹ್ಮಣರನ್ನು ಕುರಿತು ಓ ವಿಪ್ರರೇ, ಈ ಕನ್ಯಾದಾನ ಕಾಲದಲ್ಲಿ ಆಗಬೇಕಾದ ಗೋತ್ರಪ್ರವರವಾಚನ, ಮಹಾಸಂಕಲ್ಪ, ವಾಙ್ನಿಶ್ಚಯ, ಮಂಗಳಾಷ್ಟಕ ಮೊದಲಾದ ಪ್ರಯೋಗವನ್ನು ಸಂಕಲ್ಪಪೂರ್ವಕವಾಗಿ ಮಾಡಿಸಿರಿ ಎಂದು ಪ್ರಾರ್ಥಿಸಿದನು.

೫. ತ್ರಿಕಾಲಜ್ಞಾನಿಗಳಾದ ಆ ಬ್ರಾಹ್ಮಣೋತ್ತಮರೆಲ್ಲರೂ ಹಾಗೆಯೇ ಆಗಲಿ ಎಂದು ಸಂತೋಷದಿಂದ ತಿಥಿ ಮೊದಲಾದುವುಗಳನ್ನು ಹೇಳಿ ಸಂಕಲ್ಪಮಾಡಿಸಿದರು.

೬-೭. ಆಮೇಲೆ ಹಿಮವಂತನು ಅಂತರಂಗದಲ್ಲಿ ಶಿವನಿಂದ ಪ್ರೇರಿತನಾಗಿ ಮಂದಹಾಸದಿಂದ ಆ ಶಿವನನ್ನು ಕುರಿತು, ಓ ಶಂಕರ, ನಿನ್ನ ಗೋತ್ರವನ್ನೂ, ಪ್ರವರವನ್ನೂ, ಕುಲವನ್ನೂ ಮತ್ತು ಹೆಸರು, ವೇದ, ಶಾಖೆ, ಇವುಗಳನ್ನೂ ಹೇಳು. ಕಾಲ ವಿಳಂಬ ಮಾಡಬೇಡ ಎಂದನು.

೮. ಬ್ರಹ್ಮನು ಹೇಳಿದನು :—ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಶಂಕರನು, ಪ್ರಸನ್ನಮುಖವುಳ್ಳವನಾದರೂ ತನ್ನ ಮುಖವನ್ನು ಬಗ್ಗಿಸಿದನು. ಶೋಕಸಂಬಂಧವಿಲ್ಲದವನಾದರೂ ಅವನು ಶೋಕಪಡುವಂತೆ ತೋರಿದನು.

ಏವಂವಿಧಸ್ಸುರವರೈರ್ಮುನಿಭಿಸ್ತದಾನೀಂ
ಗಂಧರ್ವಯಕ್ಷಗಣಸಿದ್ಧಗಣೈಸ್ತಥೈವ ।
ದೃಷ್ಟೋ ನಿರುತ್ತರಮುಖೋ ಭಗವಾನ್ ಮಹೇಶೋಽ
ಕಾರ್ಷೀಸ್ಸುಹಾಸ್ಯಮಥ ತತ್ರ ನಾರದ ತ್ವಂ ॥ ೯ ॥

ವೀಣಾಮುವಾದಯಸ್ತ್ವಂ ಹಿ ಬ್ರಹ್ಮವಿಜ್ಞೋಽಥ ನಾರದ ।
ಶಿವೇನ ಪ್ರೇರಿತಸ್ತತ್ರ ಮನಸಾ ಶಂಭುಮಾನಸಃ ॥ ೧೦ ॥

ತದಾ ನಿವಾರಿತೋ ಧೀಮಾನ್ ಪರ್ವತೇಂದ್ರೇಣ ವೈ ಹಠಾತ್ ।
ವಿಷ್ಣುನಾ ಚ ಮಯಾ ದೇವೈರ್ಮುನಿಭಿಶ್ಚಾಖಿಲೈಸ್ತಥಾ ॥ ೧೧ ॥

ನ ನಿವೃತ್ತೋಽಭವಸ್ತ್ವಂ ಹಿ ಸ ಯದಾ ಶಂಕರೇಚ್ಛಯಾ ।
ಇತಿ ಪ್ರೋಕ್ತೋಽದ್ರಿಣಾ ತರ್ಹಿ ವೀಣಾಂ ಮಾ ವಾದಯಾಧುನಾ ॥ ೧೨ ॥

ಸುನಿಷಿದ್ಧೋ ಹಠಾತ್ತೇನ ದೇವರ್ಷೇ ತ್ವಂ ಯದಾ ಬುಧ ।
ಪ್ರತ್ಯವೋಚೋ ಗಿರೀಶಂ ತಂ ಸುಸಂಸ್ಮೃತ್ಯ ಮಹೇಶ್ವರಂ ॥ ೧೩ ॥

---

೯. ಎಲೈ ನಾರದ, ಹೀಗೆ ಭಗವಂತನಾದ ಮಹೇಶ್ವರನು ಹಿಮವಂತನ ಪ್ರಶ್ನೆಗೆ ನಿರುತ್ತರನಾದುದನ್ನು ದೇವತೆಗಳು, ಮುನಿಗಳು, ಗಂಧರ್ವರು, ಯಕ್ಷರು, ಸಿದ್ಧರು ಮುಂತಾದವರು ನೋಡುತ್ತಿರಲು, ಆಗ ನೀನು ಒಂದು ಚಮತ್ಕಾರವನ್ನು ಮಾಡಿದೆ.

೧೦. ಆಗ ಶಿವನು ಮನಸ್ಸಿನಲ್ಲಿಯೇ ನಿನ್ನನ್ನು ಪ್ರೇರಿಸಲು, ಬ್ರಹ್ಮ ಜ್ಞಾನಿಯೂ ಶಿವಭಕ್ತನೂ ಆದ ನೀನು ಆಗ ವೀಣೆಯನ್ನು ನುಡಿಸಿದೆ.

೧೧-೧೨. ಆಗ ಹಿಮವಂತ, ವಿಷ್ಣು, ನಾನು, ದೇವತೆಗಳು, ಮುನಿಗಳು ಎಲ್ಲರೂ ವೀಣೆಯನ್ನು ನುಡಿಸಬೇಡವೆಂದು ತಡೆದರೂ ವೀಣೆ ಬಾರಿಸುವುದನ್ನು ಬಿಡಲೇ ಇಲ್ಲ. ಆಗ ಹಿಮವಂತನು ಕೋಪಗೊಂಡು ಈಗ ವೀಣೆಯನ್ನು ನುಡಿಸ ಬೇಡ ಎಂದನು.

೧೩-೧೪. ಹಾಗೆ ಹಿಮವಂತನು ಬಲಾತ್ಕಾರವಾಗಿ ನಿನ್ನನ್ನು ತಡೆಯಲು ಆಗ ನೀನು ಮಹೇಶ್ವರನನ್ನು ಮನಸ್ಸಿನಲ್ಲಿ ಸ್ಮರಿಸಿ ಎಲೈ ಹಿಮವಂತ, ನೀನು ಮೂಢ

॥ ನಾರದ ಉವಾಚ ॥

ತ್ವಂ ಹಿ ಮೂಢತ್ವಮಾಪನ್ನೋ ನ ಜಾನಾಸಿ ಚ ಕಿಂಚನ ।
ವಾಚ್ಯೋ ಮಹೇಶವಿಷಯೇಽತೀವಾಸಿ ತ್ವಂ ಬಹಿರ್ಮುಖಃ ॥ ೧೪ ॥

ತ್ವಯಾ ಪೃಷ್ಟೋ ಹರಸ್ಸಾಕ್ಷಾತ್ಸ್ವಗೋತ್ರಕಥನಂ ಪ್ರತಿ ।
ಸಮಯೇಽಸ್ಮಿಂಸ್ತದತ್ಯಂತಮುಪಹಾಸಕರಂ ವಚಃ ॥ ೧೫ ॥

ಅಸ್ಯ ಗೋತ್ರಂ ಕುಲಂ ನಾಮ ನೈವ ಜಾನಂತಿ ಪರ್ವತ ।
ವಿಷ್ಣುಬ್ರಹ್ಮಾದಯೋಽಪೀಹ ಪರೇಷಾಂ ಕಾ ಕಥಾ ಸ್ಮೃತಾ ॥ ೧೬ ॥

ಯಸ್ಯೈಕದಿವಸೇ ಶೈಲ ಬ್ರಹ್ಮಕೋಟಿರ್ಲಯಂ ಗತಾ ।
ಸ ಏವ ಶಂಕರಸ್ತೇಽದ್ಯ ದೃಷ್ಟಃ ಕಾಲೀತಪೋಬಲಾತ್ ॥ ೧೭ ॥

ಅರೂಪೋಽಯಂ ಪರಬ್ರಹ್ಮ ನಿರ್ಗುಣಃ ಪ್ರಕೃತೇಃ ಪರಃ ।
ನಿರಾಕಾರೋ ನಿರ್ವಿಕಾರೋ ಮಾಯಾಧೀಶಃ ಪರಾತ್ಪರಃ ॥ ೧೮ ॥

---

ನಾಗಿರುವೆ. ನಿನಗೆ ತಿಳಿವಳಿಕೆಯೇ ಇಲ್ಲವಲ್ಲಾ. ಮಹೇಶ್ವರನ ವಿಷಯದಲ್ಲಿ ನೀನು ತುಂಬಾ ಉದಾಸೀನನಾಗಿರುವೆ.

೧೫. ಗೋತ್ರವನ್ನು ಹೇಳುವಂತೆ ನೀನು ಸಾಕ್ಷಾತ್ ಶಿವನನ್ನೇ ಪ್ರಶ್ನಿಸಿರುವೆ. ಸಮಯೋಚಿತವಲ್ಲದ ಈ ನಿನ್ನ ಮಾತು ಈ ಸಮಯದಲ್ಲಿ ತುಂಬಾ ಅವಮಾನವನ್ನು ಮಾಡುವಂತಹುದು.

೧೬. ಈ ಶಿವನ ಗೋತ್ರ, ಕುಲ, ನಾಮಗಳನ್ನು ಹರಿಬ್ರಹ್ಮರೇ ತಿಳಿಯಲಾರರು. ಎಂದಮೇಲೆ ಮಿಕ್ಕವರು ತಿಳಿಯುವುದು ಹೇಗೆ?

೧೭. ಯಾವನ ದಿನವೊಂದರಲ್ಲಿ ಕೋಟಿಬ್ರಹ್ಮರು ಲಯವನ್ನು ಹೊಂದುವರೋ ಅಂತಹ ಶಿವನನ್ನು ನೀನು ಪಾರ್ವತಿಯ ತಪಸ್ಸಿನ ಮಹಿಮೆಯಿಂದ ಪ್ರತ್ಯಕ್ಷವಾಗಿ ಈಗ ನೋಡುತ್ತಲಿರುವೆ.

೧೮. ಇವನು ರೂಪವಿಲ್ಲದ ಪರಬ್ರಹ್ಮವಸ್ತುವು, ನಿರ್ಗುಣನು. ಪ್ರಕೃತಿಯ ಸಂಬಂಧವು ಇವನಿಗಿಲ್ಲ. ಇವನಿಗೆ ಆಕಾರವೂ ವಿಕಾರಗಳೂ ಇಲ್ಲ. ಮಾಯೆಯನ್ನಿವನು ತನ್ನಧೀನದಲ್ಲಿಟ್ಟುಕೊಂಡಿರುವನು, ಸರ್ವೋತ್ಕೃಷ್ಟನು.

ಅಗೋತ್ರಕುಲನಾಮಾ ಹಿ ಸ್ವತಂತ್ರೋ ಭಕ್ತವತ್ಸಲಃ ।
ತದಿಚ್ಛಯಾ ಹಿ ಸುಗುಣಃ ಸುತನುರ್ಬಹುನಾಮಭೃತ್ ॥ ೧೯ ॥

ಸುಗೋತ್ರೀ ಗೋತ್ರಹೀನಶ್ಚ ಕುಲಹೀನಃ ಕುಲೀನಕಃ ।
ಪಾರ್ವತೀತಪಸಾ ಸೋಽದ್ಯ ಜಾಮಾತಾ ತೇ ನ ಸಂಶಯಃ ॥ ೨೦ ॥

ಲೀಲಾವಿಹಾರಿಣಾ ತೇನ ಮೋಹಿತಂ ಚ ಚರಾಚರಂ ।
ನೋ ಜಾನಾತಿ ಶಿವಂ ಕೋಽಪಿ ಪ್ರಾಜ್ಞೋಽಪಿ ಗಿರಿಸತ್ತಮ ॥ ೨೧ ॥

ಲಿಂಗಾಕೃತೇರ್ಮಹೇಶಸ್ಯ ಕೇನ ದೃಷ್ಟಂ ನ ಮಸ್ತಕಂ ।
ವಿಷ್ಣುರ್ಗತ್ವಾ ಹಿ ಪಾತಾಲಂ ತದೇಸಂ ನಾಪ ವಿಸ್ಮಿತಃ ॥ ೨೨ ॥

ಕಿಂ ಬಹೂಕ್ತ್ಯಾ ನಗಶ್ರೇಷ್ಠ ಶಿವಮಾಯಾ ದುರತ್ಯಯಾ ।
ತದಧೀನಾಸ್ತ್ರಯೋ ಲೋಕಾ ಹರಿಬ್ರಹ್ಮಾದಯೋಽಪಿ ಚ ॥ ೨೩ ॥

---

೧೯-೨೦. ವಸ್ತುತಃ ಈ ಶಿವನಿಗೆ ಕುಲಗೋತ್ರಗಳೂ ಹೆಸರೂ ಇಲ್ಲ. ಸ್ವತಂತ್ರನಿವನು, ಭಕ್ತವತ್ಸಲನು. ತನ್ನಿಚ್ಛೆಯಿಂದಲೇ ಇವನು ಸಗುಣನೂ ಸುಂದರ ಶರೀರವುಳ್ಳವನೂ ಆಗುವನು. ಅನೇಕ ಹೆಸರುಗಳನ್ನು ಧರಿಸುವನು. ವಸ್ತುತಃ ಗೋತ್ರಗಳಿಲ್ಲದವನಾದರೂ ಇವನು ತನ್ನಿಚ್ಛೆಯಿಂದ ಒಳ್ಳೆಯ ಗೋತ್ರದಲ್ಲಿ ಜನಿಸುವನು. ಒಳ್ಳೆಯ ಕುಲದಲ್ಲಿ ಹುಟ್ಟುವನು. ಇಂತಹ ಪರವಸ್ತುವಾದ ಈ ಶಿವನು ಪಾರ್ವತಿಯ ತಪಸ್ಸಿನ ಮಹಿಮೆಯಿಂದ ನಿನ್ನ ಅಳಿಯನಾಗಲು ಬಂದಿರುವನು. ಇದು ನಿಶ್ಚಯವಾದುದು.

೨೧. ಲೀಲಾಮಯನಾದ ಈ ಶಿವನು ಜಗತ್ತೆಲ್ಲವನ್ನೂ ಮೋಹಗೊಳಿಸುವನು. ಎಂತಹ ಪಂಡಿತನೂ ಇವನ ಸ್ವರೂಪವನ್ನು ತಿಳಿಯಲಾರನು.

೨೨. ಹಿಂದೆ ಮಹಾಲಿಂಗರೂಪನಾದ ಈ ಶಿವನ ಶಿರಸ್ಸನ್ನು ಬ್ರಹ್ಮನೂ ನೋಡಲಾರದೆ ಹೋದನು. ಹರಿಯು ಪಾತಾಲದವರೆಗೂ ಹೋಗಿ ಈ ಶಿವನ ಪಾದವನ್ನು ನೋಡಲು ಅಸಮರ್ಥನಾದನು.

೨೩. ಎಲೈ ಪರ್ವತರಾಜ, ಹೆಚ್ಚು ಹೇಳಿ ಪ್ರಯೋಜನವೇನು? ಶಿವನ ಮಾಯೆಯನ್ನು ಉಲ್ಲಂಘಿಸಲು ಯಾರಿಂದಲೂ ಸಾಧ್ಯವಿಲ್ಲ. ಆ ಶಿವಮಾಯೆಗಧೀನ

ತಸ್ಮಾತ್ತ್ವಯಾ ಶಿವಾತಾತ ಸುವಿಚಾರ್ಯ ಪ್ರಯತ್ನತಃ ।
ನ ಕರ್ತವ್ಯೋ ವಿಮರ್ಶೋಽತ್ರ ತ್ವೇವಂವಿಧವರೇ ಮನಾಕ್ ॥ ೨೪ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತ್ವಂ ಮುನೇ ಜ್ಞಾನೀ ಶಿವೇಚ್ಛಾಕಾರ್ಯಕಾರಕಃ ।
ಪ್ರತ್ಯವೋಚಃ ಪುನಸ್ತಂ ವೈ ಶೈಲೇಂದ್ರಂ ಹರ್ಷಯನ್ ಗಿರಾ ॥ ೨೫ ॥

॥ ನಾರದ ಉವಾಚ ॥

ಶೃಣು ತಾತ ಮಹಾಶೈಲ ಶಿವಾಜನಕ ಮದ್ವಚಃ ।
ತಚ್ಛ್ರುತ್ವಾ ತನಯಾಂ ದೇವೀಂ ದೇಹಿ ತ್ವಂ ಶಂಕರಾಯ ಹಿ ॥ ೨೬ ॥

ಸಗುಣಸ್ಯ ಮಹೇಶಸ್ಯ ಲೀಲಯಾ ರೂಪಧಾರಿಣಃ ।
ಗೋತ್ರಂ ಕುಲಂ ವಿಜಾನೀಹಿ ನಾದಮೇವ ಹಿ ಕೇವಲಂ ॥ ೨೭ ॥

ಶಿವೋ ನಾದಮಯಸ್ಸತ್ಯಂ ನಾದಶ್ಶಿವಮಯಸ್ತಥಾ ।
ಉಭಯೋರಂತರಂ ನಾಸ್ತಿ ನಾದಸ್ಯ ಚ ಶಿವಸ್ಯ ಚ ॥ ೨೮ ॥

---

ವಾಗಿಯೇ ಮೂರುಲೋಕಗಳೂ ನಿಂತಿರುವುವು. ಹರಿಬ್ರಹ್ಮ ಮೊದಲಾದವರೂ ಶಿವಮಾಯೆಗೆ ಒಳಪಟ್ಟಿರುವರು.

೨೪. ಎಲೈ ಗಿರಿಜಾಜನಕನೇ, ನೀನು ಚೆನ್ನಾಗಿ ವಿಚಾರಮಾಡು. ಇಂತಹ ಉತ್ಕೃಷ್ಟವರನಾದ ಶಿವನಲ್ಲಿ ವಿಮರ್ಶೆಯನ್ನು ಸ್ವಲ್ಪವೂ ಮಾಡಬೇಡ ಎಂದು ಹೇಳಿದೆ.

೨೫-೨೬. ಬ್ರಹ್ಮನು ಹೇಳಿದನು:—ಎಲೈ ನಾರದ, ಜ್ಞಾನಿಯೂ ಶಿವೇಚ್ಛೆಯಂತೆ ನಡೆಯುವವನೂ ಆದ ನೀನು ಹಾಗೆ ಹೇಳಿ ತಿರುಗಿ ಆ ಹಿಮವಂತನನ್ನು ಕುರಿತು ಎಲೈ ಗಿರಿರಾಜ, ನನ್ನ ಮಾತನ್ನು ಕೇಳು. ಆಮೇಲಾದರೂ ಗಿರಿಜೆಯನ್ನು ಶಿವನಿಗೆ ಕೊಡುವೆ.

೨೭. ಲೀಲೆಯಿಂದ ಸಗುಣರೂಪವನ್ನು ಧರಿಸಿದಂತಹ ಶಿವನ ಗೋತ್ರವೂ ಕುಲವೂ ಓಂಕಾರರೂಪವಾದ ನಾದವೇ ಆಗಿರುವುದು.

೨೮. ಶಿವನು ನಾದರೂಪನು, ನಾದವೂ ಶಿವರೂಪವು. ನಾದಕ್ಕೂ ಶಿವನಿಗೂ ಭೇದವೇ ಇಲ್ಲ. ಅದು ನಿಜವಾದ ತತ್ವವು.

ಸೃಷ್ಟ್ವಾ ಪ್ರಥಮಜತ್ವಾದ್ಧಿ ಲೀಲಾಸಗುಣರೂಪಿಣಃ ।
ಶಿವಾನ್ನಾದಸ್ಯ ಶೈಲೇಂದ್ರ ಸರ್ವೋತ್ಕೃಷ್ಟಸ್ತತಃ ಸ ಹಿ ॥ ೨೯ ॥

ಅತೋ ಹಿ ವಾದಿತಾ ವೀಣಾ ಪ್ರೇರಿತೇನ ಮಯಾದ್ಯ ವೈ ।
ಸರ್ವೇಶ್ವರೇಣ ಮನಸಾ ಶಂಕರೇಣ ಹಿಮಾಲಯ ॥ ೩೦ ॥

॥ ಬ್ರಹ್ಮೋವಾಚ ॥

ಏತಚ್ಛ್ರುತ್ವಾ ತವ ಮುನೇ ವಚಸ್ತತ್ತು ಗಿರೀಶ್ವರಃ ।
ಹಿಮಾದ್ರಿಸ್ತೋಷಮಾಪನ್ನೋ ಗತವಿಸ್ಮಯಮಾನಸಃ ॥ ೩೧ ॥

ಅಥ ವಿಷ್ಣುಪ್ರಭೃತಯಸ್ಸುರಾಶ್ಚ ಮುನಯಸ್ತಥಾ ।
ಸಾಧು ಸಾಧ್ವಿತಿ ತೇ ಸರ್ವೇ ಪ್ರೋಚುರ್ವಿಗತವಿಸ್ಮಯಾಃ ॥ ೩೨ ॥

ಮಹೇಶ್ವರಸ್ಯ ಗಾಂಭೀರ್ಯಂ ಜ್ಞಾತ್ವಾ ಸರ್ವೇ ವಿಚಕ್ಷಣಾಃ ।
ಸವಿಸ್ಮಯಾ ಮಹಾಮೋದಾನ್ವಿತಾಃ ಪ್ರೋಚುಃ ಪರಸ್ಪರಂ ॥ ೩೩ ॥

---

೨೯. ಸಗುಣನಾದ ಪರಮೇಶ್ವರನಿಂದ ನಾದವು ಮೊದಲು ಜನಿಸಿತು. ಆದುದರಿಂದ ಆ ನಾದವು ಸರ್ವೋತ್ತಮವು.

೩೦. ಆದುದರಿಂದಲೇ ಈಗ ವೀಣೆಯಿಂದ ನಾನು ನಾದವನ್ನು ನುಡಿಸಿದೆನು. ಹಾಗೆ ನುಡಿಸುವಂತೆ ಸರ್ವೇಶ್ವರನಾದ ಶಿವನೇ ನನ್ನ ಮನಸ್ಸಿನಲ್ಲಿ ಪ್ರೇರಿಸಿದನು ಎಂದು ಹೇಳಿದೆ.

೩೧. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ನೀನು ಹೇಳಿದ ಮಾತನ್ನು ಕೇಳಿ ಹಿಮವಂತನು ವಿಸ್ಮಯವನ್ನು ಬಿಟ್ಟು ಸಂತಸಗೊಂಡನು.

೩೨. ಆಗ ಹರಿ ಮೊದಲಾದ ದೇವತೆಗಳೂ ಮುನಿಗಳೂ ಸಹ ವಿಸ್ಮಯವನ್ನು ಬಿಟ್ಟು ನಿನ್ನನ್ನು ಕುರಿತು "ಸಾಧು ಸಾಧು" ಚೆನ್ನಾಗಿ ಹೇಳಿದೆ ಎಂದು ಧನ್ಯವಾದ ಗಳನ್ನರ್ಪಿಸಿದರು.

೩೩. ನಿನ್ನಿಂದ ಮಹೇಶ್ವರನ ಮಹಾ ಮಹಿಮೆಯನ್ನು ತಿಳಿದು ಸಂತೋಷಾಶ್ಚರ್ಯಗಳಿಂದ ಇಂತೆಂದರು.

ಯಸ್ಯಾಜ್ಞಯಾ ಜಗದಿದಂ ಚ ವಿಶಾಲಮೇವ
ಜಾತಂ ಪರಾತ್ಪರತರೋ ನಿಜಬೋಧರೂಪಃ ।
ಶರ್ವಃ ಸ್ವತಂತ್ರಗತಿಕೃತ್ಪರಭಾವಗಮ್ಯಃ
ಸೋಽಸೌ ತ್ರಿಲೋಕಪತಿರದ್ಯ ಚ ನಸ್ಸುದೃಷ್ಟಃ ॥ ೩೪ ॥

ಅಥ ತೇ ಪರ್ವತಶ್ರೇಷ್ಠಾ ಮೇರ್ವಾದ್ಯಾ ಜಾತಸಂಭ್ರಮಾಃ ।
ಊಚುಸ್ತೇ ಚೈಕಪದ್ಯೇನ ಹಿಮವಂತಂ ನಗೇಶ್ವರಂ ॥ ೩೫ ॥

॥ ಪರ್ವತಾ ಊಚುಃ ॥

ಕನ್ಯಾದಾನೇ ಸ್ಥೀಯತಾಂ ಚಾದ್ಯ ಶೈಲ-
ನಾಥೋಕ್ತ್ಯಾ ಕಿಂ ಕಾರ್ಯನಾಶಸ್ತ್ವಯೈವ ।
ಸತ್ಯಂ ಬ್ರೂಮೋ ನಾತ್ರ ಕಾರ್ಯೋ ವಿಮರ್ಶ-
ಸ್ತಸ್ಮಾತ್ಕನ್ಯಾ ದೀಯತಾಮೀಶ್ವರಾಯ ॥ ೩೬ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ವಚನಂ ತೇಷಾಂ ಸುಹೃದಾಂ ಸ ಹಿಮಾಲಯಃ ।
ಸ್ವಕನ್ಯಾದಾನಮಕರೋಚ್ಛಿವಾಯ ವಿಧಿನೋದಿತಃ ॥ ೩೭ ॥

---

೩೪. ಯಾವನ ಆಜ್ಞೆಯಿಂದ ವಿಶಾಲವಾದ ಜಗತ್ತು ಜನಿಸಿರುವುದೋ ಆ ಸರ್ವೋತ್ತಮನೂ ಸತ್ಯಜ್ಞಾನರೂಪನೂ ಆದ ಈ ಶಿವನನ್ನು ಈಗ ನಾವು ನೋಡುತ್ತಲಿರುವೆವು. ಇವನು ಸ್ವತಂತ್ರನು, ಬ್ರಹ್ಮಜ್ಞಾನದಿಂದಲೇ ಪಡೆಯಲ್ಪಡತಕ್ಕವನು. ಜಗತ್ತಿಗೆಲ್ಲಕ್ಕೂ ಒಡೆಯನು, ಎಂದು ಪರಸ್ಪರ ಮಾತನಾಡಿಕೊಂಡರು.

೩೫-೩೬. ಬಳಿಕ ಮಿಕ್ಕ ಪರ್ವತೋತ್ತಮರೆಲ್ಲರೂ ಸಂಭ್ರಮದಿಂದ ಹಿಮವಂತನನ್ನು ಕುರಿತು, ಎಲೈ ಗಿರಿರಾಜ, ಕನ್ಯಾದಾನಕ್ಕೆ ಸಿದ್ಧಪಡಿಸು. ಹೆಚ್ಚು ಮಾತಿನಿಂದ ನಿನ್ನ ಕಾರ್ಯಕ್ಕೇ ತೊಂದರೆಯಾಗುವುದು. ಇಲ್ಲಿ ವಿಮರ್ಶೆಮಾಡಬೇಕಾದುದೇ ಇಲ್ಲ. ಆದಕಾರಣ ಶಂಕರನಿಗೆ ಗಿರಿಜೆಯನ್ನು ಧಾರೆಯೆರೆದುಕೊಡು ಎಂದರು.

೩೭. ಬ್ರಹ್ಮನು ಹೇಳಿದನು:— ಬಂಧುಗಳಾದ ಪರ್ವತಶ್ರೇಷ್ಠರ ಆ ಮಾತನ್ನು ಕೇಳಿ ಹಿಮವಂತನು ಬ್ರಹ್ಮನ ಪ್ರೇರಣೆಯಂತೆ ಶಿವನಿಗೆ ಕನ್ಯಾದಾನವನ್ನು ಮಾಡಿದನು.

ಇಮಾಂ ಕನ್ಯಾಂ ತುಭ್ಯಮಹಂ ದದಾಮಿ ಪರಮೇಶ್ವರ ।
ಭಾರ್ಯಾರ್ಥಂ ಪರಿಗೃಹ್ಣೀಷ್ವ ಪ್ರಸೀದ ಸಕಲೇಶ್ವರ ॥ ೩೮ ॥

ತಸ್ಮೈ ರುದ್ರಾಯ ಮಹತೇ ಮಂತ್ರೇಣಾನೇನ ದತ್ತವಾನ್ ।
ಹಿಮಾಚಲೋ ನಿಜಾಂ ಕನ್ಯಾಂ ಪಾರ್ವತೀಂ ತ್ರಿಜಗತ್ಪ್ರಸೂಂ ॥ ೩೯ ॥

ಇತ್ಥಂ ಶಿವಾಕರಂ ಶೈಲಶ್ಶಿವಹಸ್ತೇ ನಿಧಾಯ ಚ ।
ಮುಮೋದಾತೀವ ಮನಸಿ ತೀರ್ಣಕಾಮಮಹಾರ್ಣವಃ ॥ ೪೦ ॥

ವೇದಮಂತ್ರೇಣ ಗಿರಿಶೋ ಗಿರಿಜಾಕರಪಂಕಜಂ ।
ಜಗ್ರಾಹ ಸ್ವಕರೇಣಾಽಽಶು ಪ್ರಸನ್ನಃ ಪರಮೇಶ್ವರಃ ॥ ೪೧ ॥

ಕ್ಷಿತಿಂ ಸಂಸ್ಪೃಶ್ಯ ಕಾಮಸ್ಯ ಕೋಽದಾದಿತಿ ಮನುಂ ಮುನೇ ।
ಪಪಾಠ ಶಂಕರಃ ಪ್ರೀತ್ಯಾ ದರ್ಶಯನ್ ಲೌಕಿಕೀಂ ಗತಿಂ ॥ ೪೨ ॥

---

೩೮. ಓ ಪರಮೇಶ್ವರ, ಈ ನನ್ನ ಕನ್ಯೆಯನ್ನು ನಿನಗೆ ಕೊಡುವೆನು. ಇವಳನ್ನು ಪತ್ನಿಯನ್ನಾಗಿ ಪರಿಗ್ರಹಿಸು. ಓ ಜಗದೀಶ್ವರ, ನನ್ನಲ್ಲಿ ಪ್ರಸನ್ನನಾಗು.

೩೯. ಹೀಗೆ ಹೇಳಿ "ತಸ್ಮೈ ರುದ್ರಾಯ ಮಹತೇ" ಎಂಬ ಮಂತ್ರದಿಂದ ಆ ಗಿರಿರಾಜನು ಜಗನ್ಮಾತೆಯಾದ ತನ್ನ ಪುತ್ರಿಯನ್ನು ಶಿವನಿಗೆ ಧಾರೆಯೆರೆದು ಕೊಟ್ಟನು.

೪೦. ಹಿಮವಂತನು ಶಿವನ ಕೈಯಲ್ಲಿ ಪಾರ್ವತಿಯ ಕೈಯನ್ನಿಟ್ಟು ತನ್ನ ಮನೋರಥ ಪೂರ್ತಿಯಾಯಿತೆಂದು ತುಂಬಾ ಹರ್ಷಗೊಂಡನು.

೪೧. ಆಗ ಪರಮೇಶ್ವರನು ವೇದಮಂತ್ರಪೂರ್ವಕವಾಗಿ ಗಿರಿಜೆಯ ಕರಕಮಲವನ್ನು ಹರ್ಷದಿಂದ ಪಾಣಿಗ್ರಹಣಮಾಡಿದನು.

೪೨. ಲೋಕಾಚಾರವನ್ನನುಸರಿಸಿ ಆ ಶಿವನು ಭೂಮಿಯನ್ನು ಸ್ಪರ್ಶಿಸಿ "ಕ ಇದಂ ಕಸ್ಮಾ ಅದಾತ್" ಎಂಬ ಮಂತ್ರವನ್ನು ಪಠಿಸಿದನು.

ಮಹೋತ್ಸವೋ ಮಹಾನಾಸೀತ್ಸರ್ವತ್ರ ಪ್ರಮುದಾವಹಃ ।
ಭಭೂವ ಜಯಸಂರಾವೋ ದಿವಿ ಭುವ್ಯಂತರಿಕ್ಷಕೇ ॥ ೪೩ ॥

ಸಾಧುಶಬ್ದಂ ನಮಶ್ಶಬ್ದಂ ಚಕ್ರುಸ್ಸರ್ವೇಽತಿಹರ್ಷಿತಾಃ ।
ಗಂಧರ್ವಾ ಸುಜಗುಃ ಪ್ರೀತ್ಯಾ ನನೃತುಶ್ಚಾಪ್ಸರೋಗಣಾಃ ॥ ೪೪ ॥

ಹಿಮಾಚಲಸ್ಯ ಪೌರಾ ಹಿ ಮುಮುದುಶ್ಚಾತಿ ಚೇತಸಿ ।
ಮಂಗಲಂ ಮಹದಾಸೀದ್ವೈ ಮಹೋತ್ಸವಪುರಸ್ಸರಂ ॥ ೪೫ ॥

ಅಹಂ ವಿಷ್ಣುಶ್ಚ ಶಕ್ರಶ್ಚ ನಿರ್ಜರಾ ಮುನಯೋಽಖಿಲಾಃ ।
ಹರ್ಷಿತಾ ಹ್ಯಭವಂಶ್ಚಾತಿ ಪ್ರಫುಲ್ಲವದನಾಂಬುಜಾಃ ॥ ೪೬ ॥

ಅಥ ಶೈಲವರಸ್ಸೋಽದಾತ್ಸುಪ್ರಸನ್ನೋ ಹಿಮಾಚಲಃ ।
ಶಿವಾಯ ಕನ್ಯಾದಾನಸ್ಯ ಸಾಂಗತಾಂ ಸುಯಥೋಚಿತಾಂ ॥ ೪೭ ॥

---

೪೩. ಆಗ ಎಲ್ಲೆಡೆಯಲ್ಲಿಯೂ ಹರ್ಷವನ್ನುಂಟುಮಾಡುವಂತಹ ಮಹೋತ್ಸವವು ವಿಜೃಂಭಣೆಯಿಂದ ನಡೆಯಿತು. ಸ್ವರ್ಗ, ಭೂಮಿ, ಆಕಾಶ ಮೊದಲಾದ ಎಲ್ಲಾ ಸ್ಥಳಗಳಲ್ಲಿಯೂ ಜಯಶಬ್ದವು ತುಂಬಿಹೋಯಿತು,

೪೪. ಎಲ್ಲರೂ ಹರ್ಷದಿಂದ ಶಿವನಿಗೆ ಧನ್ಯವಾದಗಳನ್ನೂ ನಮಸ್ಕಾರವನ್ನೂ ಮಾಡಿದರು. ಗಂಧರ್ವರು ಪ್ರೀತಿಯಿಂದ ಗಾನಮಾಡಿದರು. ಅಪ್ಸರೆಯರು ನರ್ತನ ಮಾಡಿದರು.

೪೫. ಹಿಮವಂತನ ಪಟ್ಟಣದ ಜನರು ತುಂಬಾ ಹರ್ಷಗೊಂಡರು. ಮಹೋತ್ಸವದೊಡನೆ ಮಹತ್ತಾದ ಮಂಗಲಕಾರ್ಯವು ನಡೆಯಿತು.

೪೬. ನಾನು, ಇಂದ್ರ, ಇತರ ದೇವತೆಗಳು, ಎಲ್ಲರಿಗೂ ಸಂತೋಷದಿಂದ ಮುಖವರಳಿತು. ಆನಂದ ಸಮುದ್ರದಲ್ಲಿ ಮುಳುಗಿದೆವು.

೪೭. ಬಳಿಕ ಗಿರಿರಾಜನು ಕನ್ಯಾದಾನಕ್ಕೆ ಯೋಗ್ಯವಾದಂತಹ ಪರಿಕರಗಳನ್ನು ಶಿವನಿಗೆ ಕೊಟ್ಟನು.

ತತೋ ಬಂಧುಜನಾಸ್ತಸ್ಯ ಶಿವಾಂ ಸಂಪೂಜ್ಯ ಭಕ್ತಿತಃ ।
ದದುಶ್ಶಿವಾಯ ಸದ್ದ್ರವ್ಯಂ ನಾನಾವಿಧಿವಿಧಾನತಃ ॥ ೪೮ ॥

ಹಿಮಾಲಯಸ್ತುಷ್ಟಮನಾಃ ಪಾರ್ವತೀಶಿವಪ್ರೀತಯೇ ।
ನಾನಾವಿಧಾನಿ ದ್ರವ್ಯಾಣಿ ದದೌ ತತ್ರ ಮುನೀಶ್ವರ ॥ ೪೯ ॥

ಗವಾಂ ಲಕ್ಷಂ ಹಯಾನಾಂ ಚ ಸಜ್ಜಿತಾನಾಂ ಶತಂ ತಥಾ ।
ದಾಸೀನಾಮನುರಕ್ತಾನಾಂ ಲಕ್ಷಂ ಸದ್ದ್ರವ್ಯಭೂಷಿತಂ ॥ ೫೦ ॥

ನಾಗಾನಾಂ ಶತಲಕ್ಷಂ ಹಿ ರಥಾನಾಂ ಚ ತಥಾ ಮುನೇ ।
ಸುವರ್ಣಜಟಿತಾನಾಂ ಚ ರತ್ನಸಾರವಿನಿರ್ಮಿತಂ ॥ ೫೧ ॥

ಕೌತುಕಾನಿ ದದೌ ತಸ್ಮೈ ರತ್ನಾನಿ ವಿವಿಧಾನಿ ಚ ।
ಚಾರುರತ್ನವಿಕಾರಾಣಿ ಪಾತ್ರಾಣಿ ವಿವಿಧಾನಿ ಚ ॥ ೫೨ ॥

ಇತ್ಥಂ ಹಿಮಾಲಯೋ ದತ್ವಾ ಸ್ವಸುತಾಂ ಗಿರಿಜಾಂ ಶಿವಾಂ ।
ಶಿವಾಯ ಪರಮೇಶಾಯ ವಿಧಿನಾಪ ಕೃತಾರ್ಥತಾಂ ॥ ೫೩ ॥

---

೪೮. ಆಮೇಲೆ ಹಿಮವಂತನ ಬಂಧುಗಳು ಗಿರಿಜೆಯನ್ನು ಭಕ್ತಿಯಿಂದ ಪೂಜಿಸಿ ಶಿವನಿಗೆ ವಿಧಿವತ್ತಾಗಿ ಅನೇಕ ದ್ರವ್ಯಗಳನ್ನು ಕೊಟ್ಟರು.

೪೯. ಹಿಮವಂತನಿಗೆ ಆಗ ಬಹು ಸಂತೋಷವಾಯಿತು. ಪಾರ್ವತೀಪರಮೇಶ್ವರರ ಪ್ರೀತಿಗಾಗಿ ಅನೇಕ ವಿಧವಾದ ದ್ರವ್ಯಗಳನ್ನು ಕೊಟ್ಟನು.

೫೦-೫೨. ಅಲ್ಲದೆ, ಆ ಹಿಮವಂತನು ಆ ಗಿರಿಜಾಶಿವರಿಗೆ ಒಂದುಲಕ್ಷ ಹಸುಗಳನ್ನೂ, ಸುಸಜ್ಜಿತವಾದಂತಹ ನೂರು ಕುದುರೆಗಳನ್ನೂ, ಕರ್ತವ್ಯನಿಷ್ಠರೂ ಆಭರಣಗಳಿಂದಲಂಕೃತರೂ ಆದ ಲಕ್ಷದಾಸಿಯರನ್ನೂ ಬಳುವಳಿಯಾಗಿ ಕೊಟ್ಟನು. ನೂರು ಆನೆಗಳು, ಸುವರ್ಣ ಮತ್ತು ರತ್ನಗಳಿಂದ ಕೆತ್ತಲ್ಪಟ್ಟ ನೂರು ರಥಗಳು, ಇವುಗಳನ್ನೂ ಕೊಟ್ಟನು. ಮತ್ತು ಅನೇಕ ಬಗೆಯ ರತ್ನಗಳು ಸುಂದರವಾದ ರತ್ನಕಳಶಗಳು ಮುಂತಾದುವುಗಳನ್ನೂ ಬಳುವಳಿಯಾಗಿ ಕೊಟ್ಟನು.

೫೩. ಹೀಗೆ ಹಿಮಾಲಯನು ತನ್ನ ಮಗಳಾದ ಗಿರಿಜೆಯನ್ನು ಪರಮೇಶ್ವರನಾದ ಶಿವನಿಗೆ ವಿಧಿಪೂರ್ವಕವಾಗಿ ಧಾರೆಯೆರೆದುಕೊಟ್ಟು ಕೃತಾರ್ಥನಾದನು.

ಅಥ ಶೈಲವರೋ ಮಾಧ್ಯಂದಿನೋಕ್ತಸ್ತೋತ್ರತೋ ಮುದಾ ।
ತುಷ್ಟಾವ ಪರಮೇಶಾನಂ ಸದ್ಗಿರಾ ಸುಕೃತಾಂಜಲಿಃ ॥ ೫೪ ॥

ತತೋ ವೇದವಿದಸ್ತೇನಾಜ್ಞಪ್ತಾ ಮುನಿಗಣಾಸ್ತದಾ ।
ಶಿರೋಽಭಿಷೇಕಂ ಚಕ್ರುಸ್ತೇ ಶಿವಾಯಾಃ ಪರಮೋತ್ಸವಾಃ ॥ ೫೫ ॥

ದೇವಾಭಿಧಾನಮುಚ್ಚಾರ್ಯ ಪರ್ಯುಕ್ಷಣವಿಧಿಂ ವ್ಯಧುಃ ।
ಮಹೋತ್ಸವಸ್ತದಾ ಚಾಸೀನ್ಮಹಾನಂದಕರೋ ಮುನೇ ॥ ೫೬ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಅಷ್ಟಚತ್ವಾರಿಂಶೋಽಧ್ಯಾಯಃ



---

೫೪. ಬಳಿಕ ಹಿಮವಂತನು ಕೈಮುಗಿದುಕೊಂಡು ಮಧ್ಯಾಹ್ನದಲ್ಲಿ ಹೇಳಬೇಕಾದಂತಹ ಸ್ತೋತ್ರದಿಂದ ಶಿವನನ್ನು ಮಧುರವಾಗಿ ಸ್ತುತಿಸಿದನು.

೫೫-೫೬. ಆಮೇಲೆ ವೇದವಿತ್ತುಗಳಾದ ಮುನಿಗಳು ಹಿಮವಂತನಪ್ಪಣೆಯಂತೆ ಪರ್ಯುಕ್ಷಣವೆಂಬ ಕರ್ಮವನ್ನು ಮಾಡಿ ದೇವಸ್ಯ ತ್ವಾ ಸವಿತುಃ ಪ್ರಸವೇ ಎಂಬ ಮಂತ್ರವನ್ನುಚ್ಚರಿಸುತ್ತಾ ದಂಪತಿಗಳಿಗೆ ಪ್ರೋಕ್ಷಣಾದಿಗಳನ್ನು ಮಾಡಿದರು. ಆಗ ಅಲ್ಲಿ ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ
ಪಾರ್ವತೀಖಂಡದಲ್ಲಿ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಏಕೋನಪಂಚಾಶತ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥೋ ಮಮಾಜ್ಞಯಾ ವಿಪ್ರೈಸ್ಸಂಸ್ಥಾಪ್ಯಾನಲಮೀಶ್ವರಃ ।
ಹೋಮಂ ಚಕಾರ ತತ್ರೈವಮಂಕೇ ಸಂಸ್ಥಾಪ್ಯ ಪಾರ್ವತೀಂ ॥ ೧ ॥

ಋಗ್ಯಜುಸ್ಸಾಮಮಂತ್ರೈಶ್ಚಾಹುತಿಂ ವಹ್ನೌ ದದೌ ಶಿವಃ ।
ಲಾಜಾಂಜಲಿಂ ದದೌ ಕಾಲೀಭ್ರಾತಾ ಮೈನಾಕಸಂಜ್ಞಕಃ ॥ ೨ ॥

ಅಥ ಕಾಲೀ ಶಿವಶ್ಚೋಭೌ ಚಕ್ರತುರ್ವಿಧಿವನ್ಮುದಾ ।
ವಹ್ನಿಪ್ರದಕ್ಷಿಣಾಂ ತಾತ ಲೋಕಾಚಾರಂ ವಿಧಾಯ ಚ ॥ ೩ ॥

---

## ನಲವತ್ತೊಂಭತ್ತನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಆಮೇಲೆ ನನ್ನಪ್ಪಣೆಯಂತೆ ವಿಪ್ರರು ಅಗ್ನಿಯನ್ನು ಪ್ರತಿಷ್ಠಿಸಿದರು. ಶಿವನು ಪಾರ್ವತಿಯನ್ನು ತನ್ನ ಬಲಭಾಗದ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಅವಳೊಡನೆ ವಿವಾಹಹೋಮವನ್ನು ಮಾಡಿದನು.

೨-೩. ಋಗ್ವೇದ ಯಜುರ್ವೇದ ಮತ್ತು ಸಾಮವೇದಮಂತ್ರಗಳಿಂದ ಶಿವನು ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡಿದನು. ಗಿರಿಜೆಯ ಸಹೋದರನಾದ ಮೈನಾಕನು ಲಾಜಾಂಜಲಿಯನ್ನು ಎಂದರೆ ಬೊಗಸೆ ತುಂಬ ಅರಳನ್ನು ಪಾರ್ವತಿಯ ಕೈಗೆ ಕೊಡುತ್ತಿದ್ದನು. ಈ ರೀತಿ ಲಾಜಹೋಮವನ್ನು ಮುಗಿಸಿ, ಪಾರ್ವತೀಪರಮೇಶ್ವರರು ಸಂತೋಷದಿಂದ ಅಗ್ನಿಗೆ ಪ್ರದಕ್ಷಿಣೆಯನ್ನು ಲೋಕಾಚಾರದಂತೆ ವಿಧಿವತ್ತಾಗಿ ಮಾಡಿದರು.

ತತ್ರಾದ್ಭುತಮಲಂ ಚಕ್ರೇ ಚರಿತಂ ಗಿರಿಜಾಪತಿಃ ।
ತದೇವ ಶೃಣು ದೇವರ್ಷೇ ತವ ಸ್ನೇಹಾದ್ಬ್ರವೀಮ್ಯಹಂ ॥ ೪ ॥

ತಸ್ಮಿನ್ನವಸರೇ ಚಾಹಂ ಶಿವಮಾಯಾವಿಮೋಹಿತಃ
ಅಪಶ್ಯಂ ಚರಣೇ ದೇವ್ಯಾ ನಖೇಂದುಂ ಚ ಮನೋಹರಂ ॥ ೫ ॥

ದರ್ಶನಾತ್ತಸ್ಯ ಚ ತದಾಭೂವಂ ದೇವ ಮುನೇ ಹ್ಯಹಂ ।
ಮದನೇನ ಸಮಾವಿಷ್ಟೋಽತೀವ ಕ್ಷುಭಿತಮಾನಸಃ ॥ ೬ ॥

ಮುಹುರ್ಮುಹುರಪಶ್ಯಂ ವೈ ತದಂಗಂ ಸ್ಮರಮೋಹಿತಃ ।
ತತಸ್ತದ್ದರ್ಶನಾತ್ಸದ್ಯೋ ವೀರ್ಯಂ ಮೇ ಪ್ರಾಚ್ಯುತದ್ಭುವಿ ॥ ೭ ॥

ರೇತಸಾ ಕ್ಷರತಾ ತೇನ ಲಜ್ಜಿತೋಽಹಂ ಪಿತಾಮಹಃ ।
ಮುನೇ ವ್ಯಮರ್ದಂ ತಚ್ಛಿಶ್ನಂ ಚರಣಾಭ್ಯಾಂ ಹಿ ಗೋಪಯನ್ ॥ ೮ ॥

---

೪. ಆಗ ಶಿವನು ಅಲ್ಲಿ ಅದ್ಭುತವಾದ ಲೀಲೆಯೊಂದನ್ನು ಪ್ರದರ್ಶಿಸಿದನು. ಎಲೈ ನಾರದನೆ, ಅದನ್ನು ನಿನ್ನ ಮೇಲಿನ ಸ್ನೇಹದಿಂದ ಹೇಳುವೆನು ಕೇಳು.

೫. ಈ ಸಮಯದಲ್ಲಿ ನಾನು ಶಿವಮಾಯೆಯಿಂದ ಮೋಹಿತನಾಗಿ ಪಾರ್ವತೀ ದೇವಿಯ ಸುಂದರವಾದ ಚರಣಗಳಲ್ಲಿ ಮನೋಹರವಾಗಿ ಚಂದ್ರನಂತೆ ಹೊಳೆಯುತ್ತಲಿರುವ ನಖ (ಉಗುರು) ಗಳನ್ನು ನೋಡಿದೆನು.

೬-೭. ದೇವಿಯ ಸುಂದರವಾದ ಆ ನಖೇಂದುವನ್ನು ನೋಡಿದೊಡನೆಯೇ ನನ್ನ ಮನಸ್ಸಿನಲ್ಲಿ ಮನ್ಮಥವಿಕಾರವುಂಟಾಗಿ ನಾನು ತುಂಬಾ ಮೋಹಗೊಂಡು ದೇವಿಯ ಸುಂದರಾಂಗಗಳನ್ನು ಪುನಃ ಪುನಃ ನೋಡಿದೆನು. ಆ ಕೂಡಲೇ ನನ್ನ ಶರೀರದಿಂದ ವೀರ್ಯವು ಸ್ಖಲನವಾಗಿ ಕೆಳಗೆ ಬಿದ್ದಿತು.

೮. ಹೀಗೆ ರೇತಸ್ಸು ಬಿದ್ದುದರಿಂದ ಜಗತ್ತಿಗೆ ಪಿತಾಮಹನಾದ ನನಗೆ ತುಂಬಾ ನಾಚಿಕೆಯಾಯಿತು. ನನ್ನ ಗುಹ್ಯೇಂದ್ರಿಯವನ್ನು ಕಾಲುಗಳಿಂದ ಮುಚ್ಚಿಕೊಳ್ಳುತ್ತಾ ಮರ್ದಿಸಿದೆನು.

ತಜ್ಜ್ಞಾತ್ವಾ ಚ ಮಹಾದೇವಶ್ಚುಕೋಪಾತೀವ ಚೇತಸಾ ।
ಹಂತುಮೈಚ್ಛತ್ತದಾ ಶೀಘ್ರಂ ಮಾಂ ವಿಧಿಂ ಕಾಮಮೋಹಿತಂ ॥ ೯ ॥

ಹಾಹಾಕಾರೋ ಮಹಾನಾಸೀತ್ತತ್ರ ಸರ್ವತ್ರ ನಾರದ ।
ಜನಾಶ್ಚಕಂಪಿರೇ ಸರ್ವೇ ಭಯಮಾಯಾತಿ ವಿಶ್ವಭೃತ್ ॥ ೧೦ ॥

ತತಸ್ತಂ ತುಷ್ಟುವುಶ್ಶಂಭುಂ ವಿಷ್ಣ್ವಾದ್ಯಾ ನಿರ್ಜರಾ ಮುನೇ ।
ಪ್ರಕೋಪಂ ಪ್ರಜ್ವಲಂತಂ ತಂ ತೇಜಸಾ ಹಂತುಮುದ್ಯತಂ ॥ ೧೧ ॥

॥ ದೇವಾ ಊಚುಃ ॥

ದೇವದೇವ ಜಗದ್ವ್ಯಾಪಿನ್ ಪರಮೇಶ ಸದಾಶಿವ ।
ಜಗದೀಶ ಜಗನ್ನಾಥ ಸಂಪ್ರಸೀದ ಜಗನ್ಮಯ ॥ ೧೨ ॥

ಸರ್ವೇಷಾಮಪಿ ಭಾವಾನಾಂ ತ್ವಮಾತ್ಮಾ ಹೇತುರೀಶ್ವರಃ ।
ನಿರ್ವಿಕಾರೋಽವ್ಯಯೋ ನಿತ್ಯೋ ನಿರ್ವಿಕಲ್ಪೋಽಕ್ಷರಃ ಪರಃ ॥ ೧೩ ॥

---

೯. ನನ್ನ ಈ ಅವಸ್ಥೆಯನ್ನು ತಿಳಿದು ಮಹಾದೇವನು ತುಂಬಾ ಕೋಪಗೊಂಡನು. ಮತ್ತು ಕಾಮವಶನಾದ ನನ್ನನ್ನು ಕೂಡಲೇ ಕೊಲ್ಲಲುದ್ಯುಕ್ತನಾದನು.

೧೦. ಆಗ ಜನಗಳೆಲ್ಲರೂ ನಡುಗುತ್ತಾ ಹಾಹಾಕಾರಮಾಡಿದರು. ವಿಷ್ಣುವೂ ಸಹ ಭಯಗೊಂಡನು.

೧೧. ಆಮೇಲೆ ಕೋಪಗೊಂಡು ತೇಜಸ್ಸಿನಿಂದ ಜ್ವಲಿಸುತ್ತಾ ವಿಧಿಯನ್ನು ಸಂಹರಿಸಲುದ್ಯುಕ್ತನಾದ ಆ ಶಿವನನ್ನು ಹರಿಯೇ ಮೊದಲಾದ ದೇವತೆಗಳು ಸ್ತುತಿಸಿದರು.

೧೨. ದೇವತೆಗಳು ಹೇಳಿದರು:—ದೇವದೇವನೂ ಜಗತ್ತೆಲ್ಲವನ್ನೂ ವ್ಯಾಪಿಸಿರುವವನೂ ಆದ ಓ ಪರಮೇಶ್ವರ, ಓ ಸದಾಶಿವ, ಪ್ರಸನ್ನನಾಗು. ನೀನೇ ಜಗದೊಡೆಯನು, ಜಗತ್ತನ್ನು ಸಲಹುವವನು ಮತ್ತು ಜಗದ್ರೂಪನು.

೧೩. ಎಲ್ಲಾ ವಸ್ತುಗಳಿಗೂ ಭಾವನೆಗಳಿಗೂ ನೀನೇ ಕಾರಣವು. ನೀನೇ ಆತ್ಮನು. ನಿನಗೆ ಜನ್ಮನಾಶ ಮೊದಲಾದ ವಿಕಾರಗಳಿಲ್ಲ. ಆದಕಾರಣ ನೀನು ನಿತ್ಯನು, ನಿರ್ಗುಣನು. ನಿನಗೆ ಪರಿಣಾಮನಾಶಗಳಾವುವೂ ಇಲ್ಲ.

ಆದ್ಯಂತಾವಸ್ಯ ಯನ್ಮಧ್ಯಮಿದಮನ್ಯದಹಂ ಬಹಿಃ ।
ಯತೋಽವ್ಯಯಸ್ಸ ನೈತಾನಿ ತತ್ಸತ್ಯಂ ಬ್ರಹ್ಮ ಚಿದ್ಭವಾ್ಞ || ೧೪ ||

ತವೈವ ಚರಣಾಂಭೋಜಂ ಮುಕ್ತಿಕಾಮಾ ದೃಢವ್ರತಾಃ ।
ವಿಸೃಜ್ಯೋಭಯತಸ್ಸಂಗಂ ಮುನಯಸ್ಸಮುಪಾಸತೇ || ೧೫ ||

ತ್ವಂ ಬ್ರಹ್ಮ ಪೂರ್ಣಮಮೃತಂ ವಿಶೋಕಂ ನಿರ್ಗುಣಂ ಪರಂ ।
ಆನಂದಮಾತ್ರಮವ್ಯಕ್ತಮವಿಕಾರಮನಾತ್ಮಕಂ || ೧೬ ||

ವಿಶ್ವಸ್ಯ ಹೇತುರುದಯಸ್ಥಿತಿಸಂಯಮನಸ್ಯ ಹಿ ।
ತದಪೇಕ್ಷತಯಾತ್ಮೇಶೋಽನಪೇಕ್ಷಸ್ಸರ್ವದಾ ವಿಭುಃ || ೧೭ ||

ಏಕಸ್ತ್ವಮೇವ ಸದಸದ್ದ್ವಯಮದ್ವಯಮೇವ ಚ ।
ಸ್ವರ್ಣಂ ಕೃತಾಕೃತಮಿವ ವಸ್ತುಭೇದೋ ನಚೈವ ಹಿ || ೧೮ ||

---

೧೪. ನಿನಗೆ ಆದಿ ಮತ್ತು ಅಂತ್ಯಗಳಿಲ್ಲ, ಮಧ್ಯವೂ ಇಲ್ಲ. ಒಳಗೆ ಹೊರಗೆ ಎಂಬ ಭೇದವೂ ನಿನಗಿಲ್ಲ. ನೀನು ನಾಶವಿಲ್ಲದವನು. ಆದುದರಿಂದ ಮೇಲೆ ಹೇಳಿದ ಯಾವ ವಿಕಾರವೂ ನಿನಗಿಲ್ಲ. ಸತ್ಯಸ್ವರೂಪವೂ ಜ್ಞಾನಸ್ವರೂಪವೂ ಸುಖರೂಪವೂ ಆದ ಬ್ರಹ್ಮವಸ್ತುವೇ ನೀನು.

೧೫. ವ್ರತನಿಯಮಾನುಷ್ಠಾನಗಳಿಂದ ಜಿತೇಂದ್ರಿಯರಾಗಿ ವೈರಾಗ್ಯವನ್ನು ತಾಳಿದ ಮುನಿಗಳು ಮುಕ್ತಿಯನ್ನು ಪಡೆಯಲೋಸುಗ ದೃಢವಾದ ನಿಯಮದಿಂದ ನಿನ್ನ ಚರಣಕಮಲವನ್ನಾರಾಧಿಸುವರು.

೧೬. ನೀನು ಪರಿಪೂರ್ಣವೂ, ಸತ್ಯವೂ, ದುಃಖವಿಲ್ಲದುದೂ, ನಿರ್ಗುಣವೂ, ಪ್ರಕೃತಿಯ ಸಂಬಂಧವಿಲ್ಲದುದೂ, ಆನಂದಸ್ವರೂಪವೂ, ಇಂದ್ರಿಯಗಳಿಗೆ ಅಗೋಚರವೂ, ನಿರ್ವಿಕಾರವೂ, ಜಗದ್ರೂಪವೂ ಆದ ಪರಬ್ರಹ್ಮವಸ್ತುವು,

೧೭. ಜಗತ್ತನ್ನು ಸೃಷ್ಟಿಸುವವನೂ, ಪಾಲಿಸುವವನೂ, ಸಂಹರಿಸುವವನೂ, ನೀನೇ. ಈ ಜಗತ್ತಿನ ದೃಷ್ಟಿಯಿಂದ ನೀನು ಈಶ್ವರನು, ವಸ್ತುತಃ ನೀನು ನಿರ್ಗುಣನಾದ ಪರಬ್ರಹ್ಮವಸ್ತುವು.

೧೮. ಪ್ರಪಂಚದಲ್ಲಿ ನಿನ್ನನ್ನು ಬಿಟ್ಟು ಬೇರೆ ವಸ್ತುವಿಲ್ಲ. ಸತ್, ಅಸತ್ ಎಂತಲೂ ವ್ಯಕ್ತ, ಅವ್ಯಕ್ತವೆಂತಲೂ ಹೇಳಲ್ಪಡುವ ನಿನಗೆ ಸಮಾನವಾದ ವಸ್ತುವು

ಅಜ್ಞಾನತಸ್ತ್ವಯಿ ಜನ್ಯೈರ್ವಿಕಲ್ಪೋ ವಿದಿತೋ ಯತಃ ।
ತಸ್ಮಾದ್ಭ್ರಮಪ್ರತೀಕಾರೋ ನಿರುಪಾಧೇರ್ನ ಹಿ ಸ್ವತಃ ॥ ೧೯ ॥

ಧನ್ಯಾ ವಯಂ ಮಹೇಶಾನ ತವ ದರ್ಶನಮಾತ್ರತಃ ।
ದೃಢಭಕ್ತಜನಾನಂದಪ್ರದಃ ಶಂಭೋ ದಯಾಂ ಕುರು ॥ ೨೦ ॥

ತ್ವಮಾದಿಸ್ತ್ವಮನಾದಿಶ್ಚ ಪ್ರಕೃತೇಸ್ತ್ವಂ ಪರಃ ಪುಮಾನ್ ।
ವಿಶ್ವೇಶ್ವರೋ ಜಗನ್ನಾಥೋ ನಿರ್ವಿಕಾರಃ ಪರಾತ್ಪರಃ । ॥ ೨೧ ॥

ಯೋಽಯಂ ಬ್ರಹ್ಮಾಸ್ತಿ ರಜಸಾ ವಿಶ್ವಮೂರ್ತಿಃ ಪಿತಾಮಹಃ ।
ತ್ವತ್ಪ್ರಸಾದಾತ್ಪ್ರಭೋ ವಿಷ್ಣುಸ್ಸತ್ತ್ವೇನ ಪುರುಷೋತ್ತಮಃ ॥ ೨೨ ॥

---

ಬೇರೊಂದಿಲ್ಲ, ಆದುದರಿಂದಲೇ ನಿನ್ನನ್ನು ಅದ್ವಿತೀಯನೆನ್ನುವರು. ವಸ್ತುತಃ ನಿನ್ನನ್ನು ಬಿಟ್ಟು ಬೇರೆ ಜಗತ್ತಿಲ್ಲ. ಚಿನ್ನದಿಂದಾದ ಆಭರಣಗಳು ಚಿನ್ನದಿಂದ ಹೊರತಾದುವುಗಳು ಹೇಗೆ ಅಲ್ಲವೋ ಅದರಂತೆ ನಿನ್ನಿಂದಾದ ಈ ಜಗತ್ತು ನಿನ್ನ ಹೊರತು ಬೇರೆಯಲ್ಲ.

೧೯. ಅಜ್ಞಾನದಿಂದ ಜನಗಳು ನಿನ್ನನ್ನು ತಪ್ಪಾಗಿ ತಿಳಿದುಕೊಂಡಿರುವರು. ಆದಕಾರಣ ಜನಗಳಲ್ಲಿರುವ ನಿನ್ನ ವಿಷಯಕವಾದ ಭ್ರಮವನ್ನು ತೊಲಗಿಸಬೇಕು. ಪರಿಶುದ್ಧನಾದ ನಿನ್ನಲ್ಲಿ ವಸ್ತುತಃ ಅಜ್ಞಾನಭ್ರಮಗಳು ಇಲ್ಲವೇ ಇಲ್ಲ.

೨೦. ಓ ಮಹೇಶ್ವರ, ನಿನ್ನ ದರ್ಶನದಿಂದಲೇ ನಾವು ಧನ್ಯರಾದೆವು. ಭಕ್ತರಿಗೆ ಆನಂದವನ್ನುಂಟುಮಾಡುವ ಓ ಪ್ರಭು, ನಮ್ಮಲ್ಲಿ ಅನುಗ್ರಹವನ್ನು ಮಾಡು.

೨೧. ನೀನು ಈ ಜಗತ್ತಿಗೆ ಆದಿಯು, ಆದರೆ ನಿನಗೆ ಆದಿಯಿಲ್ಲ. ನೀನು ಪ್ರಕೃತಿಗಿಂತಲೂ ಉತ್ತಮನಾದ ಪರಮಪುರುಷನು, ಜಗದೊಡೆಯನಾದ ಪರಮೇಶ್ವರನು, ನಿರ್ವಿಕಾರವಾದ ಪರವಸ್ತುವು.

೨೨. ಜಗತ್ತಿಗೆ ಪಿತಾಮಹನೆನಿಸಿದ ಈ ಬ್ರಹ್ಮನು ನಿನ್ನ ಅನುಗ್ರಹದಿಂದ ರಜೋಗುಣಪ್ರಧಾನನಾಗಿ ಜಗತ್ಕರ್ತನಾಗಿರುವನು. ನಿನ್ನ ಅನುಗ್ರಹದಿಂದ ಲಭಿಸಿದ ಸತ್ತ್ವಗುಣದಿಂದ ಹರಿಯು ಜಗತ್ಪಾಲಕನಾಗಿರುವನು.

ಕಾಲಾಗ್ನಿರುದ್ರಸ್ತ್ವಮಸಾ ಪರಮಾತ್ಮಾ ಗುಣೈಃ ಪರಃ ।
ಸದಾಶಿವೋ ಮಹೇಶಾನಸ್ಸರ್ವವ್ಯಾಪೀ ಮಹೇಶ್ವರಃ ॥ ೨೩ ॥

ವ್ಯಕ್ತಂ ಮಹಚ್ಚ ಭೂತಾದಿಸ್ತನ್ಮಾತ್ರಾಣೀಂದ್ರಿಯಾಣಿ ಚ ।
ತ್ವಯ್ಯೈವಾಧಿಷ್ಠಿತಾನ್ಯೇವ ವಿಶ್ವಮೂರ್ತೇ ಮಹೇಶ್ವರ ॥ ೨೪ ॥

ಮಹಾದೇವ ಪರೇಶಾನ ಕರುಣಾಕರ ಶಂಕರ ।
ಪ್ರಸೀದ ದೇವದೇವೇಶ ಪ್ರಸೀದ ಪುರುಷೋತ್ತಮ ॥ ೨೫ ॥

ವಾಸಾಂಸಿ ಸಾಗರಾಸ್ಸಪ್ತ ದಿಶಶ್ಚೈವ ಮಹಾಭುಜಾಃ ।
ದ್ಯೌರ್ಮೂರ್ಧಾ ತೇ ವಿಭೋರ್ನಾಭಿಃ ಖಂ ವಾಯುರ್ನಾಸಿಕಾ ತತಃ ॥ ೨೬ ॥

ಚಕ್ಷೂಂಷ್ಯಗ್ನೀ ರವಿಸ್ಸೋಮಃ ಕೇಶಾ ಮೇಘಾಸ್ತವ ಪ್ರಭೋ ।
ನಕ್ಷತ್ರತಾರಾಕಾದ್ಯಾಶ್ಚ ಗ್ರಹಾಶ್ಚೈವ ವಿಭೂಷಣಂ ॥ ೨೭ ॥

---

೨೩. ತಮೋಗುಣದಿಂದ ರುದ್ರನು ಸಂಹಾರಕರ್ತನಾಗಿರುವನು. ಆ ರುದ್ರನೇ ಪರಮಾತ್ಮಸ್ವರೂಪನು, ಹರಿಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು, ಮಂಗಳರೂಪನು, ಪರಮೇಶ್ವರನು, ಜಗತ್ತೆಲ್ಲವನ್ನೂ ವ್ಯಾಪಿಸಿರುವನು.

೨೪. ಕಣ್ಣಿಗೆ ಗೋಚರಿಸುವ ಮಹಾಭೂತ ಮೊದಲಾದುವುಗಳು, ಸೂಕ್ಷ್ಮ ಭೂತಗಳು, ಇಂದ್ರಿಯಗಳು ಇವೆಲ್ಲವೂ ಜಗನ್ಮೂರ್ತಿಯಾದ ನಿನ್ನ ಸ್ವರೂಪವಾಗಿ ನಿನ್ನ ಅಧೀನದಲ್ಲಿಯೇ ಇರುವುವು.

೨೫. ಓ ಮಹಾದೇವ, ಓ ಪರಮೇಶ್ವರ, ಓ ಶಂಕರ, ದಯಾಮಯ, ಪ್ರಸನ್ನನಾಗು, ಓ ದೇವದೇವ, ಓ ಪುರುಷೋತ್ತಮ, ಪ್ರಸನ್ನನಾಗು.

೨೬-೨೭. ಓ ಪರಮೇಶ್ವರ, ಸಪ್ತಸಮುದ್ರಗಳೇ ನಿನ್ನ ವಸ್ತ್ರಗಳು. ದಿಕ್ಕುಗಳೇ ನಿನಗೆ ಭುಜಗಳು. ಸ್ವರ್ಗವು ನಿನ್ನ ಶಿರಸ್ಸು, ಆಕಾಶವು ನಿನ್ನ ನಾಭಿಯು, ಗಾಳಿಯು ನಿನ್ನ ನಾಸಿಕೆಯು, ಅಗ್ನಿ ಸೂರ್ಯಚಂದ್ರರು ನಿನ್ನ ಮೂರು ಕಣ್ಣುಗಳು, ಮೇಘಗಳು ನಿನ್ನ ತಲೆಗೂದಲು. ನಕ್ಷತ್ರ, ತಾರಕ, ಗ್ರಹಗಳು ಮೊದಲಾದುವು ನಿನ್ನ ಅಲಂಕಾರವಾದ ಆಭರಣಗಳು.

ಕಥಂ ಸ್ತೋಷ್ಯಾಮಿ ದೇವೇಶ ತ್ವಾಂ ವಿಭೋ ಪರಮೇಶ್ವರ ।
ವಾಚಾಮಗೋಚರೋಽಸಿ ತ್ವಂ ಮನಸಾ ಚಾಪಿ ಶಂಕರ ॥ ೨೮ ॥

ಪಂಚಾಸ್ಯಾಯ ಚ ರುದ್ರಾಯ ಪಂಚಾಶತ್ಕೋಟಿಮೂರ್ತಯೇ ।
ತ್ರ್ಯಧಿಪಾಯ ವರಿಷ್ಠಾಯ ವಿದ್ಯಾತತ್ತ್ವಾಯ ತೇ ನಮಃ ॥ ೨೯ ॥

ಅನಿರ್ದೇಶ್ಯಾಯ ನಿತ್ಯಾಯ ವಿದ್ಯುಜ್ಜ್ವಾಲಾಯ ರೂಪಿಣೇ ।
ಅಗ್ನಿವರ್ಣಾಯ ದೇವಾಯ ಶಂಕರಾಯ ನಮೋ ನಮಃ ॥ ೩೦ ॥

ವಿದ್ಯುತ್ಕೋಟಿಪ್ರತೀಕಾಶಮಷ್ಟಕೋಣಂ ಸುಶೋಭನಂ ।
ರೂಪಮಾಸ್ಥಾಯ ಲೋಕೇಽಸ್ಮಿನ್ ಸಂಸ್ಥಿತಾಯ ನಮೋ ನಮಃ ॥ ೩೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಪ್ರಸನ್ನಃ ಪರಮೇಶ್ವರಃ ।
ಬ್ರಹ್ಮಣೋ ಮೇ ದದೌ ಶೀಘ್ರಮಭಯಂ ಭಕ್ತವತ್ಸಲಃ ॥ ೩೨ ॥

---

೨೮. ಇಂತಹ ವಿರಾಡ್ರೂಪನಾದ ನಿನ್ನನ್ನು ನಾನು ಹೇಗೆ ಸ್ತುತಿಸಲಿ? ಓ ಪರಮೇಶ್ವರ, ನೀನು ವಾಕ್ಕಿಗೂ ಮನಸ್ಸಿಗೂ ನಿಲುಕದಂತಹ ಸ್ವರೂಪವುಳ್ಳವನು.

೨೯. ಐದು ಮುಖವುಳ್ಳವನೂ, ಐವತ್ತುಕೋಟಿ ರೂಪಉಳ್ಳವನೂ, ತ್ರಿಮೂರ್ತಿಸ್ವರೂಪನೂ, ಜ್ಞಾನರೂಪನೂ ಆದ ರುದ್ರನಿಗೆ ನಮಸ್ಕಾರವು.

೩೦. ಇಂದ್ರಿಯಗಳಿಗೆ ಅಗೋಚರನೂ, ನಿತ್ಯನೂ, ವಿದ್ಯುತ್ತಿನ ಜ್ವಾಲೆಯಂತೆ ತೇಜಸ್ವಿಯೂ ಆದ ನಿನಗೆ ನಮಸ್ಕಾರವು. ಅಗ್ನಿಯಂತೆ ಪ್ರಕಾಶಮಾನವಾದ ವರ್ಣವುಳ್ಳ ಶಂಕರನಿಗೆ ನಮಸ್ಕಾರವು.

೩೧. ಕೋಟಿ ವಿದ್ಯುತ್ತುಗಳಂತೆ ಹೊಳೆಯುವ ರುದ್ರನಿಗೆ ನಮಸ್ಕಾರವು. ಎಂಟು ದಿಕ್ಕುಗಳುಳ್ಳಂತಹ ಮಂಗಳಕರವಾದ ವಿರಾಡ್ರೂಪವನ್ನು ಧರಿಸಿ ಈ ಜಗತ್ತಿನಲ್ಲಿ ನೆಲಸಿರುವಂತಹ ಪರಮೇಶ್ವರನಿಗೆ ನಮಸ್ಕಾರವು ಎಂದು ಮುಂತಾಗಿ ಸ್ತೋತ್ರ ಮಾಡಿದರು.

೩೨. ಬ್ರಹ್ಮನು ಹೇಳಿದನು :—ಹೀಗೆ ದೇವತೆಗಳು ಸ್ತುತಿಸಲು ಭಕ್ತಪ್ರಿಯನಾದ ಪರಮೇಶ್ವರನು ಪ್ರಸನ್ನನಾಗಿ ಕೂಡಲೇ ನನಗೆ ಅಭಯವನ್ನು ದಯಪಾಲಿಸಿದನು.

ಅಥ ಸರ್ವೇ ಸುರಾಸ್ತತ್ರ ವಿಷ್ಣ್ವಾದ್ಯಾ ಮುನಯಸ್ತಥಾ ।
ಅಭವನ್ ಸುಸ್ಮಿತಾಸ್ತಾತ ಚಕ್ರುಶ್ಚ ಪರಮೋತ್ಸವಂ ॥ ೩೩ ॥

ಮಮ ತದ್ರೇತಸಾ ತಾತ ಮರ್ದಿತೇನ ಮುಹುರ್ಮುಹುಃ ।
ಅಭವನ್ ಕಣಕಾಸ್ತತ್ರ ಭೂರಿಶಃ ಪರಮೋಜ್ಜ್ವಲಾಃ ॥ ೩೪ ॥

ಋಷಯೋ ಬಹವೋ ಜಾತಾ ವಾಲಖಿಲ್ಯಾಃ ಸಹಸ್ರಶಃ ।
ಕಣಕೈಸ್ತೈಶ್ಚ ವೀರ್ಯಸ್ಯ ಪ್ರಜ್ವಲದ್ಭಿಃ ಸ್ವತೇಜಸಾ ॥ ೩೫ ॥

ಅಥ ತೇ ಹ್ಯೃಷಯಸ್ಸರ್ವೇ ಉಪತಸ್ಥುಸ್ತದಾ ಮುನೇ ।
ಮಮಾಂತಿಕಂ ಪರಪ್ರೀತ್ಯಾ ತಾತ ತಾತೇತಿ ಚಾಬ್ರುವನ್ ॥ ೩೬ ॥

ಈಶ್ವರೇಚ್ಛಾಪ್ರಯುಕ್ತೇನ ಪ್ರೋಕ್ತಾಸ್ತೇ ನಾರದೇನ ಹಿ ।
ವಾಲಖಿಲ್ಯಾಸ್ತು ತೇ ಸರ್ವೇ ಕೋಪಯುಕ್ತೇನ ಚೇತಸಾ ॥ ೩೭ ॥

॥ ನಾರದ ಉವಾಚ ॥

ಗಚ್ಛಧ್ವಂ ಸಂಗತಾ ಯೂಯಂ ಪರ್ವತಂ ಗಂಧಮಾದನಂ ।
ನ ಸ್ಥಾತವ್ಯಂ ಭವದ್ಭಿಶ್ಚ ನ ಹಿ ವೋಽತ್ರ ಪ್ರಯೋಜನಂ ॥ ೩೮ ॥

---

೩೩. ಆಗ ಹರಿಯೇ ಮೊದಲಾದ ದೇವತೆಗಳೂ ಮುನಿಗಳೂ ಸಹ ತುಂಬಾ ಹರ್ಷಗೊಂಡು ಮಹೋತ್ಸವವನ್ನು ಬೆಳೆಸಿದರು.

೩೪. ಆಗ ನನ್ನ ಆ ಮರ್ದಿಸಿದ ರೇತಸ್ಸಿನಿಂದ ಮಹಾ ಕಾಂತಿಶಾಲಿಗಳಾದ ಅನೇಕ ಕಿಡಿಗಳು ಉತ್ಪನ್ನವಾದುವು.

೩೫. ವೀರ್ಯದ ಆ ಜ್ವಲಿಸುವ ಕಣಗಳಿಂದ ವಾಲಖಿಲ್ಯರೆಂಬ ಸಾವಿರಾರು ಋಷಿಗಳು ಜನಿಸಿದರು.

೩೬. ಆ ಋಷಿಗಳೆಲ್ಲರೂ ನನ್ನಬಳಿಗೆ ಬಂದು ಓ ತಂದೆ, ಓ ತಂದೆ, ಎಂದು ನನ್ನನ್ನು ಪ್ರೀತಿಯಿಂದ ಕರೆದರು.

೩೭-೩೮. ಎಲೈ ನಾರದ, ಈಶ್ವರೇಚ್ಛೆಯಿಂದ ಪ್ರೇರಿತನಾದ ನೀನು ಕೋಪದಿಂದ ಆ ವಾಲಖಿಲ್ಯಮುನಿಗಳನ್ನು ಕುರಿತು ಎಲೈ ವಾಲಖಿಲ್ಯರೇ, ನೀವೆಲ್ಲರೂ ಗಂಧಮಾದನ ಪರ್ವತಕ್ಕೆ ನಡೆಯಿರಿ. ಇಲ್ಲಿ ನಿಲ್ಲಬೇಡಿ, ನಿಮಗಿಲ್ಲೇನೂ ಕೆಲಸವಿಲ್ಲ.

ತತ್ರ ತಪ್ತ್ವಾ ತಪಶ್ಚಾತಿ ಭವಿತಾರೋ ಮುನೀಶ್ವರಾಃ ।
ಸೂರ್ಯಶಿಷ್ಯಾಶ್ಶಿವಸ್ಯೈವಾಜ್ಞಯಾ ಮೇ ಕಥಿತಂ ತ್ವಿದಂ ॥ ೩೯ ॥

॥ ಬ್ರಹ್ಮೋವಾಚ ॥

ಇತ್ಯುಕ್ತಾಸ್ತೇ ತದಾ ಸರ್ವೇ ವಾಲಖಿಲ್ಯಾಶ್ಚ ಪರ್ವತಂ ।
ಸತ್ವರಂ ಪ್ರಯಯುರ್ನತ್ವಾ ಶಂಕರಂ ಗಂಧಮಾದನಂ ॥ ೪೦ ॥

ವಿಷ್ಣ್ವಾದಿಭಿಸ್ತದಾಭೂವಂ ಶ್ವಾಸಿತೋಽಹಂ ಮುನೀಶ್ವರ ।
ನಿರ್ಭಯಃ ಪರಮೇಶಾನಪ್ರೇರಿತೈಸ್ತೈರ್ಮಹಾತ್ಮಭಿಃ ॥ ೪೧ ॥

ಅಸ್ತವಂ ಚಾಪಿ ಸರ್ವೇಶಂ ಶಂಕರಂ ಭಕ್ತವತ್ಸಲಂ ।
ಸರ್ವಕಾರ್ಯಕರಂ ಜ್ಞಾತ್ವಾ ದುಷ್ಟಗರ್ವಾಪಹಾರಕಂ ॥ ೪೨ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ತ್ವಮೇವ ಕರ್ತಾ ಸರ್ವಸ್ಯ ಭರ್ತಾ ಹರ್ತಾ ಚ ಸರ್ವಥಾ ॥ ೪೩ ॥

---

೩೯. ಅಲ್ಲಿ ನೀವು ಸೂರ್ಯನ ಶಿಷ್ಯರಾಗಿ ಘೋರತಪಸ್ಸನ್ನಾಚರಿಸಿ ಮಹಾಮುನಿಗಳಾಗಿರಿ. ಶಿವನ ಅಪ್ಪಣೆಯಂತೆ ನಾನು ನಿಮಗೆ ಈಗ ಹೇಳಿರುವೆನು ಎಂದು ಹೇಳಿದೆ.

೪೦. ಬ್ರಹ್ಮನು ಹೇಳಿದನು:—ಹೀಗೆ ನಾರದಮುನಿಯು ಹೇಳಲು, ಆ ವಾಲಖಿಲ್ಯರೆಲ್ಲರೂ ಶಿವನನ್ನು ನಮಸ್ಕರಿಸಿ ಆಕೂಡಲೇ ಗಂಧಮಾದನಗಿರಿಗೆ ತೆರಳಿದರು.

೪೧. ಬಳಿಕ ಶಿವನಿಂದ ಪ್ರೇರಿತರಾದ ಹರಿಯೇ ಮೊದಲಾದ ಮಹಾತ್ಮರು ನನ್ನನ್ನು ಸಮಾಧಾನಗೊಳಿಸಲು ನಾನು ಆಗ ಭಯವನ್ನು ಬಿಟ್ಟು ನಿಶ್ಚಿಂತನಾದೆನು.

೪೨. ಆಮೇಲೆ ನಾನು, ಶಂಕರನೇ ಎಲ್ಲ ಕಾರ್ಯಗಳನ್ನು ಮಾಡಿಸುವವನೂ ದುಷ್ಟರ ಗರ್ವವನ್ನು ಅಡಗಿಸುವವನೂ ಎಂದು ತಿಳಿದು, ಭಕ್ತವತ್ಸಲನಾದ ಆ ಪರಮೇಶ್ವರನನ್ನು ಹೀಗೆ ಸ್ತುತಿಸಿದೆನು.

೪೩. ದೇವದೇವನೂ ದಯಾಸಮುದ್ರನೂ ಆದ ಓ ಮಹಾದೇವನೆ, ನೀನೇ ಎಲ್ಲ ಜಗತ್ತನ್ನು ಸೃಷ್ಟಿಸುವವನು, ಪಾಲಿಸುವವನು ಮತ್ತು ಸಂಹರಿಸುವವನು.

ತ್ವದಿಚ್ಛಯಾ ಹಿ ಸಕಲಂ ಸ್ಥಿತಂ ಹಿ ಸಚರಾಚರಂ ।
ತಂತ್ಯಾಂ ಯಥಾ ಬಲೀವರ್ದಾ ಮಯಾ ಜ್ಞಾತಂ ವಿಶೇಷತಃ ॥ ೪೪ ॥

ಇತ್ಯೇವಮುಕ್ತ್ವಾ ಸೋಽಹಂ ವೈ ಪ್ರಾಣಮಂ ಚ ಕೃತಾಂಜಲಿಃ ।
ಅನ್ಯೇಽಪಿ ತುಷ್ಟುವುಸ್ಸರ್ವೇ ವಿಷ್ಣ್ವಾದ್ಯಾಸ್ತಂ ಮಹೇಶ್ವರಂ ॥ ೪೫ ॥

ಅಥಾಽಽಕರ್ಣ್ಯ ನುತಿಂ ಶುದ್ಧಾಂ ಮಮ ದೀನತಯಾ ತದಾ ।
ವಿಷ್ಣ್ವಾದೀನಾಂ ಚ ಸರ್ವೇಷಾಂ ಪ್ರಸನ್ನೋಽಭೂನ್ಮಹೇಶ್ವರಃ ॥ ೪೬ ॥

ದದೌ ಸೋಽತಿವರಂ ಮಹ್ಯಮಭಯಂ ಪ್ರೀತಮಾನಸಃ ।
ಸರ್ವೇ ಸುಖಮತೀವಾಪುರತ್ಯಮೋದಮಹಂ ಮುನೇ ॥ ೪೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಏಕೋನಪಂಚಾಶತ್ತಮೋಽಧ್ಯಾಯಃ

---

೪೪. ಹಗ್ಗಗಳ ಅಧೀನದಲ್ಲಿ ಎತ್ತುಗಳು ನಿಂತಿರುವಂತೆ ನಿನ್ನ ಇಚ್ಛೆಯಿಂದಲೇ ಜಗತ್ತೆಲ್ಲವೂ ನಿಂತಿರುವುದು. ಇದನ್ನು ಈಗ ನಾನು ಚೆನ್ನಾಗಿ ತಿಳಿದೆನು.

೪೫. ಹೀಗೆ ಹೇಳಿ ನಾನು ಕೈಗಳನ್ನು ಜೋಡಿಸಿ ನಮಸ್ಕರಿಸಿದೆನು. ಆಮೇಲೆ ವಿಷ್ಣು ಮೊದಲಾದವರು ಆ ಮಹೇಶ್ವರನನ್ನು ಸ್ತುತಿಸಿದರು.

೪೬. ಆಗ ಶಿವನು ಶುದ್ಧವಾದ ನನ್ನ ಆ ದೀನಸ್ತುತಿಯನ್ನೂ ಹರಿಯೇ ಮೊದಲಾದವರ ಸ್ತುತಿಯನ್ನೂ ಕೇಳಿ ತುಂಬಾ ಪ್ರಸನ್ನನಾದನು.

೪೭. ಮತ್ತು ಆ ಶಿವನು ನನಗೆ ಪ್ರೀತಿಯಿಂದ ಅಭಯವನ್ನು ಅನುಗ್ರಹಿಸಿದನು. ಅದರಿಂದ ಎಲ್ಲರಿಗೂ ಸುಖವಾಯಿತು. ನಾನೂ ತುಂಬಾ ಹರ್ಷವುಳ್ಳವನಾದೆನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ
ಪಾರ್ವತೀಖಂಡದಲ್ಲಿ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ಪಂಚಾಶತ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ತತಶ್ಚಾಹಂ ಮುನಿಗಣೈಶ್ಶೇಷಕೃತ್ಯಂ ಶಿವಾಜ್ಞಯಾ ।
ಅಕಾರ್ಷಂ ನಾರದ ಪ್ರೀತ್ಯಾ ಶಿವಾಶಿವವಿವಾಹತಃ ॥ ೧ ॥

ತಯೋಶ್ಶಿರೋಽಭಿಷೇಕಶ್ಚ ಬಭೂವಾದರತಸ್ತತಃ ।
ಧ್ರುವಸ್ಯ ದರ್ಶನಂ ವಿಪ್ರಾಃ ಕಾರಯಾಮಾಸುರಾದರಾತ್ ॥ ೨ ॥

ಹೃದಯಾಲಂಭನಂ ಕರ್ಮ ಬಭೂವ ತದನಂತರಂ ।
ಸ್ವಸ್ತಿಪಾಠಶ್ಚ ವಿಪ್ರೇಂದ್ರ ಮಹೋತ್ಸವಪುರಸ್ಸರಃ ॥ ೩ ॥

---

## ಐವತ್ತನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದ, ಆಮೇಲೆ ನಾನು ಶಿವನ ಅಪ್ಪಣೆಯಂತೆ ಪಾರ್ವತೀಪರಮೇಶ್ವರರ ವಿವಾಹದ ಮಿಕ್ಕ ಕಾರ್ಯಗಳನ್ನು ಮುನಿಗಳಿಂದ ಮಾಡಿಸಿದೆನು.

೨. ಬಳಿಕ ಗಿರಿಜಾಶಿವರಿಗೆ ಅಭಿಷೇಕವು ನಡೆಯಿತು. ಬ್ರಾಹ್ಮಣರು ಧ್ರುವ ಮಂಡಲದ ದರ್ಶನವನ್ನು ಮಾಡಿಸಿದರು.

೩. ಆಮೇಲೆ ದಂಪತಿಗಳು ಪರಸ್ಪರ ಹೃದಯಗಳನ್ನು ಸ್ಪರ್ಶಿಸುವ ಹೃದಯಾಲಂಭನವೆಂಬ ಕರ್ಮವು ನಡೆಯಿತು. ಬ್ರಾಹ್ಮಣರು ಸ್ವಸ್ತಿಮಂತ್ರಗಳನ್ನು ಪಠಿಸಿದರು.

ಶಿವಾಶಿರಸಿ ಸಿಂಧೂರಂ ದದೌ ಶಂಭುರ್ದ್ವಿಜಾಜ್ಞಯಾ ।
ತದಾನೀಂ ಗಿರಿಜಾಭಿಖ್ಯಾದ್ಭುತಾವರ್ಣ್ಯಾ ಬಭೂವ ಹ ॥ ೪ ॥

ತತೋ ವಿಪ್ರಾಜ್ಞಯಾ ತೌ ದ್ವಾವೇಕಾಸನಸಮಾಸ್ಥಿತೌ ।
ಲೇಭಾತೇ ಪರಮಾಂ ಶೋಭಾಂ ಭಕ್ತಚಿತ್ತಮುದಾವಹಾಂ ॥ ೫ ॥

ತತಃ ಸ್ವಸ್ಥಾನಮಾಗತ್ಯ ಸಂಸ್ರವಪ್ರಾಶನಂ ಮುದಾ ।
ಚಕ್ರತುಸ್ತೌ ನಿದೇಶಾನ್ಮೇऽದ್ಭುತಲೀಲಾಕರೌ ಮುನೇ ॥ ೬ ॥

ಇತ್ಥಂ ನಿವೃತ್ತೇ ವಿಧಿವದ್ಯಜ್ಞೇ ವೈವಾಹಿಕೇ ಶಿವಃ ।
ಬ್ರಹ್ಮಣೇ ಪೂರ್ಣಪಾತ್ರಂ ಮೇ ದದೌ ಲೋಕಕೃತೇ ಪ್ರಭುಃ ॥ ೭ ॥

ಗೋದಾನಂ ವಿಧಿವಚ್ಛಂಭುರಾಚಾರ್ಯಾಯ ದದೌ ತದಾ ।
ಮಹಾದಾನಾನಿ ಚ ಪ್ರೀತ್ಯಾ ಯಾನಿ ಮಂಗಲದಾನಿ ಚ ॥ ೮ ॥

---

೪. ಬ್ರಾಹ್ಮಣರ ಅನುಮತಿಯಂತೆ ಶಿವನು ಗಿರಿಜೆಯ ಹಣೆಯಲ್ಲಿ ಕುಂಕುಮವನ್ನಿಟ್ಟನು. ಆಗ ಗಿರಿಜೆಯು ತುಂಬಾ ಮನೋಹರವಾಗಿ ಕಂಡಳು.

೫. ಆಮೇಲೆ ಪುರೋಹಿತರ ಅಪ್ಪಣೆಯಂತೆ ಗಿರಿಜಾಶಿವರು ಒಂದೇ ಆಸನದ (ಹಸೆಯ)ಲ್ಲಿ ಕುಳಿತುಕೊಂಡು ಬಹಳವಾದ ಕಾಂತಿಯಿಂದ ಬೆಳಗಿದರು. ಇದು ಭಕ್ತರಿಗೆ ಮಹಾ ಹರ್ಷವನ್ನುಂಟುಮಾಡುತ್ತಿತ್ತು.

೬. ಆಮೇಲೆ, ನನ್ನಪ್ಪಣೆಯಂತೆ, ಅದ್ಭುತ ಚಮತ್ಕಾರಗಳನ್ನು ಮಾಡಬಲ್ಲವರಾದ ಆ ದಂಪತಿಗಳು ತಮ್ಮ ಸ್ಥಾನದಲ್ಲಿ ಕುಳಿತು ಹರ್ಷದಿಂದ ಹರಿಭೂಮದೂಟವನ್ನು ಮಾಡಿದರು.

೭. ಹೀಗೆ ವಿಧಿವತ್ತಾಗಿ ವಿವಾಹಕಾರ್ಯವು ಮುಗಿಯಲು ಶಿವನು ಸೃಷ್ಟಿಕರ್ತನಾದ ನನಗೆ ಬ್ರಹ್ಮತ್ವದ ದಕ್ಷಿಣೆಗಾಗಿ ಪೂರ್ಣಪಾತ್ರವನ್ನು ಬಹುಮಾನವಾಗಿ ಕೊಟ್ಟನು.

೮. ಆಚಾರ್ಯನಿಗೆ ಗೋದಾನವನ್ನು ವಿಧಿವತ್ತಾಗಿ ಕೊಟ್ಟನು. ಮತ್ತು ಮಂಗಲಕರವಾದಂತಹ ಅನೇಕ ಮಹಾದಾನಗಳನ್ನೂ ಮಾಡಿದನು.

ತತಃ ಶತಸುವರ್ಣಂ ಚ ವಿಪ್ರೇಭ್ಯಸ್ಸ ದದೌ ಪೃಥಕ್ ।
ಬಹುಭ್ಯೋ ರತ್ನಕೋಟೀಶ್ಚ ನಾನಾದ್ರವ್ಯಾಣ್ಯನೇಕಶಃ ॥ ೯ ॥

ತದಾನೀಮಮರಾಸ್ಸರ್ವೇ ಪರೇ ಜೀವಾಶ್ಚರಾಚರಾಃ ।
ಮುಮುದುಶ್ಚೇತಸಾತೀವ ಬಭೂವಾತಿ ಜಯಧ್ವನಿಃ ॥ ೧೦ ॥

ಮಂಗಲಧ್ವನಿಗಾನಂ ಚ ಬಭೂವ ಬಹು ಸರ್ವತಃ ।
ವಾದ್ಯಧ್ವನಿರಭೂದ್ರಮ್ಯೋ ಸರ್ವಾನಂದಪ್ರವರ್ಧನಃ ॥ ೧೧ ॥

ಹರಿರ್ಮಯಾಥ ದೇವಾಶ್ಚ ಮುನಯಶ್ಚಾಪರೇಽಖಿಲಾಃ ।
ಗಿರಿಮಾಮಂತ್ರ್ಯ ಸುಪ್ರೀತ್ಯಾ ಸ್ವಸ್ಥಾನಂ ಪ್ರಯಯುರ್ದ್ರುತಂ ॥ ೧೨ ॥

ತದಾನೀಂ ಶೈಲನಗರೇ ಸ್ತ್ರಿಯಶ್ಚ ಮುದಿತಾ ವರಂ ।
ಶಿವಾಶಿವೌ ಸಮಾನೀಯ ಯಯುಃ ಕುಹವರಾಲಯಂ ॥ ೧೩ ॥

---

೯. ಆಮೇಲೆ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೆ ನೂರು ನೂರು ಚಿನ್ನದ ನಾಣ್ಯಗಳನ್ನು ದಾನಮಾಡಿದನು. ಅನೇಕರಿಗೆ ಕೋಟಿಕೋಟಿ ರತ್ನಗಳನ್ನೂ ಅನೇಕ ದ್ರವ್ಯಗಳನ್ನೂ ದಾನಮಾಡಿದನು.

೧೦. ಆಗ ಎಲ್ಲ ದೇವತೆಗಳೂ ಮನುಷ್ಯ ಮೊದಲಾದ ಪ್ರಾಣಿಗಳೂ ಸಹ ತುಂಬಾ ಹರ್ಷಗೊಂಡು ಜಯಧ್ವನಿಯನ್ನು ಮಾಡಿದರು.

೧೧. ಗಾಯಕರು ಮಂಗಲವನ್ನು ಗಾನಮಾಡಿದರು. ಮನೋಹರವೂ ಆನಂದಕರವೂ ಆದಂತಹ ಅನೇಕ ವಾದ್ಯಗಳನ್ನು ಬಾರಿಸಿದರು.

೧೨. ಬಳಿಕ ನಾನು, ವಿಷ್ಣು, ದೇವತೆಗಳು, ಮುನಿಗಳೂ ಸಹ ಹಿಮವಂತನ ಅನುಮತಿಯನ್ನು ಪಡೆದು ಸಂತೋಷದಿಂದ ನಮ್ಮ ನಮ್ಮ ಸ್ಥಾನಗಳಿಗೆ ತೆರಳಿದೆವು.

೧೩. ಆಮೇಲೆ ಹಿಮವಂತನ ಪಟ್ಟಣಿಗರಾದ ಸುಮಂಗಲಿಯರು ಸಂತೋಷದಿಂದ ಗಿರಿಜಾಶಿವರನ್ನು ಅಂತರ್ಗೃಹಕ್ಕೆ ಕರೆತಂದರು.

ಲೌಕಿಕಾಚಾರಮಾಜಹ್ರುಸ್ತಾಃಸ್ತ್ರಿಯಸ್ತತ್ರ ಚಾದೃತಾಃ ।
ಮಹೋತ್ಸಾಹೋ ಬಭೂವಾಥ ಸರ್ವತಃ ಪ್ರಮುದಾವಹಃ ॥ ೧೪ ॥

ಅಥ ತಾಸ್ತೌ ಸಮಾನೀಯ ದಂಪತೀ ಜನಶಂಕರೌ ।
ವಾಸಾಲಯಂ ಮಹಾದಿವ್ಯಂ ಭವಾಚಾರಂ ವ್ಯಧುರ್ಮುದಾ ॥ ೧೫ ॥

ಅಥೋ ಸಮೀಪಮಾಗತ್ಯ ಶೈಲೇಂದ್ರನಗರಸ್ತ್ರಿಯಃ ।
ನಿರ್ವೃತ್ಯ ಮಂಗಲಂ ಕರ್ಮ ಪ್ರಾಪಯ್ಯ ದಂಪತೀ ಗೃಹಂ ॥ ೧೬ ॥

ಕೃತ್ವಾ ಜಯಧ್ವನಿಂ ಚಕ್ರುರ್ಗ್ರಂಥಿನಿರ್ಮೋಚನಾದಿಕಂ ।
ಸಸ್ಮಿತಾಃ ಸಕಟಾಕ್ಷಾಶ್ಚ ಪುಲಕಾಂಚಿತವಿಗ್ರಹಾಃ ॥ ೧೭ ॥

ವಾಸಗೇಹಂ ಸಂಪ್ರವಿಶ್ಯ ಮುಮುಹುಃ ಕಾಮಿನೀವರಾಃ ।
ಪ್ರಶಂಸಂತ್ಯಃ ಸ್ವಭಾಗ್ಯಾನಿ ಪಶ್ಯಂತ್ಯಃ ಪರಮೇಶ್ವರಂ ॥ ೧೮ ॥

---

೧೪. ಅಲ್ಲಿ ಆ ಗಿರಿಜಾಶಂಕರರಿಗೆ ಸ್ತ್ರೀಯರು ಅನೇಕ ಲೋಕಾಚಾರಗಳನ್ನು ಮಾಡಿದರು. ಮತ್ತು ಅಲ್ಲಿ ಅನೇಕ ಮಹೋತ್ಸವಗಳಾದುವು.

೧೫. ಆಮೇಲೆ ಜನಗಳಿಗೆ ಕ್ಷೇಮವನ್ನುಂಟುಮಾಡುವಂತಹ ಆ ದಂಪತಿಗಳನ್ನು ಸ್ತ್ರೀಯರು ವಾಸಗೃಹಕ್ಕೆ (ಮಲಗುವ ಮನೆ) ಕರೆದುಕೊಂಡು ಬಂದು ಅಲ್ಲಿಯ ಲೋಕಾಚಾರಗಳನ್ನು ನಡೆಸಿದರು.

೧೬. ಆಗ ಮಾಡಬೇಕಾದಂತಹ ಮಿಕ್ಕ ಮಂಗಳಕರ್ಮಗಳನ್ನೂ ಮಾಡಿ ಆ ಸುಮಂಗಲಿಯರು ದಂಪತಿಗಳನ್ನು ವಾಸಗೃಹಕ್ಕೆ ಪ್ರವೇಶಮಾಡಿಸಿದರು.

೧೭. ಆ ಸ್ತ್ರೀಯರು ಮಂದಹಾಸವನ್ನು ಬೀರುತ್ತಾ ಸಂಭ್ರಮದಿಂದ ಆ ದಂಪತಿಗಳ ಸೆರಗುಗಂಟನ್ನು ಬಿಚ್ಚಿದರು.

೧೮. ಹೀಗೆ ಆ ಸುಂದರಿಯರು ಗಿರಿಜಾಶಂಕರರನ್ನು ವಾಸಗೃಹಕ್ಕೆ ಪ್ರವೇಶಿಸಿ, ತಮ್ಮ ಅದೃಷ್ಟಕ್ಕೆ ಸಂತೋಷಪಡುತ್ತಾ ಸುಂದರನಾದ ಪರಮೇಶ್ವರನನ್ನು ನೋಡುತ್ತಾ ಸಂತೋಷದಿಂದ ಮೈಮರೆತರು.

ಮಹಾಸುರೂಪವೇಷಂ ಚ ಸರ್ವಲಾವಣ್ಯಸಂಯುತಂ ।
ನವೀನಯೌವನಸ್ಥಂ ಚ ಕಾಮಿನೀಚಿತ್ತಮೋಹನಂ ॥ ೧೯ ॥

ಈಷದ್ಧಾಸ್ಯಪ್ರಸನ್ನಾಸ್ಯಂ ಸಕಟಾಕ್ಷಂ ಸುಸುಂದರಂ ।
ಸುಸೂಕ್ಷ್ಮವಾಸೋ ಬಿಭ್ರಾಣಂ ನಾನಾರತ್ನವಿಭೂಷಿತಂ ॥ ೨೦ ॥

ತದಾನೀಂ ದಿವ್ಯನಾರ್ಯಶ್ಚ ಷೋಡಶಾರಂ ಸಮಾಯಯುಃ ।
ತೌ ದಂಪತೀ ಚ ಸಂದ್ರಷ್ಟುಂ ಮಹಾದರಪುರಸ್ಸರಂ ॥ ೨೧ ॥

ಸರಸ್ವತೀ ಚ ಲಕ್ಷ್ಮೀಶ್ಚ ಸಾವಿತ್ರೀ ಜಾಹ್ನವೀ ತಥಾ ।
ಅದಿತಿಶ್ಚ ಶಚೀ ಚೈವ ಲೋಪಾಮುದ್ರಾಪ್ಯರುಂಧತೀ ॥ ೨೨ ॥

ಅಹಲ್ಯಾ ತುಲಸೀ ಸ್ವಾಹಾ ರೋಹಿಣೀ ಚ ವಸುಂಧರಾ ।
ಶತರೂಪಾ ಚ ಸಂಜ್ಞಾ ಚ ರತಿರೇತಾಸ್ಸುರಸ್ತ್ರಿಯಃ ॥ ೨೩ ॥

ದೇವಕನ್ಯಾ ನಾಗಕನ್ಯಾ ಮುನಿಕನ್ಯಾ ಮನೋಹರಾಃ ।
ತತ್ರ ಯಾ ಯಾಃ ಸ್ಥಿತಾಸ್ತಾಸಾಂ ಸಂಖ್ಯಾಂ ಕರ್ತುಂ ಚ ಕಃ ಕ್ಷಮಃ ।
॥ ೨೪ ॥

---

೧೯-೨೦. ಆಗ ಶಿವನು ಸುಂದರವಾದ ರೂಪದಿಂದಲೂ ಸಮಸ್ತ ಸೊಬಗಿನಿಂದಲೂ ಒಪ್ಪುತ್ತಿದ್ದನು. ಮಹಾ ಕಾಂತಿಯುಳ್ಳವನಾಗಿದ್ದನು. ನವಯೌವನ ಸಂಪನ್ನನಾಗಿ ಕಾಮಿನಿಯರ ಮನಸ್ಸನ್ನಪಹರಿಸುವವನಾಗಿದ್ದನು. ಮಂದಹಾಸವನ್ನು ಬೀರುತ್ತಲಿದ್ದನು ಸೂಕ್ಷ್ಮವಾದ ವಸ್ತ್ರವನ್ನು ಧರಿಸಿದ್ದನು. ಅನೇಕ ರತ್ನಾಭರಣಗಳಿಂದಲಂಕೃತನಾಗಿದ್ದನು. ಹೀಗೆ ಶಿವನು ತುಂಬಾ ಸುಂದರನಾಗಿದ್ದನು. ಇಂತಹ ಶಿವನನ್ನು ನೋಡಿ ಆ ಕಾಮಿನಿಯರು ಮೋಹಗೊಂಡರು.

೨೧-೨೩. ಆಗ ಆ ದಂಪತಿಗಳನ್ನು ನೋಡಲು ಸರಸ್ವತೀ, ಲಕ್ಷ್ಮೀ, ಸಾವಿತ್ರೀ ಜಾಹ್ನವೀ, ಅದಿತಿ, ಶಚೀದೇವಿ, ಲೋಪಾಮುದ್ರಾ, ಅರುಂಧತೀ, ಅಹಲ್ಯಾ, ತುಲಸೀ, ಸ್ವಾಹಾದೇವೀ, ರೋಹಿಣೀ, ವಸುಂಧರಾ, ಶತರೂಪಾದೇವೀ, ಸಂಜ್ಞಾ, ರತೀದೇವೀ ಎಂಬ ಈ ಹದಿನಾರುಜನ ದೇವತಾಸ್ತ್ರೀಯರು ಅಲ್ಲಿಗೆ ಬಂದರು.

೨೪. ಮತ್ತು ಸುಂದರಿಯರಾದ ದೇವಕನ್ಯೆಯರು, ನಾಗಕನ್ಯೆಯರು, ಮುನಿಕನ್ಯೆಯರು ಎಲ್ಲರೂ ಅಲ್ಲಿಗೆ ಬಂದರು. ಅವರ ಸಂಖ್ಯೆಯನ್ನು ಎಣಿಸಲು ಸಾಧ್ಯವಿಲ್ಲ.

ತಾಭೀ ರತ್ನಾಸನೇ ದತ್ತೇ ತತ್ರೋವಾಸ ಶಿವೋ ಮುದಾ ।
ತಮೂಚುಃ ಕ್ರಮತೋ ದೇವ್ಯಸ್ಸಹಾಸಂ ಮಧುರಂ ವಚಃ ॥ ೨೫ ॥

॥ ಸರಸ್ವತ್ಯುವಾಚ ॥

ಪ್ರಾಪ್ತಾ ಸತೀ ಮಹಾದೇವಾಧುನಾ ಪ್ರಾಣಾಧಿಕಾ ಮುದಾ ।
ದೃಷ್ಟ್ವಾ ಪ್ರಿಯಾಸ್ಯಂ ಚಂದ್ರಾಭಂ ಸಂತಾಪಂ ತ್ಯಜ ಕಾಮುಕ ॥ ೨೬ ॥

ಕಾಲಂ ಗಮಯ ಕಾಲೇಶ ಸತೀಸಂಶ್ಲೇಷಪೂರ್ವಕಂ ।
ವಿಶ್ಲೇಷಸ್ತೇನ ಭವಿತಾ ಸರ್ವಕಾಲಂ ಮಮಾಶ್ರಿತಾ ॥ ೨೭ ॥

॥ ಲಕ್ಷ್ಮೀರುವಾಚ ॥

ಲಜ್ಜಾಂ ವಿಹಾಯ ದೇವೇಶ ಸತೀಂ ಕೃತ್ವಾ ಸ್ವವಕ್ಷಸಿ ।
ತಿಷ್ಠ ತಾಂ ಪ್ರತಿ ಕಾ ಲಜ್ಜಾ ಪ್ರಾಣಾ ಯಾಂತಿ ಯಯಾ ವಿನಾ ॥ ೨೮ ॥

---

೨೫. ಆ ಸುಂದರಿಯರು ಶಿವನಿಗೆ ರತ್ನಸಿಂಹಾಸನವನ್ನರ್ಪಿಸಲು ಅವನು ಅದರಲ್ಲಿ ಹರ್ಷದಿಂದ ಕುಳಿತನು. ಆಗ ಆ ದೇವಸ್ತ್ರೀಯರಲ್ಲಿ ಒಬ್ಬರಾಗುತ್ತಲೊಬ್ಬರು ಮುಂದೆ ಬಂದು ಮಧುರವಾದ ವಾಕ್ಯದಿಂದ ಶಿವನಿಗಿಂತೆಂದರು.

೨೬. ಸರಸ್ವತಿಯು ಹೇಳಿದಳು:—ಓ ಮಹಾದೇವ, ನಿನ್ನ ಪ್ರಾಣಪ್ರಿಯಳಾದ ಸತೀದೇವಿಯು ತಿರುಗಿ ನಿನಗೆ ಲಭಿಸಿರುವಳು, ಎಲೈ ಕಾಮುಕನೆ, ಚಂದ್ರನಂತಿರುವ ಇವಳ ಮುಖವನ್ನು ನೋಡುತ್ತಾ ನಿನ್ನ ಹಿಂದಿನ ವಿರಹತಾಪವನ್ನು ಬಿಡು.

೨೭. ಓ ಪಾರ್ವತೀಶ, ಇನ್ನುಮುಂದೆ ಈ ಪಾರ್ವತಿಯ ಸಹವಾಸದಲ್ಲಿ ಕಾಲವನ್ನು ಕಳೆ. ನಿನಗೆ ಇನ್ನು ಮುಂದೆ ಎಂದಿಗೂ ಪತ್ನಿಯ ವಿರಹವು ಬರುವುದಿಲ್ಲ ಎಂದಳು.

೨೮. ಲಕ್ಷ್ಮಿಯು ಹೇಳಿದಳು:—ಓ ಪರಮೇಶ್ವರ, ಲಜ್ಜೆಯನ್ನು ಬಿಟ್ಟು ಈ ಗಿರಿಜೆಯನ್ನು ನಿನ್ನ ಎದೆಯಲ್ಲಿ ಆಲಿಂಗಿಸು. ಇವಳಿಲ್ಲದಿದ್ದರೆ ನಿನ್ನ ಪ್ರಾಣವೇ ಉಳಿಯಲಾರದು. ಇಂತಹವಳಲ್ಲಿ ನಿನಗೆ ಲಜ್ಜೆಯೇಕೆ?

॥ ಸಾವಿತ್ರ್ಯುವಾಚ ॥
ಭೋಜಯಿತ್ವಾ ಸತೀಂ ಶಂಭೋ ಶೀಘ್ರಂ ತ್ವಂ ಭುಂಕ್ಷ್ವ ಮಾ ಖಿದಃ ।
ತದಾಚಮ್ಯ ಸಕರ್ಪೂರಂ ತಾಂಬೂಲಂ ದೇಹಿ ಸಾದರಂ ॥ ೨೯ ॥

॥ ಜಾಹ್ನವ್ಯುವಾಚ ॥
ಸ್ವರ್ಣಕಾಂತಿಕರಾಂ ಧೃತ್ವಾ ಕೇಶಾರ್ನ್ ಮಾರ್ಜಯ ಯೋಷಿತಃ ।
ಕಾಮಿನ್ಯಾಃ ಸ್ವಾಮಿಸೌಭಾಗ್ಯಸುಖಂ ನಾತಃ ಪರಂ ಭವೇತ್ ॥ ೩೦ ॥

॥ ಅದಿತಿರುವಾಚ ॥
ಭೋಜನಾಂತೇ ಶಿವಾಂ ಶಂಭೋ ಮುಖಶುದ್ಧ್ಯರ್ಥಮಾದರಾತ್ ।
ಜಲಂ ದೇಹಿ ಮಹಾಪ್ರೀತ್ಯಾ ದಂಪತಿಪ್ರೇಮ ದುರ್ಲಭಂ ॥ ೩೧ ॥

॥ ಶಚ್ಯುವಾಚ ॥
ಯೋ ಬಭ್ರಾಮಾನಿಶಂ ಮೋಹಾತ್ಕಾ ಲಜ್ಜಾ ತೇ ಶಿವಾಂ ಪ್ರತಿ ।
ಕೃತ್ವಾ ವಿಲಾಪಂ ಯದ್ಧೇತೋಃ ಶಿವಾಂ ಕೃತ್ವಾ ಚ ವಕ್ಷಸಿ ॥ ೩೨ ॥

---

೨೯. ಸಾವಿತ್ರಿಯು ಹೇಳಿದಳು:—ಓ ಶಂಕರ, ಇನ್ನು ವ್ಯಥೆಯನ್ನು ಬಿಡು. ಈ ಗಿರಿಜೆಗೆ ಭೋಜನವನ್ನು ಮಾಡಿಸಿ ನೀನೂ ಭೋಜನಮಾಡು. ಆಮೇಲೆ ಆಚಮನಮಾಡಿ ಇವಳಿಗೆ ಪ್ರೀತಿಯಿಂದ ಪಚ್ಚಕರ್ಪೂರಮಿಶ್ರಿತವಾದ ತಾಂಬೂಲವನ್ನು ಕೊಡು.

೩೦. ಓ ಶಂಕರ, ಸುವರ್ಣದಂತಹ ಕಾಂತಿಯುಳ್ಳ ಈ ಗಿರಿಜೆಯ ಸುಂದರ ಕೇಶಪಾಶಗಳನ್ನು ಬಾಚಿ ಅಲಂಕರಿಸು. ಸ್ತ್ರೀಯರಿಗೆ ಸ್ವಾಮಿಯ ಪ್ರೀತಿಗಿಂತಲೂ ಹೆಚ್ಚಿನ ಸೌಭಾಗ್ಯವಿಲ್ಲವಷ್ಟೆ?

೩೧. ಅದಿತಿಯು ಹೇಳಿದಳು:—ಓ ಮಹೇಶ್ವರ, ಭೋಜನವಾದಮೇಲೆ ಗಿರಿಜೆಗೆ ಮುಖಶುದ್ಧಿಗಾಗಿ ಪ್ರೀತಿಯಿಂದ ಜಲವನ್ನು ಕೊಡು. ದಂಪತಿಗಳಲ್ಲಿ ಅನ್ಯೋನ್ಯಪ್ರೇಮವು ದುರ್ಲಭವು.

೩೨. ಶಚಿಯು ಹೇಳಿದಳು:—ಸದಾ ಸತೀದೇವಿಯನ್ನೇ ಚಿಂತಿಸುತ್ತಾ ಮೋಹದಿಂದ ಜಗತ್ತೆಲ್ಲವನ್ನೂ ಲಜ್ಜೆಯಿಲ್ಲದೆ, ಅಲೆದಿರುವ ನಿನಗೆ ಈ ಗಿರಿಜೆಯ ವಿಷಯದಲ್ಲಿ ಈಗ ಲಜ್ಜೆಯೇಕೆ?

॥ ಲೋಪಾಮುದ್ರೋವಾಚ ॥
ವ್ಯವಹಾರೋಽಸ್ತಿ ಚ ಸ್ತ್ರೀಣಾಂ ಭುಕ್ತ್ವಾ ವಾಸಗೃಹೇ ಶಿವ ।
ದತ್ವಾ ಶಿವಾಯೈ ತಾಂಬೂಲಂ ಶಯನಂ ಕರ್ತುಮರ್ಹಸಿ ॥ ೩೩ ॥

॥ ಅರುಂಧತ್ಯುವಾಚ ॥
ಮಯಾ ದತ್ತಾಂ ಸತೀಮೇನಾಂ ತುಭ್ಯಂ ದಾತುಮನೀಪ್ಸಿತಾಂ ।
ವಿವಿಧಂ ಬೋಧಯಿತ್ವೇಮಾಂ ಸುರತಿಂ ಕರ್ತುಮರ್ಹಸಿ ॥ ೩೪ ॥

॥ ಅಹಲ್ಯೋವಾಚ ॥
ವೃದ್ಧಾವಸ್ಥಾಂ ಪರಿತ್ಯಜ್ಯ ಹ್ಯತೀವ ತರುಣೋ ಭವ ।
ಯೇನ ಮೇನಾನುಮನ್ಯೇತ ತ್ವಾಂ ಸುತಾರ್ಪಿತಮಾನಸಾ ॥ ೩೫ ॥

॥ ತುಲಸ್ಯುವಾಚ ॥
ಸತೀ ತ್ವಯಾ ಪರಿತ್ಯಕ್ತಾ ಕಾಮೋ ದಗ್ಧಃ ಪುರಾ ಕೃತಃ ।
ಕಥಂ ತದಾ ವಸಿಷ್ಠಶ್ಚ ಪ್ರಭೋ ಪ್ರಸ್ಥಾಪಿತೋಽಧುನಾ ॥ ೩೬ ॥

---

೩೩. ಲೋಪಾಮುದ್ರೆಯು-ಹೇಳಿದಳು :—ಓ ಶಿವ, ಭೋಜನವಾದಮೇಲೂ ಸ್ತ್ರೀಯರಿಗೆ ವಾಸಗೃಹ (ಮಲಗುವ ಮನೆ) ದಲ್ಲಿ ಕಾರ್ಯವಿರುವುದು. ಆಗ ನೀನು ಗಿರಿಜೆಗೆ ತಾಂಬೂಲವನ್ನು ಕೊಟ್ಟು ಮಲಗಿಕೊಳ್ಳಬೇಕು.

೩೪. ಅರುಂಧತಿಯು ಹೇಳಿದಳು:—ಓ ಶಂಕರ, ಮೇನಾಹಿಮವಂತರು ಈ ಗಿರಿಜೆಯನ್ನು ನಿನಗೆ ಕೊಡಲಿಷ್ಟವುಳ್ಳವರಾಗಿರಲಿಲ್ಲ. ಆದರೂ ನಾನು ಪ್ರಯತ್ನಪಟ್ಟು ನಿನಗೆ ಇವಳನ್ನು ಕೊಡಿಸಿರುವೆನು. ಇಂತಹ ಇವಳನ್ನು ಚನ್ನಾಗಿ ಸಂತೋಷ ಗೊಳಿಸಿ ಇವಳೊಡನೆ ವಿಹರಿಸು.

೩೫. ಅಹಲ್ಯೆಯು ಹೇಳಿದಳು:—ಓ ಶಂಕರ, ನೀನು ವೃದ್ಧಾವಸ್ಥೆಯನ್ನು ಬಿಟ್ಟು ನವತರುಣನಾಗು. ಅದರಿಂದ ಮಗಳ ಹಿತದಲ್ಲಿಯೇ ಆಸಕ್ತಳಾದ ಮೇನಾ ದೇವಿಗೆ ಸಂತೋಷವಾಗುವುದು.

೩೬. ತುಲಸಿಯು ಹೇಳಿದಳು:—ಓ ಶಂಕರ, ಮೊದಲು ನೀನು ವೈರಾಗ್ಯ ದಿಂದ ಗಿರಿಜೆಯನ್ನು ಪರಿತ್ಯಜಿಸಿದೆ. ಮನ್ಮಥನನ್ನು ಸುಟ್ಟುಹಾಕಿದೆ. ಆದರೆ ಈಗ ತಿರುಗಿ ಈ ಗಿರಿಜೆಯನ್ನೇ ಮದುವೆಯಾಗಲು ವಸಿಷ್ಠನನ್ನು ಕಳುಹಿದೆಯೇಕೆ?

॥ ಸ್ವಾಹೋವಾಚ ॥
ಸ್ಥಿರೋ ಭವ ಮಹಾದೇವ ಸ್ತ್ರೀಣಾಂ ವಚಸಿ ಸಾಂಪ್ರತಂ ।
ವಿವಾಹೇ ವ್ಯವಹಾರೋಽಸ್ತಿ ಪುರಂಧ್ರೀಣಾಂ ಪ್ರಗಲ್ಭತಾ ॥ ೩೭ ॥

॥ ವಸುಂಧರೋವಾಚ ॥
ಜಾನಾಸಿ ಭಾವಂ ಭಾವಜ್ಞ ಕಾಮಾರ್ತಾನಾಂ ಚ ಯೋಷಿತಾಂ ।
ನ ಚ ಸ್ವಂ ಸ್ವಾಮಿನಂ ಶಂಭೋ ಈಶ್ವರಂ ಪಾತಿ ಸಂತತಂ ॥ ೩೮ ॥

॥ ರೋಹಿಣ್ಯುವಾಚ ॥
ಕಾಮಂ ಪೂರಯ ಪಾರ್ವತ್ಯಾಃ ಕಾಮಶಾಸ್ತ್ರವಿಶಾರದ ।
ಕುರು ಪಾರಂ ಸ್ವಯಂ ಕಾಮೀ ಕಾಮಿನೀಕಾಮಸಾಗರಂ ॥ ೩೯ ॥

॥ ಶತರೂಪೋವಾಚ ॥
ಭೋಗಂ ದಿವ್ಯಂ ವಿನಾ ಭುಕ್ತ್ವಾ ನ ಹಿ ತುಷ್ಯೇತ್ ಕ್ಷುಧಾತುರಃ ।
ಯೇನ ತುಷ್ಟಿರ್ಭವೇಚ್ಛಂಭೋ ತತ್ಕರ್ತುಮುಚಿತಂ ಸ್ತ್ರಿಯಾಃ ॥ ೪೦ ॥

---

೩೭. ಸ್ವಾಹಾದೇವಿಯು ಹೇಳಿದಳು :—ಓ ಮಹಾದೇವ, ಈಗ ನೀನು ಸ್ತ್ರೀಯರು ಹೇಳಿದಂತೆ ಕೇಳಬೇಕು. ವಿವಾಹದಲ್ಲಿ ಸ್ತ್ರೀಯರ ವ್ಯವಹಾರವು ಹೆಚ್ಚು. ಅವರಿಗೆ ಅಧಿಕಾರವೂ ಹೆಚ್ಚು.

೩೮. ವಸುಂಧರೆಯು ಹೇಳಿದಳು :—ಓ ಶಂಭು, ಭಾವಜ್ಞನಾದ ನೀನು ಕಾಮುಕಿಯರಾದ ಸ್ತ್ರೀಯರ ಭಾವವನ್ನು ಚೆನ್ನಾಗಿ ತಿಳಿದಿರುವೆ. ಸಾಧ್ವಿಯಾದವಳು ತಾನು ಮತ್ತು ತನ್ನ ಪತಿಯನ್ನಲ್ಲದೇ ಈಶ್ವರಮಾರ್ಗವನ್ನೂ ರಕ್ಷಿಸುವಳು.

೩೯. ರೋಹಿಣಿಯು ಹೇಳಿದಳು :—ಕಾಮಶಾಸ್ತ್ರವನ್ನು ಬಲ್ಲ ಓ ಶಿವನೆ, ಪಾರ್ವತಿಯ ಕಾಮವನ್ನು ಪೂರ್ತಿಮಾಡು. ನೀನೂ ಕಾಮಿನಿಯೆಂಬ ಕಾಮಸಾಗರವನ್ನು ದಾಟುವವನಾಗು.

೪೦. ಹಸಿದಿರುವವನು ಮೃಷ್ಟಾನ್ನ ಭೋಜನಮಾಡಿದಲ್ಲದೆ ತೃಪ್ತಿಹೊಂದುವುದಿಲ್ಲ. ಅದರಂತೆ ನೀನು ಯಾವ ಕಾರ್ಯವನ್ನು ಮಾಡಿದರೆ ಸ್ತ್ರೀಯರಿಗೆ ತೃಪ್ತಿಯಾಗುವುದೋ ಅಂತಹ ಕಾರ್ಯವನ್ನು ಮಾಡು.

॥ ಸಂಜ್ಞೋವಾಚ ॥
ತೂರ್ಣಂ ಪ್ರಸ್ಥಾಪಯ ಪ್ರೀತ್ಯಾ ಪಾರ್ವತ್ಯಾ ಸಹ ಶಂಕರಂ ।
ರತ್ನಪ್ರದೀಪಂ ತಾಂಬೂಲಂ ತಲ್ಪಂ ನಿರ್ಮಾಯ ನಿರ್ಜನೇ ॥ ೪೧ ॥

॥ ಬ್ರಹ್ಮೋವಾಚ ॥
ಸ್ತ್ರೀಣಾಂ ತದ್ವಚನಂ ಶ್ರುತ್ವಾ ತಾ ಉವಾಚ ಶಿವಃ ಸ್ವಯಂ ।
ನಿರ್ವಿಕಾರಶ್ಚ ಭಗವಾನ್ ಯೋಗೀಂದ್ರಾಣಾಂ ಗುರೋರ್ಗುರುಃ ॥ ೪೨ ॥

॥ ಶಂಕರ ಉವಾಚ ॥
ದೇವ್ಯೋ ನ ಬ್ರೂತ ವಚನಮೇವಂಭೂತಂ ಮಮಾಂತಿಕೇ ।
ಜಗತಾಂ ಮಾತರಃ ಸಾಧ್ವ್ಯಃ ಪುತ್ರೀಚಪಲತಾ ಕಥಂ ॥ ೪೩ ॥

॥ ಬ್ರಹ್ಮೋವಾಚ ॥
ಶಂಕರಸ್ಯ ವಚಃ ಶ್ರುತ್ವಾ ಲಜ್ಜಿತಾಸ್ಸುರಯೋಷಿತಃ ।
ಬಭೂವುಃ ಸಂಭ್ರಮಾತ್ತೂಷ್ಣೀಂ ಚಿತ್ರಪುತ್ತಲಿಕಾ ಯಥಾ ॥ ೪೪ ॥

---

೪೧. ಸಂಜ್ಞಾದೇವಿಯು ಹೇಳಿದಳು:—ಎಲೌ ಗೆಳತಿಯರೆ, ನಿರ್ಜನವಾದಂತಹ ವಾಸಗೃಹದಲ್ಲಿ ರತ್ನದೀಪವನ್ನಿಟ್ಟು, ತಾಂಬೂಲವನ್ನು ಸಿದ್ಧಪಡಿಸಿ ಮೃದುವಾದ ಶಯನವನ್ನು ರಚಿಸಿ, ಅಲ್ಲಿಗೆ ಪಾರ್ವತಿಯೊಡನೆ ಶಂಕರನನ್ನು ಕಳುಹಿಸಿ.

೪೨. ಬ್ರಹ್ಮನು ಹೇಳಿದನು:—ಎಲೈ ನಾರದ, ಹೀಗೆ ಆ ಸ್ತ್ರೀಯರು ಹೇಳಿದ ಮಾತುಗಳನ್ನು ಕೇಳಿ, ಮಹಾಯೋಗಿಯೂ ಜಗತ್ತಿಗೆ ಆದಿಗುರುವೂ ಮತ್ತು ವಿರಕ್ತನೂ ಆದ ಆ ಶಿವನು ಇಂತೆಂದನು.

೪೩. ಶಂಕರನು ಹೇಳಿದನು:—ಎಲೌ ದೇವತಾಸ್ತ್ರೀಯರೇ, ನನ್ನ ಬಳಿಯಲ್ಲಿ ಇಂತಹ ಮಾತುಗಳನ್ನಾಡಬೇಡಿ. ನೀವೆಲ್ಲರೂ ಜಗನ್ಮಾತೆಯರು, ಮಹಾಪತಿವ್ರತೆಯರು. ಇಂತಹವರಿಗೆ ಸಾಮಾನ್ಯ ಹುಡುಗಿಯರಿಗಿರುವ ಚಪಲತೆಯು ಯುಕ್ತವೇ ಎಂದನು.

೪೪. ಬ್ರಹ್ಮನು ಹೇಳಿದನು:—ಹೀಗೆ ಶಂಕರನು ಹೇಳಿದ ಮಾತನ್ನು ಕೇಳಿ ಆ ದೇವತಾಸ್ತ್ರೀಯರು ತುಂಬಾ ಲಜ್ಜೆಗೊಂಡು ಸುಮ್ಮನಾದರು. ಮತ್ತು ಚಿತ್ರದಲ್ಲಿ ಬರೆದ ಗೊಂಬೆಯಂತೆ ಅಲುಗಾಡದೆ ನಿಂತುಕೊಂಡರು.

ಭುಕ್ತ್ವಾ ಮಿಷ್ಟಾನ್ನಮಾಚಮ್ಯ ಮಹೇಶೋ ಹೃಷ್ಟಮಾನಸಃ ।
ಸಕರ್ಪೂರಂ ಚ ತಾಂಬೂಲಂ ಬುಭುಜೇ ಭಾರ್ಯಯಾ ಸಹ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಪಂಚಾಶತ್ತಮೋಽಧ್ಯಾಯಃ



---

೪೫. ಆಮೇಲೆ ಶಿವನು ಮೃಷ್ಟಾನ್ನ ಭೋಜನವನ್ನು ಮಾಡಿ, ಆಚಮನವನ್ನು ಮಾಡಿ, ಸಂತೋಷದಿಂದ ಗಿರಿಜೆಯೊಡನೆ ಕರ್ಪೂರಮಿಶ್ರಿತವಾದ ತಾಂಬೂಲವನ್ನು ಸೇವಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ ರುದ್ರಸಂಹಿತಾಯಾಂ ಪಾರ್ವತೀಖಂಡೇ ಏಕಪಂಚಾಶತ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ತಸ್ಮಿನ್ನವಸರೇ ಜ್ಞಾತ್ವಾನುಕೂಲಂ ಸಮಯಂ ರತಿಃ ।
ಸುಪ್ರಸನ್ನಾ ಚ ತಂ ಪ್ರಾಹ ಶಂಕರಂ ದೀನವತ್ಸಲಂ ॥ ೧ ॥

॥ ರತಿರುವಾಚ ॥

ಗೃಹೀತ್ವಾ ಪಾರ್ವತೀಂ ಪ್ರಾಪ್ತಂ ಸೌಭಾಗ್ಯಮತಿದುರ್ಲಭಂ ।
ಕಿಮರ್ಥಂ ಪ್ರಾಣನಾಥೋ ಮೇ ನಿಸ್ಸ್ವಾರ್ಥಂ ಭಸ್ಮಸಾತ್ಕೃತಃ ॥ ೨ ॥

---

## ಐವತ್ತೊಂದನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ರತಿಯು, ತನ್ನ ಅಭೀಷ್ಟವು ನೆರವೇರಲು ಇದೇ ಸರಿಯಾದ ಸಮಯವೆಂದು ತಿಳಿದು, ಸಂತೋಷಗೊಂಡು ದೀನವತ್ಸಲನಾದ ಶಂಕರನನ್ನು ಕುರಿತು,

೨-೩. ರತಿಯು ಹೇಳಿದಳು:—ಎಲೈ ಸ್ವಾಮಿಯೇ, ನೀನೇನೋ ಸೌಭಾಗ್ಯವತಿಯಾದ ಪಾರ್ವತಿಯನ್ನು ಮದುವೆಯಾದೆ. ಅದರಿಂದ ದುರ್ಲಭವಾದ ಆನಂದವನ್ನೂ ಪಡೆದಿರುವೆ. ಆದರೆ ನನ್ನ ಪ್ರಾಣನಾಥನಾದ ಮನ್ಮಥನನ್ನು ನಿಷ್ಕಾರಣವಾಗಿ ಸುಟ್ಟುಹಾಕಿರುವೆ. ಇದು ಸರಿಯೇ ? ಆದುದರಿಂದ ನನ್ನ ಪತಿಯ ಪ್ರಾಣವನ್ನುಳಿಸಿ

ಜೀವಯಾತ್ರಾ ಪತಿಂ ಮೇ ಹಿ ಕಾಮುವ್ಯಾಪಾರಮಾತ್ಮನಿ ।
ಕುರು ದೂರಂ ಚ ಸಂತಾಪಂ ಸಮುವಿಶ್ಲೇಷಹೇತುಕಂ ॥ ೩ ॥

ವಿವಾಹೋತ್ಸವ ಏತಸ್ಮಿನ್ ಸುಖಿನೋ ನಿಖಿಲಾ ಜನಾಃ ।
ಅಹಮೇಕಾ ಮಹೇಶಾನ ದುಃಖಿನೀ ಸ್ವಪತಿಂ ವಿನಾ ॥ ೪ ॥

ಸನಾಥಂ ಕುರು ಮಾಂ ದೇವ ಪ್ರಸನ್ನೋ ಭವ ಶಂಕರ ।
ಸ್ವೋಕ್ತಂ ಸತ್ಯಂ ವಿಧೇಹಿ ತ್ವಂ ದೀನಬಂಧೋ ಪರ ಪ್ರಭೋ ॥ ೫ ॥

ತ್ವಾಂ ವಿನಾ ಕಸ್ಸಮರ್ಥೋಽತ್ರ ತ್ರೈಲೋಕ್ಯೇ ಸಚರಾಚರೇ ।
ನಾಶನೇ ಮಮ ದುಃಖಸ್ಯ ಜ್ಞಾತ್ವೇತಿ ಕರುಣಾಂ ಕುರು ॥ ೬ ॥

ಸೋತ್ಸವೇ ಸ್ವವಿಹಾಹೇಽಸ್ಮಿನ್ ಸರ್ವಾನಂದಪ್ರದಾಯಿನಿ ।
ಸೋತ್ಸವಾಮಪಿ ಮಾಂ ನಾಥ ಕುರು ದೀನಕೃಪಾಕರ ॥ ೭ ॥

---

ನನ್ನೊಡನೆ ಕ್ರೀಡಿಸುವಂತೆ ಅನುಗ್ರಹಿಸಿ, ನನಗೆ ಒದಗಿರುವ ವಿರಹತಾಪವನ್ನು ಹೋಗಲಾಡಿಸು.

೪-೫. ಇಂತಹ ಮನೋಹರವಾದ ವಿವಾಹೋತ್ಸವ ಸಮಾರಂಭದಲ್ಲಿ ಎಲ್ಲರೂ ತಮ್ಮ ತಮ್ಮ ಪ್ರಿಯರೊಡನೆ ಕೂಡಿ ಆನಂದಪಡುತ್ತಿರುವರು. ಆದರೆ ನಾನೊಬ್ಬಳು ಮಾತ್ರ ಪತಿಯನ್ನು ಕಳೆದುಕೊಂಡು ದುಃಖಪಡುತ್ತಿರುವೆನು. ಆದುದರಿಂದ ನನಗೆ ಪತಿಯ ದರ್ಶನವನ್ನು ಅನುಗ್ರಹಿಸಿ ಹಿಂದೆ ನೀನಾಡಿದ ಮಾತನ್ನು ಉಳಿಸಿಕೋ. ನೀನು ದೀನಬಂಧುವಾದುದರಿಂದ ದೀನಳಾದ ನನಗೆ ಸಹಾಯಮಾಡು.

೬-೭. ಪರಪ್ರಭುವಾದ ನಿನ್ನನ್ನು ಬಿಟ್ಟರೆ ಚರಾಚರಾತ್ಮಕವಾದ ಮೂರು ಲೋಕದಲ್ಲಿ ನನ್ನ ದುಃಖವನ್ನು ನಾಶಮಾಡುವವರು ಯಾರು? ಆದುದರಿಂದ ದೀನ ನಾಥನಾದ ನಿನ್ನನ್ನು ಶರಣುಹೊಂದಿರುವೆನು. ದಯೆಯಿಟ್ಟು ನನ್ನ ದುಃಖವನ್ನು ನಿವಾರಿಸು. ಇಂತಹ ಸಂತೋಷಸಮಯದಲ್ಲಿ, ಅದರಲ್ಲಿಯೂ ಸರ್ವರಿಗೂ ಆನಂದ ದಾಯಕವಾಗಿರುವ ನಿನ್ನ ವಿವಾಹ ಸಮಯದಲ್ಲಿ ಎಲ್ಲೆಲ್ಲಿಯೂ ಪೂರ್ಣಾನಂದವು ತುಂಬಿತುಳುಕಾಡುತ್ತಿರುವಲ್ಲಿ, ನನ್ನ ಪತಿಯನ್ನು ಬದುಕಿಸಿ ನಾನೂ ಸಂತೋಷಪಡು ವಂತೆ ಮಾಡು.

ಜೀವಿತೇ ಮಮ ನಾಥೇ ಹಿ ಪಾರ್ವತ್ಯಾ ಪ್ರಿಯಯಾ ಸಹ ।
ಸುವಿಹಾರಂ ಪ್ರಪೂರ್ಣಶ್ಚ ಭವಿಷ್ಯತಿ ನ ಸಂಶಯಃ ॥ ೮ ॥

ಸರ್ವಂ ಕರ್ತುಂ ಸಮರ್ಥೋಽಸಿ ಯತಸ್ತ್ವಂ ಪರಮೇಶ್ವರಃ ।
ಕಿಂ ಬಹೂಕ್ತ್ಯಾತ್ರ ಸರ್ವೇಶ ಜೀವಯಾಶು ಪತಿಂ ಮಮ ॥ ೯ ॥

॥ ಬ್ರಹ್ಮೋವಾಚ ॥

ತದಿತ್ಯುಕ್ತ್ವಾ ಕಾಮಭಸ್ಮ ದದೌ ಸಗ್ರಂಥಿಬಂಧನಂ ।
ರುರೋದ ಪುರತಶ್ಯಂಭೋರ್ನಾಥ ನಾಥೇತ್ಯುದೀರ್ಯ ಚ ॥ ೧೦ ॥

ರತಿರೋದನಮಾಕರ್ಣ್ಯ ಸರಸ್ವತ್ಯಾದಯಸ್ತ್ರಿಯಃ ।
ರುರುದುಸ್ಸಕಲಾ ದೇವ್ಯಃ ಪ್ರೋಚುರ್ದೀನತರಂ ವಚಃ ॥ ೧೧ ॥

॥ ದೇವ್ಯ ಊಚುಃ ॥

ಭಕ್ತವತ್ಸಲನಾಮಾ ತ್ವಂ ದೀನಬಂಧುರ್ದಯಾನಿಧಿಃ ।
ಕಾಮಂ ಜೀವಯ ಸೋತ್ಸಾಹಾಂ ರತಿಂ ಕುರು ನಮೋಽಸ್ತು ತೇ ॥ ೧೨ ॥

---

೮-೯ ನನ್ನ ಪತಿಯು ಬದುಕಿಬಂದರೆ ನನಗೆಷ್ಟು ಆನಂದವಾಗುವುದು! ನೀನೂ ಸಹ ಪಾರ್ವತಿಯೊಡನೆ ಸ್ವಚ್ಛಂದವಾಗಿ ವಿಹರಿಸಬಹುದು. ನನ್ನ ಅಭಿಲಾಷೆಯೂ ಪೂರ್ಣವಾಗುವುದು. ನಿನ್ನ ವಿಹಾರವೂ ತಡೆಯಿಲ್ಲದೆ ನೆರವೇರುವುದು. ನೀನು ಏನನ್ನು ಬೇಕಾದರೂ ಮಾಡಲು ಸಮರ್ಥನಾಗಿರುವೆ. ನೀನು ಲೋಕೇಶ್ವರನಲ್ಲವೇ? ಇನ್ನು ಹೆಚ್ಚಾಗಿ ನಾನು ಹೇಳಲಾರೆ. ಜಾಗ್ರತೆಯಾಗಿ ನನ್ನ ಪತಿಯನ್ನು ಬದುಕಿಸಿಕೊಡು ಎಂದು ಪ್ರಾರ್ಥಿಸಿದಳು.

೧೦. ಬ್ರಹ್ಮನು ಹೇಳಿದನು:—ಈರೀತಿಯಾಗಿ ಹೇಳಿ ರತಿಯು ಸೆರಗಿನಲ್ಲಿ ಗಂಟುಹಾಕಿಕೊಂಡಿದ್ದ ತನ್ನ ಪತಿಯ ಬೂದಿಯನ್ನು ತೆಗೆದುಕೊಂಡು ಅಯ್ಯೋ! ನಾಥನೇ, ಎಂದು ಸಂಬೋಧಿಸುತ್ತಾ ಈಶ್ವರನ ಎದುರಿಗೆ ಗಟ್ಟಿಯಾಗಿ ಅತ್ತಳು.

೧೧. ರತಿಯು ಅಳುತ್ತಿರುವುದನ್ನು ನೋಡಿ ಸರಸ್ವತಿಯೇ ಮೊದಲಾದ ಸ್ತ್ರೀಯರೂ ಸಹ ಅಳಲು ಪ್ರಾರಂಭಿಸಿದರು. ಹಾಗೂ ಶಂಕರನನ್ನು ಕುರಿತು ದೈನ್ಯದಿಂದ ಇಂತೆಂದರು.

೧೨. ಓ ಸ್ವಾಮಿಯೇ, ನೀನು ಭಕ್ತವತ್ಸಲನೆಂದು ಹೆಸರಾದವನು. ದುಃಖಿಗಳ ದುಃಖವನ್ನು ನಿವಾರಿಸಿ ದಯಾನಿಧಿ ಎಂದು ಪ್ರಸಿದ್ಧಿಗೊಂಡಿರುವೆ. ಆದುದರಿಂದ

॥ ಬ್ರಹ್ಮೋವಾಚ ॥

ಇತಿ ತದ್ವಚನಂ ಶ್ರುತ್ವಾ ಪ್ರಸನ್ನೋಽಭೂನ್ಮಹೇಶ್ವರಃ ।
ಕೃಪಾದೃಷ್ಟಿಂ ಚಕಾರಾಶು ಕರುಣಾಸಾಗರಃ ಪ್ರಭುಃ ॥ ೧೩ ॥

ಸುಧಾದೃಷ್ಟ್ಯಾ ಶೂಲಭೃತೋ ಭಸ್ಮತೋ ನಿರ್ಗತಃ ಸ್ಮರಃ ।
ತದ್ರೂಪವೇಷಚಿನ್ಹಾತ್ಮಾ ಸುಂದರೋಽದ್ಭುತಮೂರ್ತಿಮಾನ್ ॥ ೧೪ ॥

ತದ್ರೂಪಂ ಚ ತದಾಕಾರಂ ಸಸ್ಮಿತಂ ಸುಧನುಶ್ಶರಂ ।
ದೃಷ್ಟ್ವಾ ಪತಿಂ ರತಿಸ್ತಂ ಚ ಪ್ರಣನಾಮ ಮಹೇಶ್ವರಂ ॥ ೧೫ ॥

ಕೃತಾರ್ಥಾಭೂಚ್ಛಿವಂ ದೇವಂ ತುಷ್ಟಾವ ಚ ಕೃತಾಂಜಲಿಃ ।
ಪ್ರಾಣನಾಥಪ್ರದಂ ಪತ್ಯಾ ಜೀವಿತೇನ ಪುನಃ ಪುನಃ ॥ ೧೬ ॥

---

ಈಗ ಮನ್ಮಥನನ್ನು ಬದುಕಿಸಿ ದುಃಖಿತಳಾದ ರತಿಯನ್ನು ಸಂತೋಷಗೊಳಿಸು. ಇಗೋ ನಿನಗೆ ನಮಸ್ಕಾರವು ಎಂದರು.

೧೩. ಬ್ರಹ್ಮನು ಹೇಳಿದನು:—ಆ ದೇವಿಯರ ಮಾತನ್ನು ಕೇಳಿ ಕರುಣಾಸಾಗರನಾದ ಪರಶಿವನು ಪ್ರಸನ್ನನಾಗಿ ಬೇಗನೆ ಕೃಪಾಕಟಾಕ್ಷವನ್ನು ಬೀರಿದನು.

೧೪. ಆ ಶೂಲಿಯ ಅಮೃತಕಟಾಕ್ಷಗಳಿಂದ ಮನ್ಮಥನು ಬೂದಿಯಿಂದ ಈಚೆಗೆ ಎದ್ದು ಬಂದನು. ಅವನ ಆಕಾರವೂ ಅಲಂಕಾರವೂ ಹಿಂದಿನಂತೆಯೇ ಇದ್ದಿತು. ಹಿಂದಿನಂತೆಯೇ ಸುಂದರಮೂರ್ತಿಯೂ ಆಗಿದ್ದನು.

೧೫. ಹಿಂದಿನಂತೆಯೇ ಆ ಸುಂದರರೂಪ, ಮನೋಹರಾಕಾರ, ಮಧುರ ಮಂದಹಾಸ ಇವೆಲ್ಲವೂ ಹಿಂದಿನಂತೆಯೇ ಇದ್ದುವು. ಆ ಧನುರ್ಬಾಣಗಳಿಂದ ಕೂಡಿರುವ ತನ್ನ ಪತಿಯಾದ ಮನ್ಮಥನನ್ನು ನೋಡಿ ಆನಂದದಿಂದ ರತಿಯು ನಮಸ್ಕರಿಸಿದಳು. ಅನಂತರ ಮಹೇಶ್ವರನನ್ನೂ ನಮಸ್ಕರಿಸಿದಳು.

೧೬. ಕೃತಾರ್ಥಳಾದೆನೆಂದು ತಿಳಿದು ರತಿಯು ಅಂಜಲಿಬದ್ಧಳಾಗಿ ದೇವದೇವನಾದ ಶಿವನನ್ನು ಸ್ತೋತ್ರಮಾಡಿದಳು. ಪತಿಯನ್ನು ಬದುಕಿಸಿಕೊಟ್ಟುದುದಕ್ಕಾಗಿ ಪುನಃ ಪುನಃ ಶಿವನನ್ನು ನಮಸ್ಕರಿಸಿದಳು.

ಕಾಮಸ್ಯ ಸ್ತುತಿಮಾಕರ್ಣ್ಯ ಸನಾರೀಕಸ್ಯ ಶಂಕರಃ ।
ಪ್ರಸನ್ನೋಽಭವದತ್ಯಂತಮುವಾಚ ಕರುಣಾರ್ದ್ರಧೀಃ ॥ ೧೭ ॥

॥ ಶಂಕರ ಉವಾಚ ॥

ಪ್ರಸನ್ನೋಽಹಂ ತವ ಸ್ತುತ್ಯಾ ಸನಾರೀಕಸ್ಯ ಚಿತ್ತಜ ।
ಸ್ವಯಂಭವ ವರಂ ಬ್ರೂಹಿ ವಾಂಛಿತಂ ತದ್ದದಾಮಿ ತೇ ॥ ೧೮ ॥

॥ ಬ್ರಹ್ಮೋವಾಚ ॥

ಇತಿ ಶಂಭುವಚಶ್ಶ್ರುತ್ವಾ ಮಹಾನಂದಸ್ಸ್ಮರಸ್ತತಃ ।
ಉವಾಚ ಸಾಂಜಲಿರ್ನಮ್ರೋ ಗದ್ಗದಾಕ್ಷರಯಾ ಗಿರಾ ॥ ೧೯ ॥

॥ ಕಾಮ ಉವಾಚ ॥

ದೇವದೇವ ಮಹಾದೇವ ಕರುಣಾಸಾಗರ ಪ್ರಭೋ ।
ಯದಿ ಪ್ರಸನ್ನಸ್ಸರ್ವೇಶೋ ಮಮಾನಂದಕರೋ ಭವ ॥ ೨೦ ॥

ಕ್ಷಮಸ್ವ ಮೇಽಪರಾಧಂ ಹಿ ಯಃ ಕೃತಶ್ಚ ಪುರಾ ವಿಭೋ ।
ಸ್ವಜನೇಷು ಪರಾಂ ಪ್ರೀತಿಂ ಭಕ್ತಿಂ ದೇಹಿ ಸ್ವಪಾದಯೋಃ ॥ ೨೧ ॥

---

೧೭. ರತಿಯೊಡನೆ ಕೂಡಿ ಮನ್ಮಥನು ಶಿವನನ್ನು ಸ್ತುತಿಸಲು, ಶಂಕರನು ಅತ್ಯಂತ ಪ್ರಸನ್ನನಾಗಿ ಕರುಣಾಕಟಾಕ್ಷವನ್ನು ಬೀರುತ್ತಾ ಮನ್ಮಥನನ್ನು ಕುರಿತು,

೧೮. ಶಂಕರನು ಹೇಳಿದನು :—ಎಲೈ ಮನ್ಮಥನೇ, ರತಿಯೊಡಗೂಡಿ ನೀನು ಮಾಡಿದ ಸ್ತುತಿಯಿಂದ ನಾನು ಸಂತುಷ್ಟನಾಗಿರುವೆನು. ನಿನಗಿಷ್ಟವಾದ ವರವನ್ನು ಕೇಳು, ಕೊಡುವೆನು ಎಂದನು.

೧೯. ಬ್ರಹ್ಮನು ಹೇಳಿದನು :—ಶಂಕರನು ಹೇಳಿದುದನ್ನು ಕೇಳಿ, ಮನ್ಮಥನು ಮಹದಾನಂದಪಟ್ಟು ಅಂಜಲಿಬದ್ಧನಾಗಿ ನಮ್ರತೆಯಿಂದ ಈಶ್ವರನನ್ನು ಕುರಿತು ಹೇಳಿದನು. ಆ ಸಮಯದಲ್ಲಿ ಆನಂದಾತಿಶಯದಿಂದ ಮಾತುಗಳು ತೊದಲುತ್ತಿರಲು,

೨೦-೨೧. ಮನ್ಮಥನು ಹೇಳಿದನು :—ದೇವದೇವನಾದ ಓ ಮಹೇಶ್ವರನೇ, ನೀನು ದಯಾಸಾಗರನು. ಸರ್ವೇಶ್ವರನಾದ ನೀನು ಪ್ರಸನ್ನನಾದುದು ನನಗೆ ಆನಂದವನ್ನುಂಟುಮಾಡಿರುವುದು. ಹಿಂದೆ ನಾನು ಮಾಡಿರುವ ಅಪರಾಧವನ್ನು ಕ್ಷಮಿಸು. ನಿನ್ನ ಭಕ್ತಜನಗಳಲ್ಲಿ ಪ್ರೀತಿಯನ್ನಿಟ್ಟು ನಿನ್ನ ಪಾದಾರವಿಂದಗಳಲ್ಲಿ ಅವರಿಗೆ ಭಕ್ತಿಯುಂಟಾಗುವಂತೆ ಮಾಡು ಎಂದನು.

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಸ್ಮರವಚಃ ಪ್ರಸನ್ನಃ ಪರಮೇಶ್ವರಃ ।
ಓಮಿತ್ಯುಕ್ತ್ವಾಬ್ರವೀತ್ತಂ ವೈ ವಿಹಸನ್ಕರುಣಾನಿಧಿಃ ॥ ೨೨ ॥

॥ ಈಶ್ವರ ಉವಾಚ ॥

ಹೇ ಕಾಮಾಹಂ ಪ್ರಸನ್ನೋಽಸ್ಮಿ ಭಯಂ ತ್ಯಜ ಮಹಾಮತೇ ।
ಗಚ್ಛ ವಿಷ್ಣುಸಮೀಪಂ ಚ ಬಹಿಃಸ್ಥಾನೇ ಸ್ಥಿತೋ ಭವ ॥ ೨೩ ॥

॥ ಬ್ರಹ್ಮೋವಾಚ ॥

ತಚ್ಛ್ರುತ್ವಾ ಶಿರಸಾ ನತ್ವಾ ಪರಿಕ್ರಮ್ಯ ಸ್ತುವನ್ವಿಭುಂ ।
ಬಹಿರ್ಗತ್ವಾ ಹರಿಂ ದೇವಾನ್ ಪ್ರಣಮ್ಯ ಸಮುಪಾಸ್ತ ಸಃ ॥ ೨೪ ॥

ಕಾಮಂ ಸಂಭಾಷ್ಯ ದೇವಾಶ್ಚ ದದುಸ್ತಸ್ಮೈ ಶುಭಾಶಿಷಂ ।
ವಿಷ್ಣ್ವಾದಯಃ ಪ್ರಸನ್ನಾಸ್ತೇ ಪ್ರೋಚುಃ ಸ್ಮೃತ್ವಾ ಶಿವಂ ಹೃದಿ ॥ ೨೫ ॥

॥ ದೇವಾ ಊಚುಃ ॥

ಧನ್ಯಸ್ತ್ವಂ ಸ್ಮರ ಸಂದಗ್ಧಃ ಶಿವೇನಾನುಗ್ರಹೀಕೃತಃ ।
ಜೀವಯಾಮಾಸ ಸತ್ತ್ವಾಂಶಕೃಪಾದೃಷ್ಟ್ಯಾಖಿಲೇಶ್ವರಃ ॥ ೨೬ ॥

---

೨೨-೨೩. ಬ್ರಹ್ಮನು ಹೇಳಿದನು :—ಮನ್ಮಥನು ಆಡಿದ ಮಾತನ್ನು ಕೇಳಿ ಪರಮೇಶ್ವರನು ಸಂತುಷ್ಟನಾಗಿ ಮುಗುಳ್ನಗೆಯಿಂದ ಅವನನ್ನು ಕುರಿತು, ನಿನ್ನ ಇಷ್ಟದಂತೆಯೇ ಆಗಲಿ. ಎಲೈ ಮನ್ಮಥನೇ, ನಾನು ಸಂತುಷ್ಟನಾಗಿರುವೆನು. ಭಯವನ್ನು ಬಿಡು. ಈಗ ನೀನು ವಿಷ್ಣುವಿನ ಸಮೀಪಕ್ಕೆ ಹೊರಡು. ಅನಂತರ ಹೊರಗಡೆ ಎಲ್ಲಿ ಬೇಕಾದರೂ ನಿರ್ಭಯನಾಗಿ ಸಂಚರಿಸು ಎಂದನು.

೨೪-೨೫. ಬ್ರಹ್ಮನು ಹೇಳಿದನು :—ಶಂಭುವಿನ ಅಪ್ಪಣೆಯಂತೆ ಮನ್ಮಥನು ಹೊರಗೆಬಂದು ಅಲ್ಲಿದ್ದ ವಿಷ್ಣುವೇ ಮೊದಲಾದ ದೇವತೆಗಳಿಗೆ ನಮಸ್ಕರಿಸಿದನು. ಅವರೆಲ್ಲರೂ ಮನ್ಮಥನನ್ನು ಮಾತನಾಡಿಸುತ್ತಾ ಅವನಿಗೆ ಶುಭಾಶೀರ್ವಾದಗಳನ್ನು ಮಾಡಿ ಸಂತುಷ್ಟರಾಗಿ ಮನ್ಮಥನನ್ನು ಕುರಿತು,

೨೬-೨೭. ದೇವತೆಗಳು ಹೇಳಿದರು :—ಎಲೈ ಮನ್ಮಥನೇ, ನೀನೇ ಧನ್ಯನು. ಯಾರು ನಿನ್ನನ್ನು ಸುಟ್ಟು ಭಸ್ಮಮಾಡಿದ್ದರೋ ಆ ಶಿವನೇ ನಿನ್ನನ್ನು ಬದುಕಿಸಿರು

ಸುಖದುಃಖದೋ ನ ಚಾನ್ಯೋऽಸ್ತಿ ಯತಸ್ಸ್ವಕೃತಭುಕ್ ಪುಮಾನ್ ।
ಕಾಲೇ ರಕ್ಷಾ ವಿವಾಹಶ್ಚ ನಿಷೇಕಃ ಕೇನ ವಾರ್ಯತೇ ॥ ೨೭ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ತೇ ಚ ಸಂಮಾನ್ಯ ತಂ ಸುಖೇನಾಮರಾಸ್ತದಾ ।
ಸಂತಸ್ಥುಸ್ತತ್ರ ವಿಷ್ಣ್ವಾದ್ಯಾಸ್ಸರ್ವೇ ಲಬ್ಧಮನೋರಥಾಃ ॥ ೨೮ ॥

ಸೋऽಪಿ ಪ್ರಮುದಿತಸ್ತತ್ರ ಸಮುವಾಸ ಶಿವಾಜ್ಞಯಾ ।
ಜಯಶಬ್ದೋ ನಮಶ್ಶಬ್ದಸ್ಸಾಧುಶಬ್ದೋ ಬಭೂವ ಹ ॥ ೨೯ ॥

ತತಶ್ಶಂಭುರ್ವಾಸಗೇಹೇ ವಾಮೇ ಸಂಸ್ಥಾಪ್ಯ ಪಾರ್ವತೀಂ ।
ಮಿಷ್ಟಾನ್ನಂ ಭೋಜಯಾಮಾಸ ತಂ ಚ ಸಾ ಚ ಮುದಾನ್ವಿತಾ ॥ ೩೦ ॥

---

ವನು. ಸತ್ಸ್ವರೂಪನಾದ ಅವನ ಅನುಗ್ರಹಕ್ಕೆ ನೀನು ಪಾತ್ರನಾಗಿರುವೆ. ಲೋಕದಲ್ಲಿ ಮನುಷ್ಯನು ಸುಖದುಃಖಗಳನ್ನು ಅನುಭವಿಸಲು ಅವನು ಮಾಡಿದ ಪುಣ್ಯಪಾಪಗಳೇ ಕಾರಣವು. ಯಾರೂ ಅದನ್ನು ಕೊಡಲಾರರು. ಹಾಗೆಯೇ ರಕ್ಷಣೆ, ವಿವಾಹ, ನಿಷೇಕ ಮುಂತಾದುವುಗಳೂ ಪುಣ್ಯವಶದಿಂದ ಪ್ರಾಪ್ತವಾಗುವವು. ಅದನ್ನು ಯಾರು ತಾನೇ ತಪ್ಪಿಸಬಲ್ಲರು? ಎಂದರು.

೨೮. ಬ್ರಹ್ಮನು ಹೇಳಿದನು:—ಈರೀತಿ ಹೇಳಿ, ಆ ದೇವತೆಗಳೆಲ್ಲರೂ ಮನ್ಮಥನನ್ನು ಗೌರವಿಸಿ, ತಮ್ಮ ಅಭೀಷ್ಟವು ನೆರವೇರಿದುದರಿಂದ ಸಂತೋಷಗೊಂಡು ಅಲ್ಲಿಯೇ ಇದ್ದರು.

೨೯. ಮನ್ಮಥನೂ ಸಂತೋಷಪಟ್ಟು ಶಿವನ ಅಪ್ಪಣೆಯಂತೆ ನಡೆದನು. ಆ ಸಮಯದಲ್ಲಿ ಜಯಜಯಾಕಾರಗಳೂ, ನಮಸ್ಕಾರವೆಂಬ ಶಬ್ದಗಳೂ, ಸಾಧು ಎಂಬ ಶಬ್ದಗಳೂ ಎಲ್ಲೆಲ್ಲಿಯೂ ಕೇಳಿಸಿದವು.

೩೦. ಅನಂತರ ಪರಮೇಶ್ವರನು ಸಂತೋಷದಿಂದಿರುವ ಪಾರ್ವತಿಯನ್ನು ತನ್ನೆಡಭಾಗದಲ್ಲಿ ಕುಳ್ಳಿರಿಸಿಕೊಂಡು ಅವಳೊಡನೆ ಮೃಷ್ಟಾನ್ನವನ್ನು ಭೋಜನ ಮಾಡಿದನು.

ಅಥ ಶಂಭುರ್ಭವಾಚಾರೀ ತತ್ರ ಕೃತ್ಯಂ ವಿಧಾಯ ತತ್ ।
ಮೇನಾಮಾಮಂತ್ರ್ಯ ಶೈಲಂ ಚ ಜನವಾಸಂ ಜಗಾಮ ಸಃ ॥ ೩೧ ॥

ಮಹೋತ್ಸವಸ್ತದಾ ಚಾಸೀದ್ವೇದಧ್ವನಿರಭೂನ್ಮುನೇ ।
ವಾದ್ಯಾನಿ ವಾದಯಾಮಾಸುರ್ಜನಾಶ್ಚಾತುರ್ವಿಧಾನಿ ಚ ॥ ೩೨ ॥

ಶಂಭುರಾಗತ್ಯ ಸ್ವಸ್ಥಾನಂ ವವಂದೇ ಚ ಮುನೀಂಸ್ತದಾ ।
ಹರಿಂ ಚ ಮಾಂ ಭವಾಚಾರಾದ್ವಂದಿತೋಽಭೂತ್ಸುರಾಧಿಭಿಃ ॥ ೩೩ ॥

ಜಯಶಬ್ದೋ ಬಭೂವಾಥ ನಮಶ್ಶಬ್ದಸ್ತಥೈವ ಚ ।
ವೇದಧ್ವನಿಶ್ಚ ಶುಭದಃ ಸರ್ವವಿಘ್ನವಿದಾರಣಃ ॥ ೩೪ ॥

ಅಥ ವಿಷ್ಣುರಹಂ ಶಕ್ರಸ್ಸರ್ವೇ ದೇವಾಶ್ಚ ಸರ್ಷಯಃ ।
ಸಿದ್ಧಾ ಉಪಸುರಾ ನಾಗಾಸ್ತುಷ್ಟುವುಸ್ತೇ ಪೃಥಕ್ಪೃಥಕ್ ॥ ೩೫ ॥

---

೩೧. ಸಂಸಾರಿಯಂತೆ ಅಲ್ಲಿ ಮಾಡಬೇಕಾದ ಊಟಉಪಚಾರಾದಿ ಕೆಲಸಗಳನ್ನು ಮುಗಿಸಿ, ಮೇನಕೆಯನ್ನೂ ಪರ್ವತರಾಜನನ್ನೂ ಬೀಳ್ಕೊಂಡು ಪಾರ್ವತಿಯೊಡನೆ ಜನವಾಸಕ್ಕೆ ಹೊರಟನು.

೩೨. ಜನರೆಲ್ಲರೂ ಆನಂದದಿಂದ ಉತ್ಸವವನ್ನು ಆಚರಿಸಿದರು. ಮುನಿಗಳೆಲ್ಲರೂ ವೇದಘೋಷವನ್ನು ಮಾಡಿದರು. ಚತುರ್ವಿಧವಾದ ನೃತ್ಯ, ಗೀತ, ವಾದ್ಯಾದಿಗಳು ಮೊಳಗಿದವು.

೩೩. ಆ ಶಂಭುವು ತನ್ನ ಸ್ಥಾನಕ್ಕೆ ಬಂದು ಲೋಕಾಚಾರದಂತೆ ಮುನಿಗಳನ್ನೂ, ನನ್ನನ್ನೂ ವಿಷ್ಣುವನ್ನೂ ನಮಸ್ಕರಿಸಿದನು. ದೇವತೆಗಳೆಲ್ಲರೂ ಶಿವನನ್ನು ವಂದಿಸಿದರು.

೩೪. ಆ ಸಮಯದಲ್ಲಿ ಜಯಶಬ್ದವೂ, ನಮಃ ಎಂಬ ಶಬ್ದವೂ, ವೇದಘೋಷವೂ, ಶುಭಪ್ರದವಾದ ಅನೇಕ ವಾದ್ಯಗಳೂ ಭೋರ್ಗರೆದವು.

೩೫. ಆ ಸಮಯದಲ್ಲಿ ವಿಷ್ಣುವೂ, ನಾನೂ, ಇಂದ್ರನೇ ಮೊದಲಾದ ದೇವತೆಗಳೂ, ಸಿದ್ಧರೂ, ಋಷಿಗಳೂ, ನಾಗರೂ ಸಹ ಆ ಪರಶಿವನನ್ನು ಬೇರೆಬೇರೆಯಾಗಿ ಸ್ತುತಿಸಿದರು.

॥ ದೇವಾ ಊಚುಃ ॥

ಜಯ ಶಂಭೋಽಖಿಲಾಧಾರ ಜಯ ನಾಮ ಮಹೇಶ್ವರ ।
ಜಯ ರುದ್ರ ಮಹಾದೇವ ಜಯ ವಿಶ್ವಂಭರ ಪ್ರಭೋ ॥ ೩೬ ॥

ಜಯ ಕಾಲೀಪತೇ ಸ್ವಾಮಿನ್ ಜಯಾನಂದಪ್ರವರ್ಧಕ ।
ಜಯ ತ್ರ್ಯಂಬಕ ಸರ್ವೇಶ ಜಯ ಮಾಯಾಪತೇ ವಿಭೋ ॥ ೩೭ ॥

ಜಯ ನಿರ್ಗುಣ ನಿಷ್ಕಾಮ ಕಾರಣಾತೀತ ಸರ್ವಗ ।
ಜಯ ಲೀಲಾಖಿಲಾಧಾರ ಧೃತರೂಪ ನಮೋಽಸ್ತು ತೇ ॥ ೩೮ ॥

ಜಯ ಸ್ವಭಕ್ತಸತ್ಕಾಮಪ್ರದೇಶ ಕರುಣಾಕರ ।
ಜಯ ಸಾನಂದಸದ್ರೂಪ ಜಯ ಮಾಯಾಗುಣಾಕೃತೇ ॥ ೩೯ ॥

ಜಯೋಗ್ರ ಮೃಡ ಸರ್ವಾತ್ಮನ್ ದೀನಬಂಧೋ ದಯಾನಿಧೇ ।
ಜಯಾವಿಕಾರ ಮಾಯೇಶ ವಾಙ್ಮನೋಽತೀತವಿಗ್ರಹ ॥ ೪೦ ॥

---

೩೬-೩೭. ದೇವತೆಗಳು ಹೇಳಿದರು :—ಜಗದಾಧಾರಭೂತನಾದ ಎಲೈ ಪರ ಶಿವನೇ, ನಿನಗೆ ಜಯವಾಗಲಿ. ನೀನು ಮಹಾದೇವನು, ವಿಶ್ವಂಭರನು, ಕಾಲೀಪತಿಯಾದ ನಿನಗೆ ಜಯವಾಗಲಿ. ಆನಂದದಾಯಕನೂ, ತ್ರ್ಯಂಬಕನೂ, ಸರ್ವೇಶ್ವರನೂ ನೀನೇ ಆಗಿರುವೆ. ಸರ್ವವ್ಯಾಪಕನೂ ಮಾಯಾಪತಿಯೂ ಆಗಿರುವ ನಿನಗೆ ಜಯವಾಗಲಿ.

೩೮-೪೦. ನಿರ್ಗುಣನೂ, ನಿರ್ವಿಕಾರನೂ, ನಿಷ್ಕಾಮನೂ ಆದ ನಿನಗೆ ಜಯವಾಗಲಿ. ನೀನು ನೀರೂಪನಾದರೂ ಜಗತ್ತಿನ ರಕ್ಷಣೆಗೆ ರೂಪವನ್ನು ಧರಿಸಿರುವ ಅಖಿಲಾಧಾರನಾದ ನಿನಗೆ ನಮಸ್ಕಾರಗಳು. ನೀನು ಕರುಣಾಕರನು. ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವ ಆನಂದರೂಪನಾದ ನಿನಗೆ ನಮಸ್ಕಾರಗಳು. ನೀನು ಮಾಯಾಗುಣಾಕೃತಿಯು. ಉಗ್ರ, ಮೃಡ ಎಲ್ಲವೂ ನಿನ್ನ ಹೆಸರುಗಳೇ. ದೀನಬಂಧುವೂ, ದಯಾನಿಧಿಯೂ ಆದ ನಿನಗೆ ಜಯವಾಗಲಿ. ನೀನು ಅವಿಕಾರನು. ವಾಙ್ಮನಸ್ಸುಗಳಿಗೆ ಅಗೋಚರನಾಗಿರುವೆ. ಇಂತಹ ನಿನಗೆ ನಮಸ್ಕಾರಗಳು.

॥ ಬ್ರಹ್ಮೋವಾಚ ॥

ಇತಿ ಸ್ತುತ್ವಾ ಮಹೇಶಾನಂ ಗಿರಿಜಾನಾಯಕಂ ಪ್ರಭುಂ ।
ಸಿಷೇವಿರೇ ಪರಪ್ರೀತ್ಯಾ ವಿಷ್ಣ್ವಾದ್ಯಾಸ್ತೇ ಯಥೋಚಿತಂ ॥ ೪೧ ॥

ಅಥ ಶಂಭುರ್ಮಹೇಶಾನೋ ಲೀಲಾತ್ತತನುರೀಶ್ವರಃ ।
ದದೌ ಮಾನವರಂ ತೇಷಾಂ ಸರ್ವೇಷಾಂ ತತ್ರ ನಾರದ ॥ ೪೨ ॥

ವಿಷ್ಣ್ವಾದ್ಯಾಸ್ತೇಽಖಿಲಾಸ್ತಾತ ಪ್ರಾಪ್ಯಾಜ್ಞಾಂ ಪರಮೇಶಿತುಃ ।
ಅತಿಹೃಷ್ಟಾಃ ಪ್ರಸನ್ನಾಸ್ಯಾಃ ಸ್ವಸ್ಥಾನಂ ಜಗ್ಮುರಾದೃತಾಃ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಏಕಪಂಚಾಶತ್ತಮೋಽಧ್ಯಾಯಃ



---

೪೧. ಬ್ರಹ್ಮನು ಹೇಳಿದನು :— ದೇವತೆಗಳೆಲ್ಲರೂ ಗಿರಿಜಾಪತಿಯಾದ ಶಂಕರನನ್ನು ಅತ್ಯಂತ ಭಕ್ತಿಯಿಂದ ಸ್ತೋತ್ರಮಾಡಿದರು.

೪೨. ಎಲೈ ನಾರದನೇ, ಲೀಲಾಮಾನುಷವಿಗ್ರಹನಾದ ಆ ಶಿವನು ಆ ದೇವತೆಗಳಿಗೆಲ್ಲರಿಗೂ ಬೇಕುಬೇಕಾದ ವರಗಳನ್ನು ಕರುಣಿಸಿದನು.

೪೩. ಅನಂತರ ವಿಷ್ಣುವೇ ಮೊದಲಾದ ದೇವತೆಗಳು ಪರಮೇಶ್ವರನ ಅನುಜ್ಞೆಯನ್ನು ಪಡೆದು ಅತ್ಯಾನಂದಭರಿತರಾಗಿ ತಮ್ಮತಮ್ಮ ಸ್ಥಾನಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಐವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ
## ರುದ್ರಸಂಹಿತಾಯಾಂ ಪಾರ್ವತೀಖಂಡೇ
## ದ್ವಿಪಂಚಾಶತ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥ ಶೈಲವರಸ್ತಾತ ಹಿಮವಾನ್ಭಾಗ್ಯಸತ್ತಮಃ ।
ಪ್ರಾಂಗಣಂ ರಚಯಾಮಾಸ ಭೋಜನಾರ್ಥಂ ವಿಚಕ್ಷಣಃ ॥ ೧ ॥

ಮಾರ್ಜನಂ ಲೇಪನಂ ಸಮ್ಯಕ್ಕಾರಯಾಮಾಸ ತಸ್ಯ ಸಃ ।
ಸ ಸುಗಂಧದ್ರವ್ಯೈರಲಂಚಕ್ರೇ ನಾನಾವಸ್ತುಭಿರಾದರಾತ್ ॥ ೨ ॥

ಅಥ ಶೈಲಸ್ಸುರಾನ್ಸರ್ವಾನನ್ಯಾನಪಿ ಚ ಸೇಶ್ವರಾನ್ ।
ಭೋಜನಾಯಾಹ್ವಯಾಮಾಸ ಪುತ್ರೈಶ್ಶೈಲೈಃ ಪರ್ವೈರಪಿ ॥ ೩ ॥

---

### ಐವತ್ತೆರಡನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ನಾರದನೇ, ಭಾಗ್ಯಶಾಲಿಯಾದ ಹಿಮವಂತನು ವಿವಾಹಾಂಗವಾದ ಸಂತೋಷಸಮಾರಂಭದಲ್ಲಿ ಭೋಜನಸಮಾರಂಭಕ್ಕಾಗಿ ಒಂದು ದೊಡ್ಡ ಅಂಗಳವನ್ನು ಸಿದ್ಧಪಡಿಸಿದನು.

೨. ಆ ಅಂಗಳವನ್ನು ಸಾರಿಸಿ ಗುಡಿಸಿ ಪನ್ನೀರಿನಿಂದ ಚಿಮುಕಿಸಿ ಅನೇಕವಾದ ಮಂಗಳದ್ರವ್ಯಗಳಿಂದ ಅಲಂಕರಿಸಿದನು.

೩-೪. ಅನಂತರ ಹಿಮವಂತನು ತನ್ನ ಪುತ್ರರೊಡನೆ ಹೊರಟು ಪರ್ವತರಾಜರುಗಳನ್ನೂ ಅನೇಕ ಶ್ರೀಮಂತರನ್ನೂ ಆ ಭೋಜನಸಮಾರಂಭಕ್ಕೆ ಆಹ್ವಾನ

ಶೈಲಾಹ್ವಾನಮುಥಾಕರ್ಣ್ಯ ಸ ಪ್ರಭುಸ್ಸಾಚ್ಯುತೋ ಮುನೇ ।
ಸರ್ವೈಸ್ಸುರಾದಿಭಿಸ್ತತ್ರ ಭೋಜನಾಯ ಯಯೌ ಮುದಾ ॥ ೪ ॥

ಗಿರಿಃ ಪ್ರಭುಂ ಚ ಸರ್ವಾನ್ ತಾನ್ ಸುಸತ್ಕೃತ್ಯ ಯಥಾವಿಧಿ ।
ಮುದೋಪವೇಶಯಾಮಾಸ ಸತ್ಪೀಠೇಷು ಗೃಹಾಂತರೇ ॥ ೫ ॥

ನಾನಾಸುಭೋಜ್ಯವಸ್ತೂನಿ ಪರಿವಿಷ್ಯ ಚ ತತ್ಪುನಃ ।
ಸಾಂಜಲಿರ್ಭೋಜನಾಯಾಜ್ಞಾಂ ಚಕ್ರೇ ವಿಜ್ಞಪ್ತಿಮಾನತಃ ॥ ೬ ॥

ಅಥ ಸಮ್ಮಾನಿತಾಸ್ತತ್ರ ದೇವಾ ವಿಷ್ಣುಪುರೋಗಮಾಃ ।
ಸದಾಶಿವಂ ಪುರಸ್ಕೃತ್ಯ ಬುಭುಜುಸ್ಸಕಲಾಶ್ಚ ತೇ ॥ ೭ ॥

ತದಾ ಸರ್ವೇ ಹಿ ಮಿಲಿತಾ ಐಕಪದ್ಯೇನ ಸರ್ವಶಃ ।
ಪಂಕ್ತಿಭೂತಾಶ್ಚ ಬುಭುಜುರ್ವಿಹಸಂತಃ ಪೃಥಕ್ಪೃಥಕ್ ॥ ೮ ॥

---

ಮಾಡಿದನು. ಹಿಮವಂತನ ಆಹ್ವಾನವನ್ನು ಮನ್ನಿಸಿ ಈಶ್ವರನು, ವಿಷ್ಣುವೇ ಮೊದಲಾದ ದೇವತೆಗಳೊಡನೆ ಅಲ್ಲಿಗೆ ದಯಮಾಡಿಸಿದನು.

೫. ಹಿಮವಂತನು ಪರಮೇಶ್ವರನನ್ನೂ ದೇವತೆಗಳನ್ನೂ ಎದುರುಗೊಂಡು ಅರ್ಘ್ಯ ಪಾದ್ಯಾಚಮನಾದಿಗಳಿಂದ ಪೂಜಿಸಿ, ಮನೆಯೊಳಕ್ಕೆ ಕರೆದುಕೊಂಡುಹೋಗಿ ಅವರವರಿಗೆ ಉಚಿತವಾದ ಪೀಠಗಳಲ್ಲಿ ಕುಳ್ಳರಿಸಿದನು.

೬. ಒಳ್ಳೊಳ್ಳೆಯ ರುಚಿಕರವಾದ ಭಕ್ಷ್ಯಭೋಜ್ಯಗಳನ್ನು ಬಡಿಸಿದನಂತರ ಹಿಮವಂತನು ಕೈಮುಗಿದುಕೊಂಡು ಎಲ್ಲರೂ ಊಟಮಾಡುವಂತೆ ಪ್ರಾರ್ಥಿಸಿಕೊಂಡನು.

೭. ಅವನ ಪ್ರಾರ್ಥನೆಯಂತೆ ವಿಷ್ಣುವೇ ಮೊದಲಾದ ದೇವತೆಗಳು ಪರಮೇಶ್ವರನನ್ನು ವಂದಿಸಿ, ಅವನು ಮೊದಲು ಊಟಮಾಡಲು ಪ್ರಾರಂಭಿಸಲು ಎಲ್ಲರೂ ಊಟಕ್ಕೆ ಕುಳಿತರು,

೮. ಆಮೇಲೆ ಆಹ್ವಾನಿತರಾದವರೆಲ್ಲರೂ ಪಂಕ್ತಿಪಂಕ್ತಿಯಾಗಿ ಕುಳಿತು ಆನಂದದಿಂದ ವಿನೋದವಾಗಿ ಮಾತನಾಡುತ್ತಾ ಭೋಜನಮಾಡಿದರು.

ನಂದೀಭೃಂಗಿವೀರಭದ್ರವೀರಭದ್ರಗಣಾಃ ಪೃಥಕ್ ।
ಬುಭುಜುಸ್ತೇ ಮಹಾಭಾಗಾಃ ಕುತೂಹಲಸ್ಸಮನ್ವಿತಾಃ ॥ ೯ ॥

ದೇವಾ ಸೇಂದ್ರಾ ಲೋಕಪಾಲಾ ನಾನಾಶೋಭಾಸಮನ್ವಿತಾಃ ।
ಬುಭುಜುಸ್ತೇ ಮಹಾಭಾಗ ನಾನಾಹಾಸ್ಯರಸೈಸ್ಸಹ . ॥ ೧೦ ॥

ಸರ್ವೇ ಚ ಮುನಯೋ ವಿಪ್ರಾ ಭೃಗ್ವಾದ್ಯಾ ಋಷಯಸ್ತಥಾ ।
ಬುಭುಜುಃ ಪ್ರೀತಿತಸ್ಸರ್ವೇ ಪೃಥಕ್ಪಂಕ್ತಿಗತಾಸ್ತದಾ ॥ ೧೧ ॥

ತಥಾ ಚಂಡೀಗಣಾಸ್ಸರ್ವೇ ಬುಭುಜುಃ ಕೃತಭೋಜನಾಃ ।
ಕುತೂಹಲಂ ಪ್ರಕುರ್ವಂತೋ ನಾನಾಹಾಸ್ಯಕರಾ ಮುದಾ ॥ ೧೨ ॥

ಏವಂ ತೇ ಭುಕ್ತವಂತಶ್ಚಾಚಮ್ಯ ಸರ್ವೇ ಮುದಾನ್ವಿತಾಃ ।
ವಿಶ್ರಾಮಾರ್ಥಂ ಗತಾಃ ಪ್ರೀತ್ಯಾ ವಿಷ್ಣ್ವಾದ್ಯಾಸ್ಸ್ವಂ ಸ್ವಮಾಶ್ರಮಂ ॥ ೧೩ ॥

---

೯. ನಂದಿ, ಭೃಂಗಿ, ವೀರಭದ್ರ, ಅವನ ಗಣಗಳು ಎಲ್ಲರೂ ಕುಳಿತು ಕುತೂಹಲದಿಂದ ಭೋಜನಮಾಡಿದರು.

೧೦. ಇಂದ್ರಾದಿ ದೇವತೆಗಳೂ, ಲೋಕಪಾಲಕರೂ ಅನೇಕ ವಿಧವಾದ ವೇಷ ಭೂಷಣಗಳಿಂದಲಂಕೃತರಾಗಿ ಕುಳಿತು ಹಾಸ್ಯವಾಗಿ ಮಾತನಾಡುತ್ತಾ ಊಟಮಾಡಿದರು.

೧೧. ಭೃಗುವೇ ಮೊದಲಾದ ಮುನಿಗಳೆಲ್ಲರೂ ಬೇರೆಬೇರೆ ಸಾಲುಗಳಲ್ಲಿ ಕುಳಿತು ಸಂತೋಷದಿಂದ ಭೋಜನಮಾಡಿದರು.

೧೨. ಚಂಡಿಯ ಗಣದವರೆಲ್ಲರೂ ನಾನಾವಿಧವಾಗಿ ಪರಸ್ಪರ ಸಲ್ಲಾಪಗಳನ್ನು ಮಾಡುತ್ತಾ ಊಟಮಾಡಿದರು.

೧೩. ಈ ರೀತಿಯಾಗಿ ವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಸಂತೋಷದಿಂದ ಊಟಮಾಡಿದನಂತರ ಆಚಮನವನ್ನು ಮಾಡಿ ವಿಶ್ರಾಂತಿಯನ್ನು ಪಡೆಯಲು ತಮಗಾಗಿ ಹಾಕಿರುವ ಬಿಡಾರಗಳಿಗೆ ಆನಂದದಿಂದ ತೆರಳಿದರು.

ಮೇನಾಜ್ಞಯಾ ಸ್ತ್ರಿಯಸ್ಸಾಧ್ವ್ಯಶ್ಶಿವಂ ಸಂಪ್ರಾರ್ಥ್ಯ ಭಕ್ತಿತಃ ।
ಗೇಹೇ ನಿವಾಸಯಾಮಾಸುರ್ವಾಸಾಖ್ಯೇ ಪರಮೋತ್ಸವೇ ॥ ೧೪ ॥

ರತ್ನಸಿಂಹಾಸನೇ ಶಂಭುರ್ಮೇನಾದತ್ತೇ ಮನೋಹರೇ ।
ಸನ್ನಿಧಾಯ ಮುದಾ ಯುಕ್ತೋ ದದೃಶೇ ವಾಸಮಂದಿರಂ ॥ ೧೫ ॥

ರತ್ನಪ್ರದೀಪಶತಕೈರ್ಜ್ವಲದ್ಭಿರ್ಜ್ವಲಿತಂ ಶ್ರಿಯಾ ।
ರತ್ನಪಾತ್ರಘಟಾಕೀರ್ಣಂ ಮುಕ್ತಾಮಣಿವಿರಾಜಿತಂ ॥ ೧೬ ॥

ರತ್ನದರ್ಪಣಶೋಭಾಢ್ಯಂ ಮಂಡಿತಂ ಶ್ವೇತಚಾಮರೈಃ ।
ಮುಕ್ತಾಮಣಿಸುಮಾಲಾಭಿರ್ವೇಷ್ಟಿತಂ ಪರಮರ್ಧಿಮತ್ ॥ ೧೭ ॥

ಅನೌಪಮ್ಯಂ ಮಹಾದಿವ್ಯಂ ವಿಚಿತ್ರಂ ಸುಮನೋಹರಂ ।
ಚಿತ್ತಾಹ್ಲಾದಕರಂ ನಾನಾರಚನಾರಚಿತಸ್ಥಲಂ ॥ ೧೮ ॥

---

೧೪. ಸ್ತ್ರೀಯರೆಲ್ಲರೂ ಸಹ ಊಟವಾದನಂತರ ಮೇನಕೆಯ ಅನುಜ್ಞೆಯನ್ನು ಪಡೆದು ಭಕ್ತಿಯಿಂದ ಶಿವನನ್ನು ಧ್ಯಾನಿಸುತ್ತಾ ವಿಶ್ರಾಂತಿಯನ್ನು ತೆಗೆದುಕೊಳ್ಳಲು ಆ ವಾಸವೆಂಬ ಮನೆಗೆ ಹೋದರು.

೧೫. ಶಂಭುವೂ ಸಹ ಮೇನಕೆಯು ಸಿದ್ಧಪಡಿಸಿದ ಮನೋಹರವಾದ ರತ್ನ ಸಿಂಹಾಸನದಲ್ಲಿ ಕುಳಿತು ಆ ವಾಸಮಂದಿರವನ್ನು ಅತ್ಯಾನಂದಭರಿತನಾಗಿ ನೋಡಿದನು.

೧೬-೧೭. ಆ ವಾಸಮಂದಿರದಲ್ಲಿ ಅಲ್ಲಲ್ಲಿಯೇ ರತ್ನಖಚಿತವಾದ ಕಂಬಗಳಲ್ಲಿ ದೀಪಗಳು ಉರಿಯುತ್ತಿದ್ದವು. ಅದರ ಬೆಳಕಿನಿಂದ ಮಂದಿರವು ಬೆಳಗುತ್ತಿತ್ತು. ರತ್ನದ ಪಾತ್ರೆಗಳನ್ನೂ, ರತ್ನಖಚಿತ ಘಟಾದಿಗಳನ್ನೂ ಅಲಂಕಾರಕ್ಕೋಸ್ಕರವಾಗಿ ಇಟ್ಟಿದ್ದರು. ಮುತ್ತುಗಳಿಂದಲೂ ರತ್ನಮಣಿಗಳಿಂದಲೂ ಅಲಂಕರಿಸಿದ್ದರು. ಅಲ್ಲಲ್ಲಿಯೇ ರತ್ನಗಳನ್ನು ಹದ್ದಿರುವ ದೊಡ್ಡದೊಡ್ಡ ಕನ್ನಡಿಗಳನ್ನು ತೂಗುಹಾಕಿದ್ದರು. ಶ್ವೇತಚಾಮರಗಳನ್ನು ತಗುಲಹಾಕಿದ್ದರು. ಮುತ್ತಿನ ಮತ್ತು ರತ್ನಮಣಿಗಳನ್ನು ಅಲ್ಲಲ್ಲಿಯೇ ಗೊಂಚಲುಗೊಂಚಲಾಗಿ ತೂಗುಹಾಕಿದ್ದರು.

೧೮-೨೦. ಅದರಂತೆ ರಮ್ಯವಾದ ಮಂದಿರವು ಮತ್ತಾವುದೂ ಇರಲಿಲ್ಲ. ಚಿತ್ರವಿಚಿತ್ರವೂ ಸುಮನೋಹರವೂ ಮನಸ್ಸಿಗೆ ಆನಂದವನ್ನುಂಟುಮಾಡುವುದೂ

ಶಿವದತ್ತವರಸ್ಯೈವ ಪ್ರಭಾವಮತುಲಂ ಪರಂ ।
ದರ್ಶಯಂತಂ ಸಮುಲ್ಲಾಸಿ ಶಿವಲೋಕಾಭಿಧಾನಕಂ ॥ ೧೯ ॥

ನಾನಾಸುಗಂಧಸದ್ದ್ರವ್ಯೈರ್ವಾಸಿತಂ ಸುಪ್ರಕಾಶಕಂ ।
ಚಂದನಾಗರುಸಂಯುಕ್ತಂ ಪುಷ್ಪಶಯ್ಯಾಸಮನ್ವಿತಂ ॥ ೨೦ ॥

ನಾನಾಚಿತ್ರವಿಚಿತ್ರಾಢ್ಯಂ ನಿರ್ಮಿತಂ ವಿಶ್ವಕರ್ಮಣಾ ।
ರತ್ನೇಂದ್ರಸಾರರಚಿತೈ ರಚಿತಂ ಹಾರಕೈರ್ವರೈಃ ॥ ೨೧ ॥

ಕುತ್ರಚಿತ್ಸುರನಿರ್ಮಾಣಂ ವೈಕುಂಠಂ ಸುಮನೋಹರಂ ।
ಕುತ್ರಚಿಚ್ಚ ಬ್ರಹ್ಮಲೋಕಂ ಲೋಕಪಾಲಪುರಂ ಕ್ವಚಿತ್ ॥ ೨೨ ॥

ಕೈಲಾಸಂ ಕುತ್ರಚಿದ್ರಮ್ಯಂ ಕುತ್ರಚಿಚ್ಛಕ್ರಮಂದಿರಂ ।
ಕುತ್ರಚಿಚ್ಛಿವಲೋಕಂ ಚ ಸರ್ವೋಪರಿ ವಿರಾಜಿತಂ ॥ ೨೩ ॥

---

ಆದ ಅನೇಕ ದೃಶ್ಯಗಳು ಅಲ್ಲಿ ಪ್ರಕಾಶಿಸುತ್ತಿದ್ದವು. ಅನೇಕ ವಿಧವಾದ ಚಿತ್ರ, ಶಿಲ್ಪ ಮೊದಲಾದ ಕಲಾಕೌಶಲವು ಬಹಳ ಆನಂದವನ್ನುಂಟುಮಾಡುತ್ತಿತ್ತು. ಆ ಪರಶಿವನ ವರದಿಂದಲೇನಾದರೂ ಈರೀತಿ ಇರುವುದೋ ಎನ್ನುವಂತೆ ಆ ಮಂದಿರವು ಅತುಲ ಪ್ರಭಾವದಿಂದ ಮೆರೆಯುತ್ತಿತ್ತು. ಆ ಮಂದಿರದ ಒಂದು ಪ್ರದೇಶಕ್ಕೆ ಶಿವಲೋಕ ವೆಂದು ಹೆಸರಿದ್ದಿತು. ಅನೇಕ ವಿಧವಾದ ಪರಿಮಳದ್ರವ್ಯಗಳನ್ನು ಚಿಮುಕಿಸಿದ್ದುದ ರಿಂದ ಮನೋಹರವಾದ ವಾಸನೆಯು ಬರುತ್ತಿತ್ತು. ಚಂದನ, ಅಗರು ಮುಂತಾ ದುವುಗಳ ಹೊಗೆಯನ್ನು ಹಾಕಿದ್ದರು. ಅಲ್ಲಲ್ಲಿಯೇ ನಾನಾವಿಧವಾದ ಹೂಗಳಿಂದ ಹಾಸಿಗೆಗಳನ್ನು ರಚಿಸಿದ್ದರು.

೨೧-೨೩. ಈ ವಾಸಮಂದಿರವನ್ನು ವಿಶ್ವಕರ್ಮನು ನಿರ್ಮಿಸಿ ತನ್ನ ಕಲಾ ಕೌಶಲವನ್ನು ತೋರಿಸಿದ್ದನು. ಅಲ್ಲಲ್ಲಿಯೇ ಅನೇಕ ಚಿತ್ರಗಳನ್ನು ಬರೆದಿದ್ದನು. ಒಂದುಕಡೆ ಮನೋಹರವಾಗಿ ವೈಕುಂಠವನ್ನು ಚಿತ್ರಿಸಿದ್ದನು. ಮತ್ತೊಂದು ಕಡೆ ಬ್ರಹ್ಮಲೋಕದ ದೃಶ್ಯವನ್ನೂ, ಇನ್ನೊಂದೆಡೆ ಅಷ್ಟದಿಕ್ಪಾಲಕರ ಸೌಧಗಳನ್ನೂ ಚಿತ್ರಿ ಸಿದ್ದನು. ಬೇರೊಂದುಕಡೆ ಕೈಲಾಸಪರ್ವತವನ್ನೂ, ಹಾಗೆಯೇ ಅಮರಾವತಿಯನ್ನೂ, ಶಿವಲೋಕವನ್ನೂ ಬಹುರಮ್ಯವಾಗಿ ಚಿತ್ರಿಸಿದ್ದನು.

ಏತಾದೃಶಗೃಹಂ ಸರ್ವದೃಷ್ಟ್ವಾಶ್ಚರ್ಯಂ ಮಹೇಶ್ವರಃ ।
ಪ್ರಶಂಸನ್ ಹಿಮಶೈಲೇಶಂ ಪರಿತುಷ್ಟೋ ಬಭೂವ ಹ ॥ ೨೪ ॥

ತತ್ರಾತಿರಮಣೀಯೇ ಚ ರತ್ನಪರ್ಯಂಕ ಉತ್ತಮೇ ।
ಅಶಯಿಷ್ಟ ಮುದಾ ಯುಕ್ತೋ ಲೀಲಯಾ ಪರಮೇಶ್ವರಃ ॥ ೨೫ ॥

ಹಿಮಾಚಲಶ್ಚ ಸ್ವಭ್ರಾತ್ರ್ಯಾನ್ಭೋಜಯಾಮಾಸ ಕೃತ್ಸ್ನಶಃ ।
ಸರ್ವಾನನ್ಯಾಂಶ್ಚ ಸುಪ್ರೀತ್ಯಾ ಶೇಷಕೃತ್ಯಂ ಚಕಾರ ಹ ॥ ೨೬ ॥

ಏವಂ ಕುರ್ವತಿ ಶೈಲೇಶೇ ಸ್ವಪತಿ ಪ್ರೇಷ್ಠ ಈಶ್ವರೇ ।
ವ್ಯತೀತಾ ರಜನೀ ಸರ್ವಾ ಪ್ರಾತಃ ಕಾಲೋ ಬಭೂವ ಹ ॥ ೨೭ ॥

ಅಥ ಪ್ರಭಾತಕಾಲೇ ಚ ಧೃತ್ಯುತ್ಸಾಹಪರಾಯಣಾಃ ।
ನಾನಾಪ್ರಕಾರವಾದ್ಯಾನಿ ವಾದಯಾಂಚಕ್ರಿರೇ ಜನಾಃ ॥ ೨೮ ॥

---

೨೪. ಇಂತಹ ಸರ್ವಾಂಗಸುಂದರವಾದ ವಾಸಮಂದಿರವನ್ನು ನೋಡಿ ಈಶ್ವರನು ಆಶ್ಚರ್ಯಗೊಂಡು ಶೈಲರಾಜನನ್ನು ಪ್ರಶಂಸಿಸಿದನು.

೨೫. ಬಹಳ ಆಶ್ಚರ್ಯಪಡುತ್ತಾ ಪರಮೇಶ್ವರನು ಅತಿರಮಣೀಯವಾದ ಆ ರತ್ನಖಚಿತವಾದ ಮಂಚದಲ್ಲಿ ಆನಂದದಿಂದ ಮಲಗಿದನು.

೨೬. ಆಮೇಲೆ ಹಿಮವಂತನು ತನ್ನ ಸಹೋದರರನ್ನೂ ಇತರರನ್ನೂ ಕುಳ್ಳಿರಿಸಿ ವಿಶೇಷ ಉಪಚಾರಗಳಿಂದ ಭೋಜನಮಾಡಿಸಿದನು. ಭೋಜನಾನಂತರದ ಏರ್ಪಾಡುಗಳನ್ನೆಲ್ಲಾ ಮಾಡಿ ಮುಗಿಸಿದನು.

೨೭. ಒಂದುಕಡೆ ರತ್ನಪರ್ಯಂಕದಲ್ಲಿ ಶಂಕರನು ಮಲಗಿ ನಿದ್ರಿಸುತ್ತಿದ್ದನು. ಪರ್ವತರಾಜನು ಇನ್ನೂ ಕೆಲಸವನ್ನು ಮಾಡುತ್ತಲೇ ಇದ್ದನು. ಅಷ್ಟರಲ್ಲಿಯೇ ಬೆಳಗಾಯಿತು.

೨೮. ಜನರೆಲ್ಲರೂ ಉತ್ಸಾಹಗೊಂಡು ಒಬ್ಬೊಬ್ಬರಾಗಿ ಏಳಲು ಪ್ರಾರಂಭಿಸಿದರು. ವಾದ್ಯಗಾರರು ಮನೋಹರವಾಗಿ ಬೆಳಗಿನ ವಾದ್ಯಗಳನ್ನು ಬಾರಿಸಿದರು.

ಸರ್ವೇ ಸುರಾಃ ಸಮುತ್ತಸ್ಥುರ್ವಿಷ್ಣ್ವಾದ್ಯಾಸ್ಸಮುದಾನಿತಾಃ ।
ಸ್ವೇಷ್ಟಂ ಸಂಸ್ಮೃತ್ಯ ದೇವೇಶಂ ಸಜ್ಜೀಭೂತಾಸ್ಸಸಂಭ್ರಮಾಃ ॥ ೨೯ ॥

ಸ್ವವಾಹನಾನಿ ಸಜ್ಜಾನಿ ಕೈಲಾಸಂ ಗಂತುಮುತ್ಸುಕಾಃ ।
ಕೃತ್ವಾ ಸಂಪ್ರೇಷಯಾಮಾಸುರ್ಧರ್ಮಂ ಶಿವಸಮೀಪತಃ ॥ ೩೦ ॥

ವಾಸಗೇಹಮಥಾಗತ್ಯ ಧರ್ಮೋ ನಾರಾಯಣಾಜ್ಞಯಾ ।
ಉವಾಚ ಶಂಕರಂ ಯೋಗೀ ಯೋಗೀಶಂ ಸಮಯೋಚಿತಂ ॥ ೩೧ ॥

॥ ಧರ್ಮ ಉವಾಚ ॥

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಭವ ನಃ ಪ್ರಮಥಾಧಿಪ ।
ಜನಾವಾಸಂ ಸಮಾಗಚ್ಛ ಕೃತಾರ್ಥಂ ಕುರು ತತ್ರ ತಾನ್ ॥ ೩೨ ॥

॥ ಬ್ರಹ್ಮೋವಾಚ ॥

ಇತಿ ಧರ್ಮವಚಃ ಶ್ರುತ್ವಾ ವಿಜಹಾಸ ಮಹೇಶ್ವರಃ ।
ದದರ್ಶ ಕೃಪಯಾ ದೃಷ್ಟ್ಯಾ ತಲ್ಪಮುಜ್ಝಾಂಚಕಾರ ಹ ॥ ೩೩ ॥

---

೨೯-೩೦. ವಾದ್ಯಗಳ ಧ್ವನಿಯನ್ನು ಕೇಳಿ ದೇವತೆಗಳೆಲ್ಲರೂ ತಮಗಿಷ್ಟ ದೇವತೆಯಾದ ಪರಮೇಶ್ವರನನ್ನು ಸ್ಮರಿಸಿಕೊಳ್ಳುತ್ತಾ ಉತ್ಸಾಹದಿಂದ ಎದ್ದರು. ಕೈಲಾಸಕ್ಕೆ ಹೊರಡಲು ತಮ್ಮ ತಮ್ಮ ವಾಹನಗಳನ್ನು ಸಜ್ಜುಗೊಳಿಸಿಕೊಂಡರು. ಶಿವನನ್ನು ಎಬ್ಬಿಸಲು ಯಮಧರ್ಮನನ್ನು ಅಲ್ಲಿಗೆ ಕಳುಹಿಸಿಕೊಟ್ಟರು.

೩೧. ಧರ್ಮನು ವಿಷ್ಣುವಿನ ಅಪ್ಪಣೆಯಂತೆ ಶಿವನ ಮಲಗುವ ಮನೆಗೆ ಹೋಗಿ ಯೋಗೀಶ್ವರನಾದ ಶಿವನನ್ನು ಎಚ್ಚರಗೊಳಿಸಲು ಸಮಯೋಚಿತವಾದ ವಾಕ್ಯಗಳಿಂದ ಪ್ರಾರ್ಥಿಸಿದನು.

೩೨. ಧರ್ಮನು ಹೇಳಿದನು:—ಎಲೈ ಪ್ರಮಥಾಧಿಪನೇ, ಶುಭಕರವಾದ ಪ್ರಭಾತವು ಪ್ರಾಪ್ತವಾಗಿರುವುದು. ಏಳು, ಏಳು. ಜನಾವಾಸಕ್ಕೆ ತೆರಳಿ ಅಲ್ಲಿರುವವರನ್ನೆಲ್ಲರನ್ನೂ ಕೃತಾರ್ಥರನ್ನಾಗಿ ಮಾಡು ಎಂದನು.

೩೩-೩೪. ಬ್ರಹ್ಮನು ಹೇಳಿದನು:—ಧರ್ಮನ ಮಾತನ್ನು ಕೇಳಿ ಶಿವನು

ಉವಾಚ ವಿಹಸನ್ ಧರ್ಮ ತ್ವಮಗ್ರೇ ಗಚ್ಛ ತತ್ರ ಹ ।
ಅಹಮಪ್ಯಾಗಮಿಷ್ಯಾಮಿ ದ್ರುತಮೇವ ನ ಸಂಶಯಃ ॥ ೩೪ ॥

॥ ಬ್ರಹ್ಮೋವಾಚ ॥
ಇತ್ಯುಕ್ತಶ್ಶಂಕರೇಣಾಥ ಜನಾವಾಸಂ ಜಗಾಮ ಸಃ ।
ಸ್ವಯಂ ಗಂತುಮನಾ ಆಸೀತ್ತತ್ರ ಶಂಭುರಪಿ ಪ್ರಭುಃ ॥ ೩೫ ॥

ತಜ್ಜ್ಞಾತ್ವಾ ಸ್ತ್ರೀಗಣಸ್ಸೋಽಸೌ ತತ್ರಾಗಚ್ಛನ್ಮಹೋತ್ಸವಃ ।
ಚಕ್ರೇ ಮಂಗಲಗಾನಂ ಹಿ ಪಶ್ಯನ್ ಶಂಭುಪದದ್ವಯಂ ॥ ೩೬ ॥

ಅಥ ಶಂಭುರ್ಭವಾಚಾರೀ ಪ್ರಾತಃಕೃತ್ಯಂ ವಿಧಾಯ ಚ ।
ಮೇನಾಮಾಮಂತ್ರ್ಯ ಕುಧ್ರಂ ಚ ಜನಾವಾಸಂ ಜಗಾಮ ಸಃ ॥ ೩೭ ॥

ಮಹೋತ್ಸವಸ್ತದಾ ಚಾಸೀದ್ವೇದಧ್ವನಿರಭೂನ್ಮುನೇ ।
ವಾದ್ಯಾನಿ ವಾದಯಾಮಾಸುಃ ಜನಾಶ್ಚಾತುರ್ವಿಧಾನಿ ಚ ॥ ೩೮ ॥

---

ನಿದ್ದೆಯಿಂದೆಚ್ಚೆತ್ತು ಕೃಪಾದೃಷ್ಟಿಯನ್ನು ಬೀರುತ್ತಾ ಎಲೈ ಧರ್ಮನೇ, ನೀನು ನಡೆ. ನಾನೂ ಜಾಗ್ರತೆಯಾಗಿ ಬರುವೆನು ಎಂದು ಹೇಳಿದನು.

೩೫. ಬ್ರಹ್ಮನು ಹೇಳಿದನು :—ಶಂಕರನ ಅಪ್ಪಣೆಯನ್ನು ಪಡೆದು ಧರ್ಮನು ಜನಾವಾಸಕ್ಕೆ ಹೊರಟುಹೋದನು. ಅನಂತರ ಶಂಕರನೂ ಸಹ ಹೊರಡಲು ಸಿದ್ಧ ನಾದನು.

೩೬. ಆ ಸಮಯದಲ್ಲಿ ಸ್ತ್ರೀಯರೆಲ್ಲರೂ ಶಂಕರನ ಪಾದಕಮಲಗಳನ್ನು ನೋಡುವ ಕುತೂಹಲದಿಂದ ಅಲ್ಲಿಗೆ ಬಂದು ಮಂಗಳಗೀತೆಗಳನ್ನು ಹಾಡಿದರು.

೩೭-೩೮. ಎಲೈ ಮುನಿಯೇ, ಶಂಭುವು ಸಂಸಾರಿಗಳಂತೆ ಪ್ರಾತಃಕಾಲದಲ್ಲಿ ಮಾಡಬೇಕಾದ ಸಂಧ್ಯಾವಂದನಾದಿ ಕೃತ್ಯಗಳನ್ನು ನೆರವೇರಿಸಿ ಮೇನಕೆಯನ್ನು ಬೀಳ್ಕೊಂಡು ಜನಾವಾಸಕ್ಕೆ ಹೊರಟುಹೋದನು. ಆ ಸಮಯದಲ್ಲಿ ಅಲ್ಲಿರುವ ಜನರೆಲ್ಲರೂ ವಿವಿಧವಾದ ವಾದ್ಯಗಳನ್ನು ಬಾರಿಸಿದರು. ಮುನಿಗಳು ವೇದಘೋಷ ವನ್ನು ಮಾಡಿದರು.

ಶಂಭುರಾಗತ್ಯ ಸ್ವಸ್ಥಾನಂ ವವಂದೇ ಚ ಮುನೀಂಸ್ತದಾ ।
ಹರಿಂ ಚ ಮಾಂ ಭವಾಚಾರಾತ್ ವಂದಿತೋಽಭೂತ್ಸುರಾದಿಭಿಃ ॥ ೩೯ ॥

ಜಯಶಬ್ದೋ ಬಭೂವಾಥ ನಮಶ್ಶಬ್ದಸ್ತಥೈವ ಚ ।
ವೇದಧ್ವನಿಶ್ಚ ಶುಭದೋ ಮಹಾಕೋಲಾಹಲೋಽಭವತ್ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ದ್ವಿಪಂಚಾಶತ್ತಮೋಽಧ್ಯಾಯಃ



---

೩೯-೪೦. ಆ ಪರಶಿವನು ತನ್ನ ಆ ಸ್ಥಾನಕ್ಕೆ ಬಂದು ಪ್ರಪಂಚದ ಧರ್ಮ ರೀತಿಯಾಗಿ ಹರಿಯನ್ನೂ, ನನ್ನನ್ನೂ ನಮಸ್ಕರಿಸಿದನು. ಆ ಸಮಯದಲ್ಲಿ ಜಯ ಜಯಕಾರಗಳೂ, ನಮಸ್ಕಾರವೆಂಬ ಶಬ್ದವೂ ವೇದಧ್ವನಿಯೂ ತುಂಬಿಹೋದವು. ಜನಗಳೆಲ್ಲರೂ ಆನಂದದಿಂದ ಕೋಲಾಹಲವನ್ನು ಮಾಡಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ತ್ರಿಪಂಚಾಶತ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಥ ವಿಷ್ಣ್ವಾದಯೋ ದೇವಾ ಮುನಯಶ್ಚ ತಪೋಧನಾಃ ।
ಕೃತ್ವಾವಶ್ಯಕಕರ್ಮಾಣಿ ಯಾತ್ರಾಂ ಸಂಚೇನಿರೇ ಗಿರೇಃ ॥ ೧ ॥

ತತೋ ಗಿರಿವರಃ ಸ್ನಾತ್ವಾ ಸ್ವೇಷ್ಟಂ ಸಂಪೂಜ್ಯ ಯತ್ನತಃ ।
ಪೌರಬಂಧೂನ್ಸಮಾಹೂಯ ಜನಾವಾಸಂ ಯಯೌ ಮುದಾ ॥ ೨ ॥

ತತ್ರ ಪ್ರಭುಂ ಪ್ರಪೂಜ್ಯಾಥ ಚಕ್ರೇ ಸಂಪ್ರಾರ್ಥನಾಂ ಮುದಾ ।
ಕಿಯದ್ದಿನಾನಿ ಸಂತಿಷ್ಠ ಮದ್ಗೇಹೇ ಸಕಲೈಸ್ಸಹ ॥ ೩ ॥

---

## ಐವತ್ತಮೂರನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಬಳಿಕ ವಿಷ್ಣುವೇ ಮೊದಲಾದ ದೇವತೆಗಳೂ, ಋಷಿಗಳೂ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಹಿಮವಂತನನ್ನು ಬೀಳ್ಕೊಂಡು ಹೊರಟರು.

೨. ಹಿಮವಂತನೂ ಸಹ ಪ್ರಾತಃಸ್ನಾನವನ್ನು ಮಾಡಿ ಇಷ್ಟದೇವತೆಯನ್ನು ಪೂಜಿಸಿ ಪಟ್ಟಣದ ಪ್ರಮುಖರೊಡನೆಯೂ, ತನ್ನ ಬಂಧುಗಳೊಡನೆಯೂ ದೇವತೆಗಳಿದ್ದ ಜನಾವಾಸಕ್ಕೆ ಬಂದನು.

೩-೪. ಅಲ್ಲಿ ಮಹೇಶ್ವರನನ್ನು ಪೂಜಿಸಿ ಅವನನ್ನು ಕುರಿತು ಎಲೈ ಸ್ವಾಮಿಯೇ, ನಾನು ನಿನ್ನ ದರ್ಶನದಿಂದ ಕೃತಾರ್ಥನಾದೆನು. ನೀನು ದೇವತೆಗಳೊಡಗೂಡಿ ಅನೇಕ

ವಿಲೋಕನೇನ ತೇ ಶಂಭೋ ಕೃತಾರ್ಥೋಽಹಂ ನ ಸಂಶಯಃ ।
ಧನ್ಯಶ್ಚ ಯಸ್ಯ ಮದ್ಗೇಹೇ ಆಯಾತೋಽಸಿ ಸುರೈಸ್ಸಹ ॥ ೪ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಬಹು ಶೈಲೇಶಃ ಕರೌ ಬದ್ಧ್ವಾ ಪ್ರಣಮ್ಯ ಚ ।
ಪ್ರಭುಂ ನಿಮಂತ್ರಯಾಮಾಸ ಸಹ ವಿಷ್ಣುಸುರಾದಿಭಿಃ ॥ ೫ ॥

ಅಥ ತೇ ಮನಸಾ ಗತ್ವಾ ಶಿವಂ ಸಂಯುತಮಾದರಾತ್ ।
ಪ್ರತ್ಯೂಚುರ್ಮುನಯೋ ದೇವಾ ಹೃಷ್ಟಾ ವಿಷ್ಣುಸುರಾದಿಭಿಃ ॥ ೬ ॥

॥ ದೇವಾ ಊಚುಃ ॥

ಧನ್ಯಸ್ತ್ವಂ ಗಿರಿಶಾರ್ದೂಲ ತವ ಕೀರ್ತಿರ್ಮಹೀಯಸೀ ।
ತ್ವತ್ಸಮೋ ನ ತ್ರಿಲೋಕೇಷು ಕೋಽಪಿ ಪುಣ್ಯತಮೋ ಜನಃ ॥ ೭ ॥

ಯಸ್ಯ ದ್ವಾರಿ ಮಹೇಶಾನಃ ಪರಬ್ರಹ್ಮ ಸತಾಂ ಗತಿಃ ।
ಸಮಾಗತಸ್ಸದಾಸೈಶ್ಚ ಕೃಪಯಾ ಭಕ್ತವತ್ಸಲಃ ॥ ೮ ॥

---

ದಿನಗಳಿಂದ ನನ್ನ ಮನೆಯನ್ನಲಂಕರಿಸಿರುವೆ. ನಾನೇ ಧನ್ಯನು ಎಂಬುದಾಗಿ ಪ್ರಾರ್ಥಿಸಿದನು.

೫. ಬ್ರಹ್ಮನು ಹೇಳಿದನು:—ಈರೀತಿ ಹೇಳಿ, ಪರ್ವತರಾಜನು ಈಶ್ವರನನ್ನು ವಿನಯದಿಂದ ನಮಸ್ಕರಿಸಿದನು. ಅನಂತರ ವಿಷ್ಣುವೇ ಮೊದಲಾದ ದೇವತೆಗಳೊಡನೆ ಪರಮೇಶ್ವರನನ್ನು ಕಳುಹಿಸಿಕೊಟ್ಟನು.

೬. ಮುನಿಗಳೂ, ವಿಷ್ಣುವೇ ಮೊದಲಾದ ದೇವತೆಗಳೂ ಶಿವನ ಸಮೀಪದಲ್ಲಿರುವ ಪರ್ವತರಾಜನ ಹತ್ತಿರಕ್ಕೆ ಹೋಗಿ ಸಂತೋಷದಿಂದ ಇಂತೆಂದರು.

೭-೮. ಎಲೈ ಪರ್ವತರಾಜನೇ ನೀನೇ ಧನ್ಯನು. ನಿನ್ನ ಕೀರ್ತಿಯು ಅತುಲವಾದುದು. ಆ ಪರಮಪ್ರಭುವಾದ ಶಿವನೂ ಸಹ ನಿನ್ನ ಮನೆಯ ಬಾಗಿಲಿಗೆ ಬಂದಿರುವನು. ಸತ್ಪುರುಷರಿಗೆ ಮುಕ್ತಿದಾಯಕನಾದ ಪ್ರರಬ್ರಹ್ಮನೂ, ತನ್ನ ಭಕ್ತರೊಡನೆ ವಿಷ್ಣುವೂ ನಿನ್ನ ಮನೆಗೆ ಬಂದಿರಬೇಕಾದರೆ ನಿನ್ನಂತಹ ಪುಣ್ಯವಂತನಾವನಿರುವನು?

ಜನಾವಾಸೋಽತಿರಮ್ಯಶ್ಚ ಸನ್ಮಾನೋ ವಿವಿಧಃ ಕೃತಃ ।
ಭೋಜನಾನಿ ತ್ವಪೂರ್ವಾಣಿ ನ ವರ್ಣ್ಯಾನಿ ಗಿರೀಶ್ವರ ॥ ೯ ॥

ಚಿತ್ರಂ ನ ಖಲು ತತ್ರಾಸ್ತಿ ಯತ್ರ ದೇವೀ ಶಿವಾಂಬಿಕಾ ।
ಪರಿಪೂರ್ಣಮಶೇಷಂ ಚ ವಯಂ ಧನ್ಯಾ ಯದಾಗತಾಃ ॥ ೧೦ ॥

॥ ಬ್ರಹ್ಮೋವಾಚ ॥

ಇತ್ಥಂ ಪರಸ್ಪರಂ ತತ್ರ ಪ್ರಶಂಸಾಭವದುತ್ತಮಾ ।
ಉತ್ಸವೋ ವಿವಿಧೋ ಜಾತೋ ವೇದಸಾಧುಜಯಧ್ವನಿಃ ॥ ೧೧ ॥

ಅಭೂನ್ಮಂಗಲಗಾನಂ ಚ ನನರ್ತಾಪ್ಸರಸಾಂ ಗಣಃ ।
ನುತಿಂ ಚಕ್ರುರ್ಮಾಗಧಾದ್ಯಾ ದ್ರವ್ಯದಾನಮಭೂದ್ಬಹು ॥ ೧೨ ॥

ತತ ಆಮಂತ್ರ್ಯ ದೇವೇಶಂ ಸ್ವಗೇಹಮಗಮದ್ಗಿರಿಃ ।
ಭೋಜನೋತ್ಸವಮಾರೇಭೇ ನಾನಾವಿಧಿವಿಧಾನತಃ ॥ ೧೩ ॥

---

೯-೧೦. ನೀನು ನಮಗೆ ಬಿಡಾರಮಾಡಿಕೊಟ್ಟಿರುವ ಜನವಾಸವಂತೂ ಅತಿ ರಮ್ಯವಾಗಿರುವುದು. ಬಂದವರೆಲ್ಲರಿಗೂ ಅಪೂರ್ವವಾದ ಭೋಜನವು ನಡೆಯಿತು. ಅದೂ ಅಲ್ಲದೆ ಅನೇಕ ಸನ್ಮಾನಗಳನ್ನು ಮಾಡಿರುವೆ. ಅಂತೂ ಉಪಚಾರಗಳೆಲ್ಲವೂ ವರ್ಣನಾತೀತವು. ಸಾಕ್ಷಾತ್ ಪಾರ್ವತಿಯೇ ಇಲ್ಲಿರುವಾಗ ನೀನು ಮಾಡಿದ ಅಪೂರ್ವ ಸ್ವಾಗತವು ಏನೂ ಅತಿಶಯವಲ್ಲ. ಇಂತಹ ಪೂರ್ಣಾನಂದದಲ್ಲಿ ಭಾಗವಹಿಸಿದ ನಾವೆಲ್ಲರೂ ಧನ್ಯರು ಎಂದರು.

೧೧-೧೨. ಬ್ರಹ್ಮನು ಹೇಳಿದನು:— ಈ ರೀತಿಯಾಗಿ ಎಲ್ಲರೂ ಪರ್ವತರಾಜನನ್ನು ಹೊಗಳಿದರು. ಅಲ್ಲಿ ನಾನಾವಿಧವಾದ ಉತ್ಸವಗಳು ನಡೆದವು. ವೇದಘೋಷಗಳೂ, ಸಾಧುಶಬ್ದವೂ ಜಯಧ್ವನಿಗಳೂ ಮೊಳಗಿದವು. ಅಪ್ಸರಸ್ತ್ರೀಯರು ಮಂಗಲಗಾನಗಳನ್ನೂ ನರ್ತನಗಳನ್ನೂ ಮಾಡಿದರು. ವಂದಿಮಾಗಧರು ನಾನಾವಿಧವಾಗಿ ಸ್ತುತಿಸಿದರು.

೧೩-೧೪. ಹಿಮವಂತನು ಪರಮೇಶ್ವರನನ್ನು ಆಮಂತ್ರಿಸಿ ತನ್ನ ಮನೆಗೆ

ಭೋಜನಾರ್ಥಂ ಪ್ರಭುಂ ಪ್ರೀತ್ಯಾನಯಾಮಾಸ ಯಥೋಚಿತಂ ।
ಪರಿವಾರಸಮೇತಂ ಚ ಸಕುತೂಹಲಮೀಶ್ವರಂ ॥ ೧೪ ॥

ಪ್ರಕ್ಷಾಲ್ಯ ಚರಣೌ ಶಂಭೋರ್ವಿಷ್ಣೋರ್ಮಮ ವರಾದರಾತ್ ।
ಸರ್ವೇಷಾಮಮರಾಣಾಂ ಚ ಮುನೀನಾಂ ಚ ಯಥಾರ್ಥತಃ ॥ ೧೫ ॥

ಪರೇಷಾಂ ಚ ಗತಾನಾಂ ಚ ಗಿರೀಶೋ ಮಂಡಪಾಂತರೇ ।
ಆಸಯಾಮಾಸ ಸುಪ್ರೀತ್ಯಾ ತಾಂಸ್ತಾನ್ ಬಂಧುಭಿರನ್ವಿತಃ ॥ ೧೬ ॥

ಸುರಸೈರ್ವಿವಿಧಾನ್ನೈಶ್ಚ ತರ್ಪಯಾಮಾಸ ತಾನ್ಗಿರಿಃ ।
ಬುಭುಜುರ್ನಿಖಿಲಾಸ್ತೇ ವೈ ಶಂಭುನಾ ವಿಷ್ಣುನಾ ಮಯಾ ॥ ೧೭ ॥

ತದಾನೀಂ ಪುರನಾರ್ಯಶ್ಚ ಗಾಲೀದಾನಂ ವ್ಯಧುರ್ಮುದಾ ।
ಮೃದುವಾಣ್ಯಾ ಹಸಂತ್ಯಶ್ಚ ಪಶ್ಯಂತ್ಯೋ ಯತ್ನತಶ್ಚ ತಾನ್ ॥ ೧೮ ॥

ತೇ ಭುಕ್ತ್ವಾಚಮ್ಯ ವಿಧಿವದ್ಗಿರಿಮಾಮಂತ್ರ್ಯ ನಾರದ ।
ಸ್ವಸ್ಥಾನಂ ಪ್ರಯಯುಸ್ಸರ್ವೇ ಮುದಿತಾಸ್ತೃಪ್ತಿಮಾಗತಾಃ ॥ ೧೯ ॥

---

ಬಂದನು. ದೇವತೆಗಳಿಗೆಲ್ಲಾ ಭೋಜನವನ್ನೇರ್ಪಡಿಸಿದನು. ಈಶ್ವರನನ್ನು ಆದರದಿಂದ ಬರಮಾಡಿಕೊಂಡನು. ದೇವತೆಗಳೆಲ್ಲರನ್ನೂ ಆಹ್ವಾನಿಸಿದನು.

೧೫-೧೬. ಪರಮೇಶ್ವರನ ಚರಣಗಳನ್ನೂ, ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳ ಮತ್ತು ಮುನಿಗಳ ಪಾದಗಳನ್ನೂ ತೊಳೆದನು. ಅಲ್ಲಿಗೆ ಬಂದಿರುವ ಅತಿಥಿಗಳನ್ನೆಲ್ಲಾ ಸತ್ಕರಿಸಿ, ಪರ್ವತರಾಜನು ಆ ಭೋಜನಮಂಟಪದಲ್ಲಿ ತನ್ನ ಬಂಧುಬಳಗಗಳೊಡನೆ ಕುಳ್ಳಿರಿಸಿದನು.

೧೭. ದೇವತೆಗಳಿಗೆಲ್ಲಾ ವಿಧವಿಧವಾದ ರುಚಿಕರವಾದ ಭಕ್ಷ್ಯಭೋಜ್ಯಾದಿಗಳನ್ನು ಬಡಿಸಿ ಅವರನ್ನೆಲ್ಲಾ ತೃಪ್ತಿಪಡಿಸಿದನು. ನಾನೂ, ಈಶ್ವರನೂ, ವಿಷ್ಣುವೂ ಆನಂದದಿಂದ ಊಟಮಾಡಿದೆವು.

೧೮-೧೯. ಆ ಸಮಯದಲ್ಲಿ ಪುರನಾರಿಯರು ಮಂದಹಾಸದಿಂದ ಈಶ್ವರನನ್ನು ನೋಡುತ್ತಾ, ಗಾಳಿ ಬೀಸುತ್ತಿದ್ದರು. ಮೃದುವಾದ ಮಾತುಗಳನ್ನು ಆಡುತ್ತಾ ಬೀಗರ ಹಾಡುಗಳನ್ನು ಹೇಳುತ್ತಿದ್ದರು. ಅನಂತರ ಪರ್ವತರಾಜನನ್ನು ಬೀಳ್ಕೊಂಡು ತೃಪ್ತಿಯಿಂದ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

ಇತ್ಥಂ ತೃತೀಯೇ ಘಸ್ರೇಽಪಿ ಮಾನಿತಾಸ್ತೇಽಭವನ್ಮುನೇ ।
ಗಿರೀಶ್ವರೇಣ ವಿಧಿವದ್ದಾನಮಾನಾದರಾದಿಭಿಃ ॥ ೨೦ ॥

ಚತುರ್ಥೇ ದಿವಸೇ ಪ್ರಾಪ್ತೇ ಚತುರ್ಥೀಕರ್ಮ ಶುದ್ಧಿತಃ ।
ಬಭೂವ ವಿಧಿವದ್ಯೇನ ವಿನಾ ಖಂಡಿತ ಏವ ಸಃ ॥ ೨೧ ॥

ಉತ್ಸವೋ ವಿವಿಧಶ್ಚಾಸೀತ್ಸಾಧುವಾದಜಯಧ್ವನಿಃ ।
ಬಹುದಾನಂ ಸುಗಾನಂ ಚ ನರ್ತನಂ ವಿವಿಧಂ ತಥಾ ॥ ೨೨ ॥

ಪಂಚಮೇ ದಿವಸೇ ಪ್ರಾಪ್ತೇ ಸರ್ವೇ ದೇವಾ ಮುದಾನ್ವಿತಾಃ ।
ವಿಜ್ಞಪ್ತಿಂ ಚಕ್ರಿರೇ ಶೈಲಂ ಯಾತ್ರಾರ್ಥಮತಿಪ್ರೇಮತಃ ॥ ೨೩ ॥

ತದಾಕರ್ಣ್ಯ ಗಿರೀಶಶ್ಚೋವಾಚ ದೇವಾನ್ ಕೃತಾಂಜಲಿಃ ।
ಕಿಯದ್ದಿನಾನಿ ತಿಷ್ಠಂತು ಕೃಪಾಂ ಕರ್ವಂತು ಮಾಂ ಸುರಾಃ ॥ ೨೪ ॥

---

೨೦. ಈ ರೀತಿಯಾಗಿ ಮೂರನೆಯ ದಿನದ ಕಾರ್ಯಕ್ರಮವು ಅತ್ಯಾದರದಿಂದ ಜರುಗಿತು. ಪರ್ವತರಾಜನೂ ಅತಿಥಿಗಳನ್ನು ದಾನಮಾನಾದಿಸತ್ಕಾರಗಳಿಂದ ಆನಂದಪಡಿಸಿದನು.

೨೧-೨೨. ನಾಲ್ಕನೆಯ ದಿವಸದ ಕಾರ್ಯಕ್ರಮವೂ ಸಹ ಯಾವುದಕ್ಕೂ ಕೊರತೆಯಿಲ್ಲದಂತೆ ಜರುಗಿತು. ಅನೇಕ ವಿಧವಾದ ಉತ್ಸವಗಳೂ ಅನೇಕವಾದ ಜಯಜಯ ಧ್ವನಿಗಳೂ, ಅನೇಕ ದಾನಗಳೂ, ಗೀತನರ್ತನಾದಿಗಳೂ ಬಹಳ ವಿಜೃಂಭಣೆಯಿಂದ ನೆರವೇರಿದುವು.

೨೩. ಐದನೇ ದಿವಸವು ಪ್ರಾರಂಭವಾಗಲು ದೇವತೆಗಳೆಲ್ಲರೂ ತಮ್ಮ ತಮ್ಮ ಊರುಗಳಿಗೆ ಹೊರಡಲು ಪರ್ವತರಾಜನನ್ನು ಪ್ರೀತಿಪೂರ್ವಕವಾಗಿ ವಿಜ್ಞಾಪಿಸಿಕೊಂಡರು.

೨೪-೨೫. ದೇವತೆಗಳ ಮಾತನ್ನು ಕೇಳಿ ಪರ್ವತರಾಜನು ಅವರನ್ನು ಕುರಿತು ಎಲೈ ದೇವತೆಗಳಿರಾ, ದಯೆಯಿಟ್ಟು ಇನ್ನೂ ಕೆಲವು ದಿನ ಇಲ್ಲಿಯೇ ಇರಬೇಕು

ಇತ್ಯುಕ್ತ್ವಾ ಸ್ನೇಹತಸ್ತಾಂಶ್ಚ ಪ್ರಭುಂ ವಿಷ್ಣುಂ ಚ ಮಾಂ ಪರಾನ್ ।
ವಾಸಯಾಮಾಸ ದಿವಸಾನ್ ಬಹೂನ್ನಿತ್ಯಂ ಸಮಾದರಾತ್ ॥ ೨೫ ॥

ಇತ್ಥಂ ವ್ಯತೀಯುರ್ದಿವಸಾ ಬಹವೋ ವಸತಾಂ ಚ ತತ್ ।
ಸಪ್ತರ್ಷೀನ್ಪ್ರೇಷಯಾಮಾಸುರ್ಗಿರೀಶಾಂತೇ ತತಸ್ಸುರಾಃ ॥ ೨೬ ॥

ತೇ ತಂ ಸಂಬೋಧಯಾಮಾಸುರ್ಮೇನಾಂ ಚ ಸಮಯೋಚಿತಂ ।
ಶಿವತತ್ತ್ವಂ ಪರಂ ಪ್ರೋಚುಃ ಪ್ರಶಂಸನ್ನಿಧಿವನ್ಮುದಾ ॥ ೨೭ ॥

ಅಂಗೀಕೃತಂ ಪರೇಶೇನ ತತ್ತದ್ಬೋಧನತೋ ಮುನೇ ।
ಯಾತ್ರಾರ್ಥಮಗಚ್ಛಂಭುಶ್ಕೈಲೇಶಂ ಸಾಮರಾದಿಕಃ ॥ ೨೮ ॥

ಯಾತ್ರಾಂ ಕುರ್ವತಿ ದೇವೇಶೇ ಸ್ವಶೈಲಂ ಸಾಮರೇ ಶಿವೇ ।
ಉಚ್ಚೈ ರುರೋದ ಸಾ ಮೇನಾ ತಮುವಾಚ ಕೃಪಾನಿಧಿಂ ॥ ೨೯ ॥

---

ಎಂದು ಪ್ರೀತಿಪೂರ್ವಕವಾಗಿ ವಿಜ್ಞಾಪಿಸಿಕೊಂಡು ನನ್ನನ್ನೂ ವಿಷ್ಣುವನ್ನೂ ಅತಿಥಿಗಳನ್ನೂ ಬಹಳ ದಿವಸಗಳವರೆಗೂ ಅಲ್ಲಿಯೇ ಇರಿಸಿಕೊಂಡು ಆದರದಿಂದ ಸತ್ಕರಿಸಿದನು.

೨೬. ದೇವತೆಗಳು ಪರ್ವತರಾಜನ ಮಾತಿನಂತೆ ಬಹಳ ದಿವಸಗಳವರೆಗೂ ಅಲ್ಲಿಯೇ ಇದ್ದರು. ಆಮೇಲೆ ಆ ಹಿಮವಂತನ ಹತ್ತಿರಕ್ಕೆ ಸಪ್ತಋಷಿಗಳನ್ನು ಕಳುಹಿಸಿದರು.

೨೭-೨೮. ಅವರೆಲ್ಲರೂ ಹಿಮವಂತನನ್ನೂ ಮೇನಕೆಯನ್ನೂ ಪ್ರಶಂಸನೆ ಮಾಡುತ್ತಾ ಅವರಿಗೆ ಶಿವತತ್ತ್ವವನ್ನು ವಿವರಿಸಿದರು. ಪರಶಿವನು ಆ ಸಪ್ತಋಷಿಗಳ ಬೋಧನೆಯನ್ನಂಗೀಕರಿಸಿ ಕೈಲಾಸಕ್ಕೆ ದೇವತೆಗಳೊಡನೆ ಹೊರಡಲು ಸಿದ್ಧನಾಗಿ ಗಿರಿರಾಜನ ಅನುಮತಿಯನ್ನು ಪಡೆದನು.

೨೯. ಶಿವನು ದೇವತೆಗಳೊಡನೆ ಕೈಲಾಸಕ್ಕೆ ಹೊರಡಲು, ಮೇನಕೆಯು ಗಟ್ಟಿಯಾಗಿ ಅತ್ತಳು. ಕೃಪಾನಿಧಿಯಾದ ಪರಮೇಶ್ವರನನ್ನು ಕುರಿತು,

॥ ಮೇನೋವಾಚ ॥

ಕೃಪಾನಿಧೇ ಕೃಪಾಂ ಕೃತ್ವಾ ಶಿವಾಂ ಸಂಪಾಲಯಿಷ್ಯಸಿ ।
ಸಹಸ್ರದೋಷಂ ಪಾರ್ವತ್ಯಾ ಆಶುತೋಷಃ ಕ್ಷಮಿಷ್ಯಸಿ ॥ ೩೦ ॥

ತ್ವತ್ಪದಾಂಬುಜಭಕ್ತಾ ಚ ಮದ್ವತ್ಸಾ ಜನ್ಮಜನ್ಮನಿ ।
ಸ್ವಪ್ನೇ ಜ್ಞಾನೇ ಸ್ಮೃತಿರ್ನಾಸ್ತಿ ಮಹಾದೇವಂ ಪ್ರಭುಂ ವಿನಾ ॥ ೩೧ ॥

ತ್ವದ್ಭಕ್ತಿಶ್ರುತಿಮಾತ್ರೇಣ ಹರ್ಷಾಶ್ರುಪುಲಕಾನ್ವಿತಾ ।
ತ್ವನ್ನಿಂದಯಾ ಭವೇನ್ಮೌನಾ ಮೃತ್ಯುಂಜಯ ಮೃತಾ ಇವ ॥ ೩೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ಮೇನಕಾ ತಸ್ಮೈ ಸಮರ್ಪ್ಯ ಸ್ವಸುತಾಂ ತದಾ ।
ಅತ್ಯುಚ್ಚೈ ರೋದನಂ ಕೃತ್ವಾ ಮೂರ್ಛಾಮಾಪ ತಯೋಃ ಪುರಃ ॥ ೩೩ ॥

---

೩೦-೩೧. ಮೇನಕೆಯು ಹೇಳಿದಳು :—ಎಲೈ ಕರುಣಾನಿಧಿಯೇ, ಪಾರ್ವತಿಯಲ್ಲಿ ದಯೆಯಿಟ್ಟು ಅವಳನ್ನು ಕಾಪಾಡುತ್ತಿರು. ಒಂದುವೇಳೆ ಅವಳಲ್ಲಿ ಅನೇಕ ದೋಷಗಳು ಕಂಡುಬಂದರೂ ಸಹ ಅವುಗಳನ್ನೆಲ್ಲಾ ಕ್ಷಮಿಸಬೇಕು. ಅವಳು ನಿನ್ನ ಚರಣಕಮಲಗಳನ್ನೇ ಯಾವಾಗಲೂ ಧ್ಯಾನಮಾಡುವಳು. ಜನ್ಮ ಜನ್ಮದಲ್ಲಿಯೂ ನೀನೇ ಅವಳಿಗೆ ಪತಿಯು. ಸ್ವಪ್ನದಲ್ಲಿಯೂ, ಜಾಗ್ರದವಸ್ಥೆಯಲ್ಲಿಯೂ ಸಹ ನಿನ್ನನ್ನು ಬಿಟ್ಟು ಮತ್ತಾರನ್ನೂ ಅವಳು ಸ್ಮರಿಸುವುದಿಲ್ಲ.

೩೨. ನಿನ್ನ ಭಕ್ತಿಯುತವಾದ ಸ್ತೋತ್ರಗಳನ್ನು ಕೇಳಿದ ಮಾತ್ರದಿಂದ ಪಾರ್ವತಿಯು ಆನಂದಬಾಷ್ಪವನ್ನು ಸುರಿಸುವಳು. ರೋಮಾಂಚಿತಳಾಗುವಳು. ಆದರೆ ನಿನ್ನ ನಿಂದೆಯನ್ನು ಕೇಳಿದರೆ ಮೃತಳಾದವಳಂತೆ ಮೌನವನ್ನಾಚರಿಸುವಳು ಎಂದಳು.

೩೩. ಬ್ರಹ್ಮನು ಹೇಳಿದನು :—ಈರೀತಿಯಾಗಿ ಹೇಳಿ ಮೇನಕೆಯು ತನ್ನ ಮಗಳಾದ ಪಾರ್ವತಿಯನ್ನು ಈಶ್ವರನಿಗೆ ಸಮರ್ಪಿಸಿ, ಗಟ್ಟಿಯಾಗಿ ಅಳುತ್ತಾ ಅಲ್ಲಿಯೇ ಮೂರ್ಛೆಹೊಂದಿ ಬಿದ್ದಳು.

ಅಥ ಮೇನಾಂ ಬೋಧಯಿತ್ವಾ ತಾಮಾಮಂತ್ರ್ಯ ಗಿರಿಸ್ತಥಾ ।
ಚಕಾರ ಯಾತ್ರಾಂ ದೇವೈಶ್ಚ ಮಹೋತ್ಸವಪುರಸ್ಸರಂ ॥ ೩೪ ॥

ಅಥ ತೇ ನಿರ್ಜರಾಸ್ಸರ್ವೇ ಪ್ರಭುಣಾ ಸ್ವಗಣೈಸ್ಸಹ ।
ಯಾತ್ರಾಂ ಪ್ರಚಕ್ರಿರೇ ತೂಷ್ಣೀಂ ಗಿರಿಂ ಪ್ರತಿ ಶಿವಂ ದಧುಃ ॥ ೩೫ ॥

ಹಿಮಾಚಲಪುರೀಬಾಹ್ಯೋಪವನೇ ಹರ್ಷಿತಾಸ್ಸುರಾಃ ।
ಸೇಶ್ವರಾಸ್ಸೋತ್ಸವಾಸ್ತಸ್ಥುಃ ಪರ್ಯೈಕ್ಷಂತ ಶಿವಾಗಮಂ ॥ ೩೬ ॥

ಇತ್ಯುಕ್ತಾ ಶಿವಸದ್ಯಾತ್ರಾ ದೇವೈಸ್ಸಹ ಮುನೀಶ್ವರ ।
ಆಕರ್ಣಯ ಶಿವಯಾತ್ರಾಂ ವಿರಹೋತ್ಸವಸಂಯುತಾಂ ॥ ೩೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ತ್ರಿಪಂಚಾಶತ್ತಮೋಽಧ್ಯಾಯಃ



---

೩೪-೩೫. ಶಿವನು ಮೇನಕೆಯನ್ನು ಸಂತೈಸಿ ಅವಳನ್ನು ಬೀಳ್ಕೊಂಡು ದೇವತೆಗಳೊಡನೆ ಆನಂದದಿಂದ ಹೊರಟನು. ದೇವತೆಗಳೂ ತಮ್ಮ ತಮ್ಮ ಗಣಗಳೊಡನೆ ಕೂಡಿ ಈಶ್ವರನೊಡನೆ ಹೊರಟರು. ಈಶ್ವರನು ಪರ್ವತರಾಜನೊಡನೆ ಮಾತನಾಡುತ್ತಾ ನಿಧಾನವಾಗಿ ಬರುತ್ತಿದ್ದನು.

೩೬-೩೭. ದೇವತೆಗಳು ಜಾಗ್ರತೆಯಾಗಿ ಹೊರಟು ಹಿಮವತ್ಪರ್ವತದ ಹೊರಗಡೆ ಇರುವ ಉದ್ಯಾನಕ್ಕೆ ಬಂದು ಈಶ್ವರನ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಎಲೈ ನಾರದನೇ, ಈರೀತಿಯಾಗಿ ದೇವತೆಗಳೊಡನೆ ಶಿವನು ಪ್ರಯಾಣಮಾಡಿದುದನ್ನು ಹೇಳಿದೆನು. ಇನ್ನು ಆ ಶಿವನು ಪ್ರಯಾಣಮಾಡಿದುದನ್ನು ನೋಡಿ ಪಾರ್ವತಿಯ ವಿರಹದಿಂದ ದುಃಖಪಟ್ಟ ವಿಷಯವನ್ನು ವಿವರಿಸುತ್ತೇನೆ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಚತುಃಪಂಚಾಶತ್ತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಥ ಸಪ್ತರ್ಷಯಸ್ತೇ ಚ ಪ್ರೋಚುರ್ಹಿಮಗಿರೀಶ್ವರಂ ।
ಕಾರಯ ಸ್ವಾತ್ಮಜಾದೇವ್ಯಾ ಯಾತ್ರಾಮುದ್ಯೋಚಿತಾಂ ಗಿರೇ ॥ ೧ ॥

ಇತಿ ಶ್ರುತ್ವಾ ಗಿರೀಶೋ ಹಿ ಬುದ್ಧ್ವಾ ತದ್ವಿರಹಂ ಪರಂ ।
ವಿಷಣ್ಣೋಽಭೂನ್ಮಹಾಪ್ರೇಮ್ಣಾ ಕಿಯತ್ಕಾಲಂ ಮುನೀಶ್ವರ ॥ ೨ ॥

ಕಿಯತ್ಕಾಲೇನ ಸಂಪ್ರಾಪ್ಯ ಚೇತನಾಂ ಶೈಲರಾಟ್ ತತಃ ।
ತಥಾಸ್ತ್ವಿತಿ ಗಿರಾಮುಕ್ತ್ವಾ ಮೇನಾಂ ಸಂದೇಶಮಬ್ರವೀತ್ ॥ ೩ ॥

---

### ಐವತ್ತನಾಲ್ಕನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಸಪ್ತಋಷಿಗಳೆಲ್ಲರೂ ಆ ಹಿಮವಂತನನ್ನು ಕುರಿತು ಎಲೈ ಪರ್ವತರಾಜನೇ, ನಿನ್ನ ಮಗಳಾದ ಪಾರ್ವತಿಯನ್ನು ಸಹ ಈಶ್ವರ ನೊಡನೆ ಕಳುಹಿಸಿಕೊಡುವುದು ಯೋಗ್ಯವಾಗಿ ಕಾಣಿಸುತ್ತದೆ ಎಂದು ಹೇಳಿದರು

೨-೩. ಮುನಿಗಳ ಮಾತನ್ನು ಕೇಳಿ ಮಗಳು ಹೊರಟುಹೋಗುವಳೆಂದು ಪರ್ವತರಾಜನು ಬಹಳ ದುಃಖಗೊಂಡನು. ಬಹಳ ಹೊತ್ತಿನವರೆಗೂ ದುಃಖಿಸಿ ಅನಂತರ ಹಾಗೆಯೇ ಆಗಲೆಂದು ಹೇಳಿ, ಮೇನಕೆಗೆ ಈ ವಿಷಯವನ್ನು ಹೇಳಿಕಳು ಹಿಸಿದನು.

ಶೈಲಸಂದೇಶಮಾಕರ್ಣ್ಯ ಹರ್ಷಶೋಕವಶಾ ಮುನೇ ।
ಮೇನಾ ಸಂಯಾಪಯಾಮಾಸ ಕರ್ತುಮಾಸೀತ್ಸಮುದ್ಯತಾ ॥ ೪ ॥

ಶ್ರುತಿಸ್ಸ್ವಕುಲಜಾಚಾರಂ ಚಚಾರ ವಿಧಿವನ್ಮುನೇ ।
ಉತ್ಸವಂ ವಿವಿಧಂ ತತ್ರ ಸಾ ಮೇನಾ ಕ್ಷಿತಿಭೃತ್ಪ್ರಿಯಾ ॥ ೫ ॥

ಗಿರಿಜಾಂ ಭೂಷಯಾಮಾಸ ನಾನಾರತ್ನಾಂಶುಕೈರ್ವರೈಃ ।
ದ್ವಾದಶಾಭರಣೈಶ್ಚೈವ ಶೃಂಗಾರೈರ್ನೃಪಸಂಮಿತೈಃ ॥ ೬ ॥

ಮೇನಾಮನೋಗತಿಂ ಬುಧ್ವಾ ಸಾಧ್ವ್ಯೇಕಾ ದ್ವಿಜಕಾಮಿನೀ ।
ಗಿರಿಜಾಂ ಶಿಕ್ಷಯಾಮಾಸ ಪಾತಿವ್ರತ್ಯವ್ರತಂ ಪರಂ ॥ ೭ ॥

॥ ದ್ವಿಜಪತ್ನ್ಯುವಾಚ ॥

ಗಿರಿಜೇ ಶೃಣು ಸುಪ್ರೀತ್ಯಾ ಮದ್ವಚೋ ಧರ್ಮವರ್ಧನಂ ।
ಇಹಾಮುತ್ರಾನಂದಕರಂ ಶೃಣ್ವತಾಂ ಚ ಸುಖಪ್ರದಂ ॥ ೮ ॥

---

೪. ತನ್ನ ಪತಿಯ ಅಪ್ಪಣೆಯನ್ನು ಕೇಳಿ ಮೇನಕೆಗೆ ಹರ್ಷವೂ ದುಃಖವೂ ಏಕಕಾಲದಲ್ಲಿ ಬಂದೊದಗಿತು. ಆದರೂ ಪತಿಯ ಅಪ್ಪಣೆಯಂತೆ ನಡೆಯಲು ಸಿದ್ಧಳಾದಳು.

೫-೬. ವಿಧಿವತ್ತಾಗಿಯೂ, ಕುಲಾಚಾರವನ್ನನುಸರಿಸಿಯೂ ಮೇನಕೆಯು ಪತಿಯ ಮನೆಗೆ ತೆರಳಲಿರುವ ಪಾರ್ವತಿಗೆ ಅನೇಕ ಉತ್ಸವಗಳನ್ನು ಮಾಡಿದಳು. ಪಾರ್ವತಿಯನ್ನು ಅನೇಕವಿಧವಾದ ಆಭರಣಗಳಿಂದ ಅಲಂಕರಿಸಿದಳು. ಪೀತಾಂಬರಗಳನ್ನು ಉಡಿಸಿದಳು.

೭. ಆ ಸಮಯದಲ್ಲಿ ಒಬ್ಬ ಬ್ರಾಹ್ಮಣಸ್ತ್ರೀಯು ಮೇನಕೆಯ ಅಭಿಪ್ರಾಯದಂತೆ ಪಾರ್ವತಿಗೆ ಶ್ರೇಷ್ಠವಾದ ಪಾತಿವ್ರತ್ಯಧರ್ಮವನ್ನು ಉಪದೇಶಿಸಿದಳು.

೮-೯. ಬ್ರಾಹ್ಮಣಸ್ತ್ರೀಯು ಹೇಳಿದಳು:—ಎಲೌ ಗಿರಿಜೆ, ನಾನು ಹೇಳುವ ಮಾತನ್ನು ಆದರದಿಂದ ಕೇಳು. ಇದು ಧರ್ಮವರ್ಧನವಾದುದು. ಐಹಿಕಾಮುಷ್ಮಿಕ ಫಲಗಳನ್ನು ಒದಗಿಸಿ ಸುಖವನ್ನುಂಟುಮಾಡುವುದು. ಪತಿವ್ರತಾಸ್ತ್ರೀಯೇ ಎಲ್ಲರಿ

ಧನ್ಯಾ ಪತಿವ್ರತಾ ನಾರೀ ನಾನ್ಯಾ ಪೂಜ್ಯಾ ವಿಶೇಷತಃ ।
ಪಾವನೀ ಸರ್ವಲೋಕಾನಾಂ ಸರ್ವಪಾಪೌಘನಾಶಿನೀ ॥ ೯ ॥

ಸೇವತೇ ಯಾ ಪತಿಪ್ರೇಮ್ಣಾ ಪರಮೇಶ್ವರವಚ್ಛಿವೇ ।
ಇಹ ಭುಕ್ತ್ವಾಖಿಲಾನ್ಭೋಗಾನಂತೇ ಪತ್ಯಾ ಶಿವಾಂ ಗತಿಂ ॥ ೧೦ ॥

ಪತಿವ್ರತಾ ಚ ಸಾವಿತ್ರೀ ಲೋಪಾಮುದ್ರಾ ಹ್ಯರುಂಧತೀ ।
ಶಾಂಡಿಲ್ಯಾ ಶತರೂಪಾನುಸೂಯಾ ಲಕ್ಷ್ಮೀಸ್ಸ್ವಧಾ ಸತೀ ॥ ೧೧ ॥

ಸಂಜ್ಞಾ ಚ ಸುಮತಿಃ ಶ್ರದ್ಧಾ ಮೇನಾ ಸ್ವಾಹಾ ತಥೈವ ಚ ।
ಅನ್ಯಾ ಬಹ್ವ್ಯೋಽಪಿ ಸಾಧ್ವ್ಯೋ ಹಿ ನೋಕ್ತಾ ವಿಸ್ತಾರಜಾದ್ಭಯಾತ್ ॥ ೧೨ ॥

ಪಾತಿವ್ರತ್ಯವೃಷೇಣೈವ ತಾ ಗತಾಸ್ಸರ್ವಪೂಜ್ಯತಾಂ ।
ಬ್ರಹ್ಮವಿಷ್ಣುಹರೈಶ್ಚಾಪಿ ಮಾನ್ಯಾ ಜಾತಾ ಮುನೀಶ್ವರೈಃ ॥ ೧೩ ॥

---

ಗಿಂತಲೂ ಪೂಜ್ಯಳಾದವಳು. ಅವಳು ಲೋಕಪೂಜ್ಯಳು. ಅವಳ ದರ್ಶನದಿಂದ ಪಾಪಗಳೆಲ್ಲವೂ ನಾಶವಾಗುವುವು.

೧೦. ಯಾವ ಸ್ತ್ರೀಯು ಪತಿಯಲ್ಲಿ ಪ್ರೇಮವಿಟ್ಟು ಅವನೇ ಪರಶಿವನೆಂದು ಸೇವಿಸುವಳೋ ಅವಳು ಪತಿಯೊಡನೆ ಈ ಲೋಕದಲ್ಲಿ ಸಮಸ್ತ ಸುಖವನ್ನನುಭವಿಸಿ ಕೊನೆಗೆ ಪರಲೋಕದಲ್ಲಿಯೂ ಪತಿಯೊಡನೆ ಸುಖಿಸುವಳು.

೧೧-೧೨. ಪತಿವ್ರತೆಯೇ ಸಾವಿತ್ರಿಯು ಎಂದರೆ ಸಾವಿತ್ರಿಗೆ ಸಮನಾದವಳು. ಲೋಪಾಮುದ್ರಾ, ಅರುಂಧತೀ, ಶಾಂಡಿಲ್ಯಾ, ಶತರೂಪಾ, ಅನಸೂಯಾ, ಲಕ್ಷ್ಮೀ, ಸ್ವಧಾ, ಸಂಜ್ಞಾ, ಸುಮತಿ, ಶ್ರದ್ಧಾ, ಮೇನಾ, ಸ್ವಾಹಾ ಇವರೂ ಇನ್ನೂ ಅನೇಕ ಸಾಧ್ವಿಯರೂ ಶಿರೋಮಣಿಗಳು. ವಿಸ್ತಾರವಾಗುವುದೆಂಬ ಭಯದಿಂದ ಅವರೆಲ್ಲರ ಹೆಸರನ್ನೂ ಇಲ್ಲಿ ಹೇಳಲಾಗುವುದಿಲ್ಲ.

೧೩. ಪತಿವ್ರತಾಸ್ತ್ರೀಯರು ತಮ್ಮ ಪಾತಿವ್ರತ್ಯ ಧರ್ಮದಿಂದ ಲೋಕಪೂಜ್ಯರಾಗಿರುವರು. ಬ್ರಹ್ಮ, ವಿಷ್ಣು, ಶಿವ ಇವರುಗಳಿಂದಲೂ ಋಷಿಶ್ರೇಷ್ಠರುಗಳಿಂದಲೂ ಪತಿವ್ರತೆಯರು ಪೂಜಿಸಲ್ಪಡುತ್ತಿರುವರು.

ಸೇವ್ಯಸ್ತ್ವಯಾ ಪತಿಸ್ತಸ್ಮಾತ್ಸರ್ವದಾ ಶಂಕರಃ ಪ್ರಭುಃ ।
ದೀನಾನುಗ್ರಹಕರ್ತಾ ಚ ಸರ್ವಸೇವ್ಯಸ್ಸತಾಂ ಗತಿಃ ॥ ೧೪ ॥

ಮಹಾನ್ಪತಿವ್ರತಾಧರ್ಮಃ ಶ್ರುತಿಸ್ಮೃತಿಷು ನೋದಿತಃ ।
ಯಥೈಷ ವರ್ಣ್ಯತೇ ಶ್ರೇಷ್ಠೋ ನ ತಥಾನ್ಯೋಽಸಿ ನಿಶ್ಚಿತಂ ॥ ೧೫ ॥

ಭುಂಜ್ಯಾದ್ಭುಕ್ತೇ ಪ್ರಿಯೇ ಪತ್ಯೌ ಪಾತಿವ್ರತ್ಯಪರಾಯಣಾ ।
ತಿಷ್ಠೇತ್ತಸ್ಮಿಂಸ್ಥಿತೇ ನಾರೀ ಸರ್ವಥಾ ಸತಿ ತಿಷ್ಠತಿ ॥ ೧೬ ॥

ಸ್ವಪ್ಯಾತ್ಸ್ವಪತಿ ಸಾ ನಿತ್ಯಂ ಬುಧ್ಯೇತ್ತು ಪ್ರಥಮಂ ಸುಧೀಃ ।
ಸರ್ವಥಾ ತದ್ಧಿತಂ ಕುರ್ಯಾದಕೈತವಗತಿಃ ಪ್ರಿಯಾ ॥ ೧೭ ॥

ಅನಲಂಕೃತಮಾತ್ಮಾನಂ ದರ್ಶಯೇನ್ನ ಕ್ವಚಿಚ್ಛಿವೇ ।
ಕಾರ್ಯಾರ್ಥಂ ಪ್ರೇಷಿತೇ ತಸ್ಮಿನ್ಸ್ಥವೇಸ್ಮಂಡನವರ್ಜಿತಾ ॥ ೧೮ ॥

---

೧೪. ಎಲೌ ಗಿರಿಜೆ, ಆದುದರಿಂದ ನೀನು ಯಾವಾಗಲೂ ಪರಮಪ್ರಭುವಾದ ಶಂಕರನ ಸೇವೆಯನ್ನು ಮಾಡು. ಏಕೆಂದರೆ ಅವನು ದೀನರಕ್ಷಕನು, ಸರ್ವಪೂಜ್ಯನು. ಸತ್ಪುರುಷರುಗಳಿಗೆ ಮೋಕ್ಷದಾಯಕನು.

೧೫. ಶ್ರೇಷ್ಠವಾದ ಪಾತಿವ್ರತ್ಯಧರ್ಮವು ಶ್ರುತಿಸ್ಮೃತಿಗಳಲ್ಲೆಲ್ಲಿಯೂ ಹೇಳಿಲ್ಲ. ಇಂತಹ ಶ್ರೇಷ್ಠವಾದುದನ್ನು ನಾನು ಈಗ ನಿನಗೆ ಹೇಳುತ್ತೇನೆ. ಮತ್ತಾರೂ ಇಷ್ಟು ವಿಸ್ತಾರವಾಗಿ ಹೇಳಲಾರರು.

೧೬-೧೭. ಪತಿವ್ರತೆಯಾದವಳು ಆಚರಿಸಬೇಕಾದ ಕೆಲಸವೇನೆಂದರೆ, ಪತಿಯು ಊಟಮಾಡಿದ ಮೇಲೆ ಊಟಮಾಡಬೇಕು. ಪತಿಯು ನಿಂತಿದ್ದರೆ ತಾನೂ ನಿಂತಿರಬೇಕು. ಅವನು ಮಲಗಿದರೆ ತಾನೂ ಮಲಗಬೇಕು. ಅವನು ಏಳುವುದಕ್ಕಿಂತ ಮುಂಚೆ ತಾನು ಏಳಬೇಕು. ಪತಿಯ ವಿಷಯದಲ್ಲಿ ಯಾವ ವಿಧವಾದ ವಂಚನೆಯನ್ನೂ ಮಾಡದೆ ಯಾವಾಗಲೂ ಅವನಿಗೆ ಹಿತವಾಗಿಯೇ ನಡೆದುಕೊಳ್ಳಬೇಕು.

೧೮-೧೯. ತಾನು ಅಲಂಕರಿಸಿಕೊಂಡೇ ಪತಿಯ ಎದುರಿಗೆ ಓಡಾಡಬೇಕು. ಆದರೆ ಪತಿಯು ಪರಸ್ಥಳಕ್ಕೆ ಹೋಗಿರಲು ಎಂದಿಗೂ ತನ್ನನ್ನು ಅಲಂಕರಿಸಿಕೊಳ್ಳಬಾರದು. ಯಾವಾಗಲೂ ಪತಿವ್ರತೆಯು ಪತಿಯ ಹೆಸರನ್ನು ಹಿಡಿದು ಕೂಗಬಾರದು.

ಪತ್ಯುರ್ನಾಮ ನ ಗೃಹ್ಣೀಯಾತ್ಕದಾಚನ ಪತಿವ್ರತಾ ।
ಆಕೃಷ್ಟಾಪಿ ನ ಚಾಕ್ರೋಶೇತ್ಪ್ರಸೀದೇತ್ತಾಡಿತಾಪಿ ಚ ॥
ಹನ್ಯತಾಮಿತಿ ಚ ಬ್ರೂಯತ್ಸ್ವಾಮಿನ್ನಿತಿ ಕೃಪಾಂ ಕುರು ॥ ೧೯ ॥

ಆಹೂತಾ ಗೃಹಕಾರ್ಯಾಣಿ ತ್ಯಕ್ತ್ವಾ ಗಚ್ಛೇತ್ತದಂತಿಕಂ ।
ಸತ್ವರಂ ಸಾಂಜಲಿಃ ಪ್ರೀತ್ಯಾ ಸುಪ್ರಣಮ್ಯ ವದೇದಿತಿ ॥ ೨೦ ॥

ಕಿಮರ್ಥಂ ವ್ಯಾಹೃತಾ ನಾಥ ಸ ಪ್ರಸಾದೋ ವಿಧೀಯತಾಂ ।
ತದಾದಿಷ್ಟಾ ಚರೇತ್ಕರ್ಮ ಸುಪ್ರಸನ್ನೇನ ಚೇತಸಾ ॥ ೨೧ ॥

ಚಿರಂ ತಿಷ್ಠೇನ್ನ ಚ ದ್ವಾರೇ ಗಚ್ಛೇನ್ನೈವ ಪರಾಲಯೇ ।
ಆದಾಯ ತತ್ತ್ವಂ ಯತ್ಕಿಂಚಿತ್ಕಸ್ಮೈಚಿನ್ನಾರ್ಪಯೇತ್ಕ್ವಚಿತ್ ॥ ೨೨ ॥

ಪೂಜೋಪಕರಣಂ ಸರ್ವಮನುಕ್ತಾ ಸಾಧಯೇತ್ಸ್ವಯಂ ।
ಪ್ರತೀಕ್ಷಮಾಣಾವಸರಂ ಯಥಾಕಾಲೋಚಿತಂ ಹಿತಂ ॥ ೨೩ ॥

---

ಪತಿಯು ಒಂದುವೇಳೆ ಕೋಪದಿಂದ ಎಳೆದರೂ ಕೂಗಿಕೊಳ್ಳಬಾರದು. ಹೊಡೆದರೂ ಸಹ ಸುಮ್ಮನಿದ್ದು ಸ್ವಾಮಿಯೇ, ಪ್ರಸನ್ನನಾಗು ಎಂದು ಹೇಳಬೇಕು. ಯಾವಾಗಲೂ ಪ್ರಸನ್ನಳಾಗಿರಬೇಕು.

೨೦-೨೧. ಪತಿಯು ಕರೆದರೆ ಎಂತಹ ಕೆಲಸವಿದ್ದರೂ ಬಿಟ್ಟುಬಿಟ್ಟು ಅವನ ಹತ್ತಿರಕ್ಕೆ ಬರಬೇಕು. ಪತಿಗೆ ನಮಸ್ಕರಿಸಿ ಓ ಸ್ವಾಮಿಯೇ, ನನ್ನನ್ನೇಕೆ ಕೂಗಿದಿರಿ. ಅದನ್ನು ತಿಳಿಸಿ ನನ್ನನ್ನು ಅನುಗ್ರಹಿಸಬೇಕು ಎಂದು ನಮ್ರಳಾಗಿ ಕೇಳಿಕೊಳ್ಳಬೇಕು. ಅವನು ಯಾವ ಕೆಲಸವನ್ನು ಹೇಳಿದರೂ ನಿರ್ಮಲಚಿತ್ತಳಾಗಿ ಸಂತೋಷದಿಂದ ಮಾಡಬೇಕು.

೨೨-೨೩. ಬಾಗಿಲಿನಲ್ಲಿ ಹೆಚ್ಚುಹೊತ್ತು ನಿಂತಿರಬಾರದು. ಮತ್ತೊಬ್ಬರ ಮನೆಗೆ ಹೋಗಬಾರದು. ಯಾವುದಾದರೂ ವಿಷಯವನ್ನು ತಿಳಿದುಕೊಂಡರೆ ಮತ್ತೊಬ್ಬರಿಗೆ ಅದನ್ನು ಹೇಳಲು ಹೋಗಬಾರದು. ದೇವರ ಪೂಜೆಗೆ ಯೋಗ್ಯವಾದ ಉಪಕರಣಗಳನ್ನು ಪತಿಯಿಂದ ಹೇಳಿಸಿಕೊಳ್ಳದೆ ಸಿದ್ಧಪಡಿಸಬೇಕು. ಪತಿಗೆ ಯಾವ ಯಾವ ಕಾಲದಲ್ಲಿ ಏನೇನು ಬೇಕಾಗಿರುವುದೋ ಅದನ್ನು ನಡೆಸಿಕೊಡಬೇಕು.

ನ ಗಚ್ಛೇತ್ತೀರ್ಥಯಾತ್ರಾಂ ವೈ ಪತ್ಯಾಜ್ಞಾಂ ನ ವಿನಾ ಕ್ವಚಿತ್ ।
ದೂರತೋ ವರ್ಜಯೇತ್ಸಾ ಹಿ ಸಮಾಜೋತ್ಸವದರ್ಶನಂ ॥ ೨೪ ॥

ತೀರ್ಥಾರ್ಥಿನೀ ತು ಯಾ ನಾರೀ ಪತಿಪಾದೋದಕಂ ಪಿಬೇತ್ ।
ತಸ್ಮಿನ್ಸರ್ವಾಣಿ ತೀರ್ಥಾನಿ ಕ್ಷೇತ್ರಾಣಿ ಚ ನ ಸಂಶಯಃ ॥ ೨೫ ॥

ಭುಂಜ್ಯಾತ್ಸಾ ಭರ್ತುರುಚ್ಛಿಷ್ಟಮಿಷ್ಟಮನ್ನಾದಿಕಂ ಚ ಯತ್ ।
ಮಹಾಪ್ರಸಾದ ಇತ್ಯುಕ್ತ್ವಾ ಪತಿದತ್ತಂ ಪತಿವ್ರತಾ ॥ ೨೬ ॥

ಅವಿಭಜ್ಯ ನ ಚಾಶ್ನೀಯಾದ್ದೇವಪಿತ್ರತಿಥಿಷ್ವಪಿ ।
ಪರಿಚಾರಕವರ್ಗೇಷು ಗೋಷು ಭಿಕ್ಷುಕುಲೇಷು ಚ ॥ ೨೭ ॥

ಸಂಯತೋಪಸ್ಕರಾ ದಕ್ಷಾ ಹೃಷ್ಟಾ ವ್ಯಯಪರಾಙ್ಮುಖೀ ।
ಭವೇತ್ಸಾ ಸರ್ವದಾ ದೇವೀ ಪತಿವ್ರತಪರಾಯಣಾ ॥ ೨೮ ॥

---

೨೪-೨೫. ಪತಿಯ ಅಪ್ಪಣೆಯನ್ನು ಪಡೆಯದೆ ತೀರ್ಥಯಾತ್ರೆಗೆ ಹೋಗಬಾರದು. ಜನಗಳ ಗುಂಪಿನಿಂದ ದೂರ ಇರಬೇಕು. ಯಾವುದಾದರೂ ಉತ್ಸವ ಸಮಾರಂಭವನ್ನು ನೋಡಲು ಒಬ್ಬಳೇ ಯಾವಾಗಲೂ ಹೋಗಬಾರದು. ತೀರ್ಥೋದಕವನ್ನು ಕುಡಿಯಬೇಕೆಂಬ ಇಷ್ಟವಿದ್ದರೆ ಪತಿಯ ಪಾದೋದಕವನ್ನು ಕುಡಿಯಬೇಕು. ಏಕೆಂದರೆ ಪತಿಯ ಪಾದದಲ್ಲಿ ಎಲ್ಲಾ ತೀರ್ಥಗಳೂ ಕ್ಷೇತ್ರಗಳೂ ನೆಲಸಿರುವವು.

೨೬-೨೭. ಪತಿಯು ಊಟಮಾಡಿ ಉಳಿದುದನ್ನು ಸ್ತ್ರೀಯು ಇದೇ ಮಹಾಪ್ರಸಾದವೆಂದು ತಿಳಿದು ಊಟಮಾಡಬೇಕು. ದೇವತೆಗಳಿಗೂ, ಪಿತೃಗಳಿಗೂ, ಅತಿಥಿಗಳಿಗೂ ಮೊದಲು ಬಡಿಸಬೇಕು. ಗೋವುಗಳಿಗೂ, ಪರಿಚಾರಕವರ್ಗದವರಿಗೂ, ಭಿಕ್ಷುಕರಿಗೂ ಕೊಡದೆ ಊಟಮಾಡಬಾರದು.

೨೮-೨೯. ಪತಿವ್ರತೆಯಾದವಳು ಗೃಹಕಾರ್ಯದಲ್ಲಿ ದಕ್ಷಳಾಗಿರಬೇಕು. ಮನೆಗೆ ಬೇಕಾಗುವ ಪದಾರ್ಥಗಳನ್ನು ದುಂದಾಗಿ ಖರ್ಚುಮಾಡದೆ ಆದಷ್ಟನ್ನು ಕೂಡಿಡಬೇಕು. ಪತಿಯ ಅಪ್ಪಣೆಯಿಲ್ಲದೆ ಉಪವಾಸ, ವ್ರತ, ಮುಂತಾದುವುಗಳನ್ನು

ಕುರ್ಯಾತ್ಪತ್ಯನನುಜ್ಞಾತಾ ನೋಪವಾಸವ್ರತಾದಿಕಂ ।
ಅನ್ಯಥಾ ತತ್ಫಲಂ ನಾಸ್ತಿ ಪರತ್ರ ನರಕಂ ವ್ರಜೇತ್ ॥ ೨೯ ॥

ಸುಖಪೂರ್ವಂ ಸುಖಾಸೀನಂ ರಮಮಾಣಂ ಯದೃಚ್ಛಯಾ ।
ಆಂತರೇಷ್ವಪಿ ಕಾರ್ಯೇಷು ಪತಿಂ ನೋತ್ಥಾಪಯೇತ್ ಕ್ವಚಿತ್ ॥ ೩೦ ॥

ಕ್ಲೀಬಂ ವಾ ದುರವಸ್ಥಂ ವಾ ವ್ಯಾಧಿತಂ ವೃದ್ಧಮೇವ ಚ ।
ಸುಖಿತಂ ದುಃಖಿತಂ ವಾಪಿ ಪತಿಮೇಕಂ ನ ಲಂಘಯೇತ್ ॥ ೩೧ ॥

ಸ್ತ್ರೀಧರ್ಮಿಣೀ ತ್ರಿರಾತ್ರಂ ಚ ಸ್ವಮುಖಂ ನೈವ ದರ್ಶಯೇತ್ ।
ಸ್ವವಾಕ್ಯಂ ಶ್ರಾವಯೇನ್ನಾಪಿ ಯಾವತ್ಸ್ನಾನಾನ್ನ ಶುಧ್ಯತಿ ॥ ೩೨ ॥

ಸುಸ್ನಾತಾ ಭರ್ತೃವದನಮೀಕ್ಷೇತಾನ್ಯಸ್ಯ ನ ಕ್ವಚಿತ್ ।
ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ॥ ೩೩ ॥

ಹರಿದ್ರಾಕುಂಕುಮಂ ಚೈವ ಸಿಂಧೂರಂ ಕಜ್ಜಲಾದಿಕಂ ।
ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಾದಿಕಂ ॥ ೩೪ ॥

---

ಮಾಡಕೂಡದು. ಪತಿಯ ಆಜ್ಞೆಯನ್ನು ತೆಗೆದುಕೊಳ್ಳದೆ ವ್ರತಾದಿಗಳನ್ನು ಮಾಡಿದರೆ ಅದು ನಿಷ್ಫಲವಾಗುವುದಲ್ಲದೆ ಅದರಿಂದ ನರಕವೂ ಪ್ರಾಪ್ತವಾಗುವುದು.

೩೦-೩೧. ಸುಖವಾಗಿ ಕುಳಿತಿರುವ ಮತ್ತು ಸಂಭೋಗವಿಲಾಸದಲ್ಲಿ ಪ್ರವೃತ್ತನಾಗಿರುವ ಪತಿಯನ್ನು ಯಾವ ಸ್ತ್ರೀಯೂ ಕಾರ್ಯಾಂತರಗಳಿಗೋಸ್ಕರವಾಗಿ ಎಬ್ಬಿಸಬಾರದು. ತನ್ನ ಪತಿಯು ನಪುಂಸಕನಾಗಲೀ, ದರಿದ್ರನಾಗಲೀ, ರೋಗಿಯಾಗಲೀ, ವೃದ್ಧನಾಗಲೀ, ಸುಖಿಯಾಗಲೀ, ದುಃಖಿಯಾಗಲೀ, ಹೇಗಿದ್ದರೂ ಅಂತಹವನನ್ನು ತಿರಸ್ಕರಿಸಬಾರದು.

೩೨. ಸ್ತ್ರೀಯು ಮುಟ್ಟಾದ ಮೂರು ದಿನಗಳಲ್ಲಿ ಯಾರಿಗೂ ತನ್ನ ಮುಖವನ್ನು ತೋರಿಸಬಾರದು. ಯಾರೊಡನೆಯೂ ಮಾತನಾಡಲೂ ಕೂಡದು.

೩೩-೩೪. ಸ್ನಾನಮಾಡಿ ಬಂದಮೇಲೆ ಪತಿಯ ಮುಖವನ್ನು ಮೊದಲು ನೋಡಬೇಕು. ಪತಿಯು ಊರಿನಲ್ಲಿ ಇಲ್ಲದಿದ್ದಲ್ಲಿ ಪತಿಯನ್ನು ಸ್ಮರಿಸಿಕೊಂಡು ಸೂರ್ಯನನ್ನು ನೋಡಬೇಕು. ಪತಿವ್ರತೆಯಾದವಳು ಅರಿಶಿನ, ಕುಂಕುಮ, ಚಂದ್ರ,

ಕೇಶಸಂಸ್ಕಾರಕಬರೀಕರಕರ್ಣಾದಿಭೂಷಣಂ ।
ಭರ್ತುರಾಯುಷ್ಯಮಿಚ್ಛಂತೀ ದೂರಯೇನ್ನ ಪತಿವ್ರತಾ ॥ ೩೫ ॥

ನ ರಜಕ್ಯಾ ನ ಬಂಧಕ್ಯಾ ತಥಾ ಶ್ರವಣಯಾ ನ ಚ ।
ನ ಚ ದುರ್ಭಗಯಾ ಕ್ವಾಪಿ ಸಖಿತ್ವಂ ಕಾರಯೇತ್ಕ್ವಚಿತ್ ॥ ೩೬ ॥

ಪತಿವಿದ್ವೇಷಿಣೀಂ ನಾರೀಂ ನ ಸಾ ಸಂಭಾಷಯೇತ್ಕ್ವಚಿತ್ ।
ನೈಕಾಕಿನೀ ಕ್ವಚಿತ್ತಿಷ್ಠೇನ್ನಗ್ನಾ ಸ್ನಾಯಾನ್ನ ಚ ಕ್ವಚಿತ್ ॥ ೩೭ ॥

ನೋಲೂಖಲೇ ನ ಮುಸಲೇ ನ ವರ್ಧನ್ಯಾಂ ದೃಷದ್ಯಪಿ ।
ನ ಯಂತ್ರಕೇ ನ ದೇಹಲ್ಯಾಂ ಸತೀ ಚ ಪ್ರವಸೇತ್ಕ್ವಚಿತ್ ॥ ೩೮ ॥

ವಿನಾ ವ್ಯವಾಯಸಮಯಂ ಪ್ರಾಗಲ್ಭ್ಯಂ ನಾಚರೇತ್ಕ್ವಚಿತ್ ।
ಯತ್ರ ಯತ್ರ ರುಚಿರ್ಭರ್ತುಸ್ತತ್ರ ಪ್ರೇಮವತೀ ಭವೇತ್ ॥ ೩೯ ॥

ಹೃಷ್ಟಾ ಹೃಷ್ಟೇ ವಿಷಣ್ಣಾ ಸ್ಯಾದ್ವಿಷಣ್ಣಾಸ್ಯೇ ಪ್ರಿಯೇ ಪ್ರಿಯಾ ।
ಪತಿವ್ರತಾ ಭವೇದ್ದೇವೀ ಸದಾ ಪತಿಹಿತೈಷಿಣೀ ॥ ೪೦ ॥

---

ಕಪ್ಪು, ರವಿಕೆ, ತಾಂಬೂಲ, ಮಂಗಳದ್ರವ್ಯಗಳು, ತಲೆಯನ್ನು ಬಾಚಿ ಗಂಟುಹಾಕಿಕೊಳ್ಳುವುದು, ಬಳೆಗಳು, ಓಲೆ, ಇವೆಲ್ಲವನ್ನೂ ಧರಿಸಬೇಕು. ಹಾಗಿಲ್ಲದಿದ್ದರೆ ಪತಿಯ ಆಯಸ್ಸು ಕ್ಷೀಣವಾಗುವುದು.

೩೬-೩೭. ಪತಿವ್ರತೆಯು, ಅಗಸರ ಹೆಂಗಸರು, ಜಾರಿಣೀ, ಕೆಟ್ಟಕೆಲಸದಲ್ಲಿ ಪ್ರವೃತ್ತಳಾದವಳು ಇವರುಗಳೊಡನೆ ಎಂದಿಗೂ ಸ್ನೇಹ ಬೆಳೆಸಬಾರದು. ಪತಿಯನ್ನು ದ್ವೇಷಿಸತಕ್ಕ ಹೆಂಗಸನ್ನು ಯಾವಾಗಲೂ ಮಾತನಾಡಿಸಬಾರದು. ಒಬ್ಬಳೇ ಬೇರೆ ಸ್ಥಳದಲ್ಲಿ ಕುಳಿತುಕೊಳ್ಳಬಾರದು. ನಗ್ನಳಾಗಿ ಸ್ನಾನಮಾಡಕೂಡದು.

೩೮-೩೯. ಒರಳಿನ ಮೇಲೆಯೂ ಒನಕೆ, ಬೀಸುವಕಲ್ಲು, ಯಂತ್ರ, ಹೊಸಲು ಇವುಗಳ ಮೇಲೆಯೂ ಕುಳಿತುಕೊಳ್ಳಬಾರದು. ಸಂಭೋಗಸಮಯವನ್ನು ಬಿಟ್ಟು ಬೇರೆ ಸಮಯದಲ್ಲಿ ಧಾರ್ಷ್ಟ್ಯದಿಂದಿರಬಾರದು. ಮುಖ್ಯವಾಗಿ ಪತಿಯ ಮನಸ್ಸಿಗೆ ಸಂತೋಷವಾಗುವಂತೆ ಆಚರಿಸಬೇಕು.

೪೦-೪೧. ಪತಿಯು ಸಂತೋಷಗೊಂಡಿದ್ದರೆ ತಾನೂ ಸಂತೋಷಪಡಬೇಕು.

ಏಕರೂಪಾ ಭವೇತ್ಪುಣ್ಯಾ ಸಂಪತ್ಸು ಚ ವಿಪತ್ಸು ಚ ।
ವಿಕೃತಿಂ ಸ್ವಾತ್ಮನಃ ಕ್ವಾಪಿ ನ ಕುರ್ಯಾದ್ಧೈರ್ಯಧಾರಿಣೀ ॥ ೪೧ ॥

ಸರ್ಪಿರ್ಲವಣತೈಲಾದಿಕ್ಷಯೇಽಪಿ ಚ ಪತಿವ್ರತಾ ।
ಪತಿಂ ನಾಸ್ತೀತಿ ನ ಬ್ರೂಯಾದಾಯಾಸೇಷು ನ ಯೋಜಯೇತ್ ॥ ೪೨ ॥

ವಿಧೇರ್ವಿಷ್ಣೋರ್ಹರಾದ್ವಾಪಿ ಪತಿರೇಕೋಽಧಿಕೋ ಮತಃ ।
ಪತಿವ್ರತಾಯಾ ದೇವೇಶಿ ಸ್ವಪತಿಶ್ಶಿವ ಏವ ಚ ॥ ೪೩ ॥

ವ್ರತೋಪವಾಸನಿಯಮಂ ಪತಿಮುಲ್ಲಂಘ್ಯ ಯಾ ಚರೇತ್ ।
ಆಯುಷ್ಯಂ ಹರತೇ ಭರ್ತುರ್ಮೃತಾ ನಿರಯಮೃಚ್ಛತಿ ॥ ೪೪ ॥

ಉಕ್ತಾ ಪ್ರತ್ಯುತ್ತರಂ ದದ್ಯಾದ್ಯಾ ನಾರೀ ಕ್ರೋಧತತ್ಪರಾ ।
ಸರಮಾ ಜಾಯತೇ ಗ್ರಾಮೇ ಶೃಗಾಲೀ ನಿರ್ಜನೇ ವನೇ ॥ ೪೫ ॥

---

ಪತಿಯು ದುಃಖಪಡುತ್ತಿದ್ದರೆ ತಾನು ದುಃಖಿಸಬೇಕು. ಸುಖದುಃಖಗಳಲ್ಲಿ ಸಮ ಭಾಗಿಯಾಗಿ ಯಾವಾಗಲೂ ಅವನ ಹಿತವನ್ನೇ ಕೋರುತ್ತಾ ಇರಬೇಕು.

೪೨-೪೩. ತುಪ್ಪ, ಉಪ್ಪು, ಎಣ್ಣೆ ಮುಂತಾದುವುಗಳು ಮುಗಿದುಹೋದರೆ ಪತಿವ್ರತೆಯಾದವಳು "ಮುಗಿದುಹೋಗಿವೆ" ಎಂದು ನಿಷ್ಠುರವಾಗಿ ನುಡಿದು ಪತಿಗೆ ಬೇಸರವನ್ನುಂಟುಮಾಡಬಾರದು. ಆಯಾಸ ಕೆಲಸಗಳಲ್ಲಿ ನಿಯೋಗಿಸಬಾರದು ಪತಿಯು, ಬ್ರಹ್ಮ, ವಿಷ್ಣು, ಮಹೇಶ್ವರ ಇವರೆಲ್ಲರುಗಳಿಗಿಂತಲೂ ಶ್ರೇಷ್ಠನು. ಎಲೈ ಪಾರ್ವತಿಯೇ, ಪತಿಯು ಪರಶಿವನೇ ಹೊರತು ಬೇರೆ ಅಲ್ಲವು.

೪೪. ಪತಿಯ ಮಾತನ್ನು ಮೀರಿ ವ್ರತಗಳನ್ನಾಗಲೀ, ಉಪವಾಸ ಮುಂತಾದುವುಗಳನ್ನಾಗಲೀ ಮಾಡಿದರೆ ಪತಿಯ ಆಯುಷ್ಯವು ಕ್ಷೀಣವಾಗುವುದು. ಆ ಸ್ತ್ರೀಯು ಸತ್ತನಂತರ ನರಕಕ್ಕೆ ಹೋಗುವಳು.

೪೫. ಯಾವ ಸ್ತ್ರೀಯು ಕೋಪಗೊಂಡು ಪತಿಯನ್ನು ಎದುರುವಾದಿಸುವಳೋ ಅವಳು ಊರಿನಲ್ಲಿ ಹೆಣ್ಣುನಾಯಿಯಾಗಿಯೂ ಅರಣ್ಯದಲ್ಲಿ ಹೆಣ್ಣುನರಿಯಾಗಿಯೂ ಹುಟ್ಟುವಳು.

ಉಚ್ಚಾಸನಂ ನ ಸೇವೇತ ನ ವ್ರಜೇದ್ದುಷ್ಟಸನ್ನಿಧೌ ।
ನ ಚ ಕಾತರವಾಕ್ಯಾನಿ ವದೇನ್ನಾರೀ ಪತಿಂ ಕ್ವಚಿತ್ ॥ ೪೬ ॥

ಅಪವಾದಂ ನ ಚ ಬ್ರೂಯಾತ್ಕಲಹಂ ದೂರತಸ್ತ್ಯಜೇತ್ ।
ಗುರೂಣಾಂ ಸನ್ನಿಧೌ ಕ್ವಾಪಿ ನೋಚ್ಚೈರ್ಬ್ರೂಯಾನ್ನ ವೈ ಹಸೇತ್ ॥೪೭॥

ಬಾಹ್ಯಾದಾಯಾಂತಮಾಲೋಕ್ಯ ತ್ವರಿತಾನ್ನಜಲಾಶನೈಃ ।
ತಾಂಬೂಲೈರ್ವಸನೈಶ್ಚಾಪಿ ಪಾದಸಂವಾಹನಾದಿಭಿಃ ॥ ೪೮ ॥

ತಥೈವ ಚಾಟುವಚನೈಃ ಖೇದಸನ್ನೋದನೈಃ ಪರೈಃ ।
ಯಾ ಪ್ರಿಯಂ ಪ್ರೀಣಯೇತ್ಪ್ರೀತಾ ತ್ರಿಲೋಕೀ ಪ್ರೀಣಿತಾ ತಯಾ ॥ ೪೯ ॥

ಮಿತಂ ದದಾತಿ ಜನಕೋ ಮಿತಂ ಭ್ರಾತಾ ಮಿತಂ ಸುತಃ ।
ಅಮಿತಸ್ಯ ಹಿ ದಾತಾರಂ ಭರ್ತಾರಂ ಪೂಜಯೇತ್ಸದಾ ॥ ೫೦ ॥

---

೪೬-೪೭. ಪತಿವ್ರತೆಯಾದವಳು ಪತಿಗೆ ಭಯವನ್ನುಂಟುಮಾಡುವ ಮಾತುಗಳನ್ನಾಗಲೀ, ಪತಿಗೆ ಅಪವಾದ ಬರುವಂತಹ ವಾಕ್ಯಗಳನ್ನಾಗಲೀ ನುಡಿಯಬಾರದು. ಪತಿಯೊಡನೆ ಕಲಹಮಾಡಬಾರದು. ಹಿರಿಯರ ಹತ್ತಿರ ಗಟ್ಟಿಯಾಗಿ ಮಾತನ್ನಾಗಲೀ ಆಡಕೂಡದು. ಗಟ್ಟಿಯಾಗಿ ನಗಲೂ ಕೂಡದು.

೪೮-೪೯. ಪತಿಯು ಹೊರಗಡೆಯಿಂದ ಮನೆಗೆ ಬಂದೊಡನೆಯೇ ಜಾಗ್ರತೆಯಾಗಿ ಊಟಮಾಡಿಸಿ, ತಾಂಬೂಲವನ್ನು ಕೊಟ್ಟು ಬಟ್ಟೆಗಳನ್ನು ಹೊದಿಸಿ ಅವನ ಪಾದಸೇವೆಯನ್ನು ಮಾಡಬೇಕು. ಮೃದುವಾಗಿ ಮಾತನಾಡುತ್ತಾ ಅವನ ಶ್ರಮವನ್ನೆಲ್ಲಾ ಹೋಗಲಾಡಿಸಬೇಕು. ಈರೀತಿ ಯಾವ ಸ್ತ್ರೀಯು ಪತಿಯನ್ನು ಪ್ರೀತಿಸುವಳೋ ಅವಳು ಮೂರು ಲೋಕವನ್ನೇ ಪ್ರೀತಿಸಿದಂತೆ.

೫೦. ತಂದೆಯು ಮಗಳಿಗೆ ಅಲ್ಪವಾದ ಸುಖವನ್ನು ಕೊಡಬಹುದು. ಸಹೋದರನೂ ಅಂತೆಯೇ. ಮಗನೂ ಸಹ ಅಲ್ಪಸುಖವನ್ನು ಕೊಡತಕ್ಕವನು. ಆದರೆ ಪತಿಯು ಪೂರ್ಣಸುಖವನ್ನು ಕೊಡುವನು. ಆದುದರಿಂದ ಪತಿಯನ್ನು ಯಾವಾಗಲೂ ಪೂಜಿಸಬೇಕು.

ಭರ್ತಾ ದೇವೋ ಗುರುರ್ಭರ್ತಾ ಧರ್ಮತೀರ್ಥವ್ರತಾನಿ ಚ ।
ತಸ್ಮಾತ್ಸರ್ವಂ ಪರಿತ್ಯಜ್ಯ ಪತಿಮೇಕಂ ಸಮರ್ಚಯೇತ್ ॥ ೫೧ ॥

ಯಾ ಭರ್ತಾರಂ ಪರಿತ್ಯಜ್ಯ ರಹಶ್ಚರತಿ ದುರ್ಮತಿಃ ।
ಉಲೂಕೀ ಜಾಯತೇ ಕ್ರೂರಾ ವೃಕ್ಷಕೋಟರಶಾಯಿನೀ ॥ ೫೨ ॥

ತಾಡಿತಾ ತಾಡಿತುಂ ಚೇಚ್ಛೇತ್ಸಾ ವ್ಯಾಘ್ರೀ ವೃಷದಂಶಿಕಾ ।
ಕಟಾಕ್ಷಯತಿ ಯಾನ್ಯಂ ವೈ ಕೇಕರಾಕ್ಷೀ ತು ಸಾ ಭವೇತ್ ॥ ೫೩ ॥

ಯಾ ಭರ್ತಾರಂ ಪರಿತ್ಯಜ್ಯ ಮಿಷ್ಟಮಶ್ನಾತಿ ಕೇವಲಂ ।
ಗ್ರಾಮೇ ವಾ ಸೂಕರೀ ಭೂಯಾದ್ವಲ್ಗುರ್ವಾಪಿ ಸ್ವವಿಡ್ಭುಜಾ ॥ ೫೪ ॥

ಯಾ ತುಂಕೃತ್ಯ ಪ್ರಿಯಂ ಬ್ರೂಯಾನ್ಮೂಕಾ ಸಾ ಜಾಯತೇ ಖಲು ।
ಯಾ ಸಪತ್ನೀಂ ಸದೇರ್ಷ್ಯೇತ ದುರ್ಭಗಾ ಸಾ ಪುನಃ ಪುನಃ ॥ ೫೫ ॥

---

೫೧. ಪತಿಯೇ ದೇವತೆಯು. ಅವನೇ ಎಲ್ಲರಿಗಿಂತಲೂ ಶ್ರೇಷ್ಠನಾದವನು. ಧರ್ಮ, ತೀರ್ಥ, ವ್ರತ ಇವೆಲ್ಲವೂ ಅವನೇ ಆದುದರಿಂದ ಎಲ್ಲವನ್ನೂ ಬಿಟ್ಟು ಪತಿಯನ್ನು ಸೇವಿಸಬೇಕು.

೫೨-೫೩. ಯಾವಳು ತನ್ನ ಗಂಡನನ್ನು ಬಿಟ್ಟು ಬಿಟ್ಟು ಗುಟ್ಟಾಗಿ ವ್ಯವಹರಿಸುವಳೋ ಅವಳು ಕ್ರೂರವಾದ ಹೆಣ್ಣು ಗೂಬೆಯಾಗಿ ಹುಟ್ಟಿ ಮರದ ಪೊಟರೆಯಲ್ಲಿ ವಾಸಮಾಡುವಳು. ಗಂಡನು ಸಿಟ್ಟಿನಿಂದ ಹೊಡೆದಾಗ ತಿರುಗಿ ಅವನನ್ನು ಹೊಡೆಯುವವಳು ಹೆಣ್ಣು ಹುಲಿಯಾಗಿ ಹುಟ್ಟಿ ಎತ್ತುಗಳನ್ನು ತಿನ್ನುತ್ತಾ ಜೀವಿಸುವಳು. ಯಾವಳು ಪರಪುರುಷನನ್ನು ಕಟಾಕ್ಷಗಳಿಂದ ಪ್ರೀತಿಯುಕ್ತಳಾಗಿ ನೋಡುವಳೋ ಅವಳು ಮೆಳ್ಳೆಗಣ್ಣಿನವಳಾಗಿ ಹುಟ್ಟುವಳು.

೫೪-೫೫. ಯಾವ ಸ್ತ್ರೀಯು ತನ್ನ ಪತಿಯನ್ನು ಬಿಟ್ಟು ಮೃಷ್ಟಾನ್ನಾದಿಗಳನ್ನು ತಾನೊಬ್ಬಳೇ ಸೇವಿಸುವಳೋ ಅವಳು ತನ್ನ ಮಲವನ್ನೇ ತಿನ್ನುವ ಗ್ರಾಮದ ಹೆಣ್ಣು ಹಂದಿಯಾಗಿ ಹುಟ್ಟುವಳು. ಯಾವಳು ಪತಿಯನ್ನು 'ಥೂ' ಎಂದು ಬೈಯುವಳೋ ಅವಳು ಮೂಗಿಯಾಗಿ ಹುಟ್ಟುವಳು. ಯಾವಳು ತನ್ನ ಸವತಿಯನ್ನು ಅಸೂಯೆಯಿಂದ ನೋಡುವಳೋ ಅವಳು ದುಷ್ಟರೋಗದಿಂದ ಪೀಡಿತಳಾಗುವಳು.

ದೃಷ್ಟಿಂ ವಿಲುಪ್ಯ ಭರ್ತುರ್ಯಾ ಕಂಚಿದನ್ಯಂ ಸಮೀಕ್ಷತೇ ।
ಕಾಣಾ ಚ ವಿಮುಖೀ ಚಾಪಿ ಕುರೂಪಾಪಿ ಚ ಜಾಯತೇ ॥ ೫೬ ॥

ಜೀವಹೀನೋ ಯಥಾ ದೇಹಃ ಕ್ಷಣಾದಶುಚಿತಾಂ ವ್ರಜೇತ್ ।
ಭರ್ತೃಹೀನಾ ತಥಾ ಯೋಷಿತ್ಸುಸ್ನಾತಾಪ್ಯಶುಚಿಸ್ಸದಾ ॥ ೫೭ ॥

ಸಾ ಧನ್ಯಾ ಜನನೀ ಲೋಕೇ ಸ ಧನ್ಯೋ ಜನಕಃ ಪಿತಾ ।
ಧನ್ಯಸ್ಸ ಚ ಪತಿರ್ಯಸ್ಯ ಗೃಹೇ ದೇವೀ ಪತಿವ್ರತಾ ॥ ೫೮ ॥

ಪಿತೃವಂಶ್ಯಾ ಮಾತೃವಂಶ್ಯಾಃ ಪತಿವಂಶ್ಯಾಸ್ತ್ರಯಸ್ತ್ರಯಃ ।
ಪತಿವ್ರತಾಯಾಃ ಪುಣ್ಯೇನ ಸ್ವರ್ಗೇ ಸೌಖ್ಯಾನಿ ಭುಂಜತೇ ॥ ೫೯ ॥

ಶೀಲಭಂಗೇನ ದುರ್ವೃತ್ತಾಃ ಪಾತಯಂತಿ ಕುಲತ್ರಯಂ ।
ಪಿತುರ್ಮಾತುಸ್ತಥಾ ಪತ್ಯುರಿಹಾಮುತ್ರ ಚ ದುಃಖಿತಾ ॥ ೬೦ ॥

---

೫೬-೫೭. ಯಾವ ಸ್ತ್ರೀಯು ತನ್ನ ಪತಿಯ ದೃಷ್ಟಿಗೆ ಬೀಳದಂತೆ ರಹಸ್ಯವಾಗಿ ಪರಪುರುಷನನ್ನು ನೋಡುವಳೋ, ಅವಳು ಕುರುಡಿಯಾಗಿಯೂ ಕುರೂಪಿಯಾಗಿಯೂ ಹುಟ್ಟುವಳು. ಜೀವವಿಲ್ಲದ ದೇಹವು ಹೇಗೆ ಅಪವಿತ್ರವಾಗುವುದೋ ಹಾಗೆ ಪತಿಯಿಲ್ಲದ ಸ್ತ್ರೀಯು ಅಶುಚಿಯು.

೫೮. ಯಾವನ ಮನೆಯಲ್ಲಿ ಪತಿವ್ರತೆಯು ಇರುವಳೋ ಅಂತಹವನ ಮನೆಯಲ್ಲಿರುವ ತಾಯಿಯೇ ಧನ್ಯಳು. ತಂದೆಯು ಧನ್ಯನು. ಅಂತಹ ಪತಿವ್ರತೆಯನ್ನು ಹೊಂದಿರುವ ಪತಿಯು ಧನ್ಯನು.

೫೯. ಪತಿವ್ರತೆಯ ತಾಯಿಯ ಕಡೆಯ ಮೂರು ವಂಶದವರೂ, ತಂದೆಯ ಕಡೆಯ ಮೂರು ವಂಶದವರೂ ಪತಿಯ ಕಡೆಯ ಮೂರು ವಂಶದವರೂ ಸಹ ಅವಳ ಪುಣ್ಯದಿಂದ ಸ್ವರ್ಗದಲ್ಲಿ ಅನಂತ ಸೌಖ್ಯವನ್ನು ಪಡೆಯುವರು.

೬೦. ಯಾವ ಸ್ತ್ರೀಯು ಕೆಟ್ಟ ನಡತೆಯುಳ್ಳವಳಾಗಿರುವಳೋ ಅವಳ ದೆಸೆಯಿಂದ ಅವಳ ತಂದೆ, ತಾಯಿ, ಗಂಡ ಇವರ ವಂಶಗಳವರು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ದುಃಖಿಗಳಾಗುವರು.

ಪತಿವ್ರತಾಯಾಶ್ಚರಣೋ ಯತ್ರ ಯತ್ರ ಸ್ಪೃಶೇದ್ಭುವಂ ।
ತತ್ರ ತತ್ರ ಭವೇತ್ಸಾ ಹಿ ಪಾಪಹಂತ್ರೀ ಸುಪಾವನೀ ॥ ೬೧ ॥

ವಿಭುಃ ಪತಿವ್ರತಾಸ್ಪರ್ಶಂ ಕುರುತೇ ಭಾನುಮಾನಪಿ ।
ಸೋಮೋ ಗಂಧವಹಶ್ಚಾಪಿ ಸ್ವಪವಿತ್ರ್ಯಾಯ ನಾನ್ಯಥಾ ॥ ೬೨ ॥

ಆಪಃ ಪತಿವ್ರತಾಸ್ಪರ್ಶಮಭಿಲಷ್ಯಂತಿ ಸರ್ವದಾ ।
ಅದ್ಯ ಜಾಡ್ಯವಿನಾಶೋ ನೋ ಜಾತಸ್ತ್ವದ್ಯಾನ್ಯಪಾವನಾಃ ॥ ೬೩ ॥

ಭಾರ್ಯಾ ಮೂಲಂ ಗೃಹಸ್ಥಸ್ಯ ಭಾರ್ಯಾ ಮೂಲಂ ಸುಖಸ್ಯ ಚ ।
ಭಾರ್ಯಾ ಧರ್ಮಫಲಾವಾಪ್ತ್ಯೈ ಭಾರ್ಯಾ ಸಂತಾನವೃದ್ಧಯೇ ॥ ೬೪ ॥

ಗೃಹೇ ಗೃಹೇ ನ ಕಿಂ ನಾರ್ಯೋ ರೂಪಲಾವಣ್ಯಗರ್ವಿತಾಃ ।
ಪರಂ ವಿಶ್ವೇಶಭಕ್ತ್ಯೈವ ಲಭ್ಯತೇ ಸ್ತ್ರೀ ಪತಿವ್ರತಾ ॥ ೬೫ ॥

---

೬೧. ಪತಿವ್ರತೆಯ ಪಾದಗಳು ಎಲ್ಲೆಲ್ಲಿ ತಗಲುವುವೋ ಆ ಸ್ಥಳಗಳು ಪವಿತ್ರವಾಗುವುವು. ಸ್ಥಳಪಾವನದಿಂದ ಪಾಪಗಳು ನಾಶವಾಗುವುವು,

೬೨-೬೩. ಸೂರ್ಯನು ವ್ಯಾಪಕನಾದರೂ, ತೇಜಸ್ವಿಯಾದರೂ ಸಹ ಪತಿವ್ರತೆಯರ ಸ್ಪರ್ಶವನ್ನು ಬಯಸಿ ಅದರಿಂದ ಪವಿತ್ರನಾಗಬೇಕೆಂದು ಅಪೇಕ್ಷಿಸುವನು. ಚಂದ್ರನೂ, ವಾಯುವೂ, ನೀರೂ ಸಹ ತಾವು ತಮ್ಮ ಪಾಪವನ್ನು ಕಳೆದುಕೊಂಡು ಪವಿತ್ರರಾಗಬೇಕೆಂಬ ಅಭಿಲಾಷೆಯಿಂದ ಪತಿವ್ರತೆಯ ಸ್ಪರ್ಶವನ್ನು ಅಪೇಕ್ಷಿಸುವರು.

೬೪. ಗೃಹಸ್ಥನಿಗೆ ಪತ್ನಿಯಿಂದಲೇ ಸುಖವು ಉಂಟಾಗುವುದು. ಅವನ ಧರ್ಮಾಚರಣೆ ಮತ್ತು ಅದರಿಂದ ಬರುವ ಫಲಕ್ಕೆ ಪತ್ನಿಯೇ ಮೂಲಕಾರಣಳು. ಮನೆಯಲ್ಲಿ ಪುತ್ರಪೌತ್ರಾದಿ ಸಂತಾನವು ಹೆಚ್ಚಲು ಪತ್ನಿಯೇ ಕಾರಣಳು.

೬೫-೬೬. ಪ್ರತಿಯೊಂದು ಮನೆಯಲ್ಲಿಯೂ ರೂಪಸೌಂದರ್ಯಗರ್ವಿತರಾದ ಸ್ತ್ರೀಯರು ಇದ್ದೇ ಇರುವರು. ಆದರೆ ಪತಿವ್ರತಾಸ್ತ್ರೀಯನ್ನು ಮಾತ್ರ ಪಡೆಯಬೇಕಾದರೆ ಪರಮೇಶ್ವರನನ್ನು ಪೂಜಿಸಿದ ಹೊರತು ಆಗಲಾರದು. ಪರಲೋಕ,

ಪರಲೋಕಸ್ತ್ವಯಂ ಲೋಕೋ ಜಾಯತೇ ಭಾರ್ಯಯಾ ದ್ವಯಂ ।
ದೇವಪಿತ್ರತಿಥೀಜ್ಯಾದಿ ನಾಭಾರ್ಯಃ ಕರ್ಮ ಚಾರ್ಹತಿ ॥ ೬೬ ॥

ಗೃಹಸ್ಥಸ್ಸ ಹಿ ವಿಜ್ಞೇಯೋ ಯಸ್ಯ ಗೇಹೇ ಪತಿವ್ರತಾ ।
ಗ್ರಸ್ಯಂತೇಽನ್ಯಾನ್ಪ್ರತಿದಿನಂ ರಾಕ್ಷಸ್ಯಾ ಜರಯಾ ಯಥಾ ॥ ೬೭ ॥

ಯಥಾ ಗಂಗಾವಗಾಹೇನ ಶರೀರಂ ಪಾವನಂ ಭವೇತ್ ।
ತಥಾ ಪತಿವ್ರತಾಂ ದೃಷ್ಟ್ವಾ ಸಕಲಂ ಪಾವನಂ ಭವೇತ್ ॥ ೬೮ ॥

ನ ಗಂಗಯಾ ತಯಾ ಭೇದೋ ಯಾ ನಾರೀ ಪತಿದೇವತಾ ।
ಉಮಾಶಿವಸಮೌ ಸಾಕ್ಷಾತ್ತಸ್ಮಾತ್ತೌ ಪೂಜಯೇದ್ಬುಧಃ ॥ ೬೯ ॥

ತಾರಃ ಪತಿಃ ಶ್ರುತಿರ್ನಾರೀ ಕ್ಷಮಾ ಸಾ ಸ ಸ್ವಯಂ ತಪಃ ।
ಫಲಂ ಪತಿಃ ಸಕ್ರಿಯಾ ಸಾ ಧನ್ಯೌ ತೌ ದಂಪತೀ ಶಿವೇ ॥ ೭೦ ॥

---

ಇಹಲೋಕ ಇವೆರಡೂ ಪತಿವ್ರತೆಯರಾದ ಪತ್ನಿಯರಿಂದಲೇ ಇರುವುದು. ದೇವ ಕಾರ್ಯ, ಪಿತೃಕಾರ್ಯ, ಅತಿಥಿಸತ್ಕಾರ, ಯಜ್ಞಯಾಗಾದಿ ಕರ್ಮಗಳು ಮೊದಲಾದ ಕರ್ಮಗಳು ಪತ್ನಿಯಿಲ್ಲದಿದ್ದರೆ ನೆರವೇರುವುದಿಲ್ಲ ಎಂದರೆ ಸಾಂಗವಾಗುವುದಿಲ್ಲ.

೬೭. ಗೃಹಸ್ಥನ ಮನೆಯಲ್ಲಿ ಪತಿವ್ರತಾಸ್ತ್ರೀಯು ವಾಸಿಸುತ್ತಿದ್ದರೆ ಅಂತಹ ಗೃಹಸ್ಥನ ಪಾಪಗಳೆಲ್ಲವೂ ಜರೆ ಎಂಬ ರಾಕ್ಷಸಿಯು ಸರ್ವವನ್ನೂ ಭಕ್ಷಿಸುವಂತೆ ನಾಶ ವಾಗುವುವು.

೬೮. ಗಂಗಾನದಿಯಲ್ಲಿ ಸ್ನಾನಮಾಡಿದರೆ ಹೇಗೆ ಶರೀರದ ಕೊಳೆಯೆಲ್ಲವೂ ನಾಶವಾಗುವುದೋ ಹಾಗೆಯೇ ಪತಿವ್ರತೆಯನ್ನು ನೋಡಿದ ಮಾತ್ರದಿಂದಲೇ ಸಕಲವೂ ಪವಿತ್ರವಾಗುವುವು.

೬೯. ಪತಿವ್ರತಾಸ್ತ್ರೀಗೂ ಗಂಗೆಗೂ ಸ್ವಲ್ಪವೂ ಭೇದವಿಲ್ಲ. ಅಂತಹ ಪತಿವ್ರತೆ ಯನ್ನು ಪಡೆದ ಪತಿಯು ಸಾಕ್ಷಾತ್ಪರಶಿವನು. ಆದುದರಿಂದ ವಿವೇಕಿಗಳಾದವರು ಪಾರ್ವತೀಪರಮೇಶ್ವರರಿಗೆ ಸಮಾನರಾದ ಅವರನ್ನು ಪೂಜಿಸಬೇಕು.

೭೦. ಎಲೌ ಪಾರ್ವತಿಯೇ, ಪತಿವ್ರತಾಸ್ತ್ರೀಯು ಶ್ರುತಿಯು, ಅವಳ ಪತಿಯು ಸ್ಮೃತಿಯು; ಅವಳು ಕ್ಷಮೆಯು, ಇವನು ತಪಸ್ಸು; ಅವಳು ಕ್ರಿಯಾಸ್ವರೂಪಳು, ಇವನು ಫಲಸ್ವರೂಪನು; ಇಂತಹ ದಂಪತಿಗಳಲ್ಲವೇ ಧನ್ಯರು.

ಏವಂ ಪತಿವ್ರತಾಧರ್ಮೋ ವರ್ಣಿತಸ್ತೇ ಗಿರೀಂದ್ರಜೇ ।
ತದ್ಭೇದಾನ್ ಶೃಣು ಸುಪ್ರೀತ್ಯಾ ಸಾವಧಾನತಯಾದ್ಯ ಮೇ ॥ ೭೧ ॥

ಚತುರ್ವಿಧಾಸ್ತಾಃ ಕಥಿತಾ ನಾರ್ಯೋ ದೇವಿ ಪತಿವ್ರತಾಃ ।
ಉತ್ತಮಾದಿವಿಭೇದೇನ ಸ್ಮರತಾಂ ಪಾಪಹಾರಿಕಾಃ ॥ ೭೨ ॥

ಉತ್ತಮಾ ಮಧ್ಯಮಾ ಚೈವ ನಿಕೃಷ್ಟಾತಿನಿಕೃಷ್ಟಿಕಾ ।
ಬ್ರುವೇ ತಾಸಾಂ ಲಕ್ಷಣಾನಿ ಸಾವಧಾನತಯಾ ಶೃಣು ॥ ೭೩ ॥

ಸ್ವಪ್ನೇಽಪಿ ಯನ್ಮನೋ ನಿತ್ಯಂ ಸ್ವಪತಿಂ ಪಶ್ಯತಿ ಧ್ರುವಂ ।
ನಾನ್ಯಂ ಪರಪತಿಂ ಭದ್ರೇ ಉತ್ತಮಾ ಸಾ ಪ್ರಕೀರ್ತಿತಾ ॥ ೭೪ ॥

ಯಾ ಪಿತೃಭ್ರಾತೃಸುತವತ್ಪರಂ ಪಶ್ಯತಿ ಸದ್ಧಿಯಾ ।
ಮಧ್ಯಮಾ ಸಾ ಹಿ ಕಥಿತಾ ಶೈಲಜೇ ವೈ ಪತಿವ್ರತಾ ॥ ೭೫ ॥

---

೭೧. ಎಲೌ ಗಿರಿಜೇ, ಇದುವರೆಗೂ ಪತಿವ್ರತಾಧರ್ಮವನ್ನು ವಿಸ್ತಾರವಾಗಿ ತಿಳಿಸಿರುವೆನು. ಇನ್ನು ಪತಿವ್ರತೆಯರಲ್ಲಿರುವ ಭೇದವನ್ನು ತಿಳಿಸುವೆನು. ಸಾವಧಾನದಿಂದ ಕೇಳು.

೭೨-೭೩. ಎಲೌ ದೇವಿ, ಆ ಪತಿವ್ರತೆಯರಲ್ಲಿ ಉತ್ತಮ, ಮಧ್ಯಮ, ಅಧಮ, ಅಧಮಾಧಮ ಎಂಬುದಾಗಿ ನಾಲ್ಕು ಭೇದವುಂಟು. ಅವರ ಸ್ಮರಣೆಯಿಂದಲೇ ಪಾಪಗಳು ನಾಶವಾಗುವುವು. ಅವರ ಲಕ್ಷಣಗಳನ್ನು ಹೇಳುವೆನು ಕೇಳು.

೭೪. ಯಾವ ಸ್ತ್ರೀಯು ನಿತ್ಯವೂ ಸ್ವಪ್ನದಲ್ಲಿಯೂ ಸಹ ಪತಿಯನ್ನೇ ನೋಡುವಳೋ ಎಂದರೆ ಜಾಗ್ರತ್, ಸ್ವಪ್ನ, ಸುಷುಪ್ತ್ಯಾದಿ ಅವಸ್ಥೆಗಳಲ್ಲಿಯೂ ಸಹ ಪತಿಧ್ಯಾನವೇ ಮುಖ್ಯವಾದುದನ್ನಾಗಿ ಎಣಿಸುವಳೋ, ಪರಪುರುಷನನ್ನು ಯಾವಾಗಲೂ ಸ್ಮರಿಸಿಕೊಳ್ಳುವುದಿಲ್ಲವೋ ಅವಳೇ ಉತ್ತಮ ಪತಿವ್ರತಾಸ್ತ್ರೀಯು.

೭೫. ಯಾವ ಸ್ತ್ರೀಯು ಪರಪುರುಷನನ್ನು ತಂದೆ, ಅಣ್ಣ, ತಮ್ಮ, ಮಕ್ಕಳಂತೆ ನೋಡುವಳೋ ಅವಳಿಗೆ ಮಧ್ಯಮಾ ಪತಿವ್ರತಾ ಎಂದು ಹೆಸರು.

ಬುದ್ಧ್ವಾ ಸ್ವಧರ್ಮಂ ಮನಸಾ ವ್ಯಭಿಚಾರಂ ಕರೋತಿ ನ ।
ನಿಕೃಷ್ಟಾ ಕಥಿತಾ ಸಾ ಹಿ ಸುಚರಿತ್ರಾ ಚ ಪಾರ್ವತಿ ॥ ೭೬ ॥

ಪತ್ಯುಃ ಕುಲಸ್ಯ ಚ ಭಯಾದ್ವ್ಯಭಿಚಾರಂ ಕರೋತಿ ನ ।
ಪತಿವ್ರತಾಽಧಮಾ ಸಾ ಹಿ ಕಥಿತಾ ಪೂರ್ವಸೂರಿಭಿಃ ॥ ೭೭ ॥

ಚತುರ್ವಿಧಾ ಅಪಿ ಶಿವೇ ಪಾಪಹಂತ್ರ್ಯಃ ಪತಿವ್ರತಾಃ ।
ಪಾವನಾಸ್ಸರ್ವಲೋಕಾನಾಮಿಹಾಮುತ್ರಾಪಿ ಹರ್ಷಿತಾಃ ॥ ೭೮ ॥

ಪಾತಿವ್ರತ್ಯಪ್ರಭಾವೇಣಾತ್ರಿಸ್ತ್ರಿಯಾ ತ್ರಿಸುರಾರ್ಥನಾತ್ ।
ಜೀವಿತೋ ವಿಪ್ರ ಏಕೋ ಹಿ ಮೃತೋ ವಾರಾಹಶಾಪತಃ ॥ ೭೯ ॥

ಏವಂ ಜ್ಞಾತ್ವಾ ಶಿವೇ ನಿತ್ಯಂ ಕರ್ತವ್ಯಂ ಪತಿಸೇವನಂ ।
ತ್ವಯಾ ಶೈಲಾತ್ಮಜೇ ಪ್ರೀತ್ಯಾ ಸರ್ವಕಾಮಪ್ರದಂ ಸದಾ ॥ ೮೦ ॥

---

೭೬. ಎಲೌ ಪಾರ್ವತಿ, ಯಾವ ಸ್ತ್ರೀಯು ತನ್ನ ಪತ್ನೀಧರ್ಮವನ್ನನುಸರಿಸಿ ವ್ಯಭಿಚಾರಕ್ಕೆ ಮನಗೊಡದೆ ಒಳ್ಳೆಯ ನಡತೆಯಿಂದಿರುವಳೋ ಅವಳು ಅಧಮಾ ಪತಿವ್ರತಾಸ್ತ್ರೀಯೆನಿಸುವಳು.

೭೭. ವ್ಯಭಿಚಾರದ ಮನಸ್ಸಿದ್ದರೂ ಕೂಡ ಪತಿಯ ಹೆದರಿಕೆಯಿಂದಲೋ ಕುಲಕ್ಕೆ ಕೆಟ್ಟ ಹೆಸರು ಬರುವುದೆಂಬ ಭಯದಿಂದಲೋ ಯಾವ ಸ್ತ್ರೀಯು ವ್ಯಭಿಚಾರ ದಲ್ಲಿ ಪ್ರವೃತ್ತಳಾಗುವುದಿಲ್ಲವೋ ಅವಳು ಅಧಮಾಧಮಳೆಂಬುವಳು.

೭೮. ಎಲೌ ಅಂಬಿಕೇ, ಪತಿವ್ರತೆಯರ ನಾಲ್ಕು ಭೇದಗಳನ್ನು ಹೇಳಿರುವೆನು. ಅವರೆಲ್ಲರೂ ಪವಿತ್ರರು. ಲೋಕವೇ ಅವರ ದೆಸೆಯಿಂದ ಪವಿತ್ರವಾಗುವುದು. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಹ ಅವರು ಸುಖಿಗಳು.

೭೯. ಹಿಂದೆ ವಾರಾಹನೆಂಬ ಋಷಿಯ ಶಾಪದಿಂದ ಮೃತನಾದ ಒಬ್ಬ ಬ್ರಾಹ್ಮಣನನ್ನು ಬ್ರಹ್ಮ ವಿಷ್ಣು ಮಹೇಶ್ವರರ ಪ್ರಾರ್ಥನೆಯಂತೆ ಅತ್ರಿಋಷಿಯ ಹೆಂಡತಿ ಯಾದ ಅನಸೂಯೆಯು ತನ್ನ ಪಾತಿವ್ರತ್ಯದ ಪ್ರಭಾವದಿಂದ ಬದುಕಿಸಿದಳು.

೮೦. ಎಲೌ ಗಿರಿಜೆ, ಇವೆಲ್ಲವನ್ನೂ ಚೆನ್ನಾಗಿ ತಿಳಿದು ನಿತ್ಯವೂ ಪತಿಸೇವೆ ಯನ್ನು ಮಾಡಬೇಕು. ಇದರಿಂದ ನಿನ್ನ ಅಭೀಷ್ಟಗಳೆಲ್ಲವೂ ನೆರವೇರುವುವು.

ಜಗದಂಬಾ ಮಹೇಶೀ ತ್ವಂ ಶಿವಸ್ಸಾಕ್ಷಾತ್ಪತಿಸ್ತವ ।
ತವ ಸ್ಮರಣತೋ ನಾರ್ಯೋ ಭವಂತಿ ಹಿ ಪತಿವ್ರತಾಃ ॥ ೮೧ ॥

ತ್ವದಗ್ರೇ ಕಥನೇನಾನೇನ ಕಿಂ ದೇವಿ ಪ್ರಯೋಜನಂ ।
ತಥಾಪಿ ಕಥಿತಂ ಮೇಽದ್ಯ ಜಗದಾಚಾರತಶ್ಶಿವೇ ॥ ೮೨ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾ ವಿರರಾಮಾಸೌ ದ್ವಿಜಸ್ತ್ರೀ ಸುಪ್ರಣಮ್ಯ ತಾಂ ।
ಶಿವಾಂ ಮುದಮತಿ ಪ್ರಾಪ ಪಾರ್ವತೀ ಶಂಕರಪ್ರಿಯಾ ॥ ೮೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ತೃತೀಯೇ ಪಾರ್ವತೀಖಂಡೇ ಚತುಃಪಂಚಾಶತ್ತಮೋಽಧ್ಯಾಯಃ

---

೮೧. ನೀನು ಜಗನ್ಮಾತೆಯು, ಮಹೇಶಿಯು. ಸಾಕ್ಷಾತ್ಪರಮೇಶ್ವರನೇ ನಿನ್ನ ಪತಿಯು. ಸ್ತ್ರೀಯರು ನಿನ್ನ ಸ್ಮರಣೆಯನ್ನು ಮಾಡಿದರೆ ಪತಿವ್ರತೆಯರಾಗುವರು.

೮೨. ಎಲೌ ಗಿರಿಜೆ, ಜಗನ್ಮಾತೆಯಾದ ನಿನ್ನ ಮುಂದೆ ಈ ಧರ್ಮವನ್ನು ಹೇಳಿ ಪ್ರಯೋಜನವೇನು? ಆದರೂ ಪ್ರಪಂಚದ ವ್ಯವಹಾರವನ್ನು ಅನುಸರಿಸಿ ನಿನಗೆ ಹೇಳಿರುವೆನು ಎಂದಳು.

೮೩. ಬ್ರಹ್ಮನು ಹೇಳಿದನು :— ಈರೀತಿಯಾಗಿ ಹೇಳಿ ಆ ಬ್ರಾಹ್ಮಣಸ್ತ್ರೀಯು ಸುಮ್ಮನಾದಳು. ಪಾರ್ವತಿಯೂ ಸಹ ಆ ಸ್ತ್ರೀಗೆ ನಮಸ್ಕರಿಸಿ ಅತ್ಯಂತ ಆನಂದವನ್ನು ಪಡೆದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಮೂರನೇ ಪಾರ್ವತೀಖಂಡದಲ್ಲಿ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಪಾರ್ವತೀಖಂಡೇ

## ಪಂಚಪಂಚಾಶತ್ತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅಥ ಸಾ ಬ್ರಾಹ್ಮಣೀ ದೇವ್ಯೈ ಶಿಕ್ಷಯಿತ್ವಾ ವ್ರತಂ ಚ ತತ್ ।
ಪ್ರೋವಾಚ ಮೇನಾಮಾಮಂತ್ರ್ಯ ಯಾತ್ರಾಮಸ್ಯಾಃ ಕಾರಯ ॥ ೧ ॥

ತಥಾಸ್ತ್ವಿತಿ ಚ ಸಂಪ್ರೋಚ್ಯ ಪ್ರೇಮವಶ್ಯಾ ಬಭೂವ ಸಾ ।
ಧೃತಿಂ ಧೃತ್ವಾಹೂಯ ಕಾಲೀಂ ವಿಶ್ಲೇಷವಿರಹಾಕುಲಾ ॥ ೨ ॥

ಅತ್ಯುಚ್ಚೈ ರೋದನಂ ಚಕ್ರೇ ಸಂಶ್ಲಿಷ್ಯ ಚ ಪುನಃ ಪುನಃ ।
ಪಾರ್ವತ್ಯಪಿ ರುರೋದೋಚ್ಚೈರುಚ್ಚರಂತೀ ಕೃಪಾವಚಃ ॥ ೩ ॥

---

## ಐವತ್ತೈದನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು :—ಆ ಬ್ರಾಹ್ಮಣಸ್ತ್ರೀಯು ಪಾರ್ವತಿಗೆ ಪತಿವ್ರತಾ ಧರ್ಮವನ್ನುಪದೇಶಿಸಿ ಮೇನಕೆಯನ್ನು ಕುರಿತು ಇನ್ನು ನಿನ್ನ ಮಗಳನ್ನು ಗಂಡನೊಡನೆ ಕಳುಹಿಸಿಕೊಡು ಎಂದು ಹೇಳಿದಳು.

೨-೩. ಹಾಗೇ ಆಗಲೆಂದು ಮೇನಕೆಯು ಹೇಳಿದಳು. ತನ್ನ ಮಗಳನ್ನು ಬಿಡಬೇಕೆಂಬ ದುಃಖದಿಂದ ಕೂಡಿದ್ದರೂ ಹೇಗೋ ಧೈರ್ಯವನ್ನು ತಂದುಕೊಂಡು ಪಾರ್ವತಿಯನ್ನು ಬರಮಾಡಿದಳು. ಆದರೂ ಕೂಡ ಅವಳನ್ನು ನೋಡುತ್ತಲೇ ದುಃಖವು ಉಕ್ಕಿಬರುತ್ತಿರಲು ಅವಳನ್ನು ಪದೇಪದೇ ಆಲಂಗಿಸುತ್ತಾ ಗಟ್ಟಿಯಾಗಿ ಅತ್ತಳು. ಪಾರ್ವತಿಯೂ ಸಹ ತಾಯಿಗೆ ಸಮಾಧಾನ ವಚನಗಳನ್ನು ಹೇಳುತ್ತಾ ತಾನೂ ಅತ್ತಳು.

ಶೈಲಪ್ರಿಯಾ ಶಿವಾ ಚಾಪಿ ಮೂರ್ಛಾಮಾಪ ಶುಚಾರ್ದಿತಾ ।
ಮೂರ್ಛಾಂ ಪ್ರಾಪುರ್ದೇವಪತ್ನ್ಯಃ ಪಾರ್ವತ್ಯಾ ರೋದನೇನ ಚ ॥ ೪ ॥

ಸರ್ವಾಶ್ಚ ರುರುದುರ್ನಾರ್ಯಸ್ಸರ್ವಮಾಸೀದಚೇತನಂ ।
ಸ್ವಯಂ ರುರೋದ ಯೋಗೀಶೋ ಗಚ್ಛನ್ಕೋಽನ್ಯಃ ಪರಃ ಪ್ರಭುಃ ॥ ೫ ॥

ಏತಸ್ಮಿನ್ನಂತರೇ ಶೀಘ್ರಮಾಜಗಾಮ ಹಿಮಾಲಯಃ ।
ಸ ಸರ್ವತನಯಸ್ತತ್ರ ಸಚಿವೈಶ್ಚ ದ್ವಿಜೈಃ ಪರೈಃ ॥ ೬ ॥

ಸ್ವಯಂ ರುರೋದ ಮೋಹೇನ ವತ್ಸಾಂ ಕೃತ್ವಾ ಸ್ವವಕ್ಷಸಿ ।
ಕ್ವ ಯಾಸೀತ್ಯೇವಮುಚ್ಚಾರ್ಯ ಶೂನ್ಯಂ ಕೃತ್ವಾ ಮುಹುರ್ಮುಹುಃ ॥ ೭ ॥

ತತಃ ಪುರೋಹಿತೋ ವಿಪ್ರೈರಧ್ಯಾತ್ಮವಿದ್ಯಯಾ ಸುಖಂ ।
ಸರ್ವಾನ್ಪ್ರಬೋಧಯಾಮಾಸ ಕೃಪಯಾ ಜ್ಞಾನವತ್ತರಃ ॥ ೮ ॥

---

೪. ಮೇನಕೆಯೂ ಪಾರ್ವತಿಯೂ ಪರಸ್ಪರ ಅಳುತ್ತಾ ಅತ್ಯಂತ ದುಃಖದಿಂದ ಮೂರ್ಛೆಯನ್ನು ಹೊಂದಿದರು. ಅವರ ದುಃಖವನ್ನು ನೋಡಿ ದೇವಪತ್ನಿಯರೂ ಸಹ ದುಃಖದಿಂದ ಮೂರ್ಛೆಹೊಂದಿದರು.

೫. ಎಲ್ಲಾ ಸ್ತ್ರೀಯರೂ ಅತ್ತರು. ಕೊನೆಗೆಲ್ಲರೂ ಮೂರ್ಛೆಹೋದರು. ಅಷ್ಟೇಕೆ? ಸಾಕ್ಷಾತ್ಪರಮೇಶ್ವರನೇ ಅತ್ತನು. ಎಂದಮೇಲೆ ದುಃಖಕ್ಕೆ ಭಾಗಿಯಾದ ಧೀರನಾವನಿರುವನು ?

೬-೭. ಈ ಸಮಯಕ್ಕೆ ಸರಿಯಾಗಿ ಹಿಮವಂತನು ಆ ಸ್ಥಳಕ್ಕೆ ಬಂದನು. ಅವನ ಜೊತೆಯಲ್ಲಿ ಅವನ ಮಕ್ಕಳೂ ಮಂತ್ರಿಗಳೂ ಬ್ರಾಹ್ಮಣರೂ ಇನ್ನೂ ಇತರರೂ ಇದ್ದರು. ಅಲ್ಲಿಗೆ ಬಂದು ಮಗಳನ್ನು ತಬ್ಬಿಕೊಂಡು ' ನಮ್ಮ ಮನೆಯನ್ನೆಲ್ಲಾ ಶೂನ್ಯವನ್ನಾಗಿ ಮಾಡಿ ಎಲ್ಲಿಗೆ ತೆರಳುವೆ ' ಎಂದು ಹೇಳುತ್ತಾ ಬಾರಿಬಾರಿಗೂ ಗಟ್ಟಿಯಾಗಿ ಅಳುತ್ತಿದ್ದನು.

೮. ಅನಂತರ ಪುರೋಹಿತನು ಬ್ರಾಹ್ಮಣರೊಡನೆ ಅಲ್ಲಿಗೆ ಬಂದು ಅವರೆಲ್ಲರಿಗೂ ತಿಳಿಯುವಂತೆ ವೇದಾಂತವನ್ನು ಬೋಧಿಸಿದನು. ಅದನ್ನು ಕೇಳಿ ಎಲ್ಲರೂ ದುಃಖವನ್ನು ಬಿಟ್ಟರು.

ನನಾಮ ಪಾರ್ವತೀ ಭಕ್ತ್ಯಾ ಮಾತರಂ ಪಿತರಂ ಗುರುಂ ।
ಮಹಾಮಾಯಾ ಭವಾಚಾರಾದ್ರುರೋದೋಚ್ಚೈರ್ಮುಹುರ್ಮುಹುಃ ॥ ೯ ॥

ಪಾರ್ವತ್ಯಾ ರೋದನೇನೈವ ರುರುದುಸ್ಸರ್ವಯೋಷಿತಃ ।
ನಿತರಾಂ ಜನನೀ ಮೇನಾ ಯಾಮಯೋ ಭ್ರಾತರಸ್ತಥಾ ॥ ೧೦ ॥

ಪುನಃ ಪುನಃ ಶಿವಾಮಾತಾ ಯಾಮಯೋಽನ್ಯಾಶ್ಚ ಯೋಷಿತಃ ।
ಭ್ರಾತರೋ ಜನಕಃ ಪ್ರೇಮ್ಣಾ ರುರುದುರ್ಬದ್ಧಸೌಹೃದಾಃ ॥ ೧೧ ॥

ತದಾ ವಿಪ್ರಾಸ್ಸಮಾಗತ್ಯ ಬೋಧಯಾಮಾಸುರಾದರಾತ್ ।
ಲಗ್ನಂ ನಿವೇದಯಾಮಾಸುರ್ಯಾತ್ರಾಯಾಸ್ಸುಖದಂ ಪರಂ ॥ ೧೨ ॥

ತತೋ ಹಿಮಾಲಯೋ ಮೇನಾ ಧೃತ್ವಾ ಧೈರ್ಯಂ ವಿವೇಕತಃ ।
ಶಿಬಿಕಾಮಾನಯಾಮಾಸ ಶಿವಾರೋಹಣಹೇತವೇ ॥ ೧೩ ॥

---

೯. ಪಾರ್ವತಿಯು ಭಕ್ತಿಯಿಂದ ತಾಯಿ ತಂದೆ ಗುರು ಮುಂತಾದವರನ್ನು ನಮಸ್ಕರಿಸಿದಳು. ಮಹಾಮಾಯಸ್ವರೂಪಳಾದರೂ ಪಾರ್ವತಿಯು ಲೋಕವ್ಯವಹಾರವನ್ನು ಅನುಸರಿಸಿ ಗಟ್ಟಿಯಾಗಿ ಅಳಲು ಪ್ರಾರಂಭಿಸಿದಳು.

೧೦. ಪಾರ್ವತಿಯು ಅಳುತ್ತಿರುವುದನ್ನು ನೋಡಿ ಅಲ್ಲಿರುವ ಸ್ತ್ರೀಯರೆಲ್ಲರೂ ಅಳಲು ಪ್ರಾರಂಭಿಸಿದರು. ಅದರಲ್ಲಿಯೂ ಪಾರ್ವತಿಯ ತಾಯಿಯಾದ ಮೇನಕೆಯೂ ಅವಳ ಸಹೋದರರೂ ಬಹಳವಾಗಿ ರೋದಿಸಿದರು.

೧೧. ಮೇನಕೆಯೂ ಪಾರ್ವತಿಯ ಸೋದರರೂ, ಅವಳ ತಂದೆಯೂ ಪುನಃ ಪುನಃ ಸ್ನೇಹಾತಿಶಯದಿಂದ ಕೂಡಿ ತುಂಬಾ ರೋದಿಸಿದರು.

೧೨. ಆಗ ಬ್ರಾಹ್ಮಣರೆಲ್ಲರೂ ಬಂದು ಅವರನ್ನೆಲ್ಲಾ ಸಮಾಧಾನಪಡಿಸಿದರು. ಪಾರ್ವತಿಯು ಪ್ರಯಾಣಬೆಳೆಸಲು ಸರಿಯಾದ ಲಗ್ನವು ಪ್ರಾಪ್ತವಾಗಿರುವುದೆಂದು ತಿಳಿಸಿದರು.

೧೩-೧೪. ಹಿಮವಂತನೂ ಮೇನಕೆಯೂ ಹೇಗೋ ಧೈರ್ಯವನ್ನೂ ವಿವೇಕವನ್ನೂ ತಂದುಕೊಂಡು, ಪಾರ್ವತಿಯ ಪ್ರಯಾಣಕ್ಕನುಕೂಲವಾದ ಪಲ್ಲಕ್ಕಿಯನ್ನು ತರಿಸಲು, ಬ್ರಾಹ್ಮಣ ಸುವಾಸಿನಿಯರು ಪಾರ್ವತಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ

ಶಿವಾಮಾರೋಹಯಾಮಾಸುಸ್ತತ್ರ ವಿಪ್ರಾಂಗನಾಶ್ಚ ತಾಂ ।
ಆಶಿಷಂ ಪ್ರದದುಸ್ಸರ್ವಾಃ ಪಿತಾ ಮಾತಾ ದ್ವಿಜಾಸ್ತಥಾ ॥ ೧೪ ॥

ಮಹಾರಾಜ್ಞ್ಯುಪಚಾರಾಂಶ್ಚ ದದೌ ಮೇನಾ ಗಿರಿಸ್ತಥಾ ।
ನಾನಾದ್ರವ್ಯಸಮೂಹಂ ಚ ಪರೇಷಾಂ ದುರ್ಲಭಂ ಶುಭಂ ॥ ೧೫ ॥

ಶಿವಾ ನತ್ವಾ ಗುರೂನ್ಸರ್ವಾನ್ ಜನಕಂ ಜನನೀಂ ತಥಾ ।
ದ್ವಿಜಾನ್ ಪುರೋಹಿತಂ ಯಾಮೀಸ್ತ್ರೀಸ್ತಥಾನ್ಯಾ ಯಯೌ ಮುನೇ ॥ ೧೬ ॥

ಹಿಮಾಚಲೋಽಪಿ ಸಸುತೋಽಗಚ್ಛತ್ಸ್ನೇಹವಶೀ ಬುಧಃ ।
ಪ್ರಾಪ್ತಸ್ತತ್ರ ಪ್ರಭುರ್ಯತ್ರ ಸಾಮರಃ ಪ್ರೀತಿಮಾಪಹನ್ ॥ ೧೭ ॥

ಪ್ರೀತ್ಯಾಭಿರೇಮಿರೇ ಸರ್ವೇ ಮಹೋತ್ಸವಪುರಸ್ಸರಂ ।
ಪ್ರಭುಂ ಪ್ರಣೇಮುಸ್ತೇ ಭಕ್ತ್ಯಾ ಪ್ರಶಂಸಂತೋಽವಿಶನ್ಪುರೀಂ ॥ ೧೮ ॥

---

ದರು. ತಾಯಿ, ತಂದೆ, ಬ್ರಾಹ್ಮಣರು ಇವರೆಲ್ಲರೂ ಪಾರ್ವತಿಯನ್ನು ಆಶೀರ್ವದಿಸಿದರು.

೧೫. ಮಹಾರಾಣಿಯಾದ ಮೇನಕೆಯೂ, ಮಹಾರಾಜನಾದ ಹಿಮವಂತನೂ ಇತರರಿಗೆ ದುರ್ಲಭವಾದ ಅನೇಕ ದ್ರವ್ಯಾಭರಣಗಳನ್ನು ಪಾರ್ವತಿಗೆ ಕೊಟ್ಟರು. ಇವರು ಕೊಟ್ಟ ದ್ರವ್ಯಸಮೂಹವು ಬಹಳ ಶುಭವಾದುದು.

೧೬. ಎಲೈ ನಾರದನೇ, ಆಮೇಲೆ ಪಾರ್ವತಿಯು ತನ್ನ ಜನನೀಜನಕರನ್ನೂ ಬ್ರಾಹ್ಮಣರನ್ನೂ ಪುರೋಹಿತರನ್ನೂ ತನ್ನ ಸೋದರರನ್ನೂ ಸ್ತ್ರೀಯರನ್ನೂ ನಮಸ್ಕರಿಸಿದಳು.

೧೭. ಹಿಮವಂತನು ತನ್ನ ಮಕ್ಕಳೊಡನೆ ಹೊರಟು ದೇವತೆಗಳೊಡನೆ ಶಿವನು ಇದ್ದ ಸ್ಥಳಕ್ಕೆ ಬಂದು ಸೇರಿದನು.

೧೮. ಎಲ್ಲರೂ ದೊಡ್ಡ ಉತ್ಸವದೊಡನೆ ಪರಮೇಶ್ವರನ ಪಟ್ಟಣಕ್ಕೆ ಒಳ್ಳೆಯ ಆನಂದದಿಂದ ಹೋದರು. ಅಲ್ಲಿ ಪರಮೇಶ್ವರನನ್ನು ಹೊಗಳುತ್ತಾ ಎಲ್ಲರೂ ಅವನಿಗೆ ನಮಸ್ಕರಿಸಿದರು.

ಜಾತಿಸ್ಮರಾಂ ಸ್ಮಾರಯಾಮಿ ನಿತ್ಯಂ ಸ್ಮರಸಿ ಚೇದ್ವದ ।
ಲೀಲಯಾ ತ್ವಾಂ ಚ ದೇವೇಶಿ ಸದಾ ಪ್ರಾಣಪ್ರಿಯಾ ಮಮ ॥ ೧೯ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಮಹೇಶಸ್ಯ ಸ್ವನಾಥಸ್ಯಾಥ ಪಾರ್ವತೀ ।
ಶಂಕರಸ್ಯ ಪ್ರಿಯಾ ನಿತ್ಯಂ ಸಸ್ಮಿತೋವಾಚ ಸಾ ಸತೀ ॥ ೨೦ ॥

॥ ಪಾರ್ವತ್ಯುವಾಚ ॥

ಸರ್ವಂ ಸ್ಮರಾಮಿ ಪ್ರಾಣೇಶ ಮೌನೀಭೂತೋ ಭವೇತಿ ಚ ।
ಪ್ರಸ್ತಾವೋಚಿತಮದ್ಯಾಶು ಕಾರ್ಯಂ ಕುರು ನಮೋಽಸ್ತು ತೇ ॥ ೨೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ಪ್ರಿಯಾವಾಕ್ಯಂ ಸುಧಾಧಾರಾಶತೋಪಮಂ ।
ಮುಮುದೇಽತೀವ ವಿಶ್ವೇಶೋ ಲೌಕಿಕಾಚಾರತತ್ಪರಃ ॥ ೨೨ ॥

ಶಿವಃ ಸಂಭೃತಸಂಭಾರೋ ನಾನಾವಸ್ತುಮನೋಹರಂ ।
ಭೋಜಯಾಮಾಸ ದೇವಶ್ಚ ನಾರಾಯಣಪುರೋಗಮಾನ್ ॥ ೨೩ ॥

---

೧೯. ಆಗ ಪರಮೇಶ್ವರನು ಪಾರ್ವತಿಯನ್ನು ಕುರಿತು ಎಲೌ ದೇವಿ, ನೀನು ಜಾತಿಸ್ಮರಳು. ಇಂತಹ ನಿನ್ನನ್ನು ನಾನು ಪ್ರತಿದಿನವೂ ಸ್ಮರಿಸಿಕೊಳ್ಳುತ್ತಿರುವೆನು. ನೀನೂ ನನ್ನನ್ನು ಸ್ಮರಿಸಿಕೊಳ್ಳುತ್ತಿರುವೆ. ಆದುದರಿಂದ ನೀನು ಯಾವಾಗಲೂ ನನಗೆ ಪ್ರಾಣಪ್ರಿಯಳಾಗಿ ಇರು ಎಂದು ಹೇಳಿದನು.

೨೦-೨೧. ಬ್ರಹ್ಮನು ಹೇಳಿದನು :—ಪರಮೇಶ್ವರನಾಡಿದ ಮಾತನ್ನು ಕೇಳಿ ಪಾರ್ವತಿಯು ಮುಗುಳ್ನಗೆ ನಗುತ್ತಾ ತನ್ನ ಪ್ರಾಣನಾಥನನ್ನು ಕುರಿತು ಎಲೈ ಪ್ರಾಣ ಪ್ರಿಯನೇ, ಹಿಂದಿನ ವಿಷಯಗಳೆಲ್ಲವೂ ನನಗೆ ಗೊತ್ತಿರುವುದು. ನೀನೂ ಮೌನ ವನ್ನಾಚರಿಸಿ ಕುಳಿತಿದ್ದುದೂ ನನಗೆ ಗೊತ್ತು. ಆ ವಿಷಯುಗಳೆಲ್ಲವೂ ಹಾಗಿರಲಿ. ಈಗ ಮುಂದೆ ಮಾಡಬೇಕಾದ ಕಾರ್ಯವೇನು? ತಿಳಿಸು. ನಿನಗೆ ನಮಸ್ಕಾರವು ಎಂದಳು.

೨೨. ಬ್ರಹ್ಮನು ಹೇಳಿದನು :—ತನ್ನ ಪ್ರಿಯಳಾಡಿದ ಅಮೃತಮಯವಾದ ಮಾತನ್ನು ಕೇಳಿ ಪರಮೇಶ್ವರನು ಲೋಕವ್ಯವಹಾರನ್ನನುಸರಿಸಿ ಅತ್ಯಂತ ಸಂತೋಷ ಪಟ್ಟನು.

೨೩-೨೪. ಶಿವನು ನಾನಾವಿಧವಾದ ಅಡಿಗೆಗಳನ್ನು ಮಾಡಿಸಿ ವಿಷ್ಣುವೇ ಮೊದಲಾದ ದೇವತೆಗಳಿಗೆ ಊಟಕ್ಕೆ ಬಡಿಸಿ ತೃಪ್ತಿಪಡಿಸಿದನು. ಮತ್ತು ತನ್ನ

ತಥಾನ್ಯಾನ್ನಿಖಿಲಾನ್ಪ್ರೀತ್ಯಾ ಸ್ವವಿವಾಹಸಮಾಗತಾನ್ ।
ಭೋಜಯಾಮಾಸ ಸುರಸಮನ್ನಂ ಬಹುವಿಧಂ ಪ್ರಭುಃ ॥ ೨೪ ॥

ತತೋ ಭುಕ್ತ್ವಾ ಚ ತೇ ದೇವಾ ನಾನಾರತ್ನವಿಭೂಷಿತಾಃ ।
ಸಸ್ತ್ರೀಕಾಸ್ಸಗಣಾಸ್ಸರ್ವೇ ಪ್ರಣೇಮುಶ್ಚಂದ್ರಶೇಖರಂ ॥ ೨೫ ॥

ಸಂಸ್ತುತ್ಯ ವಾಗ್ಭಿರಿಷ್ಟಾಭಿಃ ಪರಿಕ್ರಮ್ಯ ಮುದಾನ್ವಿತಾಃ ।
ಪ್ರಶಂಸಂತೋ ವಿವಾಹಂ ಚ ಸ್ವಧಾಮಾನಿ ಯಯುಸ್ತತಃ ॥ ೨೬ ॥

ನಾರಾಯಣಂ ಮುನೇ ಮಾಂ ಚ ಪ್ರಣನಾಮ ಶಿವಸ್ಸ್ವಯಂ ।
ಲೌಕಿಕಾಚಾರಮಾಶ್ರಿತ್ಯ ಯಥಾ ವಿಷ್ಣುಶ್ಚ ಕಶ್ಯಪಂ ॥ ೨೭ ॥

ಮಯಾಶ್ಲಿಷ್ಯಾಶಿಷಂ ದತ್ವಾ ಶಿವಸ್ಯ ಪುನರಗ್ರತಃ ।
ಮತ್ವಾ ಸ ತಂ ಪರಂ ಬ್ರಹ್ಮ ಚಕ್ರೇ ಚ ಸ್ತುತಿರುತ್ತಮಾ ॥ ೨೮ ॥

ತಮಾಮಂತ್ರ್ಯ ಮಯಾ ವಿಷ್ಣುಸ್ಸಾಂಜಲಿಶ್ಶಿವಯೋರ್ಮುದಾ ।
ಪ್ರಶಂಸಂಸ್ತದ್ವಿವಾಹಂ ಚ ಜಗಾಮ ಸ್ವಾಲಯಂ ಪರಂ ॥ ೨೯ ॥

---

ಮದುವೆಯಲ್ಲಿ ಭಾಗವಹಿಸಿದ್ದ ಅನೇಕ ಜನರಿಗೂ ಭೋಜನವನ್ನೇರ್ಪಡಿಸಿ ರುಚಿ ರುಚಿಯಾದ ಭಕ್ಷ್ಯ ಭೋಜ್ಯಾದಿಗಳಿಂದ ಸಂತೋಷಪಡಿಸಿದನು.

೨೫-೨೬. ದೇವತೆಗಳೆಲ್ಲರೂ ಊಟಮಾಡಿದನಂತರ ವಿವಿಧಾಲಂಕೃತರಾಗಿ ತಮ್ಮ ಸ್ತ್ರೀಯರೊಡನೆ ಪರಮೇಶ್ವರನನ್ನು ಸ್ತುತಿಸಿ, ಅವನನ್ನು ನಮಸ್ಕರಿಸಿ ಬೀಳ್ಕೊಂಡು ಅಲ್ಲಿಂದ ತಮ್ಮ ತಮ್ಮ ಊರುಗಳಿಗೆ ತೆರಳಿದರು.

೨೭-೨೮. ಎಲೈ ನಾರದನೇ, ಪರಶಿವನು ನಾರಾಯಣನನ್ನೂ ನನ್ನನ್ನೂ ಸಹ ಲೋಕವ್ಯವಹಾರವನ್ನನುಸರಿಸಿ, ವಿಷ್ಣುವು ಕಶ್ಯಪನನ್ನು ನಮಸ್ಕರಿಸಿದಂತೆ ನಮಸ್ಕರಿಸಿದನು. ನಾನೂ ವಿಷ್ಣುವೂ ಶಿವನನ್ನಾಲಂಗಿಸಿಕೊಂಡು ಅವನಿಗೆ ಅನೇಕ ಆಶೀರ್ವಾದಗಳನ್ನು ಮಾಡಿದೆವು. ವಿಷ್ಣುವು ಶಿವನನ್ನು ಸಾಕ್ಷಾತ್ಪರಬ್ರಹ್ಮನೆಂದು ತಿಳಿದು ಅನೇಕ ವಿಧವಾಗಿ ಸ್ತೋತ್ರಮಾಡಿದನು.

೨೯. ನಾನೂ ವಿಷ್ಣುವೂ ಶಿವನನ್ನು ಬೀಳ್ಕೊಂಡು ಆನಂದದಿಂದ ಅವನ ವಿವಾಹದ ವಿಷಯವನ್ನು ಮಾತನಾಡುತ್ತಾ ನಮ್ಮ ಮನೆಗಳಿಗೆ ತೆರಳಿದೆವು.

ಶಿವೋಽಪಿ ಸ್ವಗಿರೌ ತಸ್ಥೌ ಪಾರ್ವತ್ಯಾ ವಿಹರನ್ಮುದಾ ।
ಸರ್ವೇ ಗಣಾಸ್ಸುಖಂ ಪ್ರಾಪುರತೀವ ಸ್ವಭಜನ್ ಶಿವೌ ॥ ೩೦ ॥

ಇತ್ಯೇವಂ ಕಥಿತಸ್ತಾತ ಶಿವೋದ್ವಾಹಸ್ಸುಮಂಗಲಃ ।
ಶೋಕಘ್ನೋ ಹರ್ಷಜನಕ ಆಯುಷ್ಯೋ ಧನವರ್ಧನಃ ॥ ೩೧ ॥

ಯ ಇಮಂ ಶೃಣುಯಾನ್ನಿತ್ಯಂ ಶುಚಿಸ್ತದ್ಗತಮಾನಸಃ ।
ಶ್ರಾವಯೇದ್ವಾಥ ನಿಯಮಾಚ್ಛಿವಲೋಕಮವಾಪ್ನುಯಾತ್ ॥ ೩೨ ॥

ಇದಮಾಖ್ಯಾನಮಾಖ್ಯಾತಮದ್ಭುತಂ ಮಂಗಲಾಯನಂ ।
ಸರ್ವವಿಘ್ನಪ್ರಶಮನಂ ಸರ್ವವ್ಯಾಧಿವಿನಾಶನಂ ॥ ೩೩ ॥

ಯಶಸ್ಯಂ ಸ್ವರ್ಗ್ಯಮಾಯುಷ್ಯಂ ಪುತ್ರಪೌತ್ರಕರಂ ಪರಂ ।
ಸರ್ವಕಾಮಪ್ರದಂ ಚೇಹ ಭುಕ್ತಿದಂ ಮುಕ್ತಿದಂ ಸದಾ ॥ ೩೪ ॥

---

೩೦. ಶಿವನೂ ಸಹ ಪಾರ್ವತಿಯೊಡನೆ ವಿಹರಿಸುತ್ತಾ ಕೈಲಾಸಪರ್ವತದಲ್ಲಿ ಆನಂದದಿಂದಿರುತ್ತಿದ್ದನು. ಅವನ ಪ್ರಮಥಗಣಗಳೆಲ್ಲವೂ ಶಿವನನ್ನು ಧ್ಯಾನಿಸುತ್ತಾ ಸುಖದಿಂದ ಇದ್ದರು.

೩೧-೩೨. ಎಲೈ ನಾರದನೇ, ಶಿವನ ವಿವಾಹಮಂಗಳದ ವಿಷಯವನ್ನು ವಿಸ್ತಾರವಾಗಿ ನಿನಗೆ ತಿಳಿಸಿರುವೆನು. ಇದು ಶೋಕವನ್ನು ನಾಶಮಾಡಿ ಹರ್ಷವನ್ನು ಉಂಟುಮಾಡುವುದು. ಆಯುಷ್ಯವೂ, ಸಂಪತ್ತೂ ಅಭಿವೃದ್ಧಿಯಾಗುವುದು. ಯಾರು ಶುಚಿರ್ಭೂತರಾಗಿ ಭಕ್ತಿಯಿಂದ ಇದನ್ನು ಕೇಳುವರೋ ಮತ್ತು ಹೇಳುವರೋ ಅವರು ಶಿವಲೋಕವನ್ನು ಪಡೆಯುವರು.

೩೩-೩೪. ಈ ಪಾರ್ವತೀಪರಮೇಶ್ವರರ ವಿವಾಹ ಚರಿತ್ರೆಯು ಅದ್ಭುತವಾದುದು. ಇದನ್ನು ಓದುವುದರಿಂದ ಶುಭವುಂಟಾಗುವುದು. ಇದರ ಪಾರಾಯಣದಿಂದ ವಿಘ್ನಗಳೂ ರೋಗಗಳೂ ನಾಶವಾಗುವುವು. ಕೀರ್ತಿಯೂ, ಸ್ವರ್ಗವೂ, ಆಯಸ್ಸೂ ಲಭಿಸುವುವು. ಪುತ್ರಪೌತ್ರಾದಿ ಸಂತಾನಗಳು ಅಭಿವೃದ್ಧಿಯನ್ನು ಹೊಂದುವುವು. ಇಷ್ಟಾರ್ಥಗಳೆಲ್ಲವೂ ನೆರವೇರಿ ಭುಕ್ತಿಯೂ ಮುಕ್ತಿಯೂ ಉಂಟಾಗುವುದು.

ಅಪಮೃತ್ಯುಪ್ರಶಮನಂ ಮಹಾಶಾಂತಿಕರಂ ಶುಭಂ ।
ಸರ್ವದುಸ್ಸ್ವಪ್ನಶಮನಂ ಬುದ್ಧಿಪ್ರಜ್ಞಾದಿಸಾಧನಂ ॥ ೩೫ ॥

ಶಿವೋತ್ಸವೇಷು ಸರ್ವೇಷು ಪಠಿತವ್ಯಂ ಪ್ರಯತ್ನತಃ ।
ಶುಭೇಪ್ಸುಭಿರ್ಜನೈಃ ಪ್ರೀತ್ಯಾ ಶಿವಸಂತೋಷಕಾರಣಂ ॥ ೩೬ ॥

ಪಠೇತ್ಪ್ರತಿಷ್ಠಾಕಾಲೇ ತು ದೇವಾದೀನಾಂ ವಿಶೇಷತಃ ।
ಶಿವಸ್ಯ ಸರ್ವಕಾರ್ಯಸ್ಯ ಪ್ರಾರಂಭೇ ಚ ಸುಪ್ರೀತಿತಃ ॥ ೩೭ ॥

ಶೃಣುಯಾದ್ವಾ ಶುಚಿರ್ಭೂತ್ವಾ ಚರಿತಂ ಶಿವಯೋಶ್ಶಿವಂ ।
ಸಿಧ್ಯಂತಿ ಸರ್ವಕಾರ್ಯಾಣಿ ಸತ್ಯಂ ಸತ್ಯಂ ನ ಸಂಶಯಃ ॥ ೩೮ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ತೃತೀಯೇ ಪಾರ್ವತೀಖಂಡೇ ಪಂಚಪಂಚಾಶತ್ತಮೋಽಧ್ಯಾಯಃ

---

೩೫. ಅಪಮೃತ್ಯುವು ನಾಶವಾಗುವುದು. ಮನಸ್ಸಿಗೆ ಶಾಂತಿಯುಂಟಾಗುವುದು, ಮಂಗಳವುಂಟಾಗುವುದು. ದುಃಸ್ವಪ್ನಗಳೆಲ್ಲಾ ನಾಶವಾಗುವುದು. ಇದರ ಪಠನದಿಂದ ಜ್ಞಾನಿಯಾಗುವನು.

೩೬-೩೮. ಶಿವನ ಉತ್ಸವ ಸಮಯದಲ್ಲಿ ಈ ಶಿವಪಾರ್ವತಿಯರ ಚರಿತ್ರೆಯನ್ನು ಪಠಿಸಿದರೆ ಶಿವನು ಸಂತೋಷಪಟ್ಟು ಶುಭವನ್ನುಂಟುಮಾಡುವನು. ದೇವತೆಗಳ ಪ್ರತಿಷ್ಠೆಯನ್ನು ಮಾಡುವ ಕಾಲದಲ್ಲಿಯೂ, ಶುಭಕಾರ್ಯಗಳನ್ನು ಮಾಡುವ ಸಮಯದಲ್ಲಿಯೂ ಶುಚಿರ್ಭೂತನಾಗಿ ಕೇಳಿದರೂ ಅಥವಾ ಪಾರಾಯಣಮಾಡಿದರೂ ಅವನ ಕೆಲಸಗಳೆಲ್ಲವೂ ನಿರ್ವಿಘ್ನವಾಗಿ ನೆರವೇರುವುವು. ಇದು ಸತ್ಯ, ಈ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ, ಎರಡನೆಯದಾದ ರುದ್ರಸಂಹಿತೆಯಲ್ಲಿ ಮೂರನೇ ಪಾರ್ವತೀಖಂಡದಲ್ಲಿ ಐವತ್ತೈದನೆಯ ಅಧ್ಯಾಯವು ಮುಗಿದುದು.

## ಪಾರ್ವತೀಖಂಡವು ಮುಗಿದುದು

॥ ಮಂಗಲಂ ॥

